# ಬುಡ್ಗ ಜಂಗಮ್ ಸಮುದಾಯದ ಸಾಮಾಜಿಕ ಅಧ್ಯಯನ

# SOCIAL STUDY OF BUDGA JANGAM COMMUNITY

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

ವೇಷ್ಗಾರು ರಾಮಾಂಜಿನೇಯ

ನೋಂ: ೧೫೦೧೧೨೦೨೦೦೬

ಮಾರ್ಗದರ್ಶಕರು

ಪ್ರೊ ಕೆ ಎಂ ಮೇತ್ರಿ








ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



ಫೆಬ್ರವರಿ ೨೦೨೦

# ಬುಡ್ಗ ಜಂಗಮ್ ಸಮುದಾಯದ ಸಾಮಾಜಿಕ ಅಧ್ಯಯನ

## SOCIAL STUDY OF BUDGA JANGAM COMMUNITY

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಸಲ್ಲಿಸಿದ
ಮಹಾಪ್ರಬಂಧ


ಸಂಶೋಧಕರು

ವೇಷ್ಗಾರು ರಾಮಾಂಜಿನೇಯ

ನೋ: ೧೫೦೧೧೨೦೨೦೦೬

ಮಾರ್ಗದರ್ಶಕರು

ಪ್ರೊ ಕೆ ಎಂ ಮೇತ್ರಿ






ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬


ಫೆಬ್ರವರಿ ೨೦೨೦

## ಸಂಶೋಧಕರ ಪ್ರಮಾಣ ಪತ್ರ

**ವೇಷ್ಗಾರು ರಾಮಾಂಜಿನೇಯ** ಆದ ನಾನು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ **ಪ್ರೊ ಕೆ ಎಂ ಮೇತ್ರಿ** ಅವರ ಮಾರ್ಗದರ್ಶನದಲ್ಲಿ **"ಬುಡ್ಗ ಜಂಗಮ್ ಸಮುದಾಯದ ಸಾಮಾಜಿಕ ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಸಿದ್ಧಪಡಿಸಿದ್ದೇನೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

ದಿನಾಂಕ: 11. 3. 2020

ಸ್ಥಳ : ವಿದ್ಯಾರಣ್ಯ

**ವೇಷ್ಗಾರು ರಾಮಾಂಜಿನೇಯ**
ಸಂಶೋಧನ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**ವೇಷ್ಗಾರು ರಾಮಾಂಜಿನೇಯ** ಅವರು **"ಬುಡ್ಗ ಜಂಗಮ್ ಸಮುದಾಯದ ಸಾಮಾಜಿಕ ಅಧ್ಯಯನ"** ಎಂಬ ವಿಷಯ ಕುರಿತಾದ ಪಿಎಚ್ ಡಿ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ: 11.3.2020

ಸ್ಥಳ : ವಿದ್ಯಾರಣ್ಯ

**ಪ್ರೊ ಕೆ ಎಂ ಮೇತ್ರಿ**
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# Certificate of Plagiarism Check Report

# Budga Jangam Samudyada Samajika Adhyayana

(Social study of Budga Jangam community)

By

**Veshgaru Ramanjineya**

Reg.No. 150112020066/14.09.2015

Research Guide

**Prof.K M Metry**

Department of Tribal Studies

Kannada University, Hampi

**Urkund Analysis Result**

Analysed Document: KUH-PhD-Veshgaru Ramanjineya-DTS.docx (D63735092)

Submitted: 2/11/2020 10:23:00 AM

Submitted By: ${Xml.Encode(Model.Document.Submitter.Email)}

**Significance: 0 %**

Seal and authorised sign



## Urkund Analysis Result

**Analysed Document: KUH-PhD-Veshgaru Ramanjineya-DTS.docx** (D63735092)

Submitted: 2/11/2020 10:23:00 AM

Submitted By: ${Xml.Encode(Model.Document.Submitter.Email)}

**Significance: 0 %**

**Sources included in the report:**

https://kn.wikipedia.org/wiki/%E0%B2%90%E0%B2%B0%E0%B3%8D%E0%B2%B2%E0%B3%86%E0%B2%82%E0%B2%A1%E0%B3%8D%E2%80%8C_%E0%B2%97%E0%B2%A3%E0%B2%B0%E0%B2%BE%E0%B2%9C%E0%B3%8D%E0%B2%AF

https://en-gb.facebook.com/jyautisham/posts/?ref=page_internal

https://kn.wikipedia.org/wiki/%E0%B2%95%E0%B3%81%E0%B2%B7%E0%B3%8D%E0%B2%A0%E0%B2%B0%E0%B3%8B%E0%B2%97

https://archive.org/stream/in.gazette.karnataka_new.2010-12-02.Part-1/Part-1_djvu.txt

https://veblr.com/channel/news-politics/videos?pages=1587&cat_name=news-politics&lang=od

Instances where selected sources appear:

46

# ಪರಿವಿಡಿ

# ೧. ಕೋಷ್ಟಕಗಳು

## ೨. ಲಂಬ ಚಿತ್ರಗಳು

## ೩. ವೃತ್ತ ಚಿತ್ರಗಳು



## ೪. ಸಂಕೇತ ಸೂಚಿ

ಅ=ಅನುಬಂಧ

ಛಾ=ಛಾಯಾಚಿತ್ರ

ಪವ=ಪತ್ರಿಕಾ ವರದಿ

ಲೇ= ಲೇಖನ

# ಅಧ್ಯಾಯ ಒಂದು
# ಪ್ರವೇಶ

ಪೀಠಿಕೆ

ಇಲ್ಲಿಯವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆಗಳು

ಪ್ರಸ್ತುತ ಅಧ್ಯಯನದ ತಾತ್ವಿಕತೆ

ಅಧ್ಯಯನದ ಸಮಸ್ಯೀಕರಣ

ಅಧ್ಯಯನದ ಪ್ರಾಕಲ್ಪನೆಗಳು

ಅಧ್ಯಯನದ ಉದ್ದೇಶಗಳು

ಅಧ್ಯನದ ಮಹತ್ವ

ಅಧ್ಯಯನದ ವ್ಯಾಪ್ತಿ

ಸಂಶೋಧನಾ ವಿಧಾನಗಳು

ಸಂಶೋಧನಾ ಸಾಧನಗಳು

ಸಂಶೋಧನಾ ವಿನ್ಯಾಸ

# ಅಧ್ಯಾಯ ಒಂದು

# ಪ್ರವೇಶ

**ಪೀಠಿಕೆ**

ಈ ಭೂಮಿಯ ಮೇಲೆ ವೈವಿಧ್ಯಮಯವಾದ ಜೀವಸಂಕುಲಗಳ ವಿಕಸನಕ್ಕೆ ಸೂಕ್ತ ಪರಿಸರ ನಿರ್ಮಾಣದಿಂದ ಭೂಮಿ, ಗಾಳಿ, ಬೆಳಕು, ನೀರು ಇವುಗಳನ್ನು ಅವಲಂಬಿ ಸಕಲಜೀವರಾಶಿಗಳು ಸೃಷ್ಟಿಯಾದವು. ಅದೇರೀತಿಯಾಗಿ ಮಾನವನು ಸೃಷ್ಟಿಯಾದನು. ಮಾನವಶಾಸ್ತ್ರಜ್ಞರು ಸಮಸ್ತ ಮಾನವಕೋಟಿಯನ್ನು ದೈಹಿಕ ಗುಣಲಕ್ಷಣಗಳ ಆಧಾರದ ಮೇಲೆ ಶಾಸ್ತ್ರೀಯವಾಗಿ ಅಧ್ಯಯನಮಾಡಿ ಮೂರು ಜನಾಂಗಗಳಾಗಿ ವಿಭಜಿಸಿದ್ದಾರೆ. ಅದರಲ್ಲಿ ೧. ಕಕೇಶಿಯನ್, ೨. ಮಂಗೋಲಿಯನ್. ೩. ನೀಗ್ರೋ ಜನಾಂಗಗಳು ಎಂದು ಈ ಮೂರು ಜನಾಂಗಗಳನ್ನು ಬಿಳಿಯರು, ಹಳದಿಯರು ಮತ್ತು ಕಪ್ಪುಜನರು ಎಂದು ಗುರುತಿಸಿದ್ದಾರೆ.

ಬುಡಕಟ್ಟು ಎಂಬ ಪದವನ್ನು ಯಾವ ಜನ ಗತಕಾಲದಿಂದಲೂ ನಿಸರ್ಗದ ಮಡಿಲಲ್ಲಿ ಸಹಜವಾಗಿ ಬದುಕಲು ಬಯಸುವುರೋ, ಪ್ರಕೃತಿಜನ್ಯ ಉತ್ಪನ್ನಗಳನ್ನೇ ಭಕ್ಷಿಸಲು ಯತ್ನಿಸುವರೋ, ತನ್ನದೇಯಾದ ಒಂದು ವಿಶಿಷ್ಟ ರೀತಿಯ ಜೀವನ ವಿಧಾನದಿಂದ ಜೀವಿಸುವ ಆಶಯವನ್ನು ಹೊಂದಿ ಆ ರೀತಿಯಲ್ಲೇ ಜೀವನ ನಡೆಸುವರೋ ಆ ಜನಕ್ಕೆ ಆದಿವಾಸಿ ಅಥವಾ ಬುಡಕಟ್ಟು ಜನ ಎಂದು ಕರೆಯಲಾಗಿದೆ ಎಂದು ಮಾನವಶಾಸ್ತ್ರಜ್ಞರು ಹಾಗೂ ಸಮಾಜಶಾಸ್ತ್ರಜ್ಞರು ಹೇಳುತ್ತಾರೆ. ಕಿಟ್ಟೆಲ್ಲರು ತಮ್ಮ ಅರ್ಥಕೋಶದಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ 'ಕುಟುಂಬ ಹಾಗೂ 'ಕುಲ' ಎಂಬ ಅರ್ಥವನ್ನು ನೀಡಿದ್ದಾರೆ. ಬುಡಕಟ್ಟು ಎಂಬ ಪದವು ಆಂಗ್ಲ ಭಾಷೆಯ 'ಟ್ರೈಬ್' ಎಂಬ ಪದಕ್ಕೆ ಸಮಾನಾರ್ಥಕ ಪದವೆಂದು ಬಳಸಲಾಗುತ್ತಿದೆ. ಇದು ಲ್ಯಾಟಿನ್ ಭಾಷೆಯ 'ಟ್ರೈಬಸ್' ಎಂಬ ಪದದಿಂದ ಉಗಮಗೊಂಡಿದೆ. ಸಮಾಜ ರಚನೆಯ ಮೂಲಕ್ಕೆ ಕುಟುಂಬ ಹಾಗೂ ರಕ್ತಸಂಬಂಧ ಹೊಂದಿದ ಕುಲಗಳ ಕೂಟಕ್ಕೆ ಕನ್ನಡದಲ್ಲಿ ಬುಡಕಟ್ಟು ಎಂಬ ಪದ ಬಳಸಿರುವುದು ಸಮಂಜಸವಾಗಿದೆ. ಬುಡಕಟ್ಟುಗಳಿಗೆ ಆದಿವಾಸಿ, ಮೂಲನಿವಾಸಿ, ಗಿರಿಜನ, ವನ್ಯಜಾತಿ, ಜನಜಾತಿ ಎಂಬ ಹೆಸರುಗಳಿಂದ ಕರೆಯಲಾಗಿದೆ. ಬುಡಕಟ್ಟು ಸಮುದಾಯಗಳಲ್ಲಿ ಬೇಟೆ ಹಾಗೂ ಆಹಾರ ಸಂಗ್ರಾಹಕ ಬುಡಕಟ್ಟುಗಳು, ಪಶುಪಾಲಕ ಬುಡಕಟ್ಟುಗಳು, ಕೃಷಿಕ ಬುಡಕಟ್ಟುಗಳು, ಅಲೆಮಾರಿ ಬುಡಕಟ್ಟುಗಳನ್ನು ಕಾಣಬಹುದು.

ಮಾನವ ಆಹಾರಕ್ಕಾಗಿ ಅಲೆದಾಡುತ್ತ ವಿಕಸನ ಹೊಂದಿ ಬೇಟೆಗಾರಿಕೆ, ಪಶುಪಾಲನೆ ತದನಂತರ ಕೃಷಿಯಲ್ಲಿ ತೊಡಗಿ ಆಹಾರ ಉತ್ಪಾದನೆಯನ್ನು ಮಾಡಲು ಪ್ರಾರಂಭಿಸಿದನು. ನಂತರ ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸಲು ಗ್ರಾಮಗಳ ಅಸ್ತಿತ್ವಕ್ಕೆ ನಾಂದಿಯಾಯಿತು. ಗ್ರಾಮಗಳಲ್ಲಿ ಸಾಮಾಜಿಕ ಸಂಸ್ಥೆಗಳಾದ ವಿವಾಹ, ಕುಟುಂಬಗಳು ಹುಟ್ಟಿಕೊಂಡವು. ಲೈಂಗಿಕತೆಗೆ ಅನುಮೋದನೆಯ ಉದ್ದೇಶದಿಂದ ವಿವಾಹ ಹಾಗೂ ನಿರ್ದಿಷ್ಟವಾದ ಕರ್ತವ್ಯಗಳ ನಿರ್ವಹಣೆಗಾಗಿ ಕುಟುಂಬ ಸೃಷ್ಟಿಯಾಯಿತು. ಸಾಮುದಾಯಿಕ ಜೀವನದಲ್ಲಿ ವಿವಿಧ ಕುಲಕಸುಬು–ವೃತ್ತಿಗಳು ಹುಟ್ಟಿಕೊಂಡವು. ಕೆಲವು ಸಮುದಾಯಗಳು ಕಮ್ಮಾರಿಕೆ, ಕುಂಬಾರಿಕೆ, ನೇಕಾರಿಕೆ, ಬಡಿಗೆತನ ಇತ್ಯಾದಿ ಕುಲಕಸುಬುಗಳನ್ನು ನಂಬಿಕೊಂಡರೆ ಇನ್ನೂ ಕೆಲವು ಸಮುದಾಯಗಳು ಕಲೆಯನ್ನೇ ಕುಲಕಸುಬುಗಳಾಗಿ ನಂಬಿಕೊಂಡು ಜೀವನ ಸಾಗಿಸುತ್ತಿದ್ದವು. ಆದಾಯದ ಆಧಾರದ ಮೇಲೆ ಸಾಮಾಜಿಕ ಅಂತಸ್ತನ್ನು ನಿರ್ಧರಿಸಲು ಪ್ರಾರಂಭಿಸಲಾಯಿತು. ಸಾಮಾಜಿಕ ಏಣಿ–ಶ್ರೇಣಿ ವ್ಯವಸ್ಥೆಯಲ್ಲಿ ಶ್ರೀಮಂತ–ಬಡವ, ಉತ್ತಮ–ಅನುತ್ತಮ, ಮೇಲು–ಕೀಳು, ಹಾಗೂ ಶ್ರೇಷ್ಠ–ಕನಿಷ್ಠ ಎಂಬ ತಾರತಮ್ಯತೆಯ ಮನೋಭಾವನೆಗಳ ಆಧಾರದ ಮೇಲೆ ಅಸಂಖ್ಯಾತ ಜಾತಿ ಸಮುದಾಯಗಳು ಹುಟ್ಟಿಕೊಂಡವು.

ಮಾನವ ವಿಕಸನದ ಪರಿಕಲ್ಪನೆಯಲ್ಲಿ ಕೆಲವು ಸಮುದಾಯಗಳು ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಾ ತಮ್ಮದೇಯಾದ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿರುವ ಸಮುದಾಯಗಳನ್ನು ಬುಡಕಟ್ಟುಗಳೆಂದು ಕರೆದಿದ್ದಾರೆ. ಗ್ರಾಮ ಹಾಗೂ ನಗರ ಪ್ರದೇಶಗಳಲ್ಲಿ ವಾಸಿಸುವ ತಮ್ಮದೇಯಾದ ಜೀವನ ಶೈಲಿ ಮತ್ತು ವೃತ್ತಿಯನ್ನು ಅವಲಂಭಿಸಿ ಜೀವನ ಮಾಡುವ ಅನೇಕ ಸಮುದಾಯಗಳನ್ನು 'ಜಾತಿ'ಗಳೆಂದು ಗುರುತಿಸಿದ್ದಾರೆ.

ಡಾ ಕೆ ಎಂ ಫಣ್ಣಿಕ್ಕರ್‌ರವರ ಪ್ರಕಾರ "ಜಾತಿ ಪದ್ಧತಿ, ಅವಿಭಕ್ತ ಕುಟುಂಬ ಹಾಗೂ ಗ್ರಾಮೀಣ ಸಮುದಾಯಗಳು ಭಾರತೀಯ ಸಾಮಾಜಿಕ ರಚನೆಯ ಅವಿಭಾಜ್ಯ ಅಂಗಗಳಾಗಿವೆ. ಜಾತಿಯು ಭಾರತೀಯರ ಜೀವನ ದರ್ಶನ, ಧಾರ್ಮಿಕತೆ, ಸಂಪ್ರದಾಯ, ವಿವಾಹ, ನೈತಿಕತೆ, ವೇಷಭೂಷಣ, ಉದ್ಯೋಗಗಳು, ಅಭಿರುಚಿಗಳೊಂದಿಗೆ ಹಾಸುಹೊಕ್ಕಾಗಿದೆ". ಜಾತಿಯು ಸಂಕೀರ್ಣ ಸ್ವರೂಪದ ವ್ಯವಸ್ಥೆಯಾಗಿದ್ದು ಅದು ಹೇಗೆ ವಿಕಸನ ಹೊಂದಿತು ಎಂಬುದನ್ನು ಕೆಳಗಿನ ಹಲವಾರು ಸಿದ್ಧಾಂತಗಳ ಮೂಲಕ ಕಂಡುಕೊಳ್ಳಬಹುದು.

೧. **ಸಾಂಪ್ರದಾಯಿಕ ಸಿದ್ಧಾಂತ:** ಈ ಸಿದ್ಧಾಂತಕ್ಕೆ ಋಗ್ವೇದದ ಪುರುಷ ಸೂಕ್ತವೇ ಮುಖ್ಯ ಆಧಾರವಾಗಿದೆ. ಸೃಷ್ಟಿಕರ್ತ ಬ್ರಹ್ಮನ ದೇಹದ ಮುಖದಿಂದ ಬ್ರಾಹ್ಮಣನು, ಬಾಹುಗಳಿಂದ ಕ್ಷತ್ರಿಯನು, ಹೊಟ್ಟೆಯಿಂದ ವೈಶ್ಯನು ಹಾಗೂ ಪಾದಗಳಿಂದ ಶೂದ್ರನು ಸೃಷ್ಟಿಯಾಗಿರುತ್ತಾರೆ.

೨. **ವೃತ್ತಿ ಸಿದ್ಧಾಂತ:** ನೆಸ್‌ಫಿಲ್ಡ್ ಎಂಬ ವಿದ್ವಾಂಸನ ಪ್ರಕಾರ "ಒಂದು ನಿರ್ದಿಷ್ಟ ಸಮೂಹವು ಒಂದು ನಿರ್ದಿಷ್ಟ ವೃತ್ತಿಯನ್ನು ಅನುವಂಶಿತವಾಗಿ ಅನುಸರಿಸುತ್ತಾ ಬಂದರೆ ಅದು ಕ್ರಮೇಣ ಜಾತಿಯಾಗಿ ಪರಿಣಮಿಸುತ್ತದೆ ಎನ್ನುತ್ತಾನೆ.

೩. **ಜನಾಂಗೀಯ ಸಿದ್ಧಾಂತ:** ಡಾ ಜಿ ಎಸ್ ಘುರ್ಯೆ, ಡಿ ಎನ್ ಮುಜುಂದಾರ ಹಾಗೂ ಸರ್ ಹರ್ಬರ್ಟ್ ರಿಸ್ಲೆ ಈ ಸಿದ್ಧಾಂತದ ಪ್ರಮುಖ ಪ್ರತಿಪಾದಕರಾಗಿದ್ದಾರೆ. "ಜನಾಂಗೀಯ ಭಿನ್ನತೆಗಳಿಂದಾಗಿಯೇ ವೈವಿಧ್ಯಮಯವಾದ ಜಾತಿ (ಸಮುದಾಯ) ಗಳು ಹುಟ್ಟಿಕೊಂಡಿವೆ". ಎಂಬುದನ್ನು ಹೇಳುತ್ತಾರೆ.

೪. **ಸಾಂಸ್ಕೃತಿಕ ಸಿದ್ಧಾಂತ:** ಡಾ ಶರತ್ಚಂದ್ರರಾಯ್ ಈ ಸಿದ್ಧಾಂತದ ಪ್ರತಿಪಾದಕರು, ವಿವಿಧ ಸಂಸ್ಕೃತಿಗಳಿಂದಾಗಿ ಜಾತಿ ಪದ್ಧತಿಯು ಸೃಷ್ಟಿಯಾಯಿತೆಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಆರ್ಯ ದ್ರಾವಿಡ ಜನಾಂಗಗಳಲ್ಲಿ ಸಾಂಸ್ಕೃತಿಕ ವ್ಯತ್ಯಾಸಗಳನ್ನು ಕಂಡುಕೊಳ್ಳಬಹುದು. ಸಾಮಾನ್ಯವಾಗಿ ಎಲ್ಲಾ ಸಂಸ್ಕೃತಿಗಳು ಪರಸ್ಪರರನ್ನು ಪ್ರಭಾವಿಸಿ ಹಾಗೂ ಪ್ರಭಾವಕ್ಕೊಳಗಾಗಿಸಿ ತಮ್ಮಲ್ಲಿಯ ಕೆಲವು ಅಂಶಗಳನ್ನು ತ್ಯಜಿಸಿ ಹೊಸ ಅಂಶಗಳನ್ನು ಸೇರಿಸಿಕೊಳ್ಳುತ್ತವೆ. ಇಂತಹ ಸಾಂಸ್ಕೃತಿಕ ಸ್ವಾಂಗೀಕರಣ ಪ್ರಕ್ರಿಯೆ ಜಾತಿ ಪದ್ಧತಿಯ ಉಗಮಕ್ಕೆ ಕಾರಣವಾಯಿತು ಎಂದು ಹೇಳುತ್ತಾರೆ.

೫. **ಉತ್ಕ್ರಾಂತಿ ಸಿದ್ಧಾಂತ:** ಡೆನ್ ಝಿಲ್ ಇಬೆಟ್‌ಸನ್ ಎಂಬ ವಿದ್ವಾಂಸರು ಈ ಸಿದ್ಧಾಂತವನ್ನು ಮಂಡಿಸಿದ್ದಾರೆ. ಸಮಾಜವು ನಿತ್ಯ ನೂತನ ಮತ್ತು ಪರಿವರ್ತನಶೀಲವಾದುದು ಎಂದು ಹೇಳಿ ಸಮಾಜದಲ್ಲಿಯ ಜನರನ್ನು ಪ್ರಮುಖವಾಗಿ ಮೂರು ವರ್ಗಗಳಲ್ಲಿ ವಿಂಗಡಿಸಿದ್ದಾರೆ. ಉತ್ತಮ ವರ್ಗ, ಮಧ್ಯಮ ವರ್ಗ ಹಾಗೂ ಕೆಳವರ್ಗ. ಇವುಗಳ ಆಧಾರದ ಮೇಲೆ ಅವರವರ ಜಾತಿಯನ್ನು ನಿರ್ಧರಿಸಲಾಗುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

೬. **ಮಾನ ಸಿದ್ಧಾಂತ:** "ಮಡಿ, ಮೈಲಿಗೆ, ನೀರು ಆಹಾರ ಸೇವನೆಗಳ ಆಧಾರದ ಮೇಲೆ ಈ ಸಿದ್ಧಾಂತ ರಚಿತವಾಗಿದೆ. ಸಾಂಪ್ರದಾಯಕ ಸಮಾಜದಲ್ಲಿಯ ವರ್ಣವ್ಯವಸ್ಥೆಗೆ ಅನುಗುಣವಾಗಿ ಅವರು ಅನುಸರಿಸುತ್ತಿರುವ ಊಟೋಪಚಾರದ ಆಧಾರದ ಮೇಲೆ ಅವರ ಜಾತಿಯನ್ನು ನಿರ್ಧರಿಸಬಹುದು. ಉದಾ: ಬ್ರಾಹ್ಮಣರು ದಿನಕ್ಕೆ ಮೂರುಬಾರಿ ಸ್ನಾನ ಮಾಡಿ ಪೂಜಿಸುತ್ತಿದ್ದರು ಹಾಗೂ ತುಪ್ಪದಿಂದ ತಯಾರಿಸಿದ ಆಹಾರವನ್ನು ಸೇವಿಸುತ್ತಿದ್ದರು. ಇತರೆ ವರ್ಣದವರು ತಯಾರಿಸಿದ ಆಹಾರವನ್ನು ಸೇವಿಸುತ್ತಿರಲಿಲ್ಲ. ಇಂತಹ ಮಡಿ ಮೈಲಿಗೆಯ ಪರಿಕಲ್ಪನೆಯು ಜಾತಿಯ ಉಗಮಕ್ಕೆ ಕಾರಣವಾಯಿತು."[೧]

**ಎಸ್ ಸಿ ದುಬೆ ಅವರು** ಜಾತಿ ಎಂಬುದು "ಸಂಸ್ಕೃತ ಸಂಬಂಧಿತವಾದ ಅಂತಸ್ತನ್ನು ಹೊಂದಿದ್ದ ಸಾಂಪ್ರದಾಯಿಕ ವೃತ್ತಿಯೊಂದಿಗೆ ಸೇರಿಕೊಂಡಿರುವ ಒಳಬಾಂಧವ್ಯ ವಿವಾಹಗಳ ಸಮುದಾಯ" ಎಂದು ವ್ಯಾಖ್ಯಾನಿಸಿದ್ದಾರೆ. ಹೀಗೆ ಕುಲಕಸುಬುಗಳು ಮತ್ತು ಧಾರ್ಮಿಕ ನೆಲೆಯಿಂದ ಜಾತಿಗಳು ಉಗಮವಾಗಿರುವುದು ಕಂಡುಬರುತ್ತದೆ. ಭಾರತದಲ್ಲಿ ಸುಮಾರು ಮೂರು ಸಾವಿರಕ್ಕಿಂತ ಹೆಚ್ಚು ಜಾತಿ ಉಪಜಾತಿ ಸಮುದಾಯಗಳು ಅಸ್ತಿತ್ವದಲ್ಲಿವೆ. ಸಾಮಾಜಿಕ ಸ್ತರೀಕರಣ ವ್ಯವಸ್ಥೆಯಲ್ಲಿ ಪ್ರತಿಯೊಂದು ಸಾಮಾಜಿಕ ಬದುಕನ್ನು ಸಾಗಿಸುತ್ತಿವೆ. ಇವುಗಳಲ್ಲಿ ಕೆಲವು ಜಾತಿ ಸಮುದಾಯಗಳು ಮೇಲ್‌ಸ್ತರದಲ್ಲಿದ್ದು ಮತ್ತೆ ಕೆಲವು ಮಧ್ಯಮ ಸ್ಥರದಲ್ಲಿದ್ದು ಹಾಗೂ ಇನ್ನುಳಿದ ಜಾತಿಗಳು ಕೆಳಸ್ತರದಲ್ಲಿದ್ದು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ಸೌಲಭ್ಯಗಳಿಂದ ವಂಚಿತವಾಗಿವೆ. ಹಲವಾರು ಜಾತಿ,

ಧರ್ಮ ಆಚಾರ-ವಿಚಾರಗಳನ್ನು, ಕಲೆ, ಸಂಸ್ಕೃತಿಯನ್ನು ಹೊಂದಿರುವ ಭಾರತದಲ್ಲಿ ಹಲವಾರು ಸಮುದಾಯಗಳು ತಮ್ಮದೇಯಾದ ಸಂಸ್ಕೃತಿ ಪರಂಪರೆಯನ್ನು ಉಳಿಸಿಕೊಂಡು ಸಾಗುತ್ತಿವೆ. ಮುಖ್ಯವಾಗಿ ಒಂದು ಕಡೆ ನೆಲೆನಿಂತ ಸಮುದಾಯಗಳು ಸಂಸ್ಕೃತಿ ಆಚಾರ-ವಿಚಾರಗಳನ್ನು ಪಾಲಿಸಿಕೊಂಡು ಸಮಾಜದಲ್ಲಿ ಗುರುತರವಾದ ಜವಾಬ್ದಾರಿಗಳ ಮೂಲಕ ಜೀವನ ಸಾಗಿಸುತ್ತಿದ್ದರೆ, ಮತ್ತೊಂದುಕಡೆ ಕೆಲವು ಸಮುದಾಯಗಳು ಒಂದುಕಡೆ ನೆಲೆನಿಲ್ಲದೆ ಕಲೆಯನ್ನು ನಂಬಿ ತಮ್ಮದೇಯಾದ ಆಚಾರ-ವಿಚಾರ, ಕಲೆ ಸಂಸ್ಕೃತಿ ಸಂಪ್ರದಾಯಗಳನ್ನು ಪಾಲಿಸಿಕೊಂಡು ಹಲವಾರು ಸಮಸ್ಯೆಗಳ ಜೊತೆಯಲ್ಲಿಯೇ ಜೀವನವನ್ನು ಸಾಗಿಸುತ್ತಿದ್ದಾರೆ. ಪ್ರಸ್ತುತ ಕರ್ನಾಟಕ ರಾಜ್ಯದಲ್ಲಿ ಸೂಕ್ಷ್ಮ ಅತಿಸೂಕ್ಷ್ಮ ಅಲೆಮಾರಿ ಅರೆ-ಅಲೆಮಾರಿ ಸಮುದಾಯಗಳಲ್ಲಿ ಕಲೆಯನ್ನೇ ನಂಬಿ, ಕಲೆಯನ್ನೇ ಉಸಿರಾಗಿಸಿಕೊಂಡು ಜೀವಿಸುತ್ತಿದ್ದ ಅಲೆಮಾರಿಗಳಲ್ಲಿ ಬುಡ್ಗ ಜಂಗಮ್ ಸಮುದಾಯವು ಒಂದು.

ಸಂವಿಧಾನದ ಪರಿಶಿಷ್ಟಜಾತಿ ಮೀಸಲಾತಿ ಪಟ್ಟಿಯಲ್ಲಿ ದಾಖಲಾದ ಅಸ್ಪೃಶ್ಯ ಸಮುದಾಯವಾದ ಬುಡ್ಗ ಜಂಗಮ್ ಸಮುದಾಯವು ತಮ್ಮ ವಿಶಿಷ್ಟವಾದ ಕಲೆ ಮತ್ತು ಸಂಸ್ಕೃತಿಗಳ ಮೂಲಕ ಗುರುತಿಸಿಕೊಂಡಿದೆ. ಡಕ್ಕೆ ಎಂಬ ವಾದ್ಯದಿಂದ ಡಕ್ಕಲರು, ಚೆನ್ನು(ಏಕನಾದ) ಎನ್ನುವ ವಾದ್ಯದಿಂದ ಚೆನ್ನದಾಸರು, ಸಿಂಧಿ(ಹೆಂಡ) ಮತ್ತು ಸಿಂಧೊಳ್ಳು ನೃತ್ಯ ಪ್ರದರ್ಶನದಿಂದ ಸಿಂಧೊಳ್ಳುರು, ಸುಡುಗಾಡಿನಲ್ಲಿ ವಾಸ ಮತ್ತು ಕೈಚಳಕದ ಪ್ರದರ್ಶನದಿಂದ ಸುಡುಗಾಡು ಸಿದ್ಧರು, ಹಂಡಿಯ ಕಿನ್ನರಿವಾದ್ಯದಿಂದ ಹಂಡಿಜೋಗಿಗಳು, ಡೊಂಬಾರಟದ ಕಲಾಪ್ರದರ್ಶನದಿಂದ ಡೊಂಬರು ಗುರುತಿಸಿಕೊಂಡ ರೀತಿಯಲ್ಲಿ ಬುಡ್ಗ ಜಂಗವ್ ಸಮುದಾಯವು ಬುಡ್ಗ ಎನ್ನುವ ವಾದ್ಯದಿಂದ ಬುಡ್ಗ ಜಂಗಮರು ಗುರುತಿಸಿಕೊಂಡಿರುವುದು ಕಾಣಬಹುದು. ಆದರೆ ಈ ಮೇಲಿನ ಸಮುದಾಯಗಳಿಗೆ ತನ್ನದೇಯಾದ ಪ್ರತ್ಯೇಕ ಆಚಾರ-ವಿಚಾರ, ಪದ್ಧತಿ, ಭಾಷೆ, ಸಂಪ್ರದಾಯ, ಸಂಸ್ಕೃತಿಗಳು ಇವೆ. ಜನಸಾಮಾನ್ಯರು ಹಾಗೂ ಅಧ್ಯಯನಕಾರರು ಸಮುದಾಯದ ಮೂಲ ಹಿನ್ನೆಲೆಯನ್ನು ತಿಳಿಯದೇ ಅವರಲ್ಲಿರುವ ಭಿನ್ನವಾದ ಪ್ರದರ್ಶಕ ಕಲೆಗಳನ್ನು ವಿಭಿನ್ನ ರೀತಿಯಲ್ಲಿ ಅರ್ಥೈಸಿಕೊಂಡು ಅವುಗಳನ್ನೇ ಜಾತಿಗಳೆಂದು ಕರೆದಿದ್ದಾರೆ. ಉದಾ: ಕಲೆಪ್ರದರ್ಶನ ನೀಡುವುದರಿಂದ ವೇಷಗಾರರು, ಹಗಲುವೇಷಗಾರರು, ಬುರ್ರಕಥೆಯವರು, ಕಥೆಗಾರರು, ದಾಸರು, ದುರುಗಮುರುಗಿಯವರು, ಪೋತುರಾಜರು, ಬುಡಬುಡಿಕೆಯವರು, ಪೂಜಾರಿಗಳು, ಸಿದ್ಧರು, ಜೋಗಿಗಳು, ಕಿನ್ನರಿ ಜೋಗಿಗಳು ಎಂದು ಇತ್ಯಾದಿ ಹೆಸರುಗಳು ಜಾತಿಗಳಾಗಿ ಗುರುತಿಸಿದ್ದಾರೆ. ಹೀಗಾಗಿ ಈ ಸಮುದಾಯಗಳ ಮೂಲ ಚರಿತ್ರೆಯನ್ನು ಮರೆಮಾಚಲಾಗಿದೆ. ಸಂವಿಧಾನಬದ್ಧವಾಗಿ ಮೂಲ ಒಂದು ಹೆಸರು ಇದ್ದರೆ, ಜನಸಾಮಾನ್ಯರು ಮತ್ತು ಅಧ್ಯಯನಕಾರರು ಇವರಿಗೆ ವಿಭಿನ್ನವಾದ ಹೆಸರುಗಳಿಂದ ಗುರುತಿಸಿದ್ದಾರೆ.

ಬುಡ್ಗ ಜಂಗಮರು ತಮ್ಮ ಬದುಕನ್ನ ಕಟ್ಟಿಕೊಳ್ಳಲು ನಾಡಿನ ಅನೇಕ ದಾರ್ಶನಿಕರ ಪುಣ್ಯಪುರುಷರ ಪುರಾಣಗಳ, ಸಮುದಾಯಗಳ ಚರಿತ್ರೆಯನ್ನು ನೆನಪಿನಲ್ಲಿಟ್ಟುಕೊಂಡು, ಮೌಖಿಕ ಸಾಹಿತ್ಯವನ್ನು ನಾಡಿನ ಉದ್ದಗಲಕ್ಕೂ ಕೇರಿಕೇರಿಗಳಲ್ಲಿ ತೆರಳಿ ಮನೆಮನೆಗಳಲ್ಲಿ ಪರಿಚಯಿಸಿದಂತವರು. ತಾತ ಮುತ್ತಾತರಿಂದ, ತಂದೆಯಿಂದ ಮಗನಿಗೆ, ಮಗನಿಂದ ಮೊಮ್ಮಗನಿಗೆ ಹೀಗೆ ವಂಶಪರಂಪರಾನುಗತವಾಗಿ

ಕಾಲಕ್ಕೆತಕ್ಕಂತೆ ಮುಂದುವರಿಸಿಕೊಂಡು ಸಮಾಜದ ವ್ಯವಸ್ಥೆಗೆ ತಕ್ಕಂತೆ ಹಾಗೂ ಆಪೇಕ್ಷೆಗೆ ತಕ್ಕಂತೆ ಚಕ್ಕೆಗೊಂಬೆಯಾಟ, ತೊಗಲುಗೊಂಬೆಯಾಟ, ಬೀದಿ ಭಾಗವತಂ, ಗಂಗಿಗೌರಿ ಮೇಳ, ಬುರ್ರಕಥಾ ಮೇಳ, ಹಗಲುವೇಷ ನಾಟಕಗಳು, ತತ್ವಪದ, ಜಾನಪದ ಸಂಗೀತ, ಸುಗಮ ಸಂಗೀತ, ಭಜನೆಮೇಳ ಇನ್ನೂ ಮುಂತಾದ ಕಲೆಗಳನ್ನು ನಾಡಿನಾದ್ಯಂತ ಪ್ರದರ್ಶನ ನೀಡುತ್ತಾ ಜೀವಿಸಿದ್ದಾರೆ.

ಮಧ್ಯಯುಗೀನ ಕಾಲದಲ್ಲಿ ವೃತ್ತಿಗಾಯಕ ಮತ್ತು ಪ್ರದರ್ಶನ ಕಲೆಗಳನ್ನು ಅವಲಂಬಿಸಿದ್ದ ಸಮುದಾಯಗಳು ಸ್ಥಳೀಯ ಶ್ರೀಮಂತರು, ಭೂಮಾಲೀಕರು ಹಾಗೂ ರಾಜರು ವಿಶೇಷ ಸಂದರ್ಭಗಳಲ್ಲಿ ಈ ಕಲಾವಿದರ ಮೂಲಕ ಮನರಂಜನೆ ಪಡೆದು ಇದಕ್ಕೆ ಪ್ರತಿಯಾಗಿ ಕಾಣಿಕೆಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದರು ಮತ್ತು ಹಳ್ಳಿಗಳಲ್ಲಿ ಜನಪದರು ಇವರ ಕಲೆಯನ್ನು ಮೆಚ್ಚಿ ದವಸಧಾನ್ಯಗಳು ಮತ್ತು ಹಣ ನೀಡಿ ಪೋಷಿಸುವುದರ ಜೊತೆಗೆ, ಕಲೆಯ ಉಳಿವಿಗೆ ಕಾರಣವಾಗುತ್ತಿದ್ದರು. ಹೀಗೆ ಬುಡ್ಗ ಜಂಗಮರ ಕಲೆಯು ಟಿವಿ ಸಿನಿಮಾಗಳು ಇಲ್ಲದ ಸಂದರ್ಭದಲ್ಲಿ ಜನಸಾಮಾನ್ಯರಿಗೆ ಮಾಹಿತಿ, ನೀತಿಸಂದೇಶಗಳನ್ನು ಮತ್ತು ಜಾಗೃತಿ ಕಾರ್ಯಕ್ರಮಗಳನ್ನು ತಿಳಿಸುವಲ್ಲಿ ಬುಡ್ಗ ಜಂಗಮ್ ಸಮುದಾಯದಂತ ಕಲಾಸಮುದಾಯಗಳು ಆ ಕಾಲದಲ್ಲಿ ಅತ್ಯಂತ ಪ್ರಭಾವಬೀರಿದವು. ಪ್ರಸ್ತುತ ದಿನಮಾನಗಳಲ್ಲಿ ಟಿವಿ, ಸಿನಿಮಾಗಳು ಬಂದಮೇಲೆ ಇವರ ಕಲೆಗೆ ಪ್ರೋತ್ಸಾಹ ಇಲ್ಲದೆ ಬೀದಿಕಲೆಯಾಗಿ ಹಾಗೂ ಅತ್ಯಂತ ಶೋಚನೀಯವಾಗಿ ಬದುಕುವಂತ ಸ್ಥಿತಿಯನ್ನು ಇಂದು ಕಾಣಬಹುದಾಗಿದೆ. ಹೀಗೆ ತಮ್ಮೊಳಗಿನ ಅನೇಕ ಸಂಕಷ್ಟಗಳನ್ನು ಸವಾಲುಗಳನ್ನು ಎದುರಿಸುತ್ತ ಮನರಂಜನೆಯನ್ನು ಉಣಬಡಿಸುತ್ತ ಬಂದ ಬುಡ್ಗ ಜಂಗಮರು ಭೂಮಿಯೇ ಮುಖ್ಯ ಆರ್ಥಿಕ ಮೂಲವಾಗಿ ಪರಿಗಣಿತವಾದ ಸಂದರ್ಭದಲ್ಲಿ ಆರ್ಥಿಕವಾಗಿ ಕುಸಿಯಬೇಕಾಯಿತು. ಇದಕ್ಕೆ ಪ್ರತಿಯಾಗಿ ಆರ್ಥಿಕ ಮೂಲ ಹುಡುಕಾಟ ಅನಿವಾರ್ಯವಾಗಿ ಅಲೆಮಾರಿಗಳಾಗಬೇಕಾಯಿತು. ಅಲೆಮಾರಿ ಸಮುದಾಯಗಳು ಆಳುವ ವರ್ಗದ ಕೆಲವು ಅನಿಶ್ಚಿತ ಆರ್ಥಿಕ ಕೊಡುಗೆಗಳಿಂದ ದತ್ತಿ ಮತ್ತು ಇನಾಮು ಭೂಮಿಗಳನ್ನು ನಂಬಿಕೊಂಡು ಬಂದ ಈ ಸಮುದಾಯಗಳು, ಮಧ್ಯಕಾಲೀನ ರಾಜಕೀಯ ತಲ್ಲಣಗಳು, ಅವರ ಜೀವನದ ಮೇಲೆ ವ್ಯತಿರಿಕ್ತವಾದ ಪರಿಣಾಮಕ್ಕೆ ಕಾರಣವಾಯಿತು. ಭಾರತದಲ್ಲಿ ಮೊಗಲ್ ಆಡಳಿತದ ಅವಧಿಯಲ್ಲಿ ರೂಪಗೊಂಡ ಭೂಮಿಗೆ ಸಂಬಂಧಿಸಿದ ಮತ್ತು ಅವರ ಬದುಕಿಗೆ ಸಂಬಂಧಿಸಿದ ಕಾನೂನುಗಳು ಈ ಸಮುದಾಯಗಳ ಪಾರಂಪರಿಕ ಹಕ್ಕುಗಳನ್ನು ಇಲ್ಲದಾಗಿಸಿದವು.

ಬುಡ್ಗ ಜಂಗಮರು ವೃತ್ತಿಮೂಲ ಪ್ರದರ್ಶಕ ಕಲಾವಿದರು, ಇವರನ್ನು ಆಂಧ್ರ ಪ್ರದೇಶದ ವಿವಿಧ ಭಾಗಗಳಲ್ಲಿ ಬೇಡ ಜಂಗಾಲು, ಬುಡ್ಗ ಜಂಗಾಲು, ಜಂಗಾಲು, ತೋಲುಬೊಮ್ಮಲಾಟವಾಳು, ಚೆಕ್ಕಬೊಮ್ಮಲಾಟವಾಳು, ಶಾರದಗಾಳು, ಬಾಲಸಂತಲು, ಪಗಟಿವೇಷಗಾಳು, ಬುರ್ರಕಥಾಗಾಳು, ಬಿಂಗಿವಾಳ್ಳು, ಕಥಾಗಾಳು, ಭಿಕ್ಷಾಗಾಳು ಎಂದು ಕರೆದರೆ, ಕರ್ನಾಟಕದಲ್ಲಿ ಇವರನ್ನು ಬುಡ್ಗ ಜಂಗಮರು, ಬುರ್ರಕಥೆಯವರು, ಹಗಲುವೇಷದವರು, ವೇಷಗಾರರು, ಶಾಸ್ತ್ರ ಹೇಳುವವರು, ಭವಿಷ್ಯ ಹೇಳುವವರು, ತೊಗಲುಗೊಂಬೆಯಾಟದವರು ಎಂದು ಕರೆಯುತ್ತಾ ಅವುಗಳನ್ನೇ ಜಾತಿಗಳೆಂದು ಕರೆದಿದ್ದಾರೆ. ಹೀಗೆ ಇವರನ್ನು ಮೂಲ ನಿರ್ದಿಷ್ಟ ಹೆಸರಿನ ಗುರುತಿಸುವಿಕೆಯ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ.

ಬುಡ್ಗ ಜಂಗಮರ ಕಲಾವೃತ್ತಿಯ ಹಿನ್ನೆಲೆಯಿಂದ ಅಧ್ಯಯನಕಾರರು ಇವರನ್ನು ಬೇರೆಬೇರೆ ಶೀರ್ಷಿಕೆಯಲ್ಲಿ ಅಧ್ಯಯನಿಸಿದ ಕಾರಣದಿಂದಾಗಿ ಈ ಸಮುದಾಯವು ಸಂವಿಧಾನಬದ್ಧ ಮೀಸಲಾತಿ ಸೌಲಭ್ಯಗಳನ್ನು ಪಡೆಯುವಲ್ಲಿ ವಂಚಿತವಾಗಿದೆ. ಈ ಕಾರಣಕ್ಕಾಗಿ ಪರ್ಯಾಯ ಹೆಸರುಗಳನ್ನು ಆಧರಿಸಿ ಸಾಹಿತ್ಯ ಅವಲೋಕನ ಮಾಡಲಾಗಿದೆ.

ಆಂಧ್ರ ಪ್ರದೇಶದಲ್ಲಿ ಹೈದರಾಬಾದ್ ನಿಜಾಮನ ಕಾಲಘಟ್ಟದಲ್ಲಿ ಬುಡ್ಗ ಜಂಗಮರನ್ನು 'ಬೇಡ(ಬುಡ್ಗ)ಜಂಗಂ' [Beda (Budga) Jangam] ಎಂದು ೧೯೦೧ರ ಜನಗಣತಿಯಲ್ಲಿ 'Inferior religious mendicants'ವಿಭಾಗದಲ್ಲಿ ಸೇರ್ಪಡೆ ಮಾಡಲಾಗಿದೆ. ೧೯೨೧ರಲ್ಲಿ Depressed classes ಎಂದು ನಮೂದಿಸಲಾಗಿದೆ. ಬ್ರಿಟಿಷ್ ಭಾರತ ಸರ್ಕಾರವು ೧೯೩೫ರಲ್ಲಿ ಇವರನ್ನು ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ದಾಖಲಿಸಿದ್ದಾರೆ. ೧೯೫೦ರ ಸ್ವತಂತ್ರ ಭಾರತದಲ್ಲಿ ಈ ಜಾತಿಯನ್ನು ಸಂವಿಧಾನದ ಪರಿಚ್ಛೇದ ೩೪೧ರ ಅನ್ವಯ ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಸೇರಿಸಿ ಮೀಸಲಾತಿ ಕಲ್ಪಿಸಲಾಗಿದೆ. ೧೯೫೬ರಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಗಳ ಪರಿಷ್ಕೃತ ಅನುಮೋದಿತ ಪಟ್ಟಿಯಲ್ಲಿ ಇವರು 'ಬೇಡ ಜಂಗಮ್, ಬುಡ್ಗ ಜಂಗಮ್'(Beda Jangam, Budga Jangam) ಎಂದು ದಾಖಲಾಗಿದ್ದಾರೆ. ೧೯೬೫ರಲ್ಲಿ ಲೋಕುರ್ ಬಿ ಎನ್ ಕಮಿಟಿಯ ಪರಿಶಿಷ್ಟ ಜಾತಿಗಳ ಪಟ್ಟಿಯ ವರದಿಯಲ್ಲಿ 'ಬೇಡ ಜಂಗಮ್, ಬುಡ್ಗ ಜಂಗಮ್ ದಾಖಲಿಸಿದ್ದಾರೆ. (ಕರ್ನಾಟಕದ ಪರಿಶಿಷ್ಟ ಜಾತಿಗಳ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ).

ಭಾರತದ ದೇಶದ ಆಂಧ್ರ ಪ್ರದೇಶ, ತೆಲಂಗಾಣ, ಕರ್ನಾಟಕ, ಮಹಾರಾಷ್ಟ್ರ ರಾಜ್ಯಗಳಲ್ಲಿ ಕಂಡುಬರುವ ಬುಡ್ಗ ಜಂಗಮರು ಕಾಡುಮೇಡುಗಳಲ್ಲಿ ಅಲೆಯುತ್ತಾ ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಹಿಂದುಳಿದಿರುವ ಬುಡ್ಗ ಜಂಗಮರು ಇಂದಿಗೂ ತಮ್ಮ ಸಮುದಾಯದ ಪಾರಂಪರಿಕವಾದ ಆಚಾರ–ವಿಚಾರ, ರೀತಿ–ನೀತಿ, ನಂಬಿಕೆ ಸಂಪ್ರದಾಯಗಳು, ನಿಧಿ ನಿಷೇಧಗಳು, ಆಹಾರ ಪದ್ಧತಿ, ಪಾರಂಪರಿಕ ಉಡುಗೆ ತೊಡುಗೆಗಳು, ದೈವಾರಾಧನೆ, ಪ್ರೇತಾರಾಧನೆ, ಕುಲಪಂಚಾಯಿತಿ, ಕುಲಬೆಡಗುಗಳು ಹಾಗೂ ಬುಡ್ಗಭಾಷೆ ಇಂದಿಗೂ ಆಚರಿಸಿಕೊಂಡು ಹಾಗೂ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಬುಡ್ಗ ಜಂಗಮರ ಚಾರಿತ್ರಿಕವಾದ ಜೀವನಕ್ರಮ, ಪ್ರದರ್ಶನ ಕಲೆಗಳು ಹೀಗೆ ಮೊದಲಾದ ಸಮುದಾಯಿಕ ಸಾಂಸ್ಕೃತಿಕ ಚಹರೆಗಳನ್ನು, ಆಚರಣೆಗಳನ್ನು ಅವರ ಪಾರಂಪರಿಕ ಜ್ಞಾನ ಮತ್ತು ವರ್ತಮಾನದಲ್ಲಿ ಎದುರಿಸುತ್ತಿರುವ ಸಮಸ್ಯೆ ಸವಾಲುಗಳ ಕುರಿತು ಸಾಮಾಜಿಕ ಅಧ್ಯಯನದ ಮೂಲಕ ವಿವರಿಸಲು ಪ್ರಯತ್ನಿಸಲಾಗಿದೆ.

**ಇಲ್ಲಿಯವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆಗಳು**

ಈ ಮೇಲೆ ಪ್ರಸ್ತಾಪಿಸಿದಂತೆ ಬುಡ್ಗ ಜಂಗಮ್ ಸಮುದಾಯದ ಕುರಿತು ಕೇವಲ ಸಾಂಸ್ಕೃತಿಕ, ಸಾಹಿತ್ಯಿಕ ನೆಲೆಗಳಲ್ಲಿ ಅಧ್ಯಯನಗಳಾಗಿವೆ. ಭಾರತ ದೇಶದ ವಿವಿಧ ರಾಜ್ಯಗಳಲ್ಲಿ ಬುಡ್ಗ ಜಂಗಮ್

ಸಮುದಾಯಕ್ಕೆ ಸಂಬಂಧಿಸಿದಂತೆ ಅನೇಕ ಅಧ್ಯಯನಗಳು ನಡೆದಿವೆ–ನಡೆಯುತ್ತಿವೆ. ಆದರೆ ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಸಮಗ್ರವಾದ ಅಧ್ಯಯನ ಇದುವರೆಗೆ ನಡೆದಿಲ್ಲ. ಪ್ರಸ್ತುತ ಅಧ್ಯಯನ ವ್ಯಾಪ್ತಿಯಾದ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ, ಬುಡ್ಗ ಜಂಗಮ್ ಸಮುದಾಯವನ್ನು ವಿಷಯವನ್ನಾಗಿಸಿಕೊಂಡ ಪ್ರಮುಖ ಅಧ್ಯಯನಗಳನ್ನು ಇಲ್ಲಿ ಸಮೀಕ್ಷಿಸಲಾಗಿದೆ.

**೧೮೪೦ರಲ್ಲಿ ಸಿ ಪಿ ಬ್ರೌನ್ ಅವರು *Essay on the creed, customs and literature of the Jangams,* Madras Journal of literature and science** ಎಂಬ ಆಂಗ್ಲ ನಿಯತಕಾಲಿಕೆಯಲ್ಲಿ ಈ ರೀತಿ ಉಲ್ಲೇಖಿಸಿದ್ದಾರೆ. 'ಜಂಗಮರಲ್ಲಿ ವಿಶೇಷ ಜಂಗಮರು ಮತ್ತು ಸಾಮಾನ್ಯ ಜಂಗಮರು ಎಂಬ ಎರಡು ರೀತಿಯ ಜನರಿದ್ದಾರೆ. ಸಾಮಾನ್ಯ ಜಂಗಮರು ಮಾಂಸಹಾರಿಗಳೆಂದೂ' ದಾಖಲಿಸಿದ್ದಾರೆ. ಸಾಮಾನ್ಯ ಜಂಗಮರು ಎಂದರೆ ಬುಡ್ಗ ಜಂಗಮರು ಮಾಂಸಾಹಾರಿಗಳಾಗಿದ್ದಾರೆ ಎಂದು ಸಮುದಾಯದ ಕುರಿತಾಗಿ ವಿವರಿಸಿದ್ದಾರೆ.

**೧೮೪೧ ರಲ್ಲಿ ಸಿ ಪಿ ಬ್ರೌನ್ ಅವರು Asiatic Journal, Volume ೩೪ ರಲ್ಲಿ ಉಲ್ಲೇಖಿಸಿರುವ ಬಗ್ಗೆ ಆಂಧ್ರ ಪ್ರದೇಶದಲ್ಲಿ ಪ್ರಚಲಿತದಲ್ಲಿದ್ದ ಬುರ್ರ(ಜಂಗಂ) ಕಥೆಗಳನ್ನು(ವೀರಾಗಾಥೆಗಳ) ಕುರಿತು ಈ** ರೀತಿ ಹೇಳಿದ್ದಾರೆ, "Finally there are other Ballads (cathalu) of great length framed in a peculiar chant on principles different from all other sorts of poetry. Some of these, as the Bobbili Catha or Rangarao Charitra, the Nagamma Catha and the like are chiefly presented by oral recitation without having been until now committed to writing. These are every where popular though despised, as illiterate, by professed scholars" ಜಾನಪದ ಗೇಯ ಕಾವ್ಯಗಳಲ್ಲಿ ಜಾನಪದ ವೀರಕಾವ್ಯಗಳಾಗಿವೆ(ಗೇಯ ಕಥೆಗಳು). ಇವುಗಳಲ್ಲಿ ಬೊಬ್ಬಿಲಿ ಕಥೆ ಅಥವಾ ರಂಗಾರಾವು ಚರಿತ್ರೆ, ನಾಗಮ್ಮ ಕಥೆ ಇತ್ಯಾದಿ ಕಾವ್ಯಗಳು ಮೌಖಿಕಪ್ರಚಾರ ಮಾಧ್ಯಮದಲ್ಲಿ ಉಳಿದುಕೊಂಡು ಬಂದಿವೆ. ಅಕ್ಷರಜ್ಞಾನವಿರದ ವೃತ್ತಿಗಾಯಕರ ಹಾಡುಗಾರಿಕೆಯಲ್ಲಿ ಈ ಕಥೆಗಳು ವ್ಯಾಪಕ ಪ್ರಚಾರ ಪಡೆದುಕೊಂಡಿವೆ ಎಂದು ಹೇಳಿದ್ದಾರೆ. ಈ ಕೃತಿಯು ಬುಡ್ಗ ಜಂಗಮರ ಕುಲವೃತ್ತಿ ಕುರಿತು ಉಲ್ಲೇಖಿಸಿರುದನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**೧೮೯೧ರಲ್ಲಿ ಮೈಸೂರು ಜನಗಣತಿ ಪ್ರಕಾರ ಜಂಗಮರಲ್ಲಿ ಪ್ರಧಾನವಾಗಿ ಎರಡು ಬಗೆಗಳಿವೆಯೆಂದು ದಾಖಲಿಸಿರುವುದನ್ನು ಕುರಿತು ಎಡ್ಗರ್ ಥರ್ಸ್ಟನ್ *"Castes and Tribes of Southern India"*** ಎಂಬ ಗ್ರಂಥದಲ್ಲಿ ಹೀಗೆ ಉಲ್ಲೇಖಿಸಿರುತ್ತಾನೆ– "In the Census Report 1891 it is recorded that '…only two of the sub-divisions returned are numerically important, Ganayata and Sthavara". ೧೮೯೧ರ ಜನಗಣತಿಯಲ್ಲಿ ನಮೂದಿಸಲಾಗಿರುವ ಪ್ರಕಾರ ಸ್ಥಾವರ ಜಂಗಮ ಮತ್ತು ಗಣಾಯತ ಜಂಗಮ ಎಂಬ ಎರಡು ಪಂಗಡಗಳು ಕಂಡುಬರುತ್ತವೆ. 'ಇವರಲ್ಲಿ ಸ್ಥಾವರ ಜಂಗಮರು ನಂತರದ ಕಾಲದಲ್ಲಿ ಜಂಗಮದೇವರು ಅಥವಾ ಜಂಗಮಯ್ಯರಾಗಿ

ಗುರುತಿಸಿಕೊಂಡಿದ್ದಾರೆ. ಗಣಾಯತ ಜಂಗಮರೇ ಬುಡ್ಗ ಜಂಗಮರೆಂದು ಡಾ ಎನ್ ಆರ್ ವೆಂಕಟೇಶಂ ಅವರು ಅಭಿಪ್ರಾಯಪಡುತ್ತಾರೆ.

**೧೯೦೯ರಲ್ಲಿ ಎಡ್ಗರ್ ಥರ್ಸ್ಟನ್ ಮತ್ತು ರಂಗಚಾರಿ ಕೆ ಅವರು ತಮ್ಮ *"The Castes and Tribes of Southern India"*** ಎಂಬ ಸಂಪುಟ-೫ರ ಪುಟ-೪೫೪ರಲ್ಲಿ ಬುಡ್ಗ ಜಂಗಮರನ್ನು ಕುರಿತು (Pagati vesham) "A class of Telugu beggars, who put on disguises(vesham) while begging (Madras Census report 1901) At he annual festival at Thirupati in honour of the godess Gangamma, Custom requires the people to appear in a different disguise every morning and evening. These disguise include those of a Bairagi, serpent etc" ಎಂದು ಬರೆಯುತ್ತಾರೆ. ತಿರುಪತಿ ಗಂಗಮ್ಮ ಎನ್ನುವ ದೇವತೆಯ ಗೌರವಾರ್ಥ ನಡೆಯುವ ವಾರ್ಷಿಕ ಜಾತ್ರೆಯಲ್ಲಿ ಪ್ರತಿದಿನ ಬೆಳಿಗ್ಗೆ ಸಂಜೆ ಬೈರಾಗಿ, ಸರ್ಪಧಾರಿ ಮುಂತಾದ ಬೇರೆ ಬೇರೆ ವೇಷಗಳನ್ನು ಧರಿಸಿ ಭಿಕ್ಷೆ ಎತ್ತುವ ತೆಲುಗು ಭಿಕ್ಷುಕ ವರ್ಗದವರನ್ನು ಹಗಲು ವೇಷದವರು (ಬುಡ್ಗ ಜಂಗಮರು) ಎಂದು ಥರ್ಸ್ಟನ್ ದಾಖಲಿಸಿದ್ದಾರೆ.

**೧೯೨೦ರಲ್ಲಿ ಸೈಯದ್ ಸಿರಾಜ್ ಉಲ್ ಹಸನ್ ಅವರು ತಮ್ಮ, *The Castes and Tribes of H E H the Nizam's Dominions,* Vol-1, Page-507, Mendicants Telegas** ಎಂಬ ಗ್ರಂಥದಲ್ಲಿ ತೊಗಲುಗೊಂಬೆಯಾಡಿಸುವ ಕಲಾವಿದರನ್ನು ಬುಡ್ಗ ಜಂಗಮರು ಎಂದು ದಾಖಲಿಸಿದ್ದಾರೆ. ಮತ್ತೊಂದು ಕಡೆ ಪುಟ ಸಂಖ್ಯೆ ೫೦೫ರಲ್ಲಿ ಬುಡ್ಗ ಜಂಗಮರನ್ನು ಶಾರದಗಾಳು ಎಂದು ದಾಖಲಿಸಿದ್ದಾರೆ. ಶಾರದಗಾಳು ಹಾಗೂ ಬುಡ್ಗ ಜಂಗಮರು ಒಂದೆಯೇ ಸಮುದಾಯವೇ ಎಂದು ಪರಿಶೀಲಿಸಬೇಕಿದೆ.

**೧೯೩೦ ರಲ್ಲಿ Ananthakrishna Iyer L K** ಅವರು ***The Mysore Tribes and Castes, Vol-3 ರಲ್ಲಿ ಬುಡ್ಗ ಜಂಗಮ್ ಸಮುದಾಯದ ಕೆಲವು ವಿವರಗಳನ್ನು 'Jangala'*** ಎಂಬ ಶೀರ್ಷಿಕೆಯಲ್ಲಿ ಬರೆದಿದ್ದಾರೆ ಈ ಲೇಖನದಲ್ಲಿ ಬುಡ್ಗ ಜಂಗಮರಿಗೆ ಇರುವ ಗುಣಲಕ್ಷಣಗಳನ್ನು ಹಾಗೂ ವೃತ್ತಿಗಳ ಬಗ್ಗೆ ವಿವರಿಸಿದ್ದಾರೆ. ಹೀಗಾಗಿ ಬುಡ್ಗ ಜಂಗಮರು ಜಂಗಾಲರೇ ಅಥವಾ ಜಂಗಾಲರೇ ಬುಡ್ಗ ಜಂಗಮರೇ ಎಂದು ಈ ಅಧ್ಯಯನದಲ್ಲಿ ಪರಿಶೀಲಿಸಬೇಕಿದೆ.

**ಫ್ರೇಡರಿಕ್ ಎಂಗೆಲ್ಸ್(ಮೂಲ), ೧೯೮೦ರಲ್ಲಿ ಗೋಪಾಲ್ ಕೃಷ್ಣರಾವ್ ಕೆ ಎಲ್(ಅನು), *ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ*** ಎಂಬ ಕೃತಿಯಲ್ಲಿ ಲೈಂಗಿಕತೆಯ ಪ್ರಾರಂಭದ ಕಾಲಘಟ್ಟದಲ್ಲಿ ತಂದೆ ತಾಯಿಯರು, ಮಕ್ಕಳು ಪರಸ್ಪರ ಲೈಂಗಿಕತೆ ಸಂಬಂಧ ಹೊಂದಿದ್ದರು. ನಂತರ ಸೋದರ ಸೋದರಿಯರು ಲೈಂಗಿಕ ಸಂಬಂಧ ಹೊಂದಿದ್ದರು. ಆನಂತರ ಸ್ವಂತ ಸೋದರ ಸೋದರಿಯನ್ನು ಲೈಂಗಿಕ ಸಂಬಂಧಗಳಿಗೆ ನಿರ್ಬಂಧವಾಗಿ ನಿಯಮ ಮಾಡಲಾಯಿತು. ಅಲ್ಲಿಂದ ಕ್ರಮೇಣವಾಗಿ ಅದು ಸರ್ವೆ ಸಾಮಾನ್ಯವಾಗಿ ಒಂದು ನಿಯಮವಾಯಿತು. ಈ ನಿರ್ಭಂದಕ್ಕೆ ಪ್ರಮುಖ

ಕಾರಣವಾಗಿದ್ದು ಕುಲ, ಬಳಿ(ಬೆಡಗು)ಗಳು. ಈ ಕುಲ, ಬಳಿ(ಬೆಡಗು)ಗಳ ವ್ಯವಸ್ಥೆ ಆಗಿನ ಕಾಲದಲ್ಲೇ ಸ್ಥಾಪನೆಯಾಗಿತ್ತು. ಅನಾಗಾರಿಕಾವಸ್ಥೆಯ ಕಾಲಘಟ್ಟದಲ್ಲಿ ಜನತೆಗಳ ಸಾಮಾಜಿಕ ವ್ಯವಸ್ಥೆಗೆ ಕುಲ, ಬಳಿ(ಬೆಡಗು)ಗಳೇ ಅಡಿಪಾಯವಾಗಿತ್ತು. ಕುಟುಂಬವು ನಾಲ್ಕು ಹಂತಗಳಲ್ಲಿ ರೂಪಗೊಂಡಿತು.[೧] ರಕ್ತಸಂಬಂಧಿ ಕುಟುಂಬ, ಪುನಾಲುಆನ್ ಕುಟುಂಬ, ಯುಗ್ಮ ಕುಟುಂಬ, ಏಕಪತ್ನಿ- ಏಕಪತಿ ಕುಟುಂಬ ಹೀಗೆ ಹಂತ ಹಂತವಾಗಿ ಕುಟುಂಬವು ರೂಪಾಂತರಗೊಂಡಿತು ಎಂದು ವಿವರಿಸಿದ್ದು ನನ್ನ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

೧೯೮೩ರಲ್ಲಿ ಆರ್ ವಿ ಎಸ್ ಸುಂದರಂ ಅವರು *ಆಂಧ್ರುಲ ಜಾನಪದ ವಿಜ್ಞಾನಂ* ಎಂಬ ಕೃತಿಯಲ್ಲಿ ಸಿ ಪಿ ಬ್ರೌನ್ ಅವರು ತಂದಾನ ಕಥೆಗಳನ್ನು ಹೇಳುವ ಜಂಗಮನೊಬ್ಬನನ್ನು ಒಂದು ತಿಂಗಳ ತನಕ ತನ್ನ ಮನೆಯಲ್ಲಿರಿಸಿಕೊಂಡು ಬೊಬ್ಬಿಲಿ ಕಥೆ, ಕುಮಾರರಾಮನ ಕಥೆ, ಬಾಲನಾಗಮ್ಮನ ಕಥೆ ಇತ್ಯಾದಿ ಜಂಗಂ ಕಥೆಗಳನ್ನು ಹಾಡಿಸಿ ಬರೆದುಕೊಂಡು ಸಂಗೋಪನೆ ಮಾಡಿರುವುದಕ್ಕೆ ನಾವು ಆ ಮಹನೀಯರಿಗೆ ಕೃತಜ್ಞತೆಯಿಂದಿರಬೇಕಾಗಿದೆ" ಎಂದು ಜಂಗಂ ಕಥೆಗಳನ್ನು ಹಾಡುವ ಬುಡ್ಗ ಜಂಗಮರನ್ನು ಕುರಿತು ಉಲ್ಲೇಖಿಸಿದ್ದಾರೆ. ಆಂಧ್ರಪ್ರದೇಶದ ವೃತ್ತಿಗಾಯಕರ ಬಗ್ಗೆ ವಿವರಿಸುವಾಗ ಬುಡಿಗೆ ಜಂಗಂ, ಬಾಲಸಂತರು ವೃತ್ತಿ ಗಾಯಕರೆಂದು ದಾಖಲಿಸಿದ್ದಾರೆ.

೧೯೮೭ರಲ್ಲಿ **ಡಾ ಎನ್ ಯಾದಗಿರಿ ಶರ್ಮ** ಅವರು *'ಜಾನಪದ ಭಿಕ್ಷುಕ ಗಾಯಕರು'* ಎಂಬ ತೆಲುಗು ಭಾಷೆಯ ಕೃತಿಯಲ್ಲಿ ಬುಡ್ಗ ಜಂಗಮ್ ಸಮುದಾಯದ ಬುರ್ರಕಥೆಯ ಕಲೆಯ ಬಗ್ಗೆ ಉಲ್ಲೇಖಿಸಿದ್ದಾರೆ.

೧೯೯೦ ರಲ್ಲಿ **ಪ್ರೊ ಬಿರುದು ರಾಮರಾಜು** ಅವರು *"ತೆಲುಗು ಜಾನಪದ ಗೇಯ ಸಾಹಿತ್ಯಂ"* ಎನ್ನುವ ಕೃತಿಯಲ್ಲಿ ಈ ಸಮುದಾಯವನ್ನು ಕುರಿತು "ಬುಡಿಗೆ" ಎನ್ನುವ ವಾದ್ಯವನ್ನು ನುಡಿಸುತ್ತಾ ಕಥೆ ಹೇಳುವ ಜನರನ್ನು "ಬುಡ್ಗ ಜಂಗಾಲು" ಎಂದು ಕರೆದಿದ್ದಾರೆ. ಈ ಕೃತಿಯಲ್ಲಿ ಬುಡ್ಗ ಜಂಗಮರು ಬಳಸುವ ಬುಡ್ಗ ವಾದ್ಯದ ಕುರಿತು ಉಲ್ಲೇಖಗಳಿವೆ.

೧೯೯೧ ರಲ್ಲಿ **ಮರವೂರು ಕೋದಂಡ ರಾಮರೆಡ್ಡಿ** ಅವರು ಬರೆದಿರುವ *"ಮಾಂಡಲಿಕ ಪದಕೋಶಂ"* ಎನ್ನುವ ಗ್ರಂಥದಲ್ಲಿ "ತಂದನಾ" ಕಥೆಗಳನ್ನು ಹೇಳಿ ಜೀವಿಸುವ ಬುರ್ರಕಥೆಯವರು "ಬುಡಿಗೇಲು" ವಾದ್ಯವನ್ನು ನುಡಿಸುತ್ತಾ ಭಿಕ್ಷೆ ಎತ್ತುವವರು "ಬುಡ್ಗ ಜಂಗಾಲು" ಎಂದು ದಾಖಲಿಸಿರುವುದು ನನ್ನ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

೧೯೯೨ ರಲ್ಲಿ **ಡಾ. ಮಿಕ್ಕಿಲಿನಿ ರಾಧಕೃಷ್ಣಮೂರ್ತಿ** ಅವರು ರಚಿಸಿರುವ *'ತೆಲುಗುವಾರಿ ಜಾನಪದ ಕಲಾರೂಪಾಲು'* ಎಂಬ ಕೃತಿಯಲ್ಲಿ ಬುಡ್ಗವಾದ್ಯವನ್ನು ನುಡಿಸುವ ವಾದ್ಯಕಾರರೇ ಬುಡ್ಗ ಜಂಗಮರು ಎಂದು ಹೇಳಿದ್ದಾರೆ. ಬುಡ್ಗ ಜಂಗಮರ ಕಲಾಪ್ರಕಾರಗಳಾದ ಬುರ್ರಕಥೆ, ಪಗಟಿವೇಷಂ ಇತ್ಯಾದಿ ಕಲೆಗಳ ಬಗ್ಗೆ ವಿವರಣೆಗಳನ್ನು ನೀಡಿರುವುದು ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

೧೯೯೩ ರಲ್ಲಿ **ಕೆ ಎಸ್ ಸಿಂಗ್** ಅವರ ಪುಸ್ತಕ 'ಪೀಪಲ್ ಆಫ್ ಇಂಡಿಯಾ'ದ ***The Scheduled Castes*** ರಾಷ್ಟ್ರೀಯ ಸರಣಿ ಪುಸ್ತಕ, ಪುಟಸಂಖ್ಯೆ ೨೦೨-೨೦೭ರಲ್ಲಿ ಮಾನವ ಕುಲವಿವರಣ

ವಿಜ್ಞಾನದ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿಯ ಬೇಡ ಜಂಗಮ್, ಬುಡ್ಗ ಜಂಗಮ್ ಸಮುದಾಯದ ಬಗ್ಗೆ ಮಹತ್ವಪೂರ್ಣ ಮಾಹಿತಿಯನ್ನು ದಾಖಲಿಸಿದ್ದಾರೆ. ಇವರನ್ನು ಬುಡ್ಗ ಜಂಗಮ್ ಬೇಡ ಜಂಗಮ್ ಎಂಬ ಹೆಸರಿನಿಂದ ಗುರುತಿಸಿದ್ದು, ಅವರ ಭಾಷೆ, ಬೆಡಗುಗಳು, ನ್ಯಾಯಪಂಚಾಯಿತಿ ಮತ್ತು ಬುಡ್ಗ ಜಂಗಮರಿಗೂ ಹಾಗೂ ವೀರಶೈವ ಲಿಂಗಾಯತ ಜಂಗಮರಿಗೂ ಇರುವ ಲಕ್ಷಣಗಳು ಹಾಗೂ ವ್ಯತ್ಯಾಸಗಳನ್ನು ಗುರುತಿಸಿದ್ದಾರೆ. ಈ ಕೃತಿಯು ನನ್ನ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**೧೯೯೩ ರಲ್ಲಿ ಯಳನಾಡು ಅಂಜಿನಪ್ಪ** ಅವರು **ಉಪ ಸಂಸ್ಕೃತಿ ಮಾಲೆ ಯೋಜನೆಯಡಿಯಲ್ಲಿ ಬರೆದ** ***ಹಗಲುವೇಷದವರ ಸಂಸ್ಕೃತಿ*** ಎಂಬ ಶೀರ್ಷಿಕೆಯಲ್ಲಿ ಬುಡ್ಗ ಜಂಗಮರ ಆಚಾರ-ವಿಚಾರ ಕುಲ ಬೆಡಗು ಮತ್ತು ಕಲೆಗಳ ಬಗ್ಗೆ ದಾಖಲಿಸಿದ್ದಾರೆ. ಆದರೆ ಈ ಶೀರ್ಷಿಕೆ ಆ ಸಮುದಾಯದ ಕುಲವೃತ್ತಿಯನ್ನೇ ಒಂದು ಜಾತಿಯಾಗಿ ಗುರುತಿಸಿ ಅಧ್ಯಯನಿಸಿದ್ದಾರೆ. ಹಗಲುವೇಷ ಎನ್ನುವುದು ಬುಡ್ಗ ಜಂಗಮರು ಪ್ರದರ್ಶಿಸುವ ವಿವಿಧ ಕಲೆಗಳಲ್ಲಿ ಒಂದಾಗಿದೆ. ಹಗಲುವೇಷ ಎನ್ನುವುದು ಒಂದು ಜಾತಿಯಲ್ಲ. ಅದು ಕೇವಲ ಒಂದು ಕಲೆಯಾಗಿರುವುದು ಕಂಡುಬರುತ್ತದೆ. ಈ ಶೀರ್ಷಿಕೆಯು ಬುಡ್ಗ ಜಂಗಮರಿಗೆ ಇರುವ ಕುಲ ಲಕ್ಷಣಗಳು ಹಾಗೂ ಹಗಲುವೇಷದವರಿಗೂ ಇರುವ ಲಕ್ಷಣಗಳು ಒಂದೆಯೇ ಎಂದು ಪರಿಶೀಲಿಸಬೇಕಿದೆ.

**೧೯೯೩ ರಲ್ಲಿ ಡಾ ಬಿ ಎಂ ಹೊಸಮನಿ** ಅವರು ***ಕರ್ನಾಟಕದಲ್ಲಿ ವೇಷಗಾರರು ಒಂದು ಸಾಂಸ್ಕೃತಿಕ ಅಧ್ಯಯನ*** ಎಂಬ ಪಿಎಚ್‌ಡಿ ಮಹಾಪ್ರಬಂಧದಲ್ಲಿ ವೇಷಗಾರರು, ಬುಡ್ಗ ಜಂಗಮ ವೃತ್ತಿಗಾಯಕರು, ಬುರ್ರಕಥೆಗಾರರು, ಬಾಳಸಂತೋಷಿಗಳು, ಶಂಖು ಜಂಗಮರು ಮುಂತಾದವರಲ್ಲಿ ಪರಸ್ಪರ ಸಂಬಂಧ ಸೂಚಿಸುವ ಸಮಾನ ಅಂಶಗಳನ್ನು ಎಂದು ಗುರುತಿಸಿದ್ದಾರೆ. ಮೂಲದಲ್ಲಿ ಇವರ ಕುಲ "ಜಂಗಾಲು", "ಸಿರಿ ಜಂಗಾಲು" ಎಂದು ಹೇಳಿಕೊಳ್ಳುವರು. ಬನ್ನಿ ಗಿಡವನ್ನು 'ಜಂಭುಲಮ್ಮ' ಎಂದು ಕರೆದು ಮದುವೆ ಮುಂತಾದ ಕಾರ್ಯಕ್ರಮಗಳಲ್ಲಿ ಪೂಜಿಸುವರು. ಮದ್ಯ, ಮಾಂಸ ಸೇವನೆ ಮಾಡುತ್ತಾರೆ. ಶ್ರೀಶೈಲ ಮೂಲದ ಶೈವ ಸಂಪ್ರದಾಯದವರು ಎಂದು ಹೇಳಿದ್ದಾರೆ. ಆಂಧ್ರ ಪ್ರದೇಶದ ಶಂಶಾಬಾದಿನ 'ನೀಲಕಂಠ ಸ್ವಾಮಿಗಳು' ಇವರ ಧರ್ಮಗುರು ಎಂದು ಗುರುತಿಸಿದ್ದಾರೆ. ಈ ಸಮುದಾಯ ಸ್ವಜಾತಿ ಬುಡಕಟ್ಟು ಸಮುದಾಯವಾಗಿದ್ದು, ಕಾರಣಾಂತರಗಳಿಂದ ನಾಡಿಗೆ ಪ್ರವೇಶ ಪಡೆದ ಸಂದರ್ಭದಲ್ಲಿ ಅಲ್ಲಿನ ಮಠಮಾನ್ಯಗಳು ಈ ಸಮುದಾಯಗಳನ್ನು ತಮ್ಮ ಅಧೀನದಲ್ಲಿ ಇಟ್ಟುಕೊಳ್ಳಲು ಬುಡ್ಗ ಜಂಗಮರಲ್ಲಿ ಒಂದಿಷ್ಟು ಹಣವನ್ನು ತೆರಿಗೆ ರೂಪದಲ್ಲಿ ಸಂಗ್ರಹಿಸಿಕೊಳ್ಳುತ್ತಿದ್ದರು. ಈ ಸಮುದಾಯಕ್ಕೆ ಅನ್ಯ ಸಮುದಾಯಗಳ ಒಳಜಗಳಗಳ ಮುಕ್ತಿ ಪಡೆಯಬೇಕಾದರೆ ಅಂದು ಅಧಿಕಾರ ಆಡಳಿತ ಹೊಂದಿದ ವ್ಯವಸ್ಥೆಗೆ ಮೊರೆಹೋಗುತ್ತಿದ್ದರು. ಅಂದು ಆಡಳಿತ ವ್ಯವಸ್ಥೆಯಲ್ಲಿದ್ದ ವೀರಶೈವ ಲಿಂಗಾಯತ ಜಂಗಮ ಸಮುದಾಯದ ಮಠಮಾನ್ಯಗಳಿಂದ ರಕ್ಷಣೆ ಪಡಿಯಬೇಕಾದ ಅನಿವಾರ್ಯ ಬುಡ್ಗ ಜಂಗಂರಿಗೆ ಇತ್ತು. ಆ ಸಂದರ್ಭದಲ್ಲಿ ಈ ಸಮುದಾಯವು ತನ್ನ ರಕ್ಷಣೆಗಾಗಿ ನೀಲಕಂಠ ಸ್ವಾಮಿಗಳು ಸಹಾಯ ಪಡೆದಿರುವುದನ್ನು ನೆನಪಿಸಿಕೊಂಡಿರುವುದನ್ನು ಬುಡ್ಗ ಜಂಗಮರು ಅಧ್ಯಯನಕಾರರಿಗೆ ಹೇಳಿರುವುದರಿಂದ

ಅಧ್ಯಯನಕಾರರು ಅವರನ್ನೇ ಗುರುಗಳೆಂದು ದಾಖಲಿಸಿದ್ದಾರೆ. ಈ ಕೃತಿಯು ಬುಡ್ಗ ಜಂಗಮರ ವೃತ್ತಿಯನ್ನು ಆಧರಸಿ ಕೇವಲ ಸಾಂಸ್ಕೃತಿಕ ವಿವರಗಳನ್ನು ನೀಡಲು ಪ್ರಯತ್ನಿಸಿದ್ದಾರೆ. ಆದರೆ ಸಮುದಾಯದ ಮೂಲ ಹಾಗೂ ಚಾರಿತ್ರಿಕ ಹಿನ್ನೆಲೆಯನ್ನು ಕುಲಶಾಸ್ತ್ರೀಯವಾಗಿ ಅಷ್ಟಾಗಿ ವಿವರಿಸಿರುವುದಿಲ್ಲ.

**೧೯೯೭ ರಲ್ಲಿ ಡಾ ಎನ್ ಆರ್ ವೆಂಕಟೇಶಂ** ಅವರು ***ಬುಡಿಗ ಜಂಗಾಲು ಭಾಷಾ ಸಾಹಿತ್ಯ ಸಾಂಸ್ಕೃತಿಕಾಂಶಾಲ ಪರಿಶೀಲನ*** ಎಂಬ ಪಿಎಚ್ ಡಿ ಮಹಾಪ್ರಬಂಧದಲ್ಲಿ ಬುಡ್ಗ ಜಂಗಮರು ಜೀವನೋಪಾಯಕ್ಕಾಗಿ ಜಾನಪದ ಕಲೆಗಳನ್ನು ವೃತ್ತಿಯನ್ನಾಗಿಸಿಕೊಂಡು ಬುರ್ರಕಥೆಯವರಾಗಿ, ವೇಷಗಾರರಾಗಿ, ಬೀದಿ ಭಾಗವತರಾಗಿ, ಕುರ್ರಮಾಮ ಅಥವಾ ಕೊಂಡಮಾಮಗಳಾಗಿ ಹೀಗೆ ಹೊಟ್ಟೆಪಾಡಿಗಾಗಿ ಹಲವಾರು ರೀತಿಯ ಕಲೆಗಳನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಇವರು ಜೀವನ ಪರ್ಯಂತ ಒಂದೇ ವೇಷವನ್ನು ಪ್ರದರ್ಶಿಸುವವರೆಂದು ಹೇಳಲಾಗದು. ಇವರು ಸಂದರ್ಭಾನುಸಾರವಾಗಿ ವೃತ್ತಿವೇಷಗಳನ್ನು ಬದಲಾಯಿಸುತ್ತಾ ಹೋಗುತ್ತಾರೆ. ಇಂದು ತುಪಾಕಿಲ ರಾಮನವೇಷ ಹಾಕಿದವನು, ನಾಳೆ ತಂದಾನ ಕಥೆ ಹೇಳಲು ಹೋಗುವನು. ನಾಳೆ ತಂದಾನಿ ಕಥೆಗಳನ್ನು ಹೇಳಿದವನು, ನಾಡಿದ್ದು ಭಾಗವತ ವೇಷ ಹಾಕುವುದುಂಟು ಹೀಗೆ ಬುಡ್ಗ ಜಂಗಮರಲ್ಲಿ ಒಂದು ವೃತ್ತಿಯ ವೇಷವು ಒಬ್ಬರಿಗೆ ಸೀಮಿತವಾಗಿರದೆ ಸಮಯ ಸಂದರ್ಭಾನುಸಾರವಾಗಿ ಬದಲಾಗುತ್ತಾ ಹೋಗುತ್ತದೆ. ಆದರೂ ಇವರ ಕುಲವೆಲ್ಲ ಒಂದೇ. ವಿವಾಹ ಸಂಬಂಧ, ಮನೆಯ ಬೆಡಗು, ಆಚಾರ, ವಿಚಾರ, ಸಂಪ್ರದಾಯ, ಗುಡಾರಗಳು, ಕುಲಪಂಚಾಯಿತಿ ಮುಂತಾದ ಬುಡಕಟ್ಟು ಗುಣಲಕ್ಷಣಗಳೆಲ್ಲವೂ ಬುಡ್ಗ ಜಂಗಮರಿಗೆ ಒಂದೇಯಾಗಿರುತ್ತದೆ ಎಂದು ದಾಖಲಿಸಿರುವುದು, ಈ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**೧೯೯೭ರಲ್ಲಿ ಡಾ ಹಿ ಚಿ ಬೋರಲಿಂಗಯ್ಯ ಅವರ ಸಂಪಾದನೆಯಲ್ಲಿ** ***ಕರ್ನಾಟಕ ಜನಪದ ಕಲೆಗಳ ಕೋಶ*** ಎಂಬ ಕೃತಿಯಲ್ಲಿ ಬುಡ್ಗ ಜಂಗಮರ ಕಲೆಗಳಾದ ಬಹುರೂಪಿ ವೇಷಗಾರರು, ಆಂಜಿನೇಯ ವೇಷ, ಕೊಂಡಮಾಮ (ಕುರ್ರಮಾಮ)ನ ವೇಷ, ಸುಡುಗಾಡು ಸಿದ್ಧರ ಕೈಚಳಕ, ಪಾಳೇಗಾರ ವೇಷ, ಹುಲಿವೇಷ ಮತ್ತು ಬುರ್ರಕಥಾಮೇಳ ಕಲೆಗಳ ಬಗ್ಗೆ ಉಲ್ಲೆಖಿಸಿದ್ದಾರೆ. ಸಮುದಾಯದ ಕಲೆಯ ಚಾರಿತ್ರಿಕ ಹಿನ್ನೆಲೆಯನ್ನು ವಿವರಿಸಿರುವುದಿಲ್ಲ.

**೧೯೯೮ ರಲ್ಲಿ ಬಾಲಗೋಪಾಲ್(ಮೂ), ಶ್ರೀಮತಿ ಎಚ್ ಎಸ್(ಅನು),** ***ಪ್ರಾಚೀನ ಭಾರತದ ಚರಿತ್ರೆ*** ಎಂಬ ಕೃತಿಯಲ್ಲಿ ಪ್ರಖ್ಯಾತ ಇತಿಹಾಸಕಾರ ಡಿ ಡಿ ಕೋಸಾಂಬಿ ಅವರು 'ಗತಕಾಲದಲ್ಲಿ ಆಗಿ ಹೋದ ಎಲ್ಲ ಸಾಮಾಜಿಕ ಬದಲಾವಣೆಗಳೂ ತಮ್ಮ ಮುದ್ರೆಯನ್ನು ನಮ್ಮ ಇಂದಿನ ಸಮಾಜದಲ್ಲೂ ಉಳಿದು ಬರುವಂತೆ ಒತ್ತಿವೆ. ಇವುಗಳನ್ನಾಧರಿಸಿ ನಮ್ಮ ಚರಿತ್ರೆಯನ್ನು ಗ್ರಹಿಸುವ ಸಾಧ್ಯತೆ ಇದೆ. ನಮ್ಮ ದೇಶವು ಭೂತವನ್ನು ಹೀಗೆ ಹೊತ್ತುಕೊಂಡೇ ಬಂದಿದೆ ಎಂಬುದು ಜನ ಜೀವನದ ಶಾಪ ಹೌದಾದರೂ, ಅದು ಚರಿತ್ರೆಕಾರನ ಪಾಲಿನ ವರವೂ ಹೌದು', ಈ ಹಿನ್ನೆಲೆಯಲ್ಲಿ ದಲಿತರ ಜೀವನದಲ್ಲಿ ಇಂದು ಜೀವಂತವಿರುವ ಆಚರಣೆಗಳು ಮತ್ತು ನಂಬಿಕೆಗಳು ಇತರ ಜಾತಿವರ್ಗಗಳ ಜತೆ ದಲಿತರ

ಒಡನಾಟದಿಂದಾಗಿ ಹುಟ್ಟಿರುವ ಹಬ್ಬ ಜಾತ್ರೆ, ಉತ್ಸವ ಮೊದಲಾದವುಗಳು ದಲಿತರ ಕಳೆದುಹೋದ ಇತಿಹಾಸ ಮತ್ತು ಸಂಸ್ಕೃತಿ ಪರಂಪರೆಯನ್ನು ಚಿತ್ರಿಸಿಕೊಳ್ಳುವುದಕ್ಕೆ ನೆರವಾಗುತ್ತವೆ ಎಂದು ಹೇಳಿದ್ದಾರೆ.

**೧೯೯೮ ರಲ್ಲಿ ಗಂಗಾಧರ ದೈವಜ್ಞ** ಅವರು ***ಕರ್ನಾಟಕ ಬುಡಕಟ್ಟುಗಳು, ಸಂಪುಟ ಎರಡರಲ್ಲಿ ಬುಡಗ ಜಂಗಾಲರು*** ಎಂಬ ಲೇಖನದಲ್ಲಿ ಸಮುದಾಯಗಳ ಹಿನ್ನೆಲೆ, ಮೂಲ, ಸಾಮಾಜಿಕ ಜೀವನ, ಕೌಟಂಬಿಕ ವ್ಯವಸ್ಥೆ, ಮದುವೆ ಪದ್ದತಿ, ಬುಡಕಟ್ಟಿನ ಆರಾಧನಾ ನಂಬಿಕೆ, ಆಚಾರ ವಿಚಾರಗಳು, ಅವರ ಆರ್ಥಿಕ ಜೀವನ, ವೃತ್ತಿಗಳನ್ನು, ಅವರ ಸಾಹಿತ್ಯ, ಕಲಾ ಪ್ರದರ್ಶನಗಳ ಕುರಿತಾಗಿ ವಿವರಣೆ ಇದೆ. ಇದರಲ್ಲಿನ ಕೆಲವು ಅಂಶಗಳು ನನ್ನ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**೨೦೦೨ ರಲ್ಲಿ ಡಾ ಎನ್ ಆರ್ ವೆಂಕಟೇಶಂ** ಅವರು ***ಬುಡ್ಗ ಜಂಗಂ ದರ್ಶಿನಿ*** ಎಂಬ ಕೃತಿಯಲ್ಲಿ ಬುಡ್ಗ ಜಂಗಮರ ಚರಿತ್ರೆ ಮತ್ತು ಬೆಡಗುಗಳ ಸಾಮ್ಯತೆ, ಅವರ ಕಲೆಗಳು ಮತ್ತು ಸಮುದಾಯ ಅನುಭವಿಸಿದ ನೋವುಗಳನ್ನು ತಮ್ಮ ಹಾಡಿನ ಮೂಲಕ ವ್ಯಕ್ತಪಡಿಸಿರುವ ಹಾಡುಗಳನ್ನು ದಾಖಲಿಸಿದ್ದಾರೆ. ವಿಶೇಷವಾಗಿ ಈ ಸಮುದಾಯದ ಮರಗು ಭಾಷೆ ಇತ್ಯಾದಿ ಅಂಶಗಳನ್ನು ಕೇವಲ ಸಾಂಸ್ಕೃತಿಕವಾಗಿ ಗುರುತಿಸಿದ್ದಾರೆ. ಇದರಲ್ಲಿನ ಕೆಲವು ಸಾಂಸ್ಕೃತಿಕ ಒಳವಿವರಗಳನ್ನು ತಿಳಿಯಲು ಈ ಕೃತಿಯು ಅಧ್ಯಯನಕ್ಕೆ ಉಪಯುಕ್ತ ಮಾಹಿತಿ ನೀಡುತ್ತದೆ.

**೨೦೦೨ ರಲ್ಲಿ ಡಾ ವೆಂಕನಗೌಡ್ರು** ಅವರು ***ಬಳ್ಳಾರಿ ಮತ್ತು ಆಂಧ್ರ ಗಡಿಭಾಗದ ಹಗಲುವೇಷಗಾರರು ಒಂದು ಅಧ್ಯಯನ*** ಎಂಬ ಪಿಎಚ್‌ಡಿ ಅಪ್ರಕಟಿತ ಮಹಾಪ್ರಬಂಧದಲ್ಲಿ ವೇಷಗಾರರ ಅವರ ಆಚಾರ ವಿಚಾರಗಳು ಸಂಪ್ರದಾಯಗಳು ಅವರ ಕಲೆಗಳನ್ನು ಕುರಿತು ದಾಖಲಿಸಿದ್ದಾರೆ. ಬುಡ್ಗ ಜಂಗಮರ ವೃತ್ತಿಗಳಲ್ಲಿ ಒಂದಾದ ವೇಷಗಾರಿಕೆ ಕಲೆಯನ್ನೇ ಒಂದು ಜಾತಿಯನ್ನಾಗಿ ಅಧ್ಯಯನ ಮಾಡಿದ್ದಾರೆ, ಆದರೆ ಬುಡ್ಗ ಜಂಗಮರ ಮೂಲ ಹಿನ್ನೆಲೆಯನ್ನು ದಾಖಲಿಸಿರುವುದಿಲ್ಲ, ಕೇವಲ ಅವರ ಕಲೆಗಳನ್ನು ಪ್ರಧಾನವಾಗಿ ಇಟ್ಟುಕೊಂಡು ಅಧ್ಯಯನ ಮಾಡಿದ್ದಾರೆ.

**೨೦೦೨ ರಲ್ಲಿ ಡಾ ನಾಗೇಶ್ ಬೆಟ್ಟಕೋಟೆ ಅವರು** ***ಬೀದಿ ರಂಗಭೂಮಿ*** ಎಂಬ ಕೃತಿಯಲ್ಲಿ ಬೀದಿ ರಂಗಭೂಮಿಯು ರಾಜಕೀಯ ಸಂಘರ್ಷತ್ಮಾಕವಾದ ತಳಸಮುದಾಯಗಳ ಪ್ರತಿರೋಧವನ್ನು ಕುರಿತು ವಿವರಿಸಿದ್ದಾರೆ. ರಂಗಭೂಮಿಯು ಉಗಮವಾಗಿದ್ದು ತಳಸಮುದಾಯಗಳ ಹಾಗೂ ಶ್ರಮಜೀವಿಗಳಿಂದ. ಬಂಡವಾಳಶಾಹಿಯ ದೌರ್ಜನ್ಯ, ಅಸಮಾನತೆ ಇವುಗಳ ವಿರುದ್ಧ ಬಂಡೆದ್ದು ಬೀದಿಗಿಳಿದ ಅಲೆಮಾರಿ ಬುಡಕಟ್ಟುಗಳ ಮೂಲಕ ರಂಗಭೂಮಿ ಉಗಮಕ್ಕೆ ಕಾರಣವಾಯಿತು. ಈ ಒಂದು ಕೃತಿಯಲ್ಲಿ ಬುಡ್ಗ ಜಂಗಮರ ಕಲಾಪ್ರಕಾರಗಳಾದ ಬುರ್ರಕಥಾ, ಪಗಟಿವೇಷಂ ಕಲೆಗಳು ರಂಗಭೂಮಿಯ ಉಗಮಕ್ಕೆ ಕಾರಣವಾಗಿದೆ. ಬುರ್ರಕಥಾವನ್ನು ತೆಲಂಗಾಣ ಖ್ಯಾತ ಕವಿ ಗದ್ದರ್ ಅವರು ತಮ್ಮ ಚಳುವಳಿಗಳಿಗೆ ಬಳಸಿಕೊಂಡಿದ್ದಾರೆ ಎನ್ನುವ ಮಾಹಿತಿಯನ್ನು ನೀಡಿರುವುದು ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**೨೦೦೫ ರಲ್ಲಿ ಡಾ ಕೆ ಎಂ ಮೇತ್ರಿ** ಅವರು ***ಬುಡ್ಗ ಜಂಗಮ್ ದರ್ಶಿನಿ*** ಎಂಬ ಕೃತಿಯಲ್ಲಿ ಬುಡ್ಗ ಜಂಗಮರ ಪದನಿಷ್ಪತ್ತಿ ಮತ್ತು ಅವರ ಆಚಾರ ವಿಚಾರಗಳನ್ನು, ಸಾಮಾಜಿಕ ಜೀವನದ ಸಂಕ್ಷಿಪ್ತ

ನೋಟವನ್ನು ದಾಖಲಿಸಿದ್ದಾರೆ. ಈ ಕೃತಿಯು ನನ್ನ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸುತ್ತದೆ. ಇದರಲ್ಲಿನ ಕೆಲವು ಅಂಶಗಳು ನನ್ನ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**೨೦೦೫ ರಲ್ಲಿ ಹಿರೇಮಠ ಎಸ್ ಎಸ್** ಅವರ ***ಸಮಾಜ ಸಂಸ್ಕೃತಿ ಸಂಘರ್ಷ*** ಎಂಬ ಕೃತಿಯಲ್ಲಿ "ಕರ್ನಾಟಕದ ಜಾತಿ ವ್ಯವಸ್ಥೆಯನ್ನು ಕುರಿತು ಬರೆಯುವಾಗ ತಮಿಳು, ತೆಲುಗು, ಮಲೆಯಾಳಂ ಮೊದಲಾದ ದ್ರಾವಿಡ ಭಾಷಿಕ ಜಾತಿ ಬುಡಕಟ್ಟುಗಳ ಬಗೆಗೂ ಅಭ್ಯಾಸ ಮಾಡುವುದು ಅನಿವಾರ್ಯ, ಭಾಷೆಗಳಲ್ಲಿ ಪ್ರತ್ಯೇಕ ಅಸ್ತಿತ್ವ ಹುಟ್ಟಿಕೊಂಡಿದ್ದೇ ಭೌಗೋಳಿಕ ಕಾರಣದಿಂದಾಗಿ ಎಂದು ಅವರು ಹೇಳುತ್ತಾರೆ. ಈ ಹಿನ್ನಲೆಯಲ್ಲಿ ಬುಡ್ಗ ಜಂಗಮರ ಬುಡ್ಗ ಭಾಷೆಯ ಹುಟ್ಟು ಅದರ ಬೆಳವಣಿಗೆಯನ್ನು ಕುರಿತು ವಿಶ್ಲೇಷಿಸಲು ಸಹಕಾರಿಯಾಗಿದೆ.

**೨೦೦೫ ರಲ್ಲಿ ಡಾ ವೇಮಗಲ್ ಡಿ ನಾರಾಯಣಸ್ವಾಮಿ** ಅವರು ***ಕೇಳಿಕೆ ಒಂದು ಅಧ್ಯಯನ*** ಎಂಬ ಕೃತಿಯಲ್ಲಿ ಒಂದು ರಂಗಭೂಮಿ ಅಥವಾ ಒಂದು ಕಲಾರೂಪ ನಿರ್ಮಾಣವಾಗಬೇಕಾದರೆ ಅದು ಆ ಸಮುದಾಯದ ಅನೇಕ ಶತಮಾನಗಳ ಸಾಧನೆಯ ಫಲವಾಗಿ ಮತ್ತು ನೊಂದ ಅನುಭವಗಳ ಫಲವಾಗಿ ನಿರ್ಮಾಣವಾಗಿರುತ್ತದೆ. ಕೇಳಿಕೆ ರಂಗಭೂಮಿಯು ಆಂಧ್ರ ಮತ್ತು ಕರ್ನಾಟಕದ ಗಡಿಯಲ್ಲಿ ಒಂದು ವಿಶೇಷ ಪ್ರಕಾರವಾಗಿ ದೇಶಿ ರಂಗಭೂಮಿಯಲ್ಲಿ ಹುಟ್ಟಿಕೊಂಡಿರುವುದಾಗಿದೆ. ಯಕ್ಷಗಾನ, ಬಯಲಾಟ, ಬುಡ್ಗ ಜಂಗಮರ ಹಗಲುವೇಷ, ಕೇಳಿಕೆಯ ಕಲಾಪರಂಪರೆಗೆ ಪ್ರಭಾವ ಬೀರಿದೆ ಎನ್ನುವುದನ್ನು ವಿವರಿಸಿದ್ದಾರೆ. ಮೌಖಿಕ ಕಥಾಪರಂಪರೆಗೆ ಬುರ್ರಕಥಾ ಕಲೆಯು ತಾಯಿಬೇರು ಆದರೆ ಯಕ್ಷಗಾನ, ಬಯಲಾಟ, ಸಣ್ಣಾಟ, ತೊಗಲುಗೊಂಬೆಯಾಟ, ಶ್ರೀಕೃಷ್ಣ ಪಾರಿಜಾತ ಇನ್ನಿತರ ಜನಪದ ಕಲೆಗಳಿಗೆ ಮೂಲ ಬುಡ್ಗ ಜಂಗಮರ ಹಗಲುವೇಷ ಕಲೆಯು ತಾಯಿಬೇರಾಗಿದೆ ಎಂದು ವಿವರಿಸಿರುವುದು ನನ್ನ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**೨೦೦೬ ರಲ್ಲಿ Nandu Ramu** ಅವರು ***Encyclopedia of Scheduled caste in India, volume –1, South India, New Delhi*** ಎಂಬ ಕೋಶದಲ್ಲಿ ಪರಿಶಿಷ್ಟ ಜಾತಿಯ ಬುಡ್ಗ ಜಂಗಮ್, ಬೇಡ ಜಂಗಮ್ ಸಮುದಾಯವನ್ನು ಕುರಿತು ಈ ಸಮುದಾಯಕ್ಕೆ ಸರ್ಕಾರವು ಜಾರಿಗೊಳಿಸಿದ ಗಜೆಟೆಡ್ ಆದೇಶಗಳೊಂದಿಗೆ ಸಮುದಾಯಗಳ ಪ್ರಾದೇಶಿಕವಾಗಿ ಮತ್ತು ಅವರ ಜನಸಂಖ್ಯೆಗಳ ವಿವರ, ಅವರ ಆರ್ಥಿಕ ಜೀವನ, ಶೈಕ್ಷಣಿಕ ಜೀವನ ಎಲ್ಲಾ ಅಂಕಿಅಂಶಗಳನ್ನು ಮತ್ತು ಆ ಸಮುದಾಯದ ಸಂಕ್ಷೇಪ್ತವಾದ ಹಿನ್ನೆಲೆಯನ್ನು ವಿವರಿಸಿದ್ದು ಪ್ರಸ್ತುತ ಸಂಶೋಧನೆಗೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**೨೦೦೮ ರಲ್ಲಿ ಡಾ. ಬಸವರಾಜ ಮಲಶೆಟ್ಟಿ** ಅವರು ***ಉತ್ತರ ಕರ್ನಾಟಕದ ಬಯಲಾಟಗಳು*** ಎಂಬ ಕೃತಿಯಲ್ಲಿ ಹೊರನೋಟಕ್ಕೆ ಬುಡ್ಗ ಜಂಗಮರಾದ ವೇಷಗಾರರು ಮತ್ತು ಬಹುರೂಪಿಗಳು ಒಂದೇ ವೃತ್ತಿಯವರಾಗಿ ಕಂಡರೂ ಅವರಿಬ್ಬರ ವೃತ್ತಿ, ಪರಂಪರೆಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಹಗಲುವೇಷ ಪ್ರದರ್ಶಿಸುವ ಬುಡ್ಗ ಜಂಗಮರು ಬೇರೆ ಮಹಾರಾಷ್ಟ್ರದಲ್ಲಿರುವ ಬಹುರೂಪಿಯಾಗಳೇ ಬೇರೆ,

ಅವರ ಆಚಾರ ವಿಚಾರಗಳು ಪರಂಪರೆ ಭಿನ್ನವಾಗಿರುವ ವ್ಯತ್ಯಾಸಗಳನ್ನು ವಿವರಿಸಿದ್ದು ನನ್ನ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**೨೦೦೮ ರಲ್ಲಿ ಬಾಲಗುರುಮೂರ್ತಿ ಹಾಗೂ ಪ್ರತಾಪ್ ಬಹುರೂಪಿ ಅವರ** ***ಸಂಪಾದಕತ್ವದಲ್ಲಿ ಹೊರತಂದ ಬುಡ್ಗಜಂಗಮರು*** ಎಂಬ ಪುಸ್ತಕದಲ್ಲಿ ಸಂಪ್ರದಾಯ ಆಚರಣೆಗಳು, ಕುಲಪಂಚಾಯಿತಿ, ವೃತ್ತಿಗಳ ಬಗ್ಗೆ ಉಪಯುಕ್ತ ಮಾಹಿತಿಯನ್ನು ದಾಖಲಿಸಿದ್ದಾರೆ. ಈ ಕೃತಿಯು ಸಂಶೋಧನಾತ್ಮಕವಾಗಿ ಚಾರಿತ್ರಿಕ ಹಿನ್ನೆಲೆಯನ್ನು ಮತ್ತು ಸಮುದಾಯದ ಮೂಲ ಹೆಸರಿನ ಕುರಿತು ವಿಶ್ಲೇಸಿರುವುದಿಲ್ಲ.

**೨೦೦೯ ರಲ್ಲಿ ಶ್ರೀನಾಥ ಸುಭಾಷ ಅವರು** ***ಅಲೆಮಾರಿ ಸಮುದಾಯಗಳ ಸಾಮಾಜಿಕ ಅಧ್ಯಯನ (ಶಹಾಪುರ ಪಟ್ಟಣವನ್ನು ಅನುಲಕ್ಷಿಸಿ)*** ಎಂಬ ಕೃತಿಯಲ್ಲಿ ಬುಡ್ಗ ಜಂಗಮರ ಸಾಮಾಜಿಕ ಜೀವನದ ಸಂಕ್ಷಿಪ್ತ ಮಾಹಿತಿ ನೀಡಿದ್ದಾರೆ.

**೨೦೧೦ ರಲ್ಲಿ ಡಾ. ಎಂ ಎಂ ಕಲಬುರ್ಗಿ** ಅವರು ***ತಮ್ಮ ಮಾರ್ಗ ಸಂಪುಟ ಎರಡು*** ಎಂಬ ಕೃತಿಯಲ್ಲಿ ಬುಡ್ಗ ಜಂಗಮರ ಕುಲ ಬಳಿಗಳು, ವಿವಾಹ ಪದ್ಧತಿ, ಆಚಾರ ವಿಚಾರ, ವೃತ್ತಿಗಳನ್ನು ಹೊಂದಿರುವ ಇವರನ್ನು ವೇಷಗಾರ ಎಂಬ ಶೀರ್ಷಿಕೆಯನ್ನು ಬಳಸಿದ್ದಾರೆ. ಈ ಪದವು ಈ ಸಮುದಾಯದ ಕೇವಲ ಒಂದು ವೃತ್ತಿಸೂಚಕ ಪದವಾಗಿದ್ದು, ಈ ಲಕ್ಷಣಗಳು ಬುಡ್ಗ ಜಂಗಮರ ಕುಲಶಾಸ್ತ್ರೀಯ ಲಕ್ಷಣಗಳಿಗೆ ಹೆಚ್ಚು ಸಾಮ್ಯತೆಯನ್ನು ಹೊಂದಿವೆ. ಈ ಅಧ್ಯಯದಲ್ಲಿ ವೇಷಗಾರರು ಮತ್ತು ಬುಡ್ಗ ಜಂಗಮರು ಒಂದೇ ಸಮುದಾಯವೇ ಎಂದು ಪರಿಶೀಲಿಸಬೇಕಿದೆ.

**೨೦೧೧ ರಲ್ಲಿ ಡಾ ಅರ್ಜುನ ಗೋಳಸಂಗಿಯವರ** ***ಬುಡ್ಗ ಜಂಗಮರು*** ಎಂಬ ಕೃತಿಯಲ್ಲಿ ಬುಡಗ ಜಂಗಮರ ಭಾಷೆ, ಕುಟುಂಬ, ಪದ್ಧತಿ, ಮದುವೆ, ದೇವರ ಆಚರಣೆ, ನ್ಯಾಯಪಂಚಾಯಿತಿ, ನಂಬಿಕೆಗಳನ್ನು ಕುರಿತು ಸಂಕ್ಷಿಪ್ತ ಮಾಹಿತಿ ನೀಡಿದ್ದಾರೆ.

**೨೦೧೨ ರಲ್ಲಿ ಡಾ ಕೆ ಎಂ ಮೇತ್ರಿ** ಅವರ ***ಮರುಗು ಭಾಷೆ*** ಎಂಬ ಕೃತಿಯಲ್ಲಿ ಅಲೆಮಾರಿ ಬುಡಕಟ್ಟು ಸಮುದಾಯಗಳಲ್ಲಿ ಮರುಗು ಭಾಷೆ ಮಾತನಾಡುವ ಬುಡ್ಗ ಜಂಗಮರ ಬುಡ್ಗ ಭಾಷೆಯನ್ನು ದ್ರಾವಿಡ ಭಾಷೆಯಾಗಿದೆ ಎಂದು ಉಲ್ಲೇಖಿಸಿರುತ್ತಾರೆ. ಈ ಸಮುದಾಯವು ಭಾರತದ ಮೂಲ ನಿವಾಸಿಗಳೆಂದು ಗುರುತಿಸಲು ಇವರ ಬುಡ್ಗ ಮರುಗು ಭಾಷೆಯ ಪದಗಳಿಂದ ತಿಳಿಯಲು ಸಹಕಾರಿಯಾಗುತ್ತದೆ.

**೨೦೧೨ ರಲ್ಲಿ ಮಾಣಿಕಪ್ಪ** ಅವರ ***ಕನ್ನಡ ತೆಲುಗು ಬುರ್ರಕತೆಗಳ ತೌಲನಿಕ ಅನುಸಂಧಾನ ಅಧ್ಯಯನ*** ಪಿಎಚ್‌ಡಿ ಮಹಾಪ್ರಬಂಧದಲ್ಲಿ ಬುರ್ರಕಥೆಗಳ ಭಾಷಾಂತರ ಅಧ್ಯಯನ ಮಾಡಿದ್ದಾರೆ. ಬುರ್ರಕಥೆ ಸ್ವರೂಪ ಮತ್ತು ಕನ್ನಡ ಮತ್ತು ತೆಲುಗು ಭಾಷೆಯ ತೌಲನಿಕ ಅಧ್ಯಯನ ಮಾಡಿದ್ದಾರೆ. ಕಾವ್ಯಗಳನ್ನು ಪ್ರಸ್ತುತ ಪಡಿಸುವ ಕಲಾವಿದರ ಸೃಜನಶೀಲತೆಯನ್ನು ವಿವರಿಸಿದ್ದಾರೆ. ಆದರೆ ಬುರ್ರಕಥೆಗಳ ಹಿನ್ನೆಲೆ ಮತ್ತು ಅದರ ಹುಟ್ಟು ಬೆಳವಣಿಗೆಯ ಬಗ್ಗೆ ದಾಖಲಿಸಿರುವುದಿಲ್ಲ. ಹಾಗಾಗಿ ಬುರ್ರಕಥೆಯ ಹುಟ್ಟು ಬೆಳವಣಿಗೆಯ ಬಗ್ಗೆ ಮುಂದುವರೆದ ಅಧ್ಯಯನ ಮಾಡಲು ಸಹಕಾರಿಯಾಗಿದೆ.

*೨೦೧೨ ರಲ್ಲಿ ಡಾ ಪ್ರಕಾಶ ಬಳ್ಳಾರಿ* ಅವರು *ಕುದರಿಮೋತಿ ಮೊಹರಂ ಆಚರಣೆ ಮತ್ತು ಅಲೆಮಾರಿ ಜನಾಂಗಗಳು: ಒಂದು ಅಧ್ಯಯನ* ಎಂಬ ಮಹಾಪ್ರಬಂಧದಲ್ಲಿ ಹಗಲುವೇಷಗಾರರ ಹಿನ್ನೆಲೆ, ಹಗಲುವೇಷಗಾರರ ಶಬ್ದದ ಅರ್ಥ, ಹಗಲುವೇಷಗಾರರು ಕಂಡುಬರುವ ಪ್ರದೇಶಗಳು, ಅವರ ಆಹಾರ ಪದ್ಧತಿ, ಜೀವನ ಪದ್ಧತಿ, ಕಲೆ ಮತ್ತು ಸಾಹಿತ್ಯ, ಅವರ ಭಾಷೆ ಬಗ್ಗೆ ಸಂಕ್ಷೇಪ್ತವಾಗಿ ಉಲ್ಲೇಖಿಸಿದ್ದಾರೆ. ಬುಡ್ಗ ಜಂಗಮರ ಕಲಾಪ್ರದರ್ಶನಗಳಲ್ಲಿ ಒಂದಾದ ಹಗಲುವೇಷ ವೃತ್ತಿಯನ್ನು ಒಂದು ಜಾತಿ ಎಂದು ಗುರುತಿಸಿ ಅಧ್ಯಯನ ಮಾಡಿದ್ದಾರೆ. ಬುಡ್ಗ ಜಂಗಮರಿಗೆ ಇರುವ ಎಲ್ಲಾ ಗುಣ ಲಕ್ಷಣಗಳನ್ನು ಗುರುತಿಸಿದ್ದು ಮುಂದಿನ ಅಧ್ಯಯನದಲ್ಲಿ ಪರಿಶೀಲಿಸಲಾಗುವುದು.

*೨೦೧೩ ರಲ್ಲಿ ಶಿವಲಿಂಗಪ್ಪ ಎಸ್. ನಾಯಕ* ಅವರು *ಯಾದಗಿರಿ ಜಿಲ್ಲೆಯ ಅಲೆಮಾರಿಗಳ ಸಾಮಾಜಿಕ ಸ್ಥಿತಿಗತಿಗಳು: ಒಂದು ಅಧ್ಯಯನ, ಪಿಎಚ್ ಡಿ ಮಹಾಪ್ರಬಂಧದಲ್ಲಿ* ಯಾದಗಿರಿ ಜಿಲ್ಲೆಯ ಅಲೆಮಾರಿ ಬುಡ್ಗ ಜಂಗಮರು, ಬುಡಕಟ್ಟಿನ ಎಲ್ಲಾ ಲಕ್ಷಣಗಳನ್ನು ಹೊಂದಿದ್ದಾರೆ ಎನ್ನುವ ಮಾಹಿತಿಯನ್ನು ಉಲ್ಲೇಖಿಸಿದ್ದಾರೆ.

*೨೦೧೫ರಲ್ಲಿ ಗುರುದತ್ ಎಸ್, ಶರ್ಮಾ ಆರ ಎಸ್(ಮೂಲ), ಭಾರತಕ್ಕೆ ಆರ್ಯರ ಪ್ರವೇಶ* ಎಂಬ ಕೃತಿಯಲ್ಲಿ ಆರ್ಯ ಸಂಸ್ಕೃತಿಯ ಚಿಹ್ನೆಗಳು, ಆರ್ಯರ ಆಗಮನವನ್ನು ಸೂಚಿಸುವ ಭಾಷಿಕ ಮತ್ತು ಪ್ರಾಕ್ತನ ಪುರಾವೆಗಳು, ವಲಸೆಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಕುದುರೆಯು ಆರ್ಯ ಸಂಸ್ಕೃತಿಯನ್ನು ಸೂಚಿಸುವ ಒಂದು ಅವಶ್ಯ ಚಿಹ್ನೆಯೆಂದು ಪರಿಗಣಿಸಲಾಗಿದೆ. ಅಶ್ವ ಎಂಬ ಪದಗಳು ಸಂಸ್ಕೃತಿ, ಅವೆಸ್ತ, ಗ್ರೀಕ್, ಲ್ಯಾಟಿನ್ ಮತ್ತೀತರ ಇಂಡೋ – ಯುರೋಪಿಯನ್ ಭಾಷೆಗಳಲ್ಲಿ ಕಾಣಿಸುತ್ತವೆ. ಅಶ್ವ ಪದವು ಬುಡಕಟ್ಟಿನ ಹೆಸರನ್ನು ಹೊಂದಿತ್ತೆಂದು ತೋರುತ್ತದೆ. ಋಗ್ವೇದ ಕಾಲದಲ್ಲಿ ಅಶ್ವ, ಗೋ, ವೃಷಭ ಪದಗಳು ಕ್ರಮವಾಗಿ ೨೧೫, ೧೭೬, ೧೭೦ಸಾರಿ ಕಂಡು ಬರುತ್ತದೆ ಎಂದು ಹೇಳಿದ್ದಾರೆ. ವೈದಿಕ ಕಾಲದಲ್ಲಿ ಪಶುಪಾಲಕರ ಮೇಲೆ ಕುದುರೆ ಕೇದ್ರಿತ ಶ್ರೀಮಂತ ಪ್ರಭುತ್ವವು ಪ್ರಾಬಲ್ಯವನ್ನು ಸಾಧಿಸಿತ್ತು ಎಂದು ವಿವರಿಸಿದ್ದಾರೆ.

*೨೦೧೫ ರಲ್ಲಿ ಡಾ. ಹಿ ಚಿ ಬೋರಲಿಂಗಯ್ಯ ಮತ್ತು ಡಾ ಎ ಎಸ್ ಪ್ರಭಾಕರ* ಅವರ *ಕರ್ನಾಟಕದ ಬುಡಕಟ್ಟುಗಳ ಸಚಿತ್ರ ಕೋಶ* ಎಂಬ ಕೃತಿಯಲ್ಲಿ ಬುಡ್ಗ ಜಂಗಮರ ಕಲೆಗಳಾದ ಹಗಲುವೇಷ ಮತ್ತು ಬುರ‍್ರಕಥಾ ಕಲಾಪ್ರಕಾರ ಸಂಕ್ಷಿಪ್ತ ಮಾಹಿತಿಯನ್ನು ನೀಡಿ, ಕಲೆಯ ಚಾರಿತ್ರಿಕ ಹಿನ್ನೆಲೆಯನ್ನು ವಿವರಿಸಿರುವುದಿಲ್ಲ.

*೨೦೧೬ರಲ್ಲಿ ಡಾ ವಡ್ಡಗೆರೆ ನಾಗರಾಜಯ್ಯ* ಅವರು *ಬುಡ್ಗಜಂಗಮ ಸಮುದಾಯ* ಎಂಬ ಕೃತಿಯಲ್ಲಿ ಲಿಂಗಾಯತ ವೀರಶೈವ ಜಂಗಮರು ಮತ್ತು ಬುಡ್ಗ ಜಂಗಮರಿಗೆ ಇರುವ ವ್ಯತ್ಯಾಸ ಮತ್ತು ಮೀಸಲಾತಿ ವಂಚನೆಯ ಕುರಿತು ವಿವರಿಸಿದ್ದಾರೆ.

*೨೦೧೭ರಲ್ಲಿ ಡಾ ಮಲ್ಲಿಕಾರ್ಜುನ ಮಾನ್ಪಡೆ* ಅವರ ***The Socio-Economic status on Nomads, Special Reference to Hyderabad Karnataka Regional Area*** ಎಂಬ ಪ್ರಬಂಧದಲ್ಲಿ ಬುಡ್ಗ ಜಂಗಮರ ಬದುಕು ಮತ್ತು ಅವರ ಸಾಂಸ್ಕೃತಿಕ ಜೀವನ ಹಾಗೂ ಆರ್ಥಿಕ ಜೀವನದ ಅಂಕಿಅಂಶಗಳನ್ನು ತಿಳಿಸಿದ್ದಾರೆ.

***೨೦೧೮ ರಲ್ಲಿ ಡಾ. ಮಲ್ಲಿಕಾರ್ಜುನ ಮಾನ್ಪಡೆ*** ಅವರ ***ಸೂಕ್ಷ್ಮ ಜಾತಿಗಳು*** ಎಂಬ ಕೃತಿಯಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್ ಸಮುದಾಯದ ಕುರಿತು ಅವರ ಬೆಡಗುಗಳು, ಭಾಷೆ, ದೈವಗಳ ಬಗ್ಗೆ ಉಲ್ಲೇಖಿಸಿದ್ದಾರೆ.

***೨೦೧೮ರಲ್ಲಿ ಉದಯ್ ಎಸ್ ಆರ್*** ಅವರ ***The Ritual Performance, its Cultural Emergence and Relevance in Theater: A Ethno Performance Study in Karnataka*** ಎಂಬ ಪಿಎಚ್ ಡಿ ಮಹಾಪ್ರಬಂಧದಲ್ಲಿ ರಂಗಭೂಮಿಯಲ್ಲಿ ಸಿಂಧೊಳ್ಳು ಮತ್ತು ಬುಡ್ಗ ಜಂಗಮ್ ಸಮುದಾಯದ ಪಾರಂಪರಿಕ ಪ್ರದರ್ಶನಾತ್ಮಕ ಕಲೆಗಳ ಮೂಲ ಉದ್ದೇಶಗಳು ಜ್ಞಾನವನ್ನು ಪ್ರಸಾರ ಮಾಡುವ ಸಮುದಾಯಗಳೆಂದು ವಿವರಿಸಿದ್ದಾರೆ.

***೨೦೧೮ ರಲ್ಲಿ ಪರಮೇಶ್ವರ ಗೌಡ*** ಅವರ ***"ಬುಡ್ಗ ಜಂಗಮ ಸಮುದಾಯದ ಆರ್ಥಿಕ ಅಧ್ಯಯನ (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ)*** ಎಂಬ ಪ್ರಬಂಧದಲ್ಲಿ ಕೊಪ್ಪಳ ಜಿಲ್ಲೆಯ ಬುಡ್ಗ ಜಂಗಮ ಸಮುದಾಯವು ತಮ್ಮ ಪಾರಂಪರಿಕ ವೃತ್ತಿಯಾದ ಹಗಲುವೇಷಗಾರಿಕೆಯನ್ನು ಮಾಡುತ್ತಾ ಜೀವನ ಸಾಗಿಸುತ್ತಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಅವರ ಕಲೆಯನ್ನು ಯಾರು ಪ್ರೋತ್ಸಾಹಿಸದ ಕಾರಣ ಜೀವನಕ್ಕಾಗಿ ಕೃಷಿ, ಕೂಲಿ, ಪ್ಲಾಸ್ಟಿಕ್ ಮಾರಾಟ ಮುಂತಾದ ಸಣ್ಣ ಪುಟ್ಟ ವ್ಯಾಪಾರದಲ್ಲಿ ತೊಡಗಿದ್ದಾರೆ. ಒಟ್ಟಾರೆ ಇವರ ಆರ್ಥಿಕ ಸ್ಥಿತಿ ಅಭದ್ರತೆಯಿಂದ ಕೂಡಿದೆ ಎನ್ನುವುದನ್ನು ವಿವರಿಸಿದ್ದಾರೆ.

***೨೦೧೯ರಲ್ಲಿ ವೇಷ್ಗಾರು ರಾಮಾಂಜನೇಯ*** ಅವರ ***ಬುರ್ರಕಥಾಸಿರಿ ದರೋಜಿ ಈರಮ್ಮ*** ಎಂಬ ಲೇಖನದಲ್ಲಿ ಬುರ್ರಕಥೆಯ ಮೂಲ ಮತ್ತು ಅದರ ಹುಟ್ಟು ಬೆಳವಣಿಗೆಯ ಬಗ್ಗೆ ದಾಖಲಿಸಿದ್ದಾರೆ ಅದನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಬುಡ್ಗ ಜಂಗಮ ಸಮುದಾಯದ ಕುರಿತಾಗಿ ವಿರಳ ಪ್ರಮಾಣದಲ್ಲಿ ಅನುಷಂಗಿಕ ಆಕರಗಳು ದೊರೆಯುತ್ತವೆ. ಈ ಅನುಷಂಗಿಕ ಆಕರಗಳಿಗೆ ಪ್ರದೇಶ, ಕಾಲ, ದೃಷ್ಟಿಕೋನಗಳ ಮಿತಿಯನ್ನು ಕಾಣಬಹುದು. ಸಂಶೋಧನೆಯು ನಿರಂತರವಾಗಿ ಸಾಗುವಂತಹದ್ದು, ಹಾಗಾಗಿ ಈ ಅನುಷಂಗಿಕ ಆಕರಗಳು ಎಲ್ಲವನ್ನು ಕಟ್ಟಿಕೊಡಲು ಸಾಧ್ಯವಾಗುವುದಿಲ್ಲ. ಕೆಲವೊಂದು ವಲಯಗಳನ್ನು ಬಿಟ್ಟಿದ್ದು, ಕೇವಲ ಮೇಲ್ಪದರಕ್ಕೆ ಕಾಣುವ ನೋಟವನ್ನು ಮಾತ್ರ ಅಧ್ಯಯನಕಾರರರು ಗುರುತಿಸಿದ್ದಾರೆ, ವೇಷಗಾರ, ಹಗಲುವೇಷದವರು, ಬಾಲಸಂತರು, ತೊಗಲುಗೊಂಬೆಯಾಟದವರು, ಶಾರದಗಾಳು, ಬುಡ್ಗ ಜಂಗಮರು, ಬೇಡ(ಬುಡ್ಗ) ಜಂಗಮರು ಎಂದು ಹೀಗೆ ಹಲವಾರು ಹೆಸರುಗಳಿಂದ ಗುರುತಿಸಿ ಅಧ್ಯಯನಿಸಿದ್ದಾರೆ. ಹೀಗಾಗಿ ಸಮುದಾಯದ ಹಿನ್ನೆಲೆ, ಪರ್ಯಾಯ ಹೆಸರುಗಳು ಮತ್ತು ಕುಲಶಾಸ್ತ್ರೀಯ ಗುಣಲಕ್ಷಣಗಳನ್ನು ಹುಡುಕುತ್ತಾ ಬುಡ್ಗ ಜಂಗಮ್ ಸಮುದಾಯವನ್ನು ಗುರುತಿಸುವಿಕೆ ಸಮಸ್ಯೆ ಮತ್ತು ಹಿಂದುಳಿಯುವಿಕೆಗೆ ಕಾರಣ ಮತ್ತು ಪರಿಹಾರೋಪಾಯಗಳನ್ನು ಕಂಡುಕೊಳ್ಳಲು ಈ ಅಧ್ಯಯನದಿಂದ ಪ್ರಯತ್ನಿಸಲಾಗಿದೆ.

**ಪ್ರಸ್ತುತ ಅಧ್ಯಯನದ ತಾತ್ವಿಕತೆ**

ಕರ್ನಾಟಕದಲ್ಲಿ ವಿರಳವಾಗಿ ನೆಲೆಸಿರುವ ಅಲೆಮಾರಿ ಬುಡ್ಗ ಜಂಗಮ್ ಸಮುದಾಯವನ್ನು ಕುರಿತು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಇಂದು ಬಹುತೇಕ ಅಲೆಮಾರಿಗಳು ಅರೆ

ಅಲೆಮಾರಿಗಳು ಅಲ್ಲಲ್ಲಿ ನೆಲೆಯನ್ನು ಕಂಡುಕೊಳ್ಳುತ್ತಿದ್ದಾರೆ. ಇನ್ನೂ ಕೆಲವು ಗುಂಪುಗಳು ಬೀದಿ ಪ್ರದರ್ಶನಗಳನ್ನು ಮಾಡುತ್ತಾ ಅರೆಅಲೆಮಾರಿಗಳಾಗಿ ಜೀವನ ಸಾಗಿಸುತ್ತಿದ್ದಾರೆ. ಆದರೆ ಸಮಾಜದ ಅಂತಸ್ತು ಜಗತ್ತಿನಲ್ಲಿ ಅಲೆಮಾರಿತ್ವದ ಚಹರೆಗಳನ್ನು ಹಾಗೂ ಬುಡಕಟ್ಟು ಲಕ್ಷಣಗಳನ್ನು ಇಂದಿಗೂ ಉಳಿದುಕೊಂಡಿರುವ ಕರ್ನಾಟಕದಲ್ಲಿ ವಿರಳವಾಗಿ ವಾಸಿಸುತ್ತಿರುವ ಸೂಕ್ಷ್ಮ ಅತಿಸೂಕ್ಷ್ಮ ಅಲೆಮಾರಿ ಸಮುದಾಯಗಳಲ್ಲಿ ಒಂದಾದ ಬುಡ್ಗ ಜಂಗಮ ಸಮುದಾಯವು ಒಂದಾಗಿದೆ. ಬುಡ್ಗ ಜಂಗಮರು ಒಂದು ಕಲಾ ಸಮುದಾಯವಾಗಿದ್ದು, ನಾಡಿನ ಅನೇಕ ಚರಿತ್ರೆಗಳನ್ನು ತಮ್ಮಲ್ಲಿ ಹುದುಗಿಸಿಕೊಂಡು ವಿಶಿಷ್ಟವಾದ ರೀತಿಯಲ್ಲಿ ಜೀವನ ಮಾಡುತ್ತಿದ್ದಾರೆ. ಅಲೆಮಾರಿಗಳ ಅಧ್ಯಯನವೆಂದರೆ ಒಂದು ಅರ್ಥದಲ್ಲಿ ಭಾರತದ ಜಾತಿಪದ್ಧತಿಯ ರಾಜಕೀಯಾರ್ಥಿಕ ವಿಕಟನಾಟಕದ ಅಧ್ಯಯನವೆಂದೇ ತಿಳಿಯಬಹುದು. ಭಾರತದಲ್ಲಿ ಜಾತಿವ್ಯವಸ್ಥೆಯನ್ನು ಪೋಷಿಸಿಕೊಂಡು ಬಂದ ಅಲೆಮಾರಿಗಳ ತಳಮಳಗಳ ಜಗತ್ತನ್ನು ತಮ್ಮಲ್ಲಿ ಜೀವಂತವಾಗಿರಿಸಿಕೊಂಡಿರುವುದು ತಮ್ಮ ಕಲಾಪ್ರದರ್ಶನದಲ್ಲಿ ಕಾಣಬಹುದು. ಪರಂಪರೆಯ ಕಾರಣಕ್ಕೆ ಈವತ್ತಿಗೂ ತಮ್ಮ ಸಾಂಪ್ರದಾಯಿಕ ಕುಲಕಸುಬುಗಳನ್ನು ಅನಿವಾರ್ಯವಾಗಿ ಅವಲಂಬಿಸಿಕೊಂಡು ಬದುಕುವ ಸಮುದಾಯಗಳೆಲ್ಲ ಬಹುತೇಕವಾಗಿ ಅಲೆಮಾರಿ ಬುಡಕಟ್ಟು ಸಮುದಾಯಗಳಾಗಿವೆ. ಈ ದೇಶದ ಚರಿತ್ರೆಯಲ್ಲಿ ಅಲೆಮಾರಿಗಳು ಅನೇಕ ವಿಭಿನ್ನ ರೀತಿಯಲ್ಲಿ ಕಾಣಿಸಿಕೊಂಡಿದ್ದಾರೆ. ಆದರೆ ನಿಶ್ಚಿತವಾದ ಆರ್ಥಿಕ ಮೂಲಗಳು ಇಲ್ಲದೇ ಈ ಸಮುದಾಯಗಳು ಆಧುನಿಕಪೂರ್ವ ಭಾರತದ ರಾಜಕೀಯ ಸ್ಥಿತ್ಯಂತರದ ಕಾಲದಲ್ಲಿ ಅನಿವಾರ್ಯವಾಗಿ ಅಲೆಮಾರಿ ಬದಕನ್ನು ರೂಢಿಸಿಕೊಳ್ಳಬೇಕಾಯಿತು. ಅಲ್ಲದೆ ಕಂಪನಿ ಆಡಳಿತದ ಅಧಿಕಾರಿಗಳಿಗೆ ಈ ಸಮುದಾಯಗಳ ವಿಕ್ಷಿಪ್ತವಾಗಿ ಕಾಣುತ್ತಿದ್ದವು. ದಂಗೆಕೋರ ಗುಂಪುಗಳಂತೆ ಕಂಡವು. ಅಸಹಾಯಕ ಸಮುದಾಯಗಳ ತಲ್ಲಣಗಳನ್ನು ಅರ್ಥಮಾಡಿಕೊಳ್ಳದ ಯುರೋಪಿನ ಜನ ಈ ಸಮುದಾಯಗಳನ್ನು ಅಪರಾಧಿಗಳೆಂದು ಕರೆದರು. ೧೮೭೧ರಲ್ಲಿ ಕ್ರಿಮಿನಲ್ ಟ್ರೈಬ್ ಆಕ್ಟ್ ಜಾರಿಗೊಳಿಸಿ ಭಾರತದ ಎಲ್ಲ ಅಲೆಮಾರಿ ಸಮುದಾಯಗಳನ್ನು ಕಾನೂನಿನ ನಿರ್ಬಂಧಗಳನ್ನು ಕಂಪನಿ ಆಡಳಿತಗಳು ಇವರ ಮೇಲೆ ಹೇರಿದವು. ಭಾರತದ ಚರಿತ್ರೆಯುದ್ದಕ್ಕೂ ಅಲೆಮಾರಿಗಳು ಶಾಪಗ್ರಸ್ಥರಾಗಿಯೇ ಜೀವನ ಮಾಡಬೇಕಾಯಿತು. ಆಧುನಿಕ ಕಾಲದ ಸಂದರ್ಭದಲ್ಲಿಯೂ ಅಲೆಮಾರಿಗಳು ತಂತಿಮೇಲಿನ ನಡಿಗೆಯಂತೆ ಜೀವನ ಮಾಡುತ್ತಿದ್ದಾರೆ. ನಿತ್ಯ ನಿರಂತರವಾಗಿ ಒಂದ್ಹೊತ್ತಿನ ಊಟಕ್ಕಾಗಿ ಅಲೆಯುತ್ತಿದ್ದಾರೆ. ಇಂತಹ ಸಮುದಾಯಗಳಲ್ಲಿ ಒಂದಾದ ಅಲೆಮಾರಿ ಬುಡ್ಗ ಜಂಗಮರು ನಿಶ್ಚಿತವಾದ ಆರ್ಥಿಕ ಮೂಲಗಳಿಲ್ಲದೆ ವಿವಿಧ ವೇಷಗಳನ್ನು ಹಾಕಿಕೊಂಡು ಸಮಾಜದಲ್ಲಿ ಬದುಕಬೇಕಾದ ಅನಿವಾರ್ಯತೆಯಿಂದ ಜಾತಿಗೊಂದು ವೇಷಗಳಂತೆ 'ಮೂರು ತಿಂಗಳ ವಾಸ ಮೂವ್ವತ್ಮೂರು ವೇಷ' ಎಂಬ ನಾಣ್ಣುಡಿಯಂತೆ ವಿವಿಧ ವೇಷ ಹಾಕಿಕೊಂಡು ವಿಡಂಬನೆ ಮತ್ತು ನೀತಿಸಂದೇಶಗಳನ್ನು ತಿಳಿಸುವವರಾಗಿದ್ದಾರೆ. ಇವರು ಬ್ರಾಹ್ಮಣರ ವೇಷ ಹಾಕುತ್ತಾರೆ; ಆದರೆ ಇವರು ಬ್ರಾಹ್ಮಣರಲ್ಲ. ಇವರು ಜಂಗಮರ ವೇಷ ಹಾಕುತ್ತಾರೆ; ಆದರೆ ಇವರು ಜಂಗಮರಲ್ಲ. ಇವರು ಲಂಬಾಣಿಗರ ವೇಷ ಹಾಕುತ್ತಾರೆ; ಇವರು ಲಂಬಾಣಿಗರಲ್ಲ. ಸನ್ಯಾಸಿಗಳ ವೇಷ ಹಾಕುತ್ತಾರೆ; ಆದರೆ ಇವರು ಸನ್ಯಾಸಿಗಳಲ್ಲ. ಬಾಲಸಂತರ ವೇಷ ಹಾಕುತ್ತಾರೆ; ಆದರೆ ಇವರು ಬಾಲಸಂತರಲ್ಲ. ಬೈರಾಗಿಗಳ ವೇಷ ಹಾಕುತ್ತಾರೆ; ಆದರೆ

ಇವರು ಬೈರಾಗಿಗಳಲ್ಲ. ವಡ್ಡರ ವೇಷ ಹಾಕುತ್ತಾರೆ; ಆದರೆ ಇವರು ವಡ್ಡರಲ್ಲ. ಅಗಸರ ವೇಷ ಹಾಕುತ್ತಾರೆ; ಆದರೆ ಇವರು ಅಗಸರಲ್ಲ. ದಾಸರ ವೇಷ ಹಾಕುತ್ತಾರೆ; ಆದರೆ ಇವರು ದಾಸರಲ್ಲ. ಸಿದ್ಧಿಯರ ವೇಷ ಹಾಕುತ್ತಾರೆ; ಆದರೆ ಇವರು ಸಿದ್ಧಿಯರಲ್ಲ. ಮಾದಿಗರ ವೇಷ ಹಾಕುತ್ತಾರೆ; ಆದರೆ ಇವರು ಮಾದಿಗರಲ್ಲ. ಬ್ರಿಟಿಷರ ವೇಷ ಹಾಕುತ್ತಾರೆ; ಆದರೆ ಇವರು ಬ್ರಿಟಿಷರಲ್ಲ ಈ ರೀತಿಯ ಹಲವು ವೇಷಗಳನ್ನು ಪ್ರದರ್ಶಿಸಿರುವುದರಿಂದ ಇವರನ್ನು ಬಹುರೂಪಿ ಕಲಾವಿದರು ಎಂದು ಕರೆದಿದ್ದಾರೆ.ಆದರೆ ಬಹುರೂಪಿಗಳಲ್ಲ. ಹಗಲೊತ್ತಿನಲ್ಲಿ ವೇಷಗಳನ್ನು ಪ್ರದರ್ಶಿಸುವುದರಿಂದ ಹಗಲುವೇಷ(ಪಗಟಿವೇಷಂ)ದವರು ಎಂದು ಕರೆದಿದ್ದಾರೆ. ಹೀಗೆ ಜಾತಿಗೊಂದು ವೇಷಗಳು ಮತ್ತು ವಸಾಹತು ಕಾಲಘಟ್ಟದಲ್ಲಿ ಬ್ರಿಟಿಷರ ಹಾಗೂ ಆಂಗ್ಲ ನಿಜಾಮರ ದುರಾಡಳಿತವ್ಯವಸ್ಥೆಯನ್ನು ಕುರಿತು ವೇಷಗಳನ್ನು ತೊಟ್ಟು ಪ್ರದರ್ಶನ ಮಾಡಿದ್ದಾರೆ. ಜನಸಮಾನ್ಯರಿಗೆ ಮಾನವೀಯ ಮೌಲ್ಯಗಳು, ನೀತಿ ಸಂದೇಶಗಳು, ಮನರಂಜನೆ ಮತ್ತು ಜಾಗೃತಿ ಮೂಡಿಸುತ್ತಿದ್ದರು. ಹೀಗಾಗಿ ಬುಡ್ಗ ಜಂಗಮರು ಬಹುರೂಪಿಯಾಗಳು ಅಲ್ಲ, ವಡ್ಡರು ಅಲ್ಲ, ಜಂಗಮರು ಅಲ್ಲ, ಸನ್ಯಾಸಿಗಳು ಅಲ್ಲ. ಇವರ ನಿಜವಾದ ಸಾಮಾಜಿಕ ಐಡೆಂಟಿಟಿಯನ್ನು ಇವರು ಹಾಕುವ ವೇಷ ಮತ್ತು ಕಲಾಪ್ರಕಾರಗಳಿಂದಲೇ ಗೌಣವಾಗಿದೆ. ಹೀಗಾಗಿ ಉಪಸಂಸ್ಕೃತಿ ಮಾಲೆಯಲ್ಲಿ ಹಗಲುವೇಷದವರ ಸಂಸ್ಕೃತಿ ಎಂಬ ಶಿರೋನಾಮೆಯಲ್ಲಿ ೧೯೯೩ರಲ್ಲಿ ಕೃತಿ ಪ್ರಕಟಗೊಂಡಿದೆ. ಮಾರ್ಗ ಸಂಪುಟ ಎರಡರಲ್ಲಿ ವೇಷಗಾರ ಎಂದು ಲೇಖನ ೨೦೧೦ರಲ್ಲಿ ಪ್ರಕಟಗೊಂಡಿದೆ. ಜನಸಾಮಾನ್ಯರಿಗಾಗಿ ಸಮಾಜದ ಸ್ವಾಸ್ಥ್ಯ ಕಾಪಾಡಲು ತೊಟ್ಟಿದ ವಿವಿಧ ವೇಷಭೂಷಣಗಳು, ಹೇಳುವ ಕಥೆಗಳು, ಚರಿತ್ರೆಗಳು ಈ ಸಮುದಾಯಕ್ಕೆ ತಾವು ಯಾರು ಎನ್ನುವ ಪ್ರಶ್ನೆಯನ್ನುಂಟುಮಾಡುವ ಸ್ಥಿತಿಗೆ ಈ ಸಮುದಾಯವನ್ನು ಅತಂತ್ರಕ್ಕೆ ಸಿಲುಕಿಸಲಾಗಿದೆ. ಬೇರೆಯವರ ಚರಿತ್ರೆ ಮತ್ತು ಧರ್ಮಗಳನ್ನು ಪ್ರಚಾರ ಮಾಡಿದರ ಫಲವಾಗಿ ಈ ಸಮುದಾಯಕ್ಕೆ ತನ್ನ ಮೂಲ ಅಸ್ತಿತ್ವಕ್ಕೆ ಸಮಸ್ಯೆ ಸವಾಲು, ಬಿಕ್ಕಟ್ಟುಗಳನ್ನು ಎದರುಸುತ್ತಿದೆ. ಈ ಹಿನ್ನಲೆಯಲ್ಲಿ ಬುಡ್ಗ ಜಂಗಮ ಸಮುದಾಯದ ಚರಿತ್ರೆ ಮತ್ತು ಸಮುದಾಯದ ಚಹರೆಗಳನ್ನು ಕುಲಶಾಸ್ತ್ರೀಯವಾಗಿ ಕಟ್ಟಿಕೊಡಲು ಈ ಅಧ್ಯಯನದ ಮೂಲಕ ಪ್ರಯತ್ನಿಸಲಾಗಿದೆ.

**ಅಧ್ಯಯನದ ಸಮಸ್ಯೀಕರಣ**

ಭಾರತಕ್ಕೆ ಸ್ವಾತಂತ್ರ್ಯ ಬಂದು ೭೩ ವರ್ಷಗಳಾದರೂ ಅಲೆಮಾರಿ ಬುಡ್ಗ ಜಂಗಮರು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಹಿಂದುಳಿದಿರುವುದು ವಿಷಾದನೀಯ ವಿಚಾರ. ಬುಡ್ಗ ಜಂಗಮರ ಬಡತನ, ನೋವು, ಕಷ್ಟ, ದಬ್ಬಾಳಿಕೆ, ದೌರ್ಜನ್ಯದಿಂದ ಸಮಾಜದಲ್ಲಿ ಅಲಕ್ಷಿತರಾಗಿ ಬದುಕುತ್ತಿರುವುದು ಕಾಣಬಹುದಾಗಿದೆ. ಇದರಿಂದಾಗಿಯೇ ಜಾತಿ ವ್ಯವಸ್ಥೆಯೆಂಬುದು ಎಲ್ಲೆಂದರಲ್ಲಿ ತಾಂಡವಾಡುತ್ತಿದೆ. ಪರಿಶಿಷ್ಟರು ಎಂದರೆ ಮುಟ್ಟಿಸಿಕೊಳ್ಳದವರು, ಹೀನ ಕುಲದವರು, ಕೀಳುಜಾತಿಯವರು, ಅಸ್ಪೃಶ್ಯರು ಹೀಗೆ ಹಲವಾರು ಅರ್ಥಗಳಿವೆ. ಪರಿಶಿಷ್ಟರ ಜಾತಿ ಪಟ್ಟಿಯಲ್ಲಿ ನೂರಾ ಒಂದು ಜಾತಿಗಳಿವೆ. ಕೆಲವು ಜಾತಿಗಳು ಮಾತ್ರ ಸಂವಿಧಾನದ ಮೂಲಭೂತ ಸೌಲಭ್ಯಗಳನ್ನು ಪಡೆದುಕೊಂಡು ಸಮಾಜದಲ್ಲಿ ತಮ್ಮದೇಯಾದ ಆಚಾರ ವಿಚಾರ ಪಾಲಿಸಿಕೊಂಡು ಮುಂದುವರಿಯುತ್ತಿವೆ. ಆದರೆ ಅಲೆಮಾರಿ ಬುಡ್ಗ ಜಂಗಮರು ಇಂದಿಗೂ ಸಮಾಜದ ಮುಖ್ಯವಾಹಿನಿಯ

ಹಿಂದೆ ಇದ್ದು, ಸಂವಿಧಾನದ ಮೀಸಲಾತಿ ಸೌಲಭ್ಯಗಳಿಂದ ವಂಚಿತರಾಗಿ ಶೋಚನೀಯವಾಗಿ ಬದುಕುತ್ತಿದ್ದಾರೆ. ಇವರಲ್ಲಿ ಅಪಾರವಾದ ಜ್ಞಾನಪರಂಪರೆ ಮತ್ತು ಸಾಂಸ್ಕೃತಿಕ ಶ್ರೀಮಂತಿಕೆ ಇದ್ದರೂ ಇವರ ಬದುಕು ಅತ್ಯಂತ ದುಸ್ಥರವಾಗಿದೆ. ಯಾಕೆ ಈ ಸಮಾಜವನ್ನು ಸರ್ಕಾರ ಹಾಗೂ ಸಮಾಜಗಳು ಹೀನಾಯವಾಗಿ ಕಾಣುತ್ತಿವೆ ಇವರ ಬದುಕು ಇಂದಿನ ಆಧುನಿಕ ಜಗತ್ತಿನಲ್ಲಿಯೂ ತಳಮಟ್ಟದಲ್ಲಿರಲು ಕಾರಣಗಳೇನು? ಎನ್ನುವ ಪ್ರಶ್ನೆಯಾಗಿಸಿಕೊಂಡು ಪ್ರಸ್ತುತ ಸಮಕಾಲೀನ ಸಂದರ್ಭದಲ್ಲಿ ಸಮಾನತೆಯನ್ನು ಕಂಡುಕೊಳ್ಳುವ ನೆಲೆಯಲ್ಲಿ ತಾತ್ವಿಕ ಚಿಂತನೆಗೆ ಒಳಪಡಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಅಧ್ಯಯನದ ಪ್ರಾಕಲ್ಪನೆಗಳು**

ಪ್ರಾಕಲ್ಪನೆಯು ಸಂಶೋಧನೆಯಿಂದ ವ್ಯಕ್ತವಾಗಬಹುದಾದ ಫಲಿತಗಳನ್ನು ಪೂರ್ವದಲ್ಲಿ ಅಂದಾಜಿಸುವುದಾಗಿದೆ. ಸಂಶೋಧನೆಯ ಶೀರ್ಷಿಕೆಯು ಅಂತಿಮಗೊಂಡ ನಂತರದಲ್ಲಿ ವಿಷಯದ ಕುರಿತಾದ ಅಧ್ಯಯನಗಳ ಸಮೀಕ್ಷೆ ಮಾಡಲಾಗುವುದು. ಸಂಶೋಧನೆಯ ಕುರಿತಾಗಿ ಒಂದು ಊಹೆಯನ್ನು ಮೂಡಿಸಿಕೊಂಡು ಉದ್ದೇಶಗಳನ್ನು ಇಟ್ಟುಕೊಳ್ಳುತ್ತೇವೆ. ಸಂಶೋಧನೆಯ ಆರಂಭದಲ್ಲಿ ಊಹಿಸಿದ ಕಲ್ಪನೆಗಳು ಅಂತ್ಯದಲ್ಲಿ ಸುಳ್ಳು ಅಥವಾ ಸತ್ಯವು ಆಗಬಹುದು. ನನ್ನ ವಿಷಯದ ಕುರಿತಾಗಿ ಸಾಹಿತ್ಯವಲೋಕನ ನಂತರದಲ್ಲಿ ಈ ಕೆಳಗಿನಂತೆ ಪ್ರಮೇಯ ಅಥವಾ ಊಹೆಗಳನ್ನು ಇಟ್ಟುಕೊಳ್ಳಲಾಗಿದೆ.

- ಬುಡ್ಗ ಜಂಗಮರು ಗುರುತಿನ ಸಮಸ್ಯೆಯಿಂದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕವಾಗಿ ಹಿಂದುಳಿದಿದ್ದು, ಮೀಸಲಾತಿ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.
- ಸಮುದಾಯವು ಸಮಾಜದ ಮುಖ್ಯವಾಹಿನಿಗೆ ಬರುವಲ್ಲಿ ತಮ್ಮ ಕೌಶಲ್ಯಗಳಿಂದ ಮುಂದೆ ಬರಲು ಹವಣಿಸುತ್ತಿದ್ದಾರೆ.

**ಅಧ್ಯಯನದ ಉದ್ದೇಶಗಳು**

ಸಂಶೋಧನೆಯು ವೈಜ್ಞಾನಿಕತೆಯಿಂದ ಕೂಡಿರಬೇಕಾದರೆ ಸಂಶೋಧನಾ ಚಟುವಟಿಕೆಗಳನ್ನು ಕೆಲವೊಂದು ಹಂತಗಳ ರೂಪದಲ್ಲಿ ಅವುಗಳನ್ನು ವಿಂಗಡಿಸಿಕೊಂಡು ಒಂದು ಚೌಕಟ್ಟನ್ನು ಹಾಕಿಕೊಳ್ಳಬೇಕಾಗುತ್ತದೆ. ಸಂಶೋಧನೆ ಕೈಗೊಳ್ಳಲು ಮತ್ತು ಏನನ್ನು ಪರಿಶೋಧಿಸಬೇಕು ಎಂಬ ನಿರ್ದಿಷ್ಟ ಗುರಿ ಉದ್ದೇಶಗಳು ಸಂಶೋಧನೆಗೆ ಪ್ರಮುಖ ಕಾರಣವಾಗುತ್ತವೆ. ಸಂಶೋಧನೆಯ ಎಲ್ಲಾ ವಿಧಾನಗಳು ಈ ಕೆಳಗಿನ ಉದ್ದೇಶಗಳ ಈಡೇರಿಕೆಗೆ ಪೂರಕವಾಗಿರುತ್ತವೆ. ಯಾವುದೇ ಒಂದು ಸಮುದಾಯದ ಅಧ್ಯಯನವೆಂದರೆ ಕೇವಲ ಅವರಲ್ಲಿರುವ ಆಚರಣೆ, ಸಂಪ್ರದಾಯ, ಆಚಾರ–ವಿಚಾರ ಮುಂತಾದವುಗಳ ಬಗ್ಗೆ ತಿಳಿಯುವುದಷ್ಟೇ ಅಲ್ಲ, ಹುಟ್ಟಿನಿಂದ ಸಾಯುವವರೆಗೆ ಸಂಭವಿಸಿದ ಎಲ್ಲಾ ಬಗೆಯ ಸನ್ನಿವೇಶಗಳನ್ನು ಅಧ್ಯಯನ ಮಾಡುವುದು ಅವಶ್ಯಕವಾಗಿದೆ. ಇಂದು ಅಲೆಮಾರಿ ಸಮುದಾಯಗಳನ್ನು ಕುರಿತು ಚರ್ಚಿಸುವಾಗ ಅಲೆಮಾರಿಗಳ ಭೂತ ಮತ್ತು ಇತಿಹಾಸದ ಚರಿತ್ರೆಗಳು ಅವುಗಳ ಅಧ್ಯಯನಕ್ಕೆ ಒಂದು ತಾತ್ವಿಕ ನೆಲೆಗಟ್ಟನ್ನು ಒದಗಿಸುತ್ತದೆ. ವರ್ತಮಾನಕ್ಕೆ ಭೂತ ಕಾಲದ ಎಲ್ಲಾ ಆಯಾಮಗಳೇ ಕಾರಣ. ಹೀಗಾಗಿ ಅಲೆಮಾರಿ ಬುಡ್ಗ ಜಂಗಮ್ ಸಮುದಾಯವು ವರ್ತಮಾನದಲ್ಲಿ ಎದುರಿಸುತ್ತಿರುವ ಸಮಸ್ಯೆಯ ವಿಷಯಗಳೇ ತುಂಬಾ ಗಂಭೀರವಾಗಿರುವುದರಿಂದ ಈ ಕೆಳಗಿನ ಪ್ರಮುಖ ಉದ್ದೇಶಗಳನ್ನಿಟ್ಟುಕೊಂಡು ಅಧ್ಯಯನಿಸಲಾಗಿದೆ.

## ಉದ್ದೇಶಗಳು

- ಬುಡ್ಗ ಜಂಗಮ್ ಸಮುದಾಯದ ಮೂಲ ಚರಿತ್ರೆಯನ್ನು ತಿಳಿಯುವುದು.
- ಬುಡ್ಗ ಜಂಗಮ್ ಸಮುದಾಯದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ಸ್ಥಿತಿಗತಿಗಳನ್ನು ಅಧ್ಯಯನಿಸುವುದು.
- ಬುಡ್ಗ ಜಂಗಮ್ ಸಮುದಾಯದ ಪಾರಂಪರಿಕ ಜ್ಞಾನಶಾಖೆಗಳಾದ ಭಾಷೆ, ಸಾಹಿತ್ಯ ಹಾಗೂ ರಂಗಭೂಮಿ ಕುರಿತು ವಿಶ್ಲೇಸುವುದು.
- ಸಮುದಾಯವು ವರ್ತಮಾನದಲ್ಲಿ ಎದುರಿಸುತ್ತಿರುವ ಸಮಸ್ಯೆ ಸವಾಲುಗಳು ಹಾಗೂ ಪರಿಹಾರೋಪಾಯಗಳನ್ನು ಕಂಡುಕೊಳ್ಳುವುದು.

## ಅಧ್ಯಯನದ ಮಹತ್ವ

ಅಲೆಮಾರಿ ಬುಡ್ಗ ಜಂಗಮರು ಪ್ರಸ್ತುತ ಕಾಲಘಟ್ಟದಲ್ಲಿ ತಮ್ಮ ಪಾರಂಪರಿಕ ವೃತ್ತಿ ಕಲೆಗಳಿಂದ ಸಾಮಾಜಿಕ ನ್ಯಾಯ ಮತ್ತು ಸಾಮಾಜಿಕ ಸ್ಥಾನಮಾನಗಳಿಂದ ವಂಚಿತರಾಗುತ್ತಿದ್ದಾರೆ. ರಾಜ ಮಹಾರಾಜರಿಗೆ ಆಪ್ತವಾಗಿದ್ದ ಪ್ರದರ್ಶನ ಕಲೆಯ ಸಮುದಾಯಗಳು, ಕುಶಲಕರ್ಮಿಗಳು ಮತ್ತು ಸೈನಿಕ ವರ್ಗಗಳು ಆಡಳಿತಕ್ಕೆ ಪೂರಕವಾಗಿ ಕಾರ್ಯನಿರ್ವಹಿಸುತ್ತಿದ್ದವು. ಈ ಸಮುದಾಯಗಳು ಇಂದಿನ ಜಾಗತಿಕ ಪ್ರಪಂಚಕ್ಕೆ ಪೂರಕವಾಗಬೇಕಿದ್ದ ಅಲೆಮಾರಿಗಳ ದರ್ಶನವು, ಅಕ್ಷರಜ್ಞಾನ ಪಡೆದ ಸಮುದಾಯಗಳು ಅವರನ್ನು ಅತಂತ್ರಸ್ಥಿತಿಗೆ ತಂದು ಶೋಚನೀಯವಾಗಿ ಕಾಣಲಾಗಿದೆ. ಈ ದೇಶದ ಸಾಂಸ್ಕೃತಿಕ ರಾಯಭಾರಿಗಳಾಗಿ ಬೃಹತ್ ಪ್ರಮಾಣದ ಮೌಖಿಕ ಸಾಹಿತ್ಯವುಳ್ಳ ಜ್ಞಾನಪೀಠಗಳೆನ್ನಬಹುದಾದ ಅಲೆಮಾರಿ ಬುಡ್ಗ ಜಂಗಮರು, ಅವರ ಕಲಾಕೌಶಲ್ಯಗಳಿಗೆ ಸಿಗಬೇಕಾದ ಮನ್ನಣೆಯನ್ನು ಶಿಷ್ಟ ಸಮಾಜವು ವಂಚಿಸಿದೆ. ಅವರ ಕಲೆಗೆ ಸರಿಯಾದ ಪ್ರೋತ್ಸಾಹ ಮತ್ತು ಅವರ ಬದುಕಿಗೆ ಪರ್ಯಾಯ ಯೋಜನೆಗಳು ರೂಪಿಸದೇ ಅನೇಕ ಕಾನೂನು ಕಾಯ್ದೆಗಳನ್ನು ಜಾರಿಗೆ ತಂದು ಅವರ ಬದುಕುವ ಮತ್ತು ತಿನ್ನುವ ಹಕ್ಕನ್ನು ಕಸಿದುಕೊಂಡಿದೆ. ಇಂದು ಕೆಲವೊಂದು ಪರ್ಯಾಯ ವೃತ್ತಿಗಳನ್ನು ಅನುಸರಿಸಿ ಜೀವನ ನಿರ್ವಹಿಸಿದರೆ ಮತ್ತೆ ಕೆಲವರು ನಿರ್ಗತಿಕರಾಗಿ ಭಿಕ್ಷಾಟನೆಗೆ ಊರೂರು ಅಲೆಯುತ್ತಿದ್ದಾರೆ.

ಬುಡ್ಗ ಜಂಗಮರ ಚಾರಿತ್ರಿಕ ಹಿನ್ನೆಲೆ ಅರಿಯದೇ ಇಲ್ಲಿಯವರಗೂ ಇವರ ವೃತ್ತಿ ಮತ್ತು ಕಲಾಪ್ರದರ್ಶನಗಳ ಮೂಲಕ ಅಧ್ಯಯನ ಮಾಡಿ ಅವುಗಳನ್ನೇ ಜಾತಿಗಳೆಂದು ಹಲವು ವಿದ್ವಾಂಸರು ತಪ್ಪಾಗಿ ಸಮೀಕರಿಸಿ ಇವರ ನಿರ್ದಿಷ್ಟವಾದ ಗುರುತಿಸುವಿಕೆ ಸಮಸ್ಯೆಯನ್ನು ಎದುರಿಸುತ್ತಿದ್ದು, ಅವರ ಗುರುತಿಸುವಿಕೆಯ ಅಸ್ತಿತ್ವದ ಸಮಸ್ಯೆಯನ್ನು ಕಂಡುಕೊಳ್ಳಲು ಈ ಅಧ್ಯಯನವು ಪೂರಕವಾಗಬಲ್ಲದು. ಬುಡ್ಗ ಜಂಗಮರು ತಮ್ಮ ಪಾರಂಪರಿಕ ವೃತ್ತಿ ಮತ್ತು ಕಲೆಗಳಿಂದ ತಳಸ್ಥರದಲ್ಲಿದ್ದು, ಅವರ ಮೂಲ, ಪ್ರಸಾರ, ಹಂಚಿಕೆ, ಕುಲ ಬೆಡಗು, ಆಚರಣೆ–ಸಂಪ್ರದಾಯಗಳಿಂದ ಅವರ ನಿರ್ದಿಷ್ಟ ಹಾಗೂ ಮೂಲ ಚಹರೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದ್ದು, ಅವರ ಅಭಿವೃದ್ಧಿಗೆ ಪೂರಕವಾಗಿ ಕೈಗೊಳ್ಳಬಹುದಾದ ಕ್ರಮಗಳ ಕುರಿತು ಅಧ್ಯಯನದಲ್ಲಿ ವಿವರಿಸಲಾಗಿದೆ.

## ಅಧ್ಯಯನದ ವ್ಯಾಪ್ತಿ

ಸಂಶೋಧನೆಯು ವಸ್ತು ನಿಷ್ಠತೆಯಿಂದ ಕೂಡಿರಬೇಕಾದರೆ ಅಧ್ಯಯನಕ್ಕೊಂದು ಚೌಕಟ್ಟು, ಸರಹದ್ದು, ಎಲ್ಲೆ ಇರಬೇಕಾಗುತ್ತದೆ. ಆಗ ಮಾತ್ರ ಆ ಕ್ಷೇತ್ರದಲ್ಲಿ ಉತ್ತಮ ಫಲಿತಾಂಶ ಪಡೆಯಬಹುದಾಗಿದೆ. ದಕ್ಷಿಣ ಭಾರತದ ದ್ರಾವಿಡ ಭಾಷಾವಾರು ಪ್ರದೇಶಗಳಾದ ಆಂಧ್ರಪ್ರದೇಶ, ತೆಲಂಗಾಣ, ಮಹಾರಾಷ್ಟ್ರ ಹಾಗೂ ಕರ್ನಾಟಕದಲ್ಲಿ ನೆಲೆಸಿರುವ ಬುಡ್ಗ ಜಂಗಮರು ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಕಲ್ಯಾಣ ಕರ್ನಾಟಕ ಪ್ರದೇಶದ ಗಡಿಭಾಗವಾದ ಬಳ್ಳಾರಿ ಜಿಲ್ಲೆಯನ್ನು ಅಧ್ಯಯನದ ವ್ಯಾಪ್ತಿಯನ್ನಾಗಿಸಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ೧೧ ತಾಲೂಕುಗಳನ್ನು ಒಳಗೊಂಡಿದ್ದು, ಕೊಟ್ಟೂರು ತಾಲೂಕು ಹೊರತುಪಡಿಸಿ ೧೦ ತಾಲೂಕುಗಳಲ್ಲಿ ಮಾತ್ರ ಬುಡ್ಗ ಜಂಗಮರು ನೆಲೆಸಿದ್ದಾರೆ. ಈ ಹತ್ತು ತಾಲೂಕುಗಳಲ್ಲಿ ನೆಲೆಸಿರುವ ಬುಡ್ಗ ಜಂಗಮರನ್ನು ಕುರಿತು ಸಮಗ್ರ ಸಮೀಕ್ಷೆ ಮಾಡಿ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಸ್ಥಿತಿಗತಿಗಳನ್ನು ಕಂಡುಕೊಳ್ಳಲಾಗಿದೆ. ಈ ಸಮುದಾಯದ ಮೂಲವನ್ನು ತಿಳಿಯ ಬೇಕಾಗಿರುವುದರಿಂದ ಸಂಶೋಧನೆಯನ್ನು ತುಲನಾತ್ಮಕವಾಗಿ ವಿಶ್ಲೇಷಿಸಲು ತೆಲಂಗಾಣ, ಆಂಧ್ರಪ್ರದೇಶದ ರಾಜ್ಯಗಳಲ್ಲಿ ನೆಲೆಸಿದ ಬುಡ್ಗ ಜಂಗಮರನ್ನು ಭೇಟಿನೀಡಿ ಹೆಚ್ಚಿನ ಮಾಹಿತಿ ಸಂಗ್ರಹಿಸಲಾಗಿದೆ. ಕರ್ನಾಟಕದಲ್ಲಿ ಕಲ್ಯಾಣ(ಹೈದರಾಬಾದ್) ಕರ್ನಾಟಕ ಪ್ರದೇಶ ಬುಡ್ಗ ಜಂಗಮರ ಮುಖಂಡರನ್ನು ಹಾಗೂ ವಿದ್ವಾಂಸರನ್ನು ಭೇಟಿನೀಡಿ ಮಾಹಿತಿ ಸಂಗ್ರಹಿಸಿ ಅಧ್ಯಯನವನ್ನು ಕಟ್ಟಿಕೊಡಲಾಗಿದೆ.

## ಸಂಶೋಧನಾ ವಿಧಾನಗಳು

ಸಂಶೋಧನೆಯಲ್ಲಿ ಹಲವು ವಿಧಾನಗಳನ್ನು ಬಳಸಿಕೊಂಡು ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಪ್ರಾಥಮಿಕ ಆಕರಗಳಾದ ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ಅನುಷಂಗಿಕ ಆಕರಗಳಾದ ಹಿಂದೆ ನಡೆದಿರುವ ಅಧ್ಯಯನಗಳಿಂದ ಮಾಹಿತಿ ಸಂಗ್ರಹಿಸಿಕೊಳ್ಳಲಾಗಿದೆ. ಪ್ರಾಥಮಿಕ ಮಾಹಿತಿ ಸಂಗ್ರಹಿಸಲು ಸಮೀಕ್ಷೆ, ಸಹಭಾಗಿ ಅವಲೋಕನ, ವ್ಯಕ್ತಿ ಅಧ್ಯಯನ, ಸಂದರ್ಶನ ಪ್ರಶ್ನಾವಳಿಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ.  ಪ್ರಸ್ತುತ ಅಧ್ಯಯನಕ್ಕೆ ಈ ಕೆಳಗಿನ ಅಧ್ಯಯನದ ವಿಧಾನಗಳು  ಅನುಸರಿಸಲಾಗಿದೆ.

ಅಲೆಮಾರಿ ಬುಡ್ಗ ಜಂಗಮ್ ಸಮುದಾಯವು ಬಳ್ಳಾರಿ ಜಿಲ್ಲೆಯಲ್ಲಿ ಅಲ್ಪಸಂಖ್ಯೆಯಲ್ಲಿ ಕಂಡುಬರುವುದರಿಂದ  ಸಮಗ್ರವಾದ ಸಮೀಕ್ಷೆಯನ್ನು ಮಾಡಲಾಗಿದೆ. ಜಿಲ್ಲೆಯಲ್ಲಿ ನೆಲೆನಿಂತ ಮತ್ತು ವಲಸೆಹೋದ ದೊರೆಯಬಹುದಾದ ಒಟ್ಟು ಕುಟುಂಬಗಳನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಜಿಲ್ಲೆಯಲ್ಲಿ ಒಟ್ಟು ೮೫೪ ಕುಟುಂಬಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ, ಕುರುಗೋಡು, ಸಿರುಗುಪ್ಪ, ಸಂಡೂರು, ಕಂಪ್ಲಿ, ಹೊಸಪೇಟೆ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ, ಕೂಡ್ಲಿಗಿ, ಕೊಟ್ಟೂರು, ಹರಪನಹಳ್ಳಿ ಒಟ್ಟು ೧೦ ತಾಲೂಕುಗಳಲ್ಲಿ ಬುಡ್ಗ ಜಂಗಮರು ನೆಲೆಸಿರುವುದು ಕಂಡುಬರುತ್ತದೆ. ಬಳ್ಳಾರಿ ತಾಲೂಕಿನಲ್ಲಿ ೨೪೪, ಸಿರುಗುಪ್ಪ ತಾಲೂಕಿನಲ್ಲಿ ೨೪೮, ಕುರುಗೋಡು ತಾಲೂಕಿನಲ್ಲಿ ೩೩, ಸಂಡೂರು ತಾಲೂಕಿನಲ್ಲಿ ೪೮, ಕಂಪ್ಲಿ

ತಾಲೂಕಿನಲ್ಲಿ ೪೦, ಹೊಸಪೇಟೆ ತಾಲೂಕಿನಲ್ಲಿ ೭೯, ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ೧೦೬, ಹೂವಿನಹಡಗಲಿ ತಾಲೂಕಿನಲ್ಲಿ ೫, ಕೂಡ್ಲಿಗಿ ತಾಲೂಕಿನಲ್ಲಿ ೨೫, ಹರಪನಹಳ್ಳಿ ತಾಲೂಕಿನಲ್ಲಿ ೨೬ ಕುಟುಂಬಗಳ ಮೂಲಕ ಮಾಹಿತಿಯನ್ನು ಸಮೀಕ್ಷೆಯ ಮೂಲಕ ಸಂಗ್ರಹಿಸಲಾಗಿದೆ. ಕೌಟುಂಬಿಕ ಸಮೀಕ್ಷೆಯಲ್ಲಿ ಬುಡ್ಗ ಜಂಗಮರ ಕುಲ ಬೆಡಗು, ಪರ್ಯಾಯ ನಾಮಗಳು, ಜನಸಂಖ್ಯೆ, ಲಿಂಗಾನುಪಾತ, ವೈವಾಹಿಕ ಸ್ಥಾನಮಾನ, ವಾಸಿಸುವ ನೆಲೆ, ವಸತಿಯ ಮಾದರಿ, ಕೃಷಿಭೂಮಿ, ಪಶುಸಂಪತ್ತು, ಆರ್ಥಿಕ ಜೀವನ, ಶೈಕ್ಷಣಿಕ ಸ್ಥಿತಿಗತಿ, ರಾಜಕೀಯ ಸ್ಥಿತಿಗತಿ, ಗುರುತಿನ ಪತ್ರಗಳ ವಿವರ, ಸಾಂಸ್ಕೃತಿಕ ಸ್ಥಿತಿಗತಿ, ಸರ್ಕಾರಗಳ ಸೌಲಭ್ಯಗಳ ಸ್ಥಿತಿಗತಿ ಇತ್ಯಾದಿ ಅಂಶಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ಬುಡ್ಗ ಜಂಗಮರ ಆಚರಣೆಗಳು, ನಂಬಿಕೆಗಳು, ಚಾರಿತ್ರಿಕ ಹಿನ್ನೆಲೆ ಇತ್ಯಾದಿ ಅಂಶಗಳನ್ನು ಕುರಿತು ಸಮಗ್ರ ಮಾಹಿತಿ ಸಂಗ್ರಹಿಸಲು ೩೫ ಜನರನ್ನು ಏಕ ವಿಷಯ ಅಧ್ಯಯನ ವಿಧಾನದ ಮೂಲಕ ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಅಧ್ಯಯನದ ವಿಧಾನಗಳಲ್ಲಿ ಬುಡ್ಗ ಜಂಗಮ್ ಸಮುದಾಯದ ಕುರಿತಾಗಿ ಚಾರಿತ್ರಿಕ ವಿಧಾನದ ಮೂಲಕ ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಯಲಾಗಿದೆ. ಪ್ರಶ್ನಾವಳಿಗಳ ಮಾಪನದ ಮೂಲಕ ಸಂದರ್ಶನದಿಂದ ಬುಡ್ಗ ಜಂಗಮ್ ಸಮುದಾಯದ ಜೀವನಾವರ್ತಕ ಮತ್ತು ವಾರ್ಷಿಕಾವರ್ತನ ಆಚರಣೆಗಳನ್ನು ಮತ್ತು ಪ್ರದರ್ಶಕ ಕಲೆಗಳನ್ನು ಜೊತೆಗೆ ಸ್ಥಿತಿಗತಿಯನ್ನು ತಿಳಿಯಲಾಗಿದೆ. ಅಂಕಿ-ಸಂಖ್ಯೆಯ ಶಾಸ್ತ್ರೀಯ ವಿಧಾನದ ಮೂಲಕ ದತ್ತಾಂಶಗಳನ್ನು ಪಟ್ಟಿ ಮಾಡಿ ಶೇಕಡಾವಾರು ಮಾಹಿತಿ ಸಂಗ್ರಹಿಸಲಾಗಿದೆ. ಸಹಭಾಗಿ ಅವಲೋಕನದ ಮೂಲಕ ಸಮುದಾಯದ ಹಬ್ಬ, ಮದುವೆ, ಶವಸಂಸ್ಕಾರ, ದೈವಾರಾಧನೆ, ಕುಲಪಂಚಾಯಿತಿ, ಬಿಡಾರು ಆಚರಣೆಗಳಲ್ಲಿ ಭಾಗವಹಿಸಿ ಮಾಹಿತಿ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಸಂಶೋಧನಾ ಸಾಧನಗಳು**

ಪ್ರಸ್ತುತ ಅಧ್ಯಾಯನದಲ್ಲಿ ಪ್ರಾಥಮಿಕ ದತ್ತಾಂಶಗಳ ಮೂಲಕ ಮಾಹಿತಿಯನ್ನು ಹಾಗೂ ಅವಶ್ಯಕತೆಗಳಿಗುಣವಾಗಿ ಮಾಧ್ಯಮಿಕ ದತ್ತಾಂಶಗಳನ್ನು ಸಂಗ್ರಹಿಸಿ ಲಂಬರೇಖ ಚಿತ್ರಗಳನ್ನು, ವೃತ್ತಕಾರದ ಚಿತ್ರ ಮತ್ತು ಕೋಷ್ಟಕಗಳನ್ನು ತಯಾರಿಸಲಾಗಿದೆ. ಸಂಶೋಧನೆಗೆ ಉಪಯುಕ್ತ ಸಾಧನಗಳಾದ ಕ್ಯಾಮರಾ, ವಿಡಿಯೋ, ಸಿಡಿ, ರೇಕಾರ್ಡರ್, ನೋಟ್‌ಬುಕ್, ಪೆನ್, ಪೆನ್ಸಿಲ್ ಇತ್ಯಾದಿ ಪರಿಕರಗಳನ್ನು ಸಂಶೋಧನೆಯಲ್ಲಿ ಬಳಸಿಕೊಳ್ಳಲಾಗಿದೆ.

**ಸಂಶೋಧನಾ ವಿನ್ಯಾಸ**

ಬುಡ್ಗ ಜಂಗಮ್ ಸಮುದಾಯದ ಸಾಮಾಜಿಕ ಅಧ್ಯಯನ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ೧೦ ಅಧ್ಯಾಯಗಳಲ್ಲಿ ವಿಸ್ತರಿಸಿಕೊಳ್ಳಲಾಗಿದೆ.

**ಮೊದಲ ಅಧ್ಯಾಯವು ಪ್ರವೇಶ** ಎಂಬ ಶೀರ್ಷಿಕೆ ಹೊಂದಿದ್ದು ಪೀಠಿಕೆ, ಇಲ್ಲಿಯವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆಗಳು, ಪ್ರಸ್ತುತ ಅಧ್ಯಯನದ ತಾತ್ವಿಕತೆ, ಅಧ್ಯಯನದ ಸಮಸ್ಸೀಕರಣ, ಅಧ್ಯಯನದ

ಪ್ರಾಕಲ್ಪನೆಗಳು, ಅಧ್ಯಯನದ ಉದ್ದೇಶಗಳು, ಅಧ್ಯಯನದ ಮಹತ್ವ, ಅಧ್ಯಯನದ ವ್ಯಾಪ್ತಿ, ಸಂಶೋಧನಾ ವಿಧಾನಗಳು, ಸಂಶೋಧನಾ ಸಾಧನಗಳು, ಸಂಶೋಧನಾ ವಿನ್ಯಾಸ ಸಾಹಿತ್ಯದ ಪರಾಮರ್ಶೆ ಹಾಗೂ ಕ್ಷೇತ್ರಾನುಭವ ಕುರಿತು ಬೆಳಕು ಚಲ್ಲುತ್ತದೆ.

**ಎರಡನೇ ಅಧ್ಯಾಯವು ಬಳ್ಳಾರಿ ಜಿಲ್ಲೆಯ ಪರಿಚಯ** ಎಂಬ ಶೀರ್ಷಿಕೆ ಹೊಂದಿದ್ದು, ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ, ಬಳ್ಳಾರಿ ಜಿಲ್ಲೆ–ಭೌಗೋಳಿಕ ಹಿನ್ನೆಲೆ, ಬಳ್ಳಾರಿ ಜಿಲ್ಲೆಯ ಅಂಕಿಅಂಶಗಳು ಮುಂತಾದವುಗಳ ಕುರಿತು ವಿಶ್ಲೇಷಿಸಲಾಗಿದೆ.

**ಮೂರನೆಯ ಅಧ್ಯಾಯವು ಬುಡ್ಗ ಜಂಗಮ್ ಸಮುದಾಯದ ಹಿನ್ನೆಲೆ** ಎಂಬ ಶೀರ್ಷಿಕೆ ಹೊಂದಿದ್ದು, ಪೀಠಿಕೆ, ಬುಡ್ಗ ಜಂಗಮ್ ಪದ ನಿಷ್ಪತ್ತಿ, ಬುಡ್ಗ ಜಂಗಮ್, ಬೇಡ ಜಂಗಮ್ ಸಮುದಾಯದ ಚಾರಿತ್ರಿಕ ಹಿನ್ನೆಲೆ, ಸಂವಿಧಾನದ ಪರಿಶಿಷ್ಟಜಾತಿ ಮೀಸಲಾತಿ ಪಟ್ಟಿಯಲ್ಲಿ ಬುಡ್ಗ ಜಂಗಮರು, ಬುಡ್ಗ ಜಂಗಮರ ಮೂಲ, ಬುಡ್ಗ ಜಂಗಮ್ ಸಮುದಾಯದ ಭೌಗೋಳಿಕ ನೆಲೆಗಳು, ಬುಡ್ಗ ಜಂಗಮ್ ಸಮುದಾಯದ ಜನಸಂಖ್ಯೆ ಅಂಕಿಅಂಶಗಳು, ಇತರೆ ಸಮುದಾಯಗಳು ಮತ್ತು ಬುಡ್ಗ ಜಂಗಮ್ ಸಮುದಾಯದ ತೌಲನಿಕತೆ, ಬೇಡ ಬುಡಕಟ್ಟು ಮತ್ತು ಬುಡ್ಗ ಜಂಗಮ್ ಸಮುದಾಯ, ಮಾಲ ಜಂಗಮ್ ಮತ್ತು ಬುಡ್ಗ ಜಂಗಮ್, ಸುಡುಗಾಡು ಸಿದ್ಧರು ಮತ್ತು ಬುಡ್ಗ ಜಂಗಮರು, ಬಹುರೂಪಿಗಳು ಮತ್ತು ಬುಡ್ಗ ಜಂಗಮರು, ಬೈರಾಗಿಗಳು ಮತ್ತು ಬುಡ್ಗ ಜಂಗಮರು, ವೀರಶೈವ ಲಿಂಗಾಯತ ಜಂಗಮರು ಮತ್ತು ಬುಡ್ಗ ಜಂಗಮರು ಕುರಿತು ವಿಶ್ಲೇಷಿಸಲಾಗಿದೆ.

**ನಾಲ್ಕನೆಯ ಅಧ್ಯಾಯವು ಬುಡ್ಗ ಜಂಗಮ್ ಸಮುದಾಯದ ಸಾಮಾಜಿಕ ಜೀವನ** ಎಂಬ ಶೀರ್ಷಿಕೆಯನ್ನು ಪೀಠಿಕೆ, ಕುಟುಂಬ, ಬುಡ್ಗ ಜಂಗಮರ ವಯೋಮಾನದ ಪ್ರಮಾಣ, ಬಂಧುತ್ವ, ಬುಡ್ಗ ಜಂಗಮರ ಇಂಟಿಪೇರ್ಲು(ಕುಲಗಳು), ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಇಂಟಿಪೇರ್ಲು, ಬುಡ್ಗ ಜಂಗಮರ ವಿವಾಹ, ವಿವಾಹದ ಪ್ರಕಾರಗಳು, ವಿವಾಹ ವಿಚ್ಛೇದನ, ವೈವಾಹಿಕ ಸ್ಥಾನಮಾನ, ಲಿಂಗಸಂಬಂಧಿ ವೃತ್ತಿಗಳು, ಸಂಸ್ಕಾರದ ಆಚರಣಾ ವ್ಯವಸ್ಥೆ, ನಾಮಕರಣ ಪದ್ಧತಿ, ಅಲೆಮಾರಿತನ, ಕಾವಡಿ ಜೀವನ, ಮ್ಯಾಳಂ(ಮೇಳ), ಷಂಡ್ರಾ, ಚಿಲ್ಲರ ಭಿಕ್ಷಂ, ವಸತಿ ವ್ಯವಸ್ಥೆ, ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಾಸದ ನೆಲೆ, ಆಹಾರ ಪದ್ಧತಿ, ಬುಡ್ಗ ಉಡುಗೆ – ತೊಡುಗೆ, ಜನಪದ ವೈದ್ಯಪದ್ಧತಿ ಕುರಿತು ವಿಶ್ಲೇಷಿಸಲಾಗಿದೆ.

**ಐದನೆ ಅಧ್ಯಾಯವು ಸಂಪ್ರದಾಯ ಮತ್ತು ಆಚರಣೆಗಳು** ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಪೀಠಿಕೆ, ಆಚರಣೆಗಳು, ಜೀವನಾವರ್ತಕ ಆಚರಣೆಗಳಾದ ಹುಟ್ಟು, ಪುಟ್ಟೆಂಟಿಕಲು ತಿಸೆದಿ (ಜವುಳ ಕಾರ್ಯಕ್ರಮ), ಪೆದ್ದಮಣಿಷಿ ಲೇಪೆದಿ ಕಾರ್ಯಂ(ಋತುಮತಿ), ಬುಡ್ಗ ಜಂಗಮರ ವಿವಾಹ ಪದ್ಧತಿ ಬೋದುಗುಡುಪು(ಓಲಿ ಕೊಡುವುದು), ಕಂಕಣ ಕಟ್ಟುವುದು, ಆಕುತಾಂಬೂಲಂ ಮಲಪೇದಿ, ಮಂಗಳಸೂತ್ರಂ ಕಟ್ಟಿಚೇದಿ, ವಡಿಬಾಲು ಕಟ್ಟೇದಿ, ಬ್ರಹ್ಮಗಂಟು, ಗಂಡಿನ ಮನೆಗೆ ಕಳಿಸುವುದು, ಕಲಿಕುಂಡ ದೇವದಿ, ವಡಿಬಾಲು(ಅನ್ನ ಪರೀಕ್ಷೆ), ತಲಮಾಡು ಷಾಸಮಾಡು ಕಟ್ಟಡ, ಪಂದ್ಯರ ತಿಪ್ಪಿಸೆದಿ, ನಾಗೋಲಿ (ಬೇಟೆ ಕೊಯ್ಯುವ ಕಾರ್ಯಕ್ರಮ), ಪ್ರಸ್ಥ(ಸೋಬಾನ)ಕಾರ್ಯ, ಬೊಟ್ಟು

ಪೆಟ್ಟುಕೊನೆದಿ, ವ್ಯಾರ, ಪೂಟ, ಬಹುಪತ್ನಿತ್ವ ವಿವಾಹ, ಪೂಲು ಪುಡಿಸೆದಿ ಅಥವಾ ಕುಸಪೆಟ್ಟೇದಿ(ಸೀಮಂತ ಕಾರ್ಯ), ಶವಸಂಸ್ಕಾರದ ಆಚರಣೆಗಳಾದ ಚಟ್ಟ ತಯಾರಿಸುವ ಕ್ರಮ, ದಿಂಪುಡುಕಳ್ಳಂ, ಅಂತ್ಯಕ್ರಿಯೆ, ಕಲ್ಲುಕುನೇದಿ(ಹೋಟಲ್‌ಗೆ ಹೋಗುವುದು), ಭರವು ದಿಂಪುಕುನೇದಿ(ಭಾರ ಇಳಿಸಿಕೊಳ್ಳುವುದು), ದೀಪಂ ಚುಸೇದಿ (ದೀಪ ನೋಡುವುದು), ವಿಷಬಾಯಿ ತೊಳೆಯುವುದು, ನಿಪ್ಪುಲು ಎಸೇದಿ(ಇಂಗಳ), ಪಿಂಡಕೂಡು ಅರ್ಪಿಸುವುದು, ದೇವತಾ ಕಾರ್ಯ, ಕಮ್ರಂ ಪೆಟ್ಟೇದಿ, ಬುಡ್ಗ ಜಂಗಮರ ವಾರ್ಷಿಕವಾರ್ತನ ಆಚರಣೆಗಳು, ಬುಡ್ಗ ಜಂಗಮರ ಪಾರಂಪರಿಕ ದೈವಾರಾಧನೆ, ಜಮ್ಮುಲಮ್ಮ ಸುಂಕ್ಲಮ್ಮ ಪೆಟ್ಟಿಗೆ ದೇವರ ಆಚರಣೆ ಅಥವಾ ಕುಡುಂ, ಗುಗ್ಗುಳು ಪಂಡಗ, ಮಾರೆಮ್ಮ ದೇವರ ಆಚರಣೆ, ಜಲ್ತಾ (ವರಕೇಳುವ ಪದ್ಧತಿ), ಚುಸುಕುನೇದಿ(ಬುಡ್ಗ ಜಂಗಮರ ಪಾರಂಪರಿಕ ಪ್ರೇತಾರಾಧನೆ), ಮುಡುಪು(ಹರಕೆ) ಕಟ್ಟುವುದು, ಪಾರಂಪರಿಕ 'ಬಿಡಾರು' ಆಚರಣೆ, ಕುದಿರೆಮೋತಿ ಬಿಡಾರು ಆಚರಣೆ, ಕುಲದ ಆಚಾರ ಪದ್ಧತಿ, ಆಧುನಿಕ ವಾರ್ಷಿಕಾವರ್ತನ ಆಚರಣೆಗಳು, ಬುಡ್ಗ ಜಂಗಮರ ನಂಬಿಕೆಗಳು, ವಿಧಿ-ನಿಷೇಧಗಳು, ಬುಡ್ಗ ಜಂಗಮರ ಮೌಲ್ಯಗಳು ಮತ್ತು ನಿಯಮಗಳು ಕುರಿತು ವಿಶ್ಲೇಷಿಸಲಾಗಿದೆ.

**ಆರನೆಯ ಅಧ್ಯಾಯವು ಭಾಷೆ, ಸಾಹಿತ್ಯ, ಕಲೆ ಮತ್ತು ರಂಗಭೂಮಿ** ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಪೀಠಿಕೆ, ಬುಡ್ಗ ಜಂಗಮರ 'ಬುಡ್ಗ' ಮರುಗು ಭಾಷೆ, ರಂಗಭೂಮಿ, ಬುಡ್ಗ ಜಂಗಮರ ರಂಗಭೂಮಿಯ ವಿಕಾಸ, ಬುರ್ರಕಥಾ, ಗಂಗಿಗೌರಿ ಕಥನಕಾವ್ಯ, ಹಗಲುವೇಷ, ಹಗಲು ವೇಷಗಾರಿಕೆಯಲ್ಲಿ ಪ್ರದರ್ಶಿಸುವ ವಿವಿಧ ಕಲೆಗಳು, ಬುಡ್ಗ ಜಂಗಮರ ಕಲಾ ಪ್ರದರ್ಶನದ ಸ್ವರೂಪ ಕುರಿತು ವಿಶ್ಲೇಷಿಸಲಾಗಿದೆ.

**ಏಳನೆಯ ಅಧ್ಯಾಯವು ಆರ್ಥಿಕ ಜೀವನ** ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಪೀಠಿಕೆ, ಬುಡ್ಗ ಜಂಗಮ್ ಸಮುದಾಯದ ಪಾರಂಪರಿಕ ಕುಲಕಸುಬುಗಳಾದ ಬೇಟೆಗಾರಿಕೆ, ಪಶುಪಾಲನೆ, ಬುರ್ರಕಥಾ ಪ್ರದರ್ಶನ, ಗಂಗಿಗೌರಿ ಗಾಯನ, ಹಗಲುವೇಷ ಪ್ರದರ್ಶನ, ಕರಕುಶಲ ಕಲೆಗಳಾದ ಚಾಪೆ ಹೆಣೆಯುವುದು, ಗುಡಾರ (ಟೆಂಟ್)ಡೇರೆಗಳನ್ನು ಹೊಲಿಯುವುದು, ಕೌದಿ ಹೊಲಿಯುವುದು, ಜೋಳಿಗೆ ಹೊಲಿಯುವುದು, ಬೇಟೆಯ ಉಪಕರಣಗಳ ಕರಕುಶಲ ಕಲೆಗಳು, ವಾದ್ಯ ಮತ್ತು ವೇಷಭೂಷಣಗಳ ಕರಕುಶಲ ಕಲೆಗಳು, ಕೃಷಿ ಭೂ ಒಡೆತನ, ಆಧುನಿಕ ಕುಲಕಸುಬುಗಳು, ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವೃತ್ತಿಗಳ ಪ್ರಮಾಣವನ್ನು ಕುರಿತು ಅಂಕಿಅಂಶಗಳ ಮೂಲಕ ವಿವರಿಸಲಾಗಿದೆ.

**ಎಂಟನೆಯ ಅಧ್ಯಾಯವು ಶೈಕ್ಷಣಿಕ ಮತ್ತು ರಾಜಕೀಯ ಸ್ಥಿತಿಗತಿ** ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಪೀಠಿಕೆ, ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಲಿಂಗವಾರು ಸಾಕ್ಷರತೆ ಪ್ರಮಾಣ, ಲಿಂಗವಾರು ಶೈಕ್ಷಣಿಕ ಸ್ಥಿತಿ, ಗುರುತಿನ ಚೀಟಿ ಸೌಲಭ್ಯಗಳ ವಿವರ, ಸರ್ಕಾರಿ ಸೌಲಭ್ಯ ಪಡೆಯುವ ಅರ್ಹ ಫಲಾನುಭವಿಗಳ ಸ್ಥಿತಿಗತಿ, ಒಳಾಡಳಿತ ವ್ಯವಸ್ಥೆ, ಪಾರಂಪರಿಕ ಕುಲಪಂಚಾಯಿತಿ, ಬಿಡಾರ(ಕಟ್ಟೆಮನೆ)ಗಳು, ಪ್ರಸ್ತುತ ಬುಡ್ಗ ಜಂಗಮ್ ಸಮುದಾಯದ ರಾಜಕೀಯ ಸ್ಥಿತಿಗತಿಗಳ ಬಗ್ಗೆ ವಿಶ್ಲೇಷಿಸಲಾಗಿದೆ.

**ಒಂಭತ್ತನೆಯ ಅಧ್ಯಾಯವು ಸಮಸ್ಯೆ, ಸಂಘಟನೆ ಮತ್ತು ಹೋರಾಟ** ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಪೀಠಿಕೆ, ಸಮಸ್ಯೆಗಳು, ಸಂಘಟನೆ ಮತ್ತು ಹೋರಾಟ ಕುರಿತು ವಿಶ್ಲೇಷಿಸಲಾಗಿದೆ.

**ಕೊನೆಯ ಅಧ್ಯಾಯವು ಸಮಾರೋಪ** ಎಂಬ ಶೀರ್ಷಿಕೆಯಿಂದ ಕೂಡಿದ್ದು, ಪೀಠಿಕೆ, ಬುಡ್ಗ ಜಂಗಮ ಸಮುದಾಯದ ಕುರಿತಾಗಿ ಕೈಗೊಂಡಿರುವ ಅಧ್ಯಾಯನದಲ್ಲಿ ವ್ಯಕ್ತವಾದ ಫಲಿತಗಳು, ಜೊತೆಗೆ ಸಲಹೆಗಳು ಹಾಗೂ ಮುಂದಿನ ಅಧ್ಯಯನದ ಸಾಧ್ಯತೆಗಳು ತಿಳಿಸುವ ಪ್ರಯತ್ನವನ್ನು ಸಮಾರೋಪ ಅಧ್ಯಯನದಲ್ಲಿ ವಿವರಿಸಲಾಗಿದೆ. ನಂತರ ಪರಾಮಾರ್ಶನ ಸಾಹಿತ್ಯ, ತಿಳುವಳಿಕೆದಾರರ ವಿವರ, ಪ್ರಶ್ನಾವಳಿ, ಅನುಬಂಧಗಳು, ಪತ್ರಿಕಾವರದಿಗಳು, ಛಾಯಚಿತ್ರಗಳು ನೀಡಲಾಗಿದೆ. ಒಟ್ಟು ಹತ್ತು ಅಧ್ಯಯನಗಳಲ್ಲಿ ಸಮುದಾಯದ ಚಿತ್ರಣವನ್ನು ಸಾಮಾಜಿಕವಾಗಿ ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

**ಆಧಾರಗಳು**

೧. ಕೃಷ್ಣಾ ಬಿ ಆರ್, ೨೦೦೮, ಭಾರತೀಯ ಸಮಾಜದ ಅಧ್ಯಯನ, ಪು. ೨೨.

# ಅಧ್ಯಾಯ ಎರಡು

# ಬಳ್ಳಾರಿ ಜಿಲ್ಲೆಯ ಪರಿಚಯ

ಪೀಠಿಕೆ

ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆ–ಭೌಗೋಳಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆಯ ಅಂಕಿಅಂಶಗಳು

# ಅಧ್ಯಾಯ ಎರಡು

# ಬಳ್ಳಾರಿ ಜಿಲ್ಲೆಯ ಪರಿಚಯ

**ಪೀಠಿಕೆ**

ಕರ್ನಾಟಕದ ಬಳ್ಳಾರಿ ಜಿಲ್ಲೆಯು ತೆಲುಗು ಭಾಷಿಕ ಪ್ರದೇಶವಾದ ಆಂಧ್ರ ಪ್ರದೇಶದ ಗಡಿಭಾಗದಲ್ಲಿದೆ. ಬುಡ್ಗ ಜಂಗಮರು ಕೂಡ ಬಳ್ಳಾರಿ ಜಿಲ್ಲೆಯಲ್ಲಿ ನೆಲೆಸಿದ್ದಾರೆ. ಇಲ್ಲಿನ ಭೌಗೋಳಿಕ ಪರಿಸರವು, ಭಾಷೆ, ಮತ್ತು ಇಲ್ಲಿನ ಸಾಂಸ್ಕೃತಿಕ ಪರಿಸರವು ಬುಡ್ಗ ಜಂಗಮರಿಗೆ ಪೂರಕವಾಗಿದೆ. ಅಧ್ಯಯನಕಾರನಾಗಿ ನಾನು ಒಳಗಿನವರಾಗಿರುವುದರಿಂದ ಮತ್ತು ಅದೇ ಸಮುದಾಯದ ಅದೇ ಜಿಲ್ಲೆಯವರಾಗಿದ್ದು, ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರೊಂದಿಗೆ ಹೆಚ್ಚು ಒಡನಾಟ ಇರುವುದರಿಂದ ಬಳ್ಳಾರಿ ಜಿಲ್ಲೆಯನ್ನು ಅಧ್ಯಯನದ ವ್ಯಾಪ್ತಿಯನ್ನಾಗಿ ಅಧ್ಯಯನ ಮಾಡಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ತುಂಬಾ ಪ್ರಾಚೀನವಾದ ಇತಿಹಾಸ ಮತ್ತು ಪ್ರಾಗೈತಿಹಾಸಿಕ ನೆಲೆಗಳು ಕಂಡುಬರುತ್ತವೆ. ಬಳ್ಳಾರಿ ಜಿಲ್ಲೆಯ ಇತಿಹಾಸ ಕ್ರಿ.ಪೂ. ೩೫೦೦ ರಿಂದ ಕ್ರಿ.ಪೂ. ೧೦೦೦ದ ಅವಧಿಯ ಹಳೆಯ ಶಿಲಾಯುಗದಿಂದ ಪ್ರಾರಂಭವಾಗುತ್ತದೆ. ಬಳ್ಳಾರಿ ಜಿಲ್ಲೆಯನ್ನು ವಿವಿಧ ರಾಜಮನೆತನಗಳು ಆಳಿದ್ದು, ಅನೇಕ ಶಾಸನಗಳು, ಅರಸರು ನಿರ್ಮಿಸಿದ ದೇವಾಲಯಗಳು, ಬಸದಿಗಳು ಈ ಜಿಲ್ಲೆಯ ಗತವೈಭವವನ್ನು ಸಾರುತ್ತವೆ. ಬಳ್ಳಾರಿಗೆ ಬಳ್ಳಾರಿ ಎಂದು ಹೆಸರು ಬರಲು ಕ್ರಿ.ಶ ೧೨ ನೇ ಶತಮಾನದಲ್ಲಿ ರಚಿತಗೊಂಡ ಯಶೋಧರ ಚರಿತ್ರೆಯಲ್ಲಿ ಬಳರಿ ಎಂಬ ಪದ ಪ್ರಯೋಗಗೊಂಡಿದೆ. ಬಳರಿ ಎಂದರೆ ದೇವತೆ, ಸ್ತ್ರೀದೈವ ಎಂಬ ಅರ್ಥಗಳಿವೆ. ಬಳ್ಳಾರಿಯ ಆದಿ ದೈವ ಬಳರಿ (ದುರ್ಗಮ್ಮ) ಯಿಂದಾಗಿಯೇ ಆ ಊರಿಗೆ ಬಳ್ಳಾರಿ ಎಂಬ ಹೆಸರು ಬಂದಿದೆ ಎಂದು ಹೇಳುತ್ತಾರೆ. ಬೈಲೂರಿನಲ್ಲಿ ಸಿಕ್ಕ ಶಾಸನ ಕ್ರಿ.ಶ.೧೧೩೧ರದಾಗಿದ್ದು, ಆ ಶಾಸನದಲ್ಲಿ ಬಳ್ಳಾರಿ ಪ್ರದೇಶ ಉಲ್ಲೇಖಗೊಂಡಿರುವುದನ್ನು ಕಾಣಬಹುದಾಗಿದೆ. ನಂತರ ಸಿಂಧೀಗೇರಿ, ಕೋಳೂರು, ಕುರುಗೋಡುಗಳಲ್ಲಿ ದೊರತ ಶಾಸನಗಳಲ್ಲಿ ಬಳ್ಳಾರಿ ಎಂಬ ಪದ ಬಳಕೆಗೊಂಡಿರುವುದನ್ನು ಕಾಣಬಹುದಾಗಿದೆ. ಹೊಯ್ಸಳರ ಮೂರು ಶಾಸನಗಳು (ಕ್ರಿ.ಶ.೧೧೬೧ ಬೇಲೂರು ಶಾಸನ ೧೯೩) ಕ್ರಿ.ಶ ೧೧೭೮ ರ ನಾಗಮಂಗಲ ಶಾಸನ, ಕ್ರಿ.ಶ.೧೧೮೩ರ ಬೇಲೂರು ಶಾಸನ ೧೩೭) ಶಾಸನಗಳಲ್ಲಿ ಬಳ್ಳಾರಿ ಪದ ಬಳಕೆಗೊಂಡಿರುವುದನ್ನು ಕಾಣಬಹುದಾಗಿದೆ[1].

ಬಳ್ಳಾರಿಯು ಬ್ರಿಟೀಷ್ ಭಾರತದ ಕಾಲದಲ್ಲಿ ಆಗಿನ ಹಳೇ ಮದ್ರಾಸ್ ಪ್ರಾಂತ್ಯಕ್ಕೆ ಸೇರ್ಪಡೆಗೊಂಡಿತ್ತು. ಕ್ರಿ.ಶ ೧೮೦೦ರಲ್ಲಿ ನಿಜಾಮರಿಂದ ಬ್ರಿಟೀಷರಿಗೆ ಕಡಪ, ಕರ್ನೂಲು, ಅನಂತಪುರ ಜಿಲ್ಲೆ ಬಳ್ಳಾರಿಯನ್ನೊಳಗೊಂಡು ಮದ್ರಾಸ್ ಪ್ರೆಸಿಡೆನ್ಸಿಯ ದತ್ತಿ ಮಂಡಲವೆಂದು ಘೋಷಣೆಗೊಂಡಿದ್ದವು.

ಕ್ರಿ.ಶ ೧೮೦೦ರಲ್ಲಿ ಬಳ್ಳಾರಿ ಜಿಲ್ಲೆಗೆ ಪ್ರಪ್ರಥಮ ಕಲೆಕ್ಟರಾಗಿ ಥಾಮಸ್ ಮುನ್ರೊ ನೇಮಕಗೊಂಡಿದ್ದರು. ಭಾಷಾವಾರು ಪ್ರಾಂತಗಳಾಗಿ ವಿಂಗಡಣೆಗೊಳ್ಳುವವರೆಗೂ ಬಳ್ಳಾರಿಯು ಮದ್ರಾಸ್ ಪ್ರೆಸಿಡೆನ್ಸಿಯಲ್ಲಿಯೇ ಇದ್ದಿತು. ಸ್ವಾತಂತ್ರ್ಯ ನಂತರ ಅಕ್ಟೋಬರ್ ೧, ೧೯೫೩ರಲ್ಲಿ ಭಾಷಾವಾರು ಪ್ರಾಂತಗಳು ವಿಂಗಡಣೆಯಾದ ನಂತರ ಬಳ್ಳಾರಿಯು ಮೈಸೂರು ರಾಜ್ಯಕ್ಕೆ ಸೇರಿಸಲ್ಪಟ್ಟಿತು. ಬ್ರಿಟೀಷರು ಬಳ್ಳಾರಿಯನ್ನು ಸುಮಾರು ಒಂದುನೂರ ನಲವತ್ತೇಳು ವರ್ಷಗಳಷ್ಟು ದೀರ್ಘವಾಗಿ ಆಳಿದರು.

## ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆಯು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಪೂರ್ವದಲ್ಲಿ ಕಲ್ಯಾಣ ಚಾಲುಕ್ಯರು, ತಲಕಾಡಿನ ಗಂಗರು, ಕಂಪಿಲರಾಯ, ಕುಮಾರರಾಮ, ಸಿಂಘೇಯ ವಂಶಗಳ ಆಡಳಿತಕ್ಕೆ ಒಳಪಟ್ಟ ಪ್ರದೇಶವಾಗಿತ್ತು. ಅಶೋಕನ ಶಿಲಾಶಾಸನಗಳು ಈ ಜಿಲ್ಲೆಯ ಸಿರಗುಪ್ಪ ತಾಲೂಕಿನ ನಿಟ್ಟೂರು ಗ್ರಾಮದ ಹೊರವಲಯದಲ್ಲಿ ಕಂಡು ಬರುತ್ತವೆ. ಅದಕ್ಕೂ ಪೂರ್ವದಲ್ಲಿ ಮಾನವನು ನೆಲೆ ನಿಂತಿರುವ ಕುರಿತು ಮಾಹಿತಿ ನೀಡುವ ಪ್ರಾಗೈತಿಹಾಸಿಕ ಕಾಲದ ಮಾನವನ ನೆಲೆಗಳು ಈ ಜಿಲ್ಲೆಯಲ್ಲಿ ಕಂಡು ಬರುತ್ತವೆ. ಸಂಗನಕಲ್ಲು, ತೆಕ್ಕಲಕೋಟೆ, ದರೋಜಿ, ಹಂಪಿ, ತಿಮ್ಮಾಲಾಪುರ, ರಾಮಸಾಗರ, ವೆಂಕಟಾಪುರ, ಬುಕ್ಕಸಾಗರ, ಗುಡೇಕೋಟೆ ಸುತ್ತಮುತ್ತಲಿನ ಬೆಟ್ಟಗಳಲ್ಲಿ ಹಳೇಶಿಲಾಯುಗ ಮತ್ತು ನೂತನ ಶಿಲಾಯುಗದ ಕುರುಹುಗಳು ಕೆಮ್ಮಣ್ಣು ಮತ್ತು ಸುಣ್ಣದ ರೇಖಾಚಿತ್ರಗಳು ಹಾಗೂ ಬಂಡೆಗಳಲ್ಲಿ ಕೊರೆದ ಚಿತ್ರಗಳು ಕಂಡು ಬರುತ್ತವೆ.

ಕಲ್ಯಾಣ ಚಾಲುಕ್ಯರು ಕ್ರಿ. ಶ ೯೭೩ ರಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿ ಬಳ್ಳಾರಿ ಪ್ರಾಂತ್ಯವನ್ನು ತಮ್ಮ ವಶಕ್ಕೆ ತೆಗೆದುಕೊಂಡ ವಿಚಾರವನ್ನು ತಿಳಿಸುವ ಶಿಲಾ ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ಹೇರಳವಾಗಿ ದೊರೆಯುತ್ತದೆ. ಈ ಶಾಸನಗಳನ್ನು ಆಧರಿಸಿ ಹೇಳಬಹುದಾದರೆ ಕ್ರಿ.ಶ. ೧೦೧೪ರ ಗೋಣಿಹಾಳಿನ (ಗೋನಾಳ್) ಶಾಸನವು ಶ್ರೀಮಂತನಾದ ನೊಳಂಬವಾಡಿ ರಾಜನು ಕಂಪಲಿಯನ್ನು ಕೇಂದ್ರವಾಗಿರಿಸಿಕೊಂಡು ಈ ಪ್ರದೇಶದ ಆಳ್ವಿಕೆಯನ್ನು ನಡೆಸುತ್ತಿದ್ದನು. ಮುಂದೆ ಕಲ್ಯಾಣ ಚಾಲುಕ್ಯರ ದೊರೆ ಜಗದೇಕಮಲ್ಲ ಜಯಸಿಂಹದೇವನ ಸಾಮಂತನಾದ ನೊಳಂಬ ಪಲ್ಲವ ಪೆರ್ಮಾಡಿ ಎಂಬುವವನು ಈ ಪ್ರದೇಶವನ್ನು ಆಳಿರುವ ಕುರಿತು ಕ್ರಿ. ಶ ೧೦೧೮ ರ ಶಾಸನದ ಮೂಲಕ ತಿಳಿಯುತ್ತದೆ.

ಕ್ರಿ.ಶ ೧೦೪೫ರ ಸುಮಾರಿಗೆ ಚಾಲುಕ್ಯರ ಒಂದನೇ ಸೋಮೇಶ್ವರನು ಹಡಗಲಿಯನ್ನು ತನ್ನ ನೆಲೆಯಾಗಿಸಿಕೊಂಡಿದ್ದನು. ಅವನು ಚೋಳರ ರಾಜಧಾನಿಯಾದ ನೊಳಂಬವಾಡಿ ಮೇಲೆ ದಾಳಿ ನಡೆಸಿದನು ಹಾಗೂ ಕಂಪಲಿಯನ್ನು ತನ್ನ ವಶಕ್ಕೆ ತೆಗೆದುಕೊಂಡನೆಂದು ತಿಳಿದುಬರುತ್ತದೆ.

"ಕ್ರಿ. ಶ. ೧೦೫೪ ರ ಸುಮಾರಿಗೆ ಕಲ್ಯಾಣ ಚಾಲುಕ್ಯರ ಅರಸ ಒಂದನೇ ಸೋಮೇಶ್ವರ ಬಳ್ಳಾರಿ ಪ್ರದೇಶವನ್ನು ಆಳಿದನೆಂದು ತಿಳಿದುಬರುತ್ತದೆ."[೩] ಇವರ ತುರವಾಯ ಕೆಲವು ಕಾಲ ಕುಮ್ಮಟ ದುರ್ಗವನ್ನು ರಾಜಧಾನಿಯಾಗಿಸಿಕೊಂಡ ಹೊಯ್ಸಳ ಅರಸರು ರಾಜ್ಯಭಾರ ಮಾಡಿರುವುದಾಗಿ ತಿಳಿದು ಬರುತ್ತದೆ[೪].

ಕ್ರಿಶ ೧೨೮೦ ರಿಂದ ೧೩೦೦ ರವರೆಗೆ ಕುಮ್ಮಟವನ್ನು ರಾಜಧಾನಿಯಾಗಿಸಿಕೊಂಡು ಮುಮ್ಮಡಿ ಸಿಂಘೇಯನು ಕಂಪಲಿ ಮತ್ತು ಅದರ ಸುತ್ತ ಮುತ್ತಲಿನ ಪ್ರದೇಶಗಳನ್ನು ಆಳಿದನು. ಮುಮ್ಮಡಿ ಸಿಂಘೇಯನ ಮಗ ಕಂಪಿಲ ಹಾಗೂ ಅವನ ಮಗ ಕುಮಾರರಾಮನು ಈ ಪ್ರದೇಶಗಳನ್ನು ಆಳಿರುವುದರ ಕುರಿತು ಶಾಸನಾಧಾರಗಳು ದೊರೆಯುತ್ತವೆ. ಕಂಪಿಲ ಮತ್ತು ಕುಮಾರರಾಮರು ನಾಯಕ ಸಮುದಾಯದವರಾಗಿದ್ದು, ಉತ್ತರ ಪ್ರದೇಶದಿಂದ ದಕ್ಷಿಣ ರಾಜ್ಯಗಳ ಮೇಲೆ ನಿರಂತರವಾಗಿ ದಂಡೆತ್ತಿ ಬರುತ್ತಿದ್ದ ಇಸ್ಲಾಂ ಅರಸರನ್ನು ಎದುರಿಸಿ ಹಿಮ್ಮೆಟ್ಟಿಸಿದ ಕೀರ್ತಿ ಕಂಪಿಲ ಹಾಗೂ ಕುಮಾರರಾಮರಿಗೆ ಸಲ್ಲುತ್ತದೆ. ಆದರೆ ಕೊನೆಗೆ ದೆಹಲಿ ಸುಲ್ತಾನರಿಂದಾಗಿ ಪರಾಭವಗೊಳ್ಳುತ್ತಾರೆ.

ಈ ಪ್ರದೇಶದಲ್ಲಿ ಕಂಪಿಲನ ಆಡಳಿತದ ತರುವಾಯ ವಿಜಯನಗರದ ಸ್ಥಾಪನೆಯಾಗುತ್ತದೆ. ಕಂಪಿಲನ ಹತ್ತಿರದ ಸಂಬಂಧಿಗಳಾದ ಹರಿಹರ ಮತ್ತು ಬುಕ್ಕ ಸಹೋದರರು ವಿದ್ಯಾರಣ್ಯರ ಮಾರ್ಗದರ್ಶನದಲ್ಲಿ ವಿಜಯನಗರವನ್ನು ಸ್ಥಾಪಿಸುತ್ತಾರೆ. ವಿಜಯನಗರ ಸ್ಥಾಪನೆಯ ತರುವಾಯ ದಕ್ಷಿಣ ಪ್ರಾಂತ್ಯದ ಎಲ್ಲಾ ಪ್ರದೇಶಗಳಿಗೆ ಒಂದು ರೀತಿಯ ರಕ್ಷಣೆ ದೊರೆಯುತ್ತದೆ. ವಿಜಯನಗರದ ಅರಸರು ತಮ್ಮ ಸುತ್ತಮುತ್ತಲಿದ್ದ ಚಿಕ್ಕ ಪುಟ್ಟ ಸಂಸ್ಥಾನಗಳು ಮತ್ತು ಪಾಳಯಪಟ್ಟುಗಳನ್ನು ತಮ್ಮ ರಾಜ್ಯದಲ್ಲಿ ವಿಲೀನಗೊಳಿಸಿಕೊಂಡು ಅವುಗಳಿಗೆ ರಕ್ಷಣೆ ಕೊಡುವುದರೊಂದಿಗೆ ತಮ್ಮ ಸಾಮ್ರಾಜ್ಯ ವ್ಯಾಪಕವಾಗಿ ವಿಸ್ತರಿಸುತ್ತಾ ಸಾಗುತ್ತಾರೆ. ತುಳು, ಸಾಳವ, ಅರವೀಡು, ಸಂಗಮ ವಂಶಗಳು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯನ್ನು ಮಾಡುತ್ತವೆ. ವಿಜಯನಗರದ ಕೊನೆಯ ಪ್ರಭಲ ಅರಸನಾದ ಅಳಿಯರಾಮರಾಯನು ರಕ್ಕಸ ತಂಗಡಗಿ ಯುದ್ಧದಲ್ಲಿ ಬಿಜಾಪುರ ಸುಲ್ತಾನರಿಂದ ಹತನಾದ ನಂತರ ವಿಜಯನಗರ ಸಾಮ್ರಾಜ್ಯವು ಅವನತಿಯಾಗುತ್ತದೆ. ಅಳಿಯ ರಾಮರಾಯನ ಅವನತಿಯ ನಂತರ ಪಟ್ಟಕ್ಕೆ ಬಂದ ವಿಜಯನಗರ ಅರಸ ವೆಂಕಟಪತಿದೇವನು ಬಳ್ಳಾರಿ ಪ್ರಾಂತ್ಯವನ್ನು ತ್ಯಜಿಸಿ ಪೆನುಕೊಂಡ (೧೫೮೬-೧೬೧೪) ಗೆ ಸೇರಿದ ನಂತರ ಬಳ್ಳಾರಿ ಪ್ರಾಂತ್ಯವನ್ನು ಹರಪನಹಳ್ಳಿಯ ಪಾಳೆಗಾರರು ತಮ್ಮ ವಶಕ್ಕೆ ತೆಗೆದುಕೊಂಡರು. ವಿಜಯನಗರ ಪತನ ನಂತರ ಜರಮಲೆ, ಉಚ್ಚಂಗಿದುರ್ಗ, ಹರಪನಹಳ್ಳಿ, ತಿಮ್ಮಲಾಪುರ ಮುಂತಾದ ಪಾಳಯಪಟ್ಟುಗಳು ಸ್ವತಂತ್ರವಾದವು. ಮತ್ತು ಈ ಪಾಳಯಪಟ್ಟುಗಳ ಅಧಿಕಾರವನ್ನು ಬಹುತೇಕ ನಾಯಕ ಸಮುದಾಯದವರೇ ವಹಿಸಿಕೊಂಡರು. ನಾಯಕ ಸಮುದಾಯದ ಹರಪನಹಳ್ಳಿ ಪಾಳೆಯಗಾರರಿಂದ ಕ್ರಿಶ ೧೬೭೭-೭೮ ರ ಸುಮಾರಿಗೆ ಮರಾಠರ ಅರಸು ಶಿವಾಜಿಯು ಬಳ್ಳಾರಿ ಪ್ರಾಂತ್ಯವನ್ನು ವಶಪಡಿಸಿಕೊಂಡನು. ನಂತರ ಔರಂಗಜೇಬನು(೧೬೮೦) ಬಳ್ಳಾರಿ ಪ್ರಾಂತವನ್ನು ಮರಾಠರ ಹಿಡಿತವನ್ನು ತಪ್ಪಿಸಿ ತನ್ನ ಹಿಡಿತದಲ್ಲಿರಿಸಿಕೊಂಡನು.

"೧೭೦೭ ರಲ್ಲಿ ಹೈದರಾಬಾದಿನ ನಿಜಾಮನು ಬಳ್ಳಾರಿ ಪ್ರಾಂತವನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಪ್ರಯತ್ನಪಟ್ಟನಾದರೂ ಅದು ಸಾಧ್ಯವಾಗದೆ ಅವನಿಗೆ ತುಂಗಾಭದ್ರಾ ನದಿಯಾಚೆಗಿನ ಪ್ರದೇಶದ ಮೇಲೆ ಮಾತ್ರ ಹಕ್ಕು ಸ್ಥಾಪನೆ ಮಾಡಲು ಸಾಧ್ಯವಾಯಿತು. ೧೭೬೧ ರ ಸುಮಾರಿಗೆ ಹೈದರಾಲಿಯು ಹರಪನಹಳ್ಳಿ ಹಾಗೂ ರಾಯದುರ್ಗ ಸಂಸ್ಥಾನಗಳಿಗೆ ದಂಡೆತ್ತಿ ಬಂದು ಅಲ್ಲಿಯ ಸ್ಥಳೀಯ ಪಾಳೆಯಗಾರರಿಂದ ಕಪ್ಪ-ಕಾಣಿಕೆ ಪಡೆದುಕೊಳ್ಳುತ್ತಾನೆ"[೫].

"೧೭೬೫ ಸುಮಾರಿಗೆ ಈ ಪ್ರದೇಶ ಸಂಪೂರ್ಣವಾಗಿ ಹೈದರನ ವಶವಾಗಿ ಅವನ ಆಳ್ವಿಕೆ ಪ್ರಾರಂಭಗೊಂಡಿತು. ಬಳ್ಳಾರಿ ನಗರದಲ್ಲಿರುವ ಕೋಟೆಯನ್ನು ಹೈದರನೇ ನಿರ್ಮಿಸಿದ ಕುರಿತು ದಾಖಲೆಗಳು ದೊರೆಯುತ್ತವೆ. ಹೈದರನ ತರುವಾಯ ಅವನ ಮಗ ಟಿಪ್ಪುಸುಲ್ತಾನನು ತನ್ನ ಕೊನೆಗಾಲದವರೆಗೂ ಬಳ್ಳಾರಿ ಪ್ರಾಂತ್ಯದ ಮೇಲೆ ಹಿಡಿತವನ್ನು ಹೊಂದಿದ್ದನು. ೧೭೯೯ರಲ್ಲಿ ನಡೆದ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪು ಸೋಲುತ್ತಾನೆ. ಅವನ ತರವಾಯ ಮೈಸೂರು ಪ್ರದೇಶ ಹಾಗೂ ಬಳ್ಳಾರಿ, ಉತ್ತರಕನ್ನಡ, ದಕ್ಷಿಣಕನ್ನಡ ಜಿಲ್ಲೆಗಳು ಇಂಗ್ಲೀಷ್‌ರಿಗೆ ವಶವಾಗುತ್ತವೆ. ಆಗಿನ ಗವರ್ನರ್ ಆಗಿದ್ದ ಲಾರ್ಡ್ ಆರ್ಥರ್ ವೆಲ್ಲೆಸ್ಸಿಯ ಸಹಾಯಕ ಸೈನ್ಯ ಪದ್ಧತಿಗೆ ಸಮ್ಮತಿಸಿ ಕ್ರಿ.ಶ. ೧೮೦೦ರಲ್ಲಿ ಹೈದರಾಬಾದಿನ ನಿಜಾಮನು ಬ್ರಿಟೀಷರ ಮಾಂಡಲಿಕನಾಗುತ್ತಾನೆ. ಹೀಗಾಗಿ ನಿಜಾಮರ ವಶದಲ್ಲಿದ್ದ ಕನ್ನಡ ಜಿಲ್ಲೆಗಳು ಬ್ರಿಟೀಷರ ಆಧೀನಕ್ಕೆ ಸುಲಭವಾಗಿ ಒಳಪಡುವಂತಾಯಿತು"[೬].

"ಕ್ರಿ.ಶ. ೧೮೦೦ ಡಿಸೆಂಬರ್‌ನಲ್ಲಿ ನಿಜಾಮನು ತನ್ನ ಆಡಳಿತಕ್ಕೆ ಒಳಪಟ್ಟಿದ್ದ ಬಳ್ಳಾರಿ ಪ್ರದೇಶವನ್ನು ಬ್ರಿಟೀಷರಿಗೆ ದತ್ತಿಯಾಗಿ ಬಿಟ್ಟುಕೊಟ್ಟನು. ಆಗಿನಿಂದ ಈ ಪ್ರದೇಶವನ್ನು ದತ್ತಿಮಂಡಲ (ಬಳ್ಳಾರಿ, ಕಡಪ, ಕರ್ನೂಲು) ವೆಂದು ಕರೆಯಲಾಯಿತು. ಕ್ರಿ.ಶ ೧೮೦೦ ರಲ್ಲಿ ನಿಜಾಮನಿಂದ ದೊರೆತ ಬಳ್ಳಾರಿ ಪ್ರಾಂತ್ಯವು ನೇರವಾಗಿ ಬ್ರಿಟೀಷರ ಆಡಳಿತಕ್ಕೆ ಒಳಪಟ್ಟಿತು"[೭]. ನಂತರ ಈ ಪ್ರದೇಶ ಮುಂಬೈ ಪ್ರಾಂತಾಡಳಿತಕ್ಕೆ ಒಳಪಟ್ಟು ಮುಂಬೈ ಕರ್ನಾಟಕವೆಂಬ ಹೆಸರಿಗೆ ಒಳಗಾಯಿತು. ಕ್ರಿ.ಶ ೧೮೧೮ ಸುಮಾರಿಗೆ ಈ ಪ್ರದೇಶವು ಕೆಲವು ಕಾಲ ಮರಾಠ ಪೇಶ್ವೆಗಳ ವಶದಲ್ಲಿಯೂ ಇದ್ದುದಾಗಿ ತಿಳಿದುಬರುತ್ತದೆ.

"ಬಳ್ಳಾರಿ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಕೊಳ್ಳೆಗಾಲ ಮುಂತಾದ ಕೆಲವು ಕನ್ನಡ ಪ್ರದೇಶಗಳು ಬ್ರಿಟೀಷರ ನೇರ ಆಡಳಿತಕ್ಕೆ ಒಳಪಟ್ಟು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಲ್ಪಟ್ಟವು. ಬೆಳಗಾವಿ, ಬಿಜಾಪುರ, ಕೊಡಗು, ಉತ್ತರ ಕನ್ನಡದ ಕೆಲವು ಭಾಗಗಳು ಹಾಗೂ ಧಾರವಾಡ ಜಿಲ್ಲೆ ಮುಂಬೈ ಪ್ರಾಂತ್ಯಕ್ಕೆ ಸೇರಿಸಲ್ಪಟ್ಟವು"[೮].

### ಬಳ್ಳಾರಿ ಜಿಲ್ಲೆಯ ಭೌಗೋಳಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆಯು ಕರ್ನಾಟಕ ರಾಜ್ಯದ ಪೂರ್ವಭಾಗದ ೧೪೦–೧೩೦ ಮತ್ತು ೧೫೦–೫೦೦ ಉತ್ತರ ಅಕ್ಷಾಂಶ, ಹಾಗೂ ೭೦೦–೪೦೦ ಮತ್ತು ೭೭೦–೧೧೦ ಪೂರ್ವ ರೇಖಾಂಶ ಇವುಗಳ ಮಧ್ಯದಲ್ಲಿದೆ. ಜಿಲ್ಲೆಯ ಉತ್ತರದಲ್ಲಿ ರಾಯಚೂರು ಜಿಲ್ಲೆ. ಪಶ್ಚಿಮದಲ್ಲಿ ಹಾವೇರಿ ಜಿಲ್ಲೆ, ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆ ಹಾಗೂ ಪೂರ್ವದಲ್ಲಿ ಆಂಧ್ರ ಪ್ರದೇಶದ ಕರ್ನೂಲು ಜಿಲ್ಲೆ ಮತ್ತು ಅನಂತಪುರ ಜಿಲ್ಲೆಗಳಿಂದ ಆವೃತವಾಗಿದೆ. ತುಂಗಭದ್ರಾ ನದಿಯು ಪಶ್ಚಿಮ ಮತ್ತು ಉತ್ತರ ದಿಕ್ಕಿನಲ್ಲಿ ಹರಿಯುತ್ತದೆ. ತುಂಗಭದ್ರಾ ನದಿಯು ಪಶ್ಚಿಮದಲ್ಲಿ ಕೊಪ್ಪಳ ಜಿಲ್ಲೆಯನ್ನು ಹಾಗೂ ಉತ್ತರದಲ್ಲಿ ರಾಯಚೂರು ಜಿಲ್ಲೆಯನ್ನು ಪ್ರತ್ಯೇಕಿಸುತ್ತದೆ. ಜಿಲ್ಲೆಯ ಪೂರ್ವ ಭಾಗದಲ್ಲಿ ಸಾಮಾನ್ಯವಾಗಿ ಕಪ್ಪು ಮಣ್ಣಿನ ಪ್ರದೇಶ ಹೆಚ್ಚಾಗಿರುತ್ತದೆ. ಸಂಡೂರು ತಾಲ್ಲೂಕಿನಲ್ಲಿ ಎತ್ತರವಾದ ಗುಡ್ಡಗಳಿದ್ದು, ಸಮುದ್ರದ ಮಟ್ಟದಿಂದ ೩೪೦೦ ಅಡಿ ಅವುಗಳ ಎತ್ತರವು ಇರುತ್ತದೆ.

ಜಿಲ್ಲೆಯು ಕಲ್ಲು ಮತ್ತು ಬೆಂಚು ಕಲ್ಲುಗಳಿಂದ ಕೂಡಿದೆ. ಪ್ರಮುಖ ಖನಿಜಗಳಾದ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರುಗಳು ಹೇರಳವಾಗಿ ದೊರೆಯುತ್ತವೆ. ಅತಿ ಹೆಚ್ಚು ಅದಿರು ದೊರೆಯುವ ಪ್ರದೇಶಗಳು ಶೇ.೭೩-೭೫ ಸಂಡೂರು ತಾಲೂಕಿನಲ್ಲಿದ್ದು, ಹೊಸಪೇಟೆಯು ಎರಡನೇ ಸ್ಥಾನದಲ್ಲಿರುತ್ತದೆ.

ಜಿಲ್ಲೆಯಲ್ಲಿ ಕಪ್ಪು ಮತ್ತು ಕೆಂಪು ಮಣ್ಣಿನ ನಮೂನೆಗಳಿವೆ. ಬಳ್ಳಾರಿ ತಾಲೂಕು ಒಂದರಲ್ಲಿ ಕಪ್ಪು ಮಣ್ಣಿನ ಪ್ರದೇಶ ಹೆಚ್ಚಾಗಿದೆ. ಕಪ್ಪು ಮಣ್ಣು ಮೂಲದಲ್ಲಿ ಫಲವತ್ತಾಗಿದ್ದು. ಹೆಚ್ಚಿನ ನೀರಿನ ಅಂಶವನ್ನು ಹಿಡಿದುಕೊಳ್ಳುವ ಗುಣವನ್ನು ಹೊಂದಿದೆ. ಈ ಕಪ್ಪು ಮಣ್ಣು ಶೇ.೬೨ರಷ್ಟು ಜೇಡಿ ಮಣ್ಣಿನಿಂದ ಕೂಡಿರುತ್ತದೆ. ಹೊಸಪೇಟೆ, ಹಡಗಲಿ, ಕೂಡ್ಲಿಗಿ ಮತ್ತು ಸಂಡೂರು ತಾಲೂಕುಗಳಲ್ಲಿ ಉಸುಗು(ಮರಳು) ಮಿಶ್ರಿತ ಕೆಂಪು ಮಣ್ಣು, ಜಿಗಿಟು ಮಣ್ಣು ದೊರೆಯುತ್ತದೆ.

ತುಂಗಾಭದ್ರಾ ನದಿಯು ಜಿಲ್ಲೆಯ ಪಶ್ಚಿಮ ಮತ್ತು ಉತ್ತರ ದಿಕ್ಕಿನಲ್ಲಿ ಹರಿಯುತ್ತಿದ್ದು, ವರ್ಷದಲ್ಲಿ ಸದಾಕಾಲ ನೀರಿನಿಂದ ಕೂಡಿರುತ್ತದೆ. ಈ ನದಿಯು ಹಡಗಲಿ ತಾಲ್ಲೂಕಿನಿಂದ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಇದರ ನೀರು ಕುಡಿಯಲು ರುಚಿಯಾಗಿರುತ್ತದೆ. ನಾರಿ ಹಳ್ಳ ಜಲಾಶಯವು ಸಂಡೂರು ತಾಲ್ಲೂಕಿನಲ್ಲಿದ್ದು, ತಾರಾನಗರ ಗ್ರಾಮದ ಹತ್ತಿರ ಹಳ್ಳಕ್ಕೆ ಒಡ್ಡು ಹಾಕಿ ನೀರಾವರಿ ಸೌಲಭ್ಯ ಮಾಡಲಾಗಿದೆ. ಇದೇರೀತಿ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಮಾಲ್ವಿ ಎಂಬ ಗ್ರಾಮದ ಹತ್ತಿರ ಚಿಕ್ಕಹಗರಿ ನದಿಗೆ ಆಣೆಕಟ್ಟು ಕಟ್ಟಿ ನೀರಾವರಿ ಸೌಲಭ್ಯವನ್ನು ಒದಗಿಸಲಾಗಿದೆ.

ಜಿಲ್ಲೆಯ ಹವಾಮಾನವು ವರ್ಷದಲ್ಲಿ ಹೆಚ್ಚಿನ ಭಾಗ ಶುಷ್ಕವಾಗಿದ್ದು, ಬೇಸಿಗೆಯು ಉಷ್ಣಾಂಶಗಳಿಂದ ಕೂಡಿರುತ್ತದೆ. ಡಿಸೆಂಬರ್ ತಿಂಗಳಿನಿಂದ ಫೆಬ್ರವರಿಯವರೆಗೆ ವಾತಾವರಣ ತಂಪಾಗಿರುತ್ತದೆ. ಚಳಿಗಾಲದಲ್ಲಿ ಕನಿಷ್ಟ ಉಷ್ಣಾಂಶವು ೯೦-೧೦೦ ಸೆ ಇದ್ದು ಗರಿಷ್ಟ ಉಷ್ಣಾಂಶವು ೩೫ ಸೆ. ವರೆಗೆ ಇರುತ್ತದೆ. ಬೇಸಿಗೆ ಕಾಲವು ಮಾರ್ಚ್ ನಿಂದ ಮೇ ವರೆಗೆ ಇದ್ದು, ರಾಜ್ಯದಲ್ಲಿಯೇ ಹೆಚ್ಚು ಉಷ್ಣಾಂಶತೆಯಿಂದ ಕೂಡಿರುತ್ತದೆ. ಬೇಸಿಗೆಯಲ್ಲಿ ಕನಿಷ್ಟ ೧೫ ರಿಂದ ೪೪ಸೆಂ ವರೆಗೆ ಉಷ್ಣಾಂಶವು ಇರುತ್ತದೆ.

ಜಿಲ್ಲೆಯು ೮೪೫೦ ಚ. ಕಿ. ಮೀ ವಿಸ್ತೀರ್ಣ ಹೊಂದಿದ್ದು, ರಾಜ್ಯದ ಒಟ್ಟು ಶೇ ೬ರಷ್ಟು ವಿಸ್ತೀರ್ಣವನ್ನು ಹೊಂದಿ ೧೧ನೇ ಸ್ಥಾನದಲ್ಲಿದೆ. ಜಿಲ್ಲೆಯ ವಿಸ್ತೀರ್ಣದಲ್ಲಿ ಬಳ್ಳಾರಿ ತಾಲೂಕು ಹೆಚ್ಚಿನ ಹೆಚ್ಚಿನ ವಿಸ್ತೀರ್ಣ ಅಂದರೆ ೧೬೮೯ ಚ. ಕಿ. ಮೀ(ಶೇ೨೦) ಹೊಂದಿದ್ದು ಅತಿ ಕಡಿಮೆ ಎಂದರೆ ೯೩೪ ಚ.ಕಿ.ಮೀ(ಶೇ ೧೧)ರ ವಿಸ್ತೀರ್ಣವನ್ನು ಹೊಸಪೇಟೆ ತಾಲೂಕು ಹೊಂದಿರುತ್ತದೆ. ಜಿಲ್ಲೆಯು ಬಳ್ಳಾರಿ, ಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ, ಕೂಡ್ಲಿಗಿ, ಸಂಡೂರು, ಸಿರುಗುಪ್ಪ, ಹರಪನಹಳ್ಳಿ ಮತ್ತು ೨೦೧೮ರಲ್ಲಿ ಹೊಸದಾಗಿ ಘೋಷಣೆಯಾದ ಕುರುಗೋಡು, ಕಂಪ್ಲಿ, ಕೊಟ್ಟೂರು ತಾಲೂಕುಗಳನ್ನು ಹೊಂದಿದೆ.

೨೦೧೧ರ ಜನಗಣತಿ ಪ್ರಕಾರ ಜಿಲ್ಲೆಯಲ್ಲಿ ಒಟ್ಟು ೨೪,೫೨, ೫೯೫ ಜನಸಂಖ್ಯೆ ಇದೆ. ಇದರಲ್ಲಿ ೧೨,೩೬,೯೫೪ ಪುರುಷರು ಮತ್ತು ೧,೨೫,೬೪೧ ಸ್ತ್ರೀಯರು ಇದ್ದಾರೆ. ಗ್ರಾಮಾಂತರ ಪ್ರದೇಶದಲ್ಲಿ ೧೫,೩೨,೩೫೬ (ಶೇ.೬.೨ರಷ್ಟು) ಮತ್ತು ನಗರ ಪ್ರದೇಶದಲ್ಲಿ ೯,೨೦,೨೪೯(ಶೇ.೩೮ರಷ್ಟು) ಜನ

ವಾಸಿಸುತ್ತಿದ್ದಾರೆ. ೧೯೯೧ ಮತ್ತು ೨೦೦೧ರ ದಶಕದಲ್ಲಿ ಜಿಲ್ಲೆಯ ಜನಸಂಖ್ಯೆ ಬೆಳವಣಿಗೆ ಪ್ರಮಾಣ ಶೇ.೨೬.೮೪ ಮತ್ತು ಶೇ. ೨೨.೪೧ ಇದೆ. ೨೦೧೧ ಜನಗಣತಿ ಪ್ರಕಾರ ಶೇ ೨೦.೯೯ ದಶಕದ ಬೆಳವಣಿಗೆಯಾಗಿದೆ. ೨೦೧೧ರ ಜನಗಣತಿಯಂತೆ ಜಿಲ್ಲೆಯ ವಿಸ್ತೀರ್ಣ ಪ್ರತಿಚದರ ಕಿ.ಮೀ.ಗೆ ೨೯೦ಇದ್ದು, ೨೦೧೧ ರಂತೆ ಜನಸಾಂದ್ರತೆಯಲ್ಲಿ ಜಿಲ್ಲೆಯ ೧೫ನೇ ಸ್ಥಾನದಲ್ಲಿದೆ. ೨೦೧೧ರ ಜನಗಣತಿಯ ಪ್ರಕಾರ ಪ್ರತಿ ಸಾವಿರ ಪುರುಷರಿಗೆ ೯೮೩ ಸ್ತ್ರೀಯರಿದ್ದಾರೆ.

೨೦೧೧ ರ ಜನಗಣತಿಯ ಪ್ರಕಾರ ಪರಿಶಿಷ್ಟ ಜಾತಿಗೆ ಸೇರಿದವರು ೫,೧೭,೪೯೯ (ಶೇ.೨೧.೦ರಷ್ಟು) ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದವರು ೪,೫೧,೪೦೬ (ಶೇ.೧೮.೪೧ ರಷ್ಟು) ಇದ್ದಾರೆ. ಜಿಲ್ಲೆಯ ಸಾಕ್ಷರತೆ ಪ್ರಮಾಣ ಶೇಕಡಾ ೬೭.೪೩ ಇದ್ದು, ಸಾಕ್ಷರತೆಯಲ್ಲಿ ಪುರುಷ ಮತ್ತು ಸ್ತ್ರೀಯರಲ್ಲಿ ಅನುಕ್ರಮವಾಗಿ ಶೇಕಡಾ ೭೬.೬೪ ಮತ್ತು ೫೮.೦೯ ರಷ್ಟು ಇರುತ್ತದೆ. ವಾಸದ ಮನೆಗಳು ೪,೮೧,೭೦೪ ಕುಟುಂಬಗಳಿದ್ದು, ಅದರಲ್ಲಿ ಒಟ್ಟು ೨,೯೧,೩೮೩ ಕುಟುಂಬಗಳು ಶೇಕಡಾ ೬೦.೪೯ ಗ್ರಾಮೀಣ ಪ್ರದೇಶದಲ್ಲಿ ಇರುತ್ತವೆ. ಹಾಗೂ ಉಳಿದ ೧,೯೦,೩೨೧ ಶೇಕಡಾ ೩೯.೫೧ ನಗರ ಪ್ರದೇಶಗಳಲ್ಲಿವೆ.

೨೦೧೫-೧೬ನೇ ಸಾಲಿನಲ್ಲಿ ಒಟ್ಟು ಭೌಗೋಳಿಕ ವಿಸ್ತೀರ್ಣ ೮.೧೩ ಲಕ ಹೆಕ್ಟೇರ್‌ಗಳಲ್ಲಿ ೫.೬೩ ಲಕ್ಷ ಹೆಕ್ಟರ್‌ಗಳಷ್ಟು ಬಿತ್ತನೆಯಾಗಿದ್ದು, ಇದರಲ್ಲಿ ಶೇಕಡಾ ಶೇಕಡ ೪೮.೧ ರಷ್ಟು ಬಿತ್ತನೆಯಾಗಿರುತ್ತದೆ. ಅಂದರೆ ನಿವ್ವಳ ಬಿತ್ತನೆಯಾದ ಪ್ರದೇಶ ೩.೯೦ ಲಕ್ಷ ಹೆಕ್ಟೇರ್ ೧ ಕ್ಕಿಂತ ಹೆಚ್ಚು ಸಾರಿ ಬಿತ್ತನೆಯಾಗಿರುವ ಪ್ರದೇಶವು ೧.೧೫ ಲಕ್ಷ ಹೆಕ್ಟೇರ್‌ಇದ್ದು, ಬಿತ್ತನೆಯಾಗಿರುವ ಪ್ರದೇಶದಲ್ಲಿ ಮುಖ್ಯವಾಗಿ ಜೋಳವನ್ನು ೦.೪೦ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ, ಭತ್ತ ೧.೧೮ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಬಿತ್ತನೆಯಾಗಿರುತ್ತದೆ."[೧]

**ಬಳ್ಳಾರಿ ಜಿಲ್ಲೆಯ ಅಂಕಿಅಂಶಗಳು**

**ಕೋಷ್ಟಕ ೨.೧: ಬಳ್ಳಾರಿ ಜಿಲ್ಲೆಯ ತಾಲೂಕುವಾರು ಭೌಗೋಳಿಕ ಮತ್ತು ಜನಸಂಖ್ಯಾ ವಿವರ (೨೦೧೧)**

| ಕ್ರಸಂ | ತಾಲೂಕು | ಹೋಬಳಿಗಳ ಸಂಖ್ಯೆ | ಭೌಗೋಳಿಕ ವಿಸ್ತೀರ್ಣ (ಎಕರೆಗಳಲ್ಲಿ) | ೨೦೧೧ರ ಜನಸಂಖ್ಯೆ |
|---|---|---|---|---|
| ೧ | ಬಳ್ಳಾರಿ | ೦೩ | ೨,೮೨,೧೯೪ | ೬,೩೩,೦೪೬ |
| ೨ | ಕುರುಗೋಡು | ೦೨ | ೧,೧೬,೧೩೯ | ೧,೧೬,೩೯೦ |
| ೩ | ಸಿರುಗುಪ್ಪ | ೦೪ | ೨,೫೬,೯೮೯ | ೨,೬೯,೧೦೪ |
| ೪ | ಸಂಡೂರು | ೦೩ | ೩,೦೭,೬೪೬ | ೨,೬೦,೨೧೩ |
| ೫ | ಕಂಪ್ಲಿ | ೦೧ | ೮೭,೭೨೨ | ೧,೨೨,೨೧೭ |
| ೬ | ಹೊಸಪೇಟೆ | ೦೩ | ೧,೬೨,೧೦೧ | ೩,೫೯,೨೬೭ |
| ೭ | ಕೂಡ್ಲಿಗಿ | ೦೩ | ೩,೪೬,೪೪೧ | ೨,೨೨,೫೭೩ |

| | | | | |
|---|---|---|---|---|
| ೮ | ಹಗರಿಬೊಮ್ಮನಹಳ್ಳಿ | ೦೪ | ೨,೩೪,೭೫೦ | ೧,೭೭,೧೩೮ |
| ೯ | ಹೂವಿನ ಹಡಗಲಿ | ೦೩ | ೨,೩೪,೨೫೫ | ೧,೯೫,೨೧೯ |
| ೧೦ | ಹರಪನಹಳ್ಳಿ | ೦೪ | ೩,೫೪,೫೯೬ | ೩,೦೨,೦೦೩ |
| ೧೧ | ಕೊಟ್ಟೂರು | ೦೧ | ೬೨,೫೧೮ | ೯೭,೪೨೮ |
| | ಒಟ್ಟು | ೩೧ | ೨೪,೪೫,೩೫೧ | ೨೭,೫೪,೫೯೮ |

ಈ ಮೇಲಿನ ಕೋಷ್ಟಕವು ಬಳ್ಳಾರಿ ಜಿಲ್ಲೆಯು ೧೧ ತಾಲೂಕುಗಳು, ೩೧ ಹೋಬಳಿಗಳು, ೨೪,೪೫,೩೫೧ ಎಕರೆ ಭೌಗೋಳಿಕ ಪ್ರದೇಶ, ೨೭,೫೪,೫೯೮ ಜನಸಂಖ್ಯೆಯನ್ನು ಹೊಂದಿದೆ.

**ಕೋಷ್ಟಕ ೨.೨: ಕರ್ನಾಟಕ ರಾಜ್ಯ ಮತ್ತು ಬಳ್ಳಾರಿ ಜಿಲ್ಲೆಯ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಜನಸಂಖ್ಯೆ ವಿವರ(೨೦೧೧)**

| ಕ್ರ.ಸಂ | ರಾಜ್ಯ ಮತ್ತು ಜಿಲ್ಲೆ | ಒಟ್ಟು ಜನಸಂಖ್ಯೆ | ಒಟ್ಟು ಪರಿಶಿಷ್ಟ ಜಾತಿ ಜನಸಂಖ್ಯೆ | ಒಟ್ಟು ಪರಿಶಿಷ್ಟ ಪಂಗಡ ಜನಸಂಖ್ಯೆ | ಬುಡ್ಗ ಜಂಗಮರ ಜನಸಂಖ್ಯೆ |
|---|---|---|---|---|---|
| ೧ | ಕರ್ನಾಟಕ | ೬,೧೦,೯೫,೨೯೭ | ೧,೦೪,೭೪,೯೯೨ (೧೭.೧೪%) | ೪೨,೪೮,೯೮೭ (೭%) | ೧,೧೭,೧೬೪ (೦.೧%) |
| ೨ | ಬಳ್ಳಾರಿ | ೨೪,೫೨,೫೯೫ | ೫,೧೭,೪೦೯ (೨೧.೦೯%) | ೪,೫೧,೪೦೬ (೧೮.೪%) | ೨೬,೨೩೧ (೧.೦೬%) |
| ೩ | ಪ್ರಸ್ತುತ ಬಳ್ಳಾರಿ ಜಿಲ್ಲೆಯ ೨೦೧೯ರ ಅಧ್ಯಯನದ ಸಮಗ್ರ ಸಮೀಕ್ಷೆ ಪ್ರಕಾರ | | | | ೩,೪೭೦ (೦.೧೪%) |

ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆ ೬,೧೦,೯೫,೨೯೭, ಪರಿಶಿಷ್ಟ ಜಾತಿ ಒಟ್ಟು ಜನಸಂಖ್ಯೆ ೧,೦೪,೭೪,೯೯೨ (೧೭.೧೪%), ಒಟ್ಟು ಪರಿಶಿಷ್ಟ ಪಂಗಡ ಜನಸಂಖ್ಯೆ ೪೨,೪೮,೯೮೭ (೭%) ಬುಡ್ಗ ಜಂಗಮರ ಜನಸಂಖ್ಯೆ ೧,೧೭,೧೬೪ (೦.೧%) ದಾಖಲಾಗಿದ್ದಾರೆ. ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆ ೨೪,೫೨,೫೯೫, ಪರಿಶಿಷ್ಟ ಜಾತಿ ಜನಸಂಖ್ಯೆ ೫,೧೭,೪೦೯ (೨೧.೦೯%), ಒಟ್ಟು ಪರಿಶಿಷ್ಟ ಪಂಗಡ ಜನಸಂಖ್ಯೆ ೪,೫೧,೪೦೬ (೧೮.೪%) ಬುಡ್ಗ ಜಂಗಮ್ ಸಮುದಾಯದ ಜನಸಂಖ್ಯೆ ೨೬,೨೩೧ (೧.೦೬%)ದಾಖಲಾಗಿದ್ದಾರೆ. ವಾಸ್ತವವಾಗಿ ಪ್ರಸ್ತುತ ಬಳ್ಳಾರಿ ಜಿಲ್ಲೆಯ ೨೦೧೯ರ ಅಧ್ಯಯನದ ಸಮಗ್ರ ಸಮೀಕ್ಷೆ ಪ್ರಕಾರ ಬುಡ್ಗ ಜಂಗಮ್ ಸಮುದಾಯದ ಜನಸಂಖ್ಯೆ ಒಟ್ಟು ೩,೪೭೦ (೦.೧೪%) ದಾಖಲಾಗಿರುವುದು ಕಂಡು ಬರುತ್ತದೆ.

**ಕೋಷ್ಟಕ ೨.೩ ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ್ ಸಮುದಾಯದ ಜನಸಂಖ್ಯೆಯ ವಿರಳಿತ (೨೦೦೧ ಮತ್ತು ೨೦೧೧)**

| ಕೋಷ್ಟಕ ೨.೩ ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ್ ಸಮುದಾಯದ ಜನಸಂಖ್ಯೆಯ ವಿರಳಿತ | | | | | | | |
|---|---|---|---|---|---|---|---|
| | ೨೦೦೧ರ ಜನಗಣತಿ | | | | ೨೦೧೧ರ ಜನಗಣತಿ | | |
| ಕ್ರಸ.೦ | ಜಿಲ್ಲೆ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಬಳ್ಳಾರಿ | ೧,೩೧೮ | ೧,೧೬೬ | ೨,೪೮೪ | ೧೩,೩೩೪ | ೧೨,೮೯೭ | ೨೬,೨೩೧ |
| ಪ್ರಸ್ತುತ ಬಳ್ಳಾರಿ ಜಿಲ್ಲೆಯ ೨೦೧೯ರ ಅಧ್ಯಯನದ ಸಮಗ್ರ ಸಮೀಕ್ಷೆ ಪ್ರಕಾರ | | | | | ೧೭೯೭ | ೧೬೭೩ | ೩,೪೭೦ |
| ಅಂತರ | | | | | ೧೧,೫೩೭ | ೧೧,೨೨೪ | ೨೨,೭೬೧ |

೨೦೦೧ ಮತ್ತು ೨೦೧೧ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಕ್ರಮವಾಗಿ ೨೪೮೪ ಮತ್ತು ೨೬,೨೩೧ ಜನಸಂಖ್ಯೆ ದಾಖಲಾಗಿರುವುದು ಕಂಡುಬಂದಿದೆ. ೨೦೦೧ ಮತ್ತು ೨೦೧೧ರ ಜನಗಣತಿ ವ್ಯತ್ಯಾಸವನ್ನು ಗಮನಿಸಿದಾಗ ೨೩೭೪೭ ಜನ ಜನಗಣತಿಯಲ್ಲಿ ಹೆಚ್ಚಾಗಿ ಇರುವುದು ಕಂಡುಬರುತ್ತದೆ. ಪ್ರಸ್ತುತ ೨೦೧೯ರ ಅಧ್ಯಯನದ ಸಮಗ್ರ ಸಮೀಕ್ಷೆ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೩,೪೭೦ ಜನಸಂಖ್ಯೆ ದಾಖಲೆಗೆ ಸಿಗುತ್ತಾರೆ. ೨೦೧೧ರ ಜನಗಣತಿಯನ್ನು ಅವಲೋಕಿಸಿದರೆ ಈಗಿರುವ ಜನಸಂಖ್ಯೆಗಿಂತ ೨೨,೭೬೧ ಜನಸಂಖ್ಯೆ ಹೆಚ್ಚಾಗಿ ಇರುವುದು ಕಂಡುಬರುತ್ತದೆ.

ಬಳ್ಳಾರಿ ಜಿಲ್ಲೆಯ ಪ್ರದೇಶದಲ್ಲಿ ಪರಿಶಿಷ್ಟ ಜಾತಿಯ ಅಲೆಮಾರಿ, ಅರೆ-ಅಲೆಮಾರಿ ಸೂಕ್ಷ್ಮ ಸಮುದಾಯಗಳಾದ ಚೆನ್ನದಾಸರ್, ಸಿಂಧೊಳ್ಳು, ಸಿಳ್ಳೆಕ್ಯಾತ, ಹಂಡಿಜೋಗೀಸ್, ಸುಡುಗಾಡು ಸಿದ್ಧರು, ಗೋಸಂಗಿ, ಡೊಂಬರು ಮತ್ತು ಬುಡ್ಗ ಜಂಗಮರು ಇತ್ಯಾದಿ ಸಮುದಾಯಗಳು ನೆಲೆಸಿದ್ದಾರೆ. ಈ ಅಲೆಮಾರಿಗಳು ಇಲ್ಲಿ ನೆಲೆಸಲು ಕಾರಣವನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲದಿದ್ದರೂ ಈ ಪ್ರದೇಶದ ವಾತಾವರಣ, ನೀರಾವರಿ ಮತ್ತು ಬಯಲುಪ್ರದೇಶ ಹೆಚ್ಚಾಗಿರುವುದರಿಂದ ವಾಸಿಸಲು ಅಲೆಮಾರಿಗಳಿಗೆ ಸೂಕ್ತವಾದ ಸ್ಥಳವಾಗಿದೆ. ಅತಿ ಮುಖ್ಯವಾಗಿ ಈ ಸಮುದಾಯಗಳು ಆಂಧ್ರಪ್ರದೇಶ, ಮಹಾರಾಷ್ಟ್ರ ಮೂಲಗಳಿಂದ ಹೆಚ್ಚು ಅಲೆಮಾರಿಗಳಾಗಿ ಬಂದವರಾಗಿದ್ದಾರೆ. ವಿಶೇಷವಾಗಿ ಬುಡ್ಗ ಜಂಗಮರು ಬಳ್ಳಾರಿ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶದಲ್ಲಿ ತಮ್ಮದೇಯಾದ ಬುರ್ರಕಥಾ ಕಲಾಪ್ರಕಾರದಲಿ ಈ ಭಾಗದ ಐತಿಹಾಸಿಕ ಚರಿತ್ರೆಯಾದ ಕುಮಾರರಾಮನ ಕಾವ್ಯ ಕಂಪ್ಲಿರಾಯನ ಚರಿತ್ರೆಯನ್ನು, ಬಳ್ಳಾರಿ ಜಿಲ್ಲೆಯ ಬ್ರಿಟಿಷರ ಕಾಲದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಬೊಬ್ಬಿಲಿ ನಾಗಿರೆಡ್ಡಿಯ ಚರಿತ್ರೆಯನ್ನು, ಈ ಪ್ರದೇಶದ ಜನಸಮುದಾಯ ಚರಿತ್ರೆಗಳಾದ ಗೊಲ್ಲರ ಕೃಷ್ಣಗೊಲ್ಲರ ಮಹಾಕಾವ್ಯ, ವಡ್ಡರ ಬಾಲನಾಗಮ್ಮನ ಕಾವ್ಯ, ಸ್ಥಳೀಯ ಪ್ರದೇಶದ ಎಲ್ಲಮ್ಮನ ಕಾವ್ಯ, ಆದೋನಿ ಲಕ್ಷ್ಮಮ್ಮನ ಕಾವ್ಯ ಇತ್ಯಾದಿ ಕಥೆ ಕಾವ್ಯಗಳನ್ನು ಈ ಪ್ರದೇಶದಲ್ಲಿ ಕಂಡುಕೊಂಡಿದ್ದಾರೆ. ಹಗಲುವೇಷ ಪ್ರದರ್ಶನ ನೀಡಲು

ಬಳ್ಳಾರಿ ಜಿಲ್ಲೆಯ ಎಲ್ಲಾ ಹಳ್ಳಿ ಗ್ರಾಮ, ನಗರ ಪ್ರದೇಶಗಳನ್ನು ಪಾರಂಪರಿಕವಾಗಿ ಒಬ್ಬರಿಗೆ ಇಂತಿಷ್ಟು ಹಳ್ಳಿಗಳು ಎಂದು ಭಾಗ ಹಂಚಿಕೊಂಡು ಕರಾರು(ಒಪ್ಪಂದ) ಮಾಡಿಕೊಂಡು ಪ್ರದರ್ಶನ ನೀಡುತ್ತಿದ್ದಾರೆ. ಈ ಪ್ರದೇಶದ ಜನರು ಧಾರ್ಮಿಕವಾಗಿ ಹೆಚ್ಚು ಪ್ರಭಾವಕ್ಕೆ ಒಳಗಾಗಿದ್ದಾರೆ. ಆದ್ದರಿಂದ ಬುಡ್ಗ ಜಂಗಮರು; ಬುರ್ರಕಥೆ, ಹಗಲುವೇಷ ಮತ್ತು ಗಂಗಿಗೌರಿ ಗಾಯನ ಮಾಡುತ್ತಾ ಭಿಕ್ಷೆ ಬೇಡುವುದು, ಕಥೆ, ಕಾವ್ಯ ಹೇಳಿಕೊಂಡು ಜೀವನ ಸಾಗಿಸುತ್ತ ಇಲ್ಲೆ ನೆಲೆಸಿದ್ದಾರೆ. ಈ ಭಾಗದಲ್ಲಿ ಅರಣ್ಯ ಹೆಚ್ಚಾಗಿ ಇರುವುದರಿಂದ ಬೇಟೆಯೂ ಹೆಚ್ಚಾಗಿ ಕಾಣಸಿಗುತ್ತಿತ್ತು. ತುಂಗಾಭದ್ರ ನದಿ ನೀರಿನ ನೀರಾವರಿ ಪ್ರದೇಶ ಇರುವುದರಿಂದ ಸಾಕುಪ್ರಾಣಿಗಳಾದ ದನಕರು ಜಾನುವಾರುಗಳಿಗೆ ಹುಲ್ಲುಗಾವುಲು ಮತ್ತು ಬೇಟೆಯಾಡಲು ಮೀನು, ಆಮೆ ಏಡಿಗಳು ಹೆಚ್ಚಾಗಿ ಸಿಗುವುದರಿಂದ ಈ ಭಾಗದಲ್ಲಿ ಹೆಚ್ಚಾಗಿ ನೆಲೆಸಲು ಕಾರಣವಾಗಿದೆ ಎಂದು ಹೇಳಬಹುದು. ಒಟ್ಟಾರೆ ನೀರು ಎಲ್ಲಿ ಹೆಚ್ಚಾಗಿ ಕಂಡುಬರುತ್ತದೆಯೋ ಅಲ್ಲಿ ಮಾನವನ ಜೀವ ಸಂಸ್ಕೃತಿ ಕಾಣಬಹುದಾಗಿದೆ. ಹೀಗಾಗಿ ಅಲೆಮಾರಿ ಬುಡ್ಗ ಜಂಗಮರು ಹೆಚ್ಚಾಗಿ ಬಳ್ಳಾರಿ ಜಿಲ್ಲೆಯಲ್ಲಿ ನೆಲೆಸಿದ್ದಾರೆ.

**ಆಧಾರಗಳು**


೧. ೨೦೧೬–೧೭ನೇ ಸಾಲಿನ ಬಳ್ಳಾರಿ ಜಿಲ್ಲೆಯ ಸಾಮಾಜಿಕ–ಆರ್ಥಿಕ ಅವಲೋಕನ ವರದಿ, ಪು.೧–೨

೨. ಗೆಜೆಟಿಯರ್ ಆಫ್ ಇಂಡಿಯಾ, ೧೯೭೨, ಪು.೮೪

೩. ಎಫಿಗ್ರಾಫಿಕಾ ಕರ್ನಾಟಕ ಪು.೧೨

೪. ಸಾವಿತ್ರಿ ಕೆ.ಎಂ, ಕುಮ್ಮಟದುರ್ಗ ಪರಿಸರದ ಕುಮಾರರಾಮನ ಹಬ್ಬ, ೨೦೦೨, ಪುಟ–೨೪

೫. ಬಳ್ಳಾರಿ ಜಿಲ್ಲಾ ಗೆಜೆಟಿಯರ್, ೧೯೦೪, ಪು.೪೫

೬. ವಿರೂಪಾಕ್ಷಿ ಪೂಜಾರಿಹಳ್ಳಿ, ಬಳ್ಳಾರಿ ಜಿಲ್ಲೆಯಲ್ಲಿನ ಕಲೆಕ್ಟರ್‌ಗಳ ಆಳ್ವಿಕೆ, ೨೦೧೨ ಪು.೮೪

೭. ಬಳ್ಳಾರಿ ಜಿಲ್ಲಾ ಸ್ವಾತಂತ್ರ್ಯ ಹೋರಾಟ, ೧೯೯೮, ಪು.೨೧

೮. ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರೋದಯದ ಮೈಲಿಗಲ್ಲುಗಳು: ಎಸ್.ಆರ್.ರಾಮಸ್ವಾಮಿ ಅವರ (ಲೇಖನ) ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ, ೧೯೯೮, ಪು.೧೯೫

# ಅಧ್ಯಾಯ ಮೂರು

# ಬುಡ್ಗ ಜಂಗಮ್ ಸಮುದಾಯದ ಹಿನ್ನೆಲೆ

ಪೀಠಿಕೆ

ಬುಡ್ಗ ಜಂಗಮ್ ಪದ ನಿಷ್ಪತ್ತಿ

ಬುಡ್ಗ ಜಂಗಮ್, ಬೇಡ ಜಂಗಮ್ ಸಮುದಾಯದ ಚಾರಿತ್ರಿಕ ಹಿನ್ನೆಲೆ

ಸಂವಿಧಾನದ ಪರಿಶಿಷ್ಟ ಮೀಸಲಾತಿ ಪಟ್ಟಿಯಲ್ಲಿ ಬುಡ್ಗ ಜಂಗಮರು

ಬುಡ್ಗ ಜಂಗಮರ ಮೂಲ

ಬುಡ್ಗ ಜಂಗಮ್ ಸಮುದಾಯದ ಭೌಗೋಳಿಕ ನೆಲೆಗಳು

ಬುಡ್ಗ ಜಂಗಮ್ ಸಮುದಾಯದ ಜನಸಂಖ್ಯೆ ಅಂಕಿಅಂಶಗಳು

ಇತರೆ ಸಮುದಾಯಗಳು ಮತ್ತು ಬುಡ್ಗ ಜಂಗಮ್ ಸಮುದಾಯದ ತೌಲನಿಕತೆ

- ಬೇಡ ಬುಡಕಟ್ಟು ಮತ್ತು ಬುಡ್ಗ ಜಂಗಮ್ ಸಮುದಾಯ
- ಮಾಲ ಜಂಗಮ್ ಮತ್ತು ಬುಡ್ಗ ಜಂಗಮ್
- ಸುಡುಗಾಡು ಸಿದ್ಧರು ಮತ್ತು ಬುಡ್ಗ ಜಂಗಮರು
- ಬಹುರೂಪಿಗಳು (BAHURUPI) ಮತ್ತು ಬುಡ್ಗ ಜಂಗಮರು
- ಬೈರಾಗಿಗಳು ಮತ್ತು ಬುಡ್ಗ ಜಂಗಮರು
- ವೀರಶೈವ ಲಿಂಗಾಯತ ಜಂಗಮರು ಮತ್ತು ಬುಡ್ಗ ಜಂಗಮರು

# ಅಧ್ಯಾಯ ಮೂರು

# ಬುಡ್ಗ ಜಂಗಮ್ ಸಮುದಾಯದ ಹಿನ್ನೆಲೆ

**ಪೀಠಿಕೆ**

ಪ್ರಾಚೀನ ಕಾಲದಿಂದಲೂ ಪ್ರತಿಯೊಂದು ಸಮುದಾಯವು ತನ್ನದೇಯಾದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿರುತ್ತದೆ. ಸಮಾಜದ ವಿವಿಧ ಸ್ಥಿತಿಗಳನ್ನು ಅಧ್ಯಯನಿಸಿದಾಗ ಸಮುದಾಯಗಳು ನಿರ್ವಹಿಸುತ್ತಿದ್ದ ವಿವಿಧ ವೃತ್ತಿಗಳು, ಆಚರಣೆಗಳು, ಅವುಗಳ ಮೂಲನೆಲೆ ಹಾಗೂ ವಾಸಿಸುವ ಪ್ರದೇಶಗಳನ್ನು ಆಧರಿಸಿ ಅವು ಜಾತಿಗಳಾಗಿ ಪರಿವರ್ತನೆ ಹೊಂದಿದವು. ಭಾರತೀಯ ಸಮಾಜದಲ್ಲಿ ಪ್ರಮುಖವಾಗಿ ಎರಡು ಜನಾಂಗಗಳನ್ನು ಕಾಣಬಹುದು. ಅವುಗಳನ್ನು ಆರ್ಯ ಮತ್ತು ದ್ರಾವಿಡ ಜನಾಂಗಗಳೆಂದು ಅಧ್ಯಯನಕಾರರು ಗುರುತಿಸಿದ್ದಾರೆ. ಬುಡ್ಗ ಜಂಗಮ್ ಸಮುದಾಯವು ಸಾಮಾಜಿಕ ರಚನೆಯಲ್ಲಿ ದ್ರಾವಿಡ ಜನಾಂಗಕ್ಕೆ ಸೇರಿದ ಒಂದು ಅಲೆಮಾರಿ ಸಮುದಾಯವಾಗಿದೆ.

ಭಾರತದಲ್ಲಿ ಅಲೆಮಾರಿ ಸಮುದಾಯಗಳ ಕುರಿತು ನಡೆದ ಅಧ್ಯಯನಗಳು ತುಂಬಾ ವಿರಳ. ವಸಾಹತುಶಾಹಿ ಆಡಳಿತ ಸಂದರ್ಭದಲ್ಲಿ ನಡೆದ ಜಾತಿ ಮತ್ತು ಬುಡಕಟ್ಟು ಸಮುದಾಯಗಳ ಜೊತೆ ಮುಖ್ಯವಾಗಿ ಅಲೆಮಾರಿಗಳನ್ನು ಅಧ್ಯಯನ ಮಾಡಲಾಯಿತು. ಆದರೆ ವಸಾಹತು ಆಡಳಿತಕ್ಕೆ 'ಮಾಹಿತಿ' ಒದಗಿಸುವ ಯಾಂತ್ರಿಕ ಶೈಕ್ಷಣಿಕ ಪ್ರಕ್ರಿಯೆ ಎಂಬಂತೆ ಅಂದಿನ ಅಧ್ಯಯನಗಳು ನಡೆದವು. ಅಂದಿನ ಅಧ್ಯಯನಗಳು ಕೇವಲ ಮಾಹಿತಿ ಒದಗಿಸುವ ಮತ್ತು ಸಂಗ್ರಹಣೆಗೆ ಮಾತ್ರ ಸೀಮಿತಗೊಂಡಿದ್ದವು. ಮುಖ್ಯವಾಗಿ ವಸಾಹತು ಸಂದರ್ಭದಲ್ಲಿ ಅಲೆಮಾರಿಗಳ ಅಧ್ಯಯನಗಳು, ಅಲೆಮಾರಿಗಳನ್ನು ಅಂದಿನ ಸರಕಾರದ ಕಾನೂನು ಮತ್ತು ಸುಭದ್ರತೆಯ ಅಡಿಯಲ್ಲಿ ನಿಯಂತ್ರಿಸುವ ಸಲುವಾಗಿಯೇ ನಡೆದವು. ನಂತರ ವಸಾಹತೋತ್ತರ ಕಾಲಘಟ್ಟದ ನಂತರದಲ್ಲಿ ಭಾರತದಲ್ಲಿ ಕೆಲವು ಅಲೆಮಾರಿಗಳ ಕುರಿತು ಅಧ್ಯಯನಗಳು ನಡೆದವು. Anthropological survey of India ಈ ಸಂಸ್ಥೆಯು ಅಲೆಮಾರಿಗಳ ಕುರಿತು ಹೆಚ್ಚು ಅಧ್ಯಯನಕ್ಕೆ ಒಳಪಡಿಸಿದವು. ಮುಂದೆ ಇದೇ ಸಂಸ್ಥೆಯು People of India ಎಂಬ ಮಾಲಿಕೆಯಲ್ಲಿ ಪ್ರತಿ ರಾಜ್ಯದ ಸಮುದಾಯಗಳನ್ನು ಪಟ್ಟಿಮಾಡಿ ಮಾಹಿತಿ ಸಂಗ್ರಹಿಸಿತ್ತು.

ಅಲೆಮಾರಿಗಳನ್ನು ಕುರಿತು ವಿಶೇಷವಾಗಿ ಅಧ್ಯಯನ ಮಾಡಿದ ಪಿ ಕೆ ಮಿಶ್ರಾ ಅವರು ಅಲೆಮಾರಿಗಳನ್ನು 'Nomad'ಎಂಬ ಪದದಿಂದ ಗುರುತಿಸುತ್ತಾರೆ. ಈ ಪದವು ಗ್ರೀಕ್ ಮೂಲದಾಗಿದೆ. "Nomas ಮತ್ತು ados ಎಂಬ ಎರಡು ಪದಗಳು ಸೇರಿ 'Nomad' ಎಂಬ ಪದ ರೂಪಗೊಂಡಿದೆ. Nomas ಮತ್ತು ados ಎಂದರೆ ಹುಲ್ಲುಗಾವಲುಗಳಿಗಾಗಿ ತಿರುಗಾಡುವುದು ಎಂದರ್ಥ. ಅಂದರೆ ಯಾವ ಜನಕ್ಕೆ ನಿಶ್ಚಿತ ವಾಸಸ್ಥಳವಿರುವುದಿಲ್ಲವೋ, ಯಾರು ವಲಸೆ ಜೀವನ ನಡೆಸುತ್ತಿರುವರೋ ಅವರು ಅಲೆಮಾರಿಗಳು"[೧] ಎಂದು ಪಿ ಕೆ ಮಿಶ್ರಾ ಅವರು ಹೇಳುತ್ತಾರೆ. ಅಲೆಮಾರಿ ಎಂಬ ಪದವು ಪಶುಪಾಲಕ ವೃತ್ತಿಯಿಂದ ಹುಟ್ಟಿದ ಕ್ರಿಯಾಧಾತುವಾಗಿದೆ.

ಪಾರಂಪರಕವಾಗಿ ಪಶುಪಾಲನೆಯನ್ನ ಅವಲಂಬಿಸಿಕೊಂಡು ತನ್ನ ಜೀವನಕ್ಕಾಗಿ ಕಾಡು ಮೇಡುಗಳಲ್ಲಿ ಸಂಚರಿಸುವವರನ್ನು ಅಲೆಮಾರಿಗಳು ಎಂದು ಕರೆಯುತ್ತಾರೆ. "ಅಲೆಮಾರಿ ಎಂಬ ಪದಕ್ಕೆ ತಮಿಳಿನಲ್ಲಿ ಪೊಕ್ಕನ್, ತುಳುವಿನಲ್ಲಿ ತೆಂಡುಳಿ, ತೆಲುಗಿನಲ್ಲಿ ತಿರುಗುಬೋತು, ಮಲೆಯಾಳಂನಲ್ಲಿ ತೆಂಡಿ, ಮರಾಠಿಯಲ್ಲಿ ಭಟಕ್ಯಾ, ಹಿಂದಿಯಲ್ಲಿ ಸಂಚಾರಿ, ಘುಮಂತು, ಗ್ರೀಕಿನಲ್ಲಿ ನೆಮಿನ್(Nemein), ಲ್ಯಾಟಿನ್‌ನಲ್ಲಿ ನೋವಾಸ್(Nomas), ಇಂಗ್ಲಿಷಿನಲ್ಲಿ ನೊವ್ಯಾಡ್(Nomad), ಜೊತೆಗೆ ಪರದೇಶಿ, ನೆಲೆಯಿಲ್ಲದವರು, ದೇಶ ಸಂಚಾರಿಗಳು, ಪರಸ್ಥಳದವರು, ಹೊರಗಡೆಯವರು, ಉಚಲ್ಯಾ, ಜಿಪ್ಸಿ, ಬೀಡು ಬಿಡುವವರು, ಗುಳೆ ಹೋಗುವವರು, ವಲಸಿಗರು, ಗಿರಿಜನರು, ಸನ್ಯಾಸಿಗರು ಎಂಬ ಇತ್ಯಾದಿ ಹೆಸರುಗಳಿಂದಲೂ ಕರೆಯಲಾಗುತ್ತದೆ. ಭಿಕ್ಷಾ ವೃತ್ತಿಯ ಹಿನ್ನೆಲೆಯಲ್ಲಿ ಇವರನ್ನು ತಮಿಳಿನಲ್ಲಿ ಪಿಚ್ಚೈಕರಾ, ಹಿಂದಿಯಲ್ಲಿ ಭಿಕಾರಿ, ಕನ್ನಡದಲ್ಲಿ ಭಿಕ್ಷುಕರೆಂತಲು ಗುರುತಿಸಲಾಗುವುದು. ಜನಪದರು ಇವರನ್ನು ಗೋಸಾಯಿ, ಜಂಗಾಲಿ, ಜಂಗಮ, ಜೋಗಿ, ದಾಸಯ್ಯ ಎಂತಲೂ ಕರೆಯುವರು"[೨]. ಮಾನವಶಾಸ್ತ್ರಜ್ಞರು ಆರಂಭದಲ್ಲಿ ಪಶುಪಾಲನೆಯ ಹಿನ್ನೆಲೆಯವರನ್ನು ಮಾತ್ರ ಅಲೆಮಾರಿ ಸಮುದಾಯದವರೆಂದು ಗುರುತಿಸಿದ್ದಾರೆ. ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾದ ಪ್ರಕಾರ ಅಲೆಮಾರಿತನವು ಒಂದು ಜೀವನ ವಿಧಾನ, ಬೇಟೆ ಮತ್ತು ಆಹಾರ ಸಂಗ್ರಹಣೆ, ಪಶುಪಾಲನೆ ಮಾನವ ಒಂದೆಡೆ ನೆಲೆಯೂರದೆ, ದಿಕ್ಕುದೆಸೆಯಿಲ್ಲದ ಅಥವಾ ಕಾಲಕ್ರಮಾನುಸಾರದ ಅಲೆಯುವಿಕೆಯನ್ನು ಅಲೆಮಾರಿತನ ಎನ್ನಲಾಗುತ್ತದೆ ಎಂದು ಅರ್ಥೈಸಿದೆ.

ಶುದ್ಧ ಮಾನವೀಯ ಮೌಲ್ಯಗಳು, ಸಾರ್ವತ್ರಿಕ ಮೌಲ್ಯಗಳು, ಸಮುದಾಯಿಕ ಕಲ್ಪನೆಗಳನ್ನು ಜೀವಂತವಾಗಿಟ್ಟುಕೊಂಡು ಸಮಕಾಲೀನ ಸಮುದಾಯಗಳ ನಡುವೆಯೂ ಜೀವಿಸುತ್ತಾ ಬಂದಿವೆ. ಇಂದಿಗೂ ಸಮುದಾಯಗಳ ಬದುಕು ಅಲೆದಾಟದಲ್ಲಿದೆ. ಬುಡ್ಗ ಜಂಗಮ್ ಮತ್ತು ಅಲೆಮಾರಿಗಳಲ್ಲಿ ಹೇರಳವಾದ ಪಾರಂಪರಿಕ ಜ್ಞಾನ ಸಂಪತ್ತಿದೆ. ಕೌಶಲ್ಯ, ದೈಹಿಕಶಕ್ತಿ, ಉತ್ಕೃಷ್ಟ ಸಾಹಿತ್ಯವಿದೆ. ಇಷ್ಟೆಲ್ಲಾ ಸಂಪತ್ತುಗಳಿದ್ದರೂ ಸ್ವಂತಕ್ಕೆ ವಾಸದ ನೆಲೆಯಿಲ್ಲದೆ ಬದುಕಿಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಅಲೆದಾಟ ತಪ್ಪಿಲ್ಲ. ನೆಲ-ನೆಲೆ-ಬೆಲೆ ಎಲ್ಲವನ್ನು ಕಳೆದುಕೊಂಡು ಆತಂಕದೊಂದಿಗೆ ೨೧ನೆಯ ಶತಮಾನದಲ್ಲಿ ಒಂದ್ಹೊತ್ತಿನ ಊಟಕ್ಕಾಗಿ ಪರದಾಡಬೇಕಾದ ಸ್ಥಿತಿಯನ್ನು ಅಲೆಮಾರಿ ಬುಡ್ಗ ಜಂಗಮರಲ್ಲಿ ಕಾಣಬಹುದು.

ಚರಿತ್ರೆಯಲ್ಲಿ ಅಲೆಮಾರಿಗಳು ವಿವಿಧ ರೂಪಗಳಲ್ಲಿ ಕಾಣಿಸಿಕೊಂಡಿದ್ದಾರೆ. "ನಿರಂತರ ಅಥವಾ ನಿಯಮಿತ ಅಲೆಮಾರಿ ಮತ್ತು ಅರೆ ಅಲೆಮಾರಿ ಸಮುದಾಯಗಳ ಅಥವಾ ಗುಂಪುಗಳ ಲಕ್ಷಣಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. **ಪಾರಂಪರಿಕ ವನ್ಯಜೀವಿಗಳ ಬೇಟೆ, ಪಳಗಿಸುವಿಕೆ ಮತ್ತು ಪ್ರದರ್ಶನ:** ಪಶುಪಾಲನೆ, ನಾಟಿವೈದ್ಯ, ಕಲಾ ಪ್ರದರ್ಶನದ ದೈವಾರಾಧನೆ, ಪ್ರದರ್ಶನ ಮತ್ತು ಭಿಕ್ಷಾಟನೆ ಇತ್ಯಾದಿಗಳಿಗಾಗಿ ಅಲೆಯುವುದು. ಉದಾಹರಣೆಗೆ– ಕರಡಿ, ಕೋತಿ, ಹಾವು, ನಂದಿಗಳ ಪ್ರದರ್ಶನ, ಕುರಿ, ಮೇಕೆ, ಕತ್ತೆ, ಹಂದಿ, ಒಂಟೆಗಳ, ಕೌಜುಗ ಪಾಲನೆ, ಹಗಲುವೇಷ, ಬುರ್ರಕಥೆ, ಗೊಂಧಳ, ದಾಸರಪದ, ಯಕ್ಷಗಾನ, ಬಯಲಾಟ, ತೊಗಲು ಗೊಂಬೆಯಾಟ, ದೊಂಬರಾಟ, ಮಾರಮ್ಮದೈವ ಇತ್ಯಾದಿಗಳ ಪ್ರದರ್ಶನ, ನಾಟಿವೈದ್ಯ, ಸಣ್ಣಪುಟ್ಟ ವಸ್ತುಗಳ ಮಾರಾಟ ಮತ್ತು ರಿಪೇರಿ, ಹಾಳಾದ ಪ್ಲಾಸ್ಟಿಕ್ ವಸ್ತುಗಳನ್ನು ಆರಿಸಿ ಮಾರಲು ನಡೆಸುವ ಅಲೆಮಾರಿ ಜೀವನ.

೨. ನಿರಾಡಂಬರ, ನಿಷ್ಕಪಟ, ಸಹಜ ಸರಳ ನಿರಕ್ಷರಿಗಳು. ಬಂಡವಾಳ ಶೂನ್ಯ ಅಥವಾ ಅಲ್ಪ ಬಂಡವಾಳದ ಕಾಯಕ ಜೀವನ.

೩. ಸರ್ವಚೇತನವಾದಿಗಳು, ಪ್ರಕೃತಿಯ ಅಗೋಚರ ಶಕ್ತಿಗಳ ಸಿದ್ಧಹಸ್ತರು.

೪. ಮರಗು ಭಾಷೆ ಅವಲಂಬಿತ ಮಾತೃಭಾಷಿಕರು.

೫. ಗುಡಿ ಗುಂಡಾರಗಳಲ್ಲಿ, ಬಯಲಿನ ಮರಗಿಡಗಳ ಕೆಳಗೆ ಅಥವಾ ನಗರಗಳ ಕೊಳಚೆ ಪ್ರದೇಶಗಳಲ್ಲಿ ಪ್ರತ್ಯೇಕ ಮತ್ತು ತಾತ್ಕಾಲಿಕ ವಾಸ."[೩]

ಈ ಮೇಲಿನ ಲಕ್ಷಣಗಳಿಂದ ಕೂಡಿದ ಅಲೆಮಾರಿ ಸಮುದಾಯಗಳಲ್ಲಿ ಬುಡ್ಗ ಜಂಗಮರು ಕಡುಬಡವರು, ಸರಳರು, ಮೋಸದ ವ್ಯವಹಾರ ಅರಿಯದವರು, ಮೋಸಕ್ಕೆ ಒಳಗಾದವರು ಮತ್ತು ಆಗುತ್ತಲಿದ್ದವರು. ಮಾನವ ಜನಾಂಗದ ಮೂಲಿಗರಾಗಿ ಬೇಟೆ ಬೆಟ್ಟವನ್ನು ಕಳೆದುಕೊಂಡು ಅತಂತ್ರದಲ್ಲಿದ್ದವರು. ಯಾರದೋ ಜಾಗದಲ್ಲಿ ಗುಡಾರ ಗುಡಿಸಿಲುಗಳನ್ನು ಹಾಕಿಕೊಂಡು ಬದುಕುತ್ತಿರುವಾಗ, ಜಾಗದ ಮಾಲಿಕ ಹೆದರಿಸಿದೊಡನೆ ಮತ್ಯಾರದೋ ಜಾಗದಲ್ಲಿ ಗುಡಾರ ಹಾಕಿ ಬದುಕಲು ವಲಸೆ(ಗುಳೆ) ಹೋಗುವರು.

ಈ ಬುಡ್ಗ ಜಂಗಮರಿಗೆ ಯಾವುದೇ ಆರ್ಥಿಕ ಭದ್ರತೆಗಳಿಲ್ಲ. ಇವರಲ್ಲಿ ಬಹುತೇಕ ಜನರು ಗ್ರಾಮೀಣ, ನಗರ, ಪಟ್ಟಣಗಳಿಗೆ ವಲಸೆ ಹೋಗಿ ಕಲೆಯನ್ನು ಪ್ರದರ್ಶಿಸಿ ಭಿಕ್ಷಾಟನೆ ಮಾಡುತ್ತಿದ್ದಾರೆ. ಅಂದು ಮೇಳ ಕಟ್ಟಿಕೊಂಡು ಇಂತಿಷ್ಟು ಹಳ್ಳಿಗಳಿಗೆ ಹೋಗಿ ಪ್ರದರ್ಶನ ಮಾಡಿ ಜೀವನ ಮಾಡುತ್ತಿದ್ದರು. ಆದರೆ ಇಂದು ಆಧುನಿಕತೆ ಪ್ರಭಾವದಿಂದ ಟಿವಿ ಮೊಬೈಲ್‌ಗಳು ಬಂದಾಗಿನಿಂದ ಈ ಪಾರಂಪರಿಕ ಕಲೆಗಳಿಗೆ ಸರಿಯಾದ ಪ್ರೋತ್ಸಾಹ ಇಲ್ಲದೆ ಎರಡುವೇಷ ಹಾಕಿಕೊಂಡು ಭಿಕ್ಷಾಟನೆಗೆ ಮಾಡಬೇಕಾದ ಸ್ಥಿತಿಗೆ ತಲುಪಿದೆ. ನಗರಗಳಲ್ಲಿ ಹೋಗಿ ಭಿಕ್ಷಾಟನೆ ಮಾಡುವ ಸಂದರ್ಭದಲ್ಲಿ ಇವರನ್ನು ಕಳ್ಳರು ಸುಳ್ಳರು ಎಂದು ಇವರ ಅಮಾಯಕತೆಯನ್ನು ಕೆಲವು ದರೋಡೆಕೋರರು ಇವರ ಮೇಲೆ ಸುಳ್ಳು ಆರೋಪ ಮಾಡಿ ಹೊಡೆದು ಜೈಲಿಗೆ ಹಾಕಿರುವ ಉದಾಹರಣೆಗಳು ಕಾಣಬಹುದಾಗಿದೆ. ಪ್ರಸ್ತುತ

ಸಂದರ್ಭದಲ್ಲಿ ಈ ಸಮುದಾಯವು ಬೀದಿಯಲ್ಲಿ ರಾಜರಂತೆ ವೇಷಹಾಕಿ ಪ್ರಭುಗಳನ್ನು ಒಪ್ಪಿಸಿಕೊಂಡು ಬದುಕಿದಂತಹ ಇವರು; ಇಂದು ಇವರ ಕಲೆಗೆ ಸರಿಯಾದ ಪ್ರೋತ್ಸಾಹ ಇಲ್ಲದೆ ಸ್ಟೀಲ್, ಸಿಲ್ವರ್, ಪ್ಲಾಸ್ಟಿಕ್ ಸಾಮಾನುಗಳನ್ನು ಮಾರುವುದು, ಹಳೇಸೀರೆ ಮಾರುವುದು, ಸ್ತ್ರೀಯರು ಪುರುಷರು ಬಳಸುವ ಒಳ ಉಡುಪುಗಳ ಬಟ್ಟೆಗಳನ್ನು, ಮೈ ಮತ್ತು ಬಟ್ಟೆ ತೊಳೆಯುವ ಸಾಬೂನುಗಳು(ಸಬ್ಬು), ಅಡುಗೆ ಮಸಾಲೆ ಪದಾರ್ಥಗಳು, ಶೌಚಾಲಯಕ್ಕೆ ಬಳಸುವ ಪೀನಾಯಿಲ್, ಎಲ್ಈಡಿ ಬಲ್ಬುಗಳು ಇನ್ನಿತರೆ ವಸ್ತುಗಳನ್ನು ಬೀದಿಯಲ್ಲಿ ವ್ಯಾಪಾರ ಮಾಡಬೇಕಾದ ಅನಿವಾರ್ಯತೆಯನ್ನು ನೋಡಬಹುದಾಗಿದೆ.

ಬುಡ್ಗ ಜಂಗಮರು ಕಲೆಯ ಮುಂದೆ ಮಹಾರಾಜರು, ಕಲೆಯ ಹಿಂದೆ ಭಿಕ್ಷಾಧಿಪತಿಗಳು. ಸ್ವಾಭಿಮಾನದ ಬದುಕು ಇವರಿಗೆ ಕನಸಾಗಿಯೇ ಉಳಿದಿದೆ. ಇಂತಹ ಅಲೆಮಾರಿ ಸಮುದಾಯಕ್ಕೆ ಸಂವಿಧಾನದ ಪರಿಶಿಷ್ಟ ಜಾತಿ ಮೀಸಲಾತಿ ಪಟ್ಟಿಯಲ್ಲಿ ದಾಖಲಾಗಿದ್ದರೂ ಈ ಸಮುದಾಯಕ್ಕೆ ಸಮಾಜಿಕ ನ್ಯಾಯ ಸಿಗಲಿಲ್ಲ. ಇವರ ಮೀಸಲಾತಿಯು ಕೆಲವು ಬಲಿಷ್ಠ ಸಮುದಾಯಗಳು ವಂಚಿಸುತ್ತಿವೆ.

**ಬುಡ್ಗ ಜಂಗಮ್ ಪದ ನಿಷ್ಪತ್ತಿ**

ಭಾರತ ದೇಶದಲ್ಲಿ ಸಮುದಾಯಗಳ ಕುರಿತಾಗಿ ಅವುಗಳ ಹೆಸರುಗಳು ಮತ್ತು ಸಮುದಾಯಗಳು ನಿರ್ವಹಿಸುವ ವೃತ್ತಿಗಳು, ಹಾಗೂ ಬೆಡಗು, ಬಂಧುತ್ವ, ಅನುವಂಶೀಯತೆಯ ಆಧಾರವಾಗಿಟ್ಟುಕೊಂಡು ಚರಿತ್ರೆಯ ಮೂಲವನ್ನು ಕಂಡುಕೊಳ್ಳುವ ಸಂಶೋಧನೆಗಳು ನಡೆದಿವೆ. ಪದನಿಷ್ಪತ್ತಿ ಶಾಸ್ತ್ರವು ಜನಪದಕಥೆ, ಪುರಾಣ, ಮೌಖಿಕ ಸಾಹಿತ್ಯ, ವೃತ್ತಿಗಳು, ವಲಸೆ ಪ್ರಕ್ರಿಯೆ ಇತ್ಯಾದಿಗಳ ಹಿನ್ನೆಲೆಯಲ್ಲಿ ಸಮುದಾಯಗಳ ಚರಿತ್ರೆಯನ್ನು ತಿಳಿಯಬಹುದು. ಬುಡ್ಗ ಜಂಗಮರನ್ನು ಬುಡ್ಗ ಜಂಗಾಲು, ಬೇಡ(ಬುಡ್ಗ) ಜಂಗಾಲು, ಬೇಡ(ಬುಡ್ಗ) ಜಂಗಮ, ಬೇಡ ಜಂಗಮ್, ಬುಡ್ಗ ಜಂಗಮ್ ಎಂದೂ ಪ್ರಾದೇಶಿಕವಾಗಿ ಕರೆಯುತ್ತಾರೆ. ಬುಡ್ಗ ಜಂಗಮ್ ಸಮುದಾಯದ ಪದನಿಷ್ಪತ್ತಿಯನ್ನು ಈ ಕೆಳಗೆ ವಿವರಿಸಲಾಗಿದೆ.

"ಕರ್ನಾಟಕದ ಜಾತಿ ವ್ಯವಸ್ಥೆಯನ್ನು ಕುರಿತು ಬರೆಯುವಾಗ ತಮಿಳು, ತೆಲುಗು, ಮಲೆಯಾಳಂ ಮೊದಲಾದ ದ್ರಾವಿಡ ಭಾಷಿಕ ಜಾತಿ ಬುಡಕಟ್ಟುಗಳ ಬಗೆಗೂ ಅಭ್ಯಾಸ ಮಾಡುವುದು ಅನಿವಾರ್ಯ, ಕನ್ನಡ ಭಾಷಿಕ ಬುಡಕಟ್ಟು ಮತ್ತು ಕುಲಗಳು ತಮ್ಮಷ್ಟಕ್ಕೆ ತಾವು ಸ್ವತಂತ್ರವೂ, ಸ್ವಾಯತ್ತವೂ ಅಲ್ಲ. ಭಾಷೆ ಗಡಿಗಳ ಮೇರೆಯನ್ನು ಸತತವಾಗಿ ಮೀರುತ್ತಿದ್ದ ಸ್ವಾಭಾವ ದ್ರಾವಿಡ ಕುಲಗಳಿಗಿತ್ತು. ಭಾಷೆಗಳಲ್ಲಿ ಪ್ರತ್ಯೇಕ ಅಸ್ತಿತ್ವ ಹುಟ್ಟಿಕೊಂಡಿದ್ದೇ ಭೌಗೋಳಿಕ ಕಾರಣದಿಂದಾಗಿ"[೪] ಈ ಹಿನ್ನೆಲೆಯಲ್ಲಿ 'ಬುಡ್ಗ' ಮತ್ತು 'ಬೇಡ' ಜಂಗಮ್ ಎಂಬ ಪದಗಳು ಹುಟ್ಟಿಕೊಂಡಿರುವುದು ಅವರು ನೆಲೆಸಿರುವ ಮೂಲ ಭೌಗೋಳಿಕ ಪ್ರದೇಶದ ಭಾಷಿಕ ಹಿನ್ನಲೆಯನ್ನುಸಾರವಾಗಿ ಈ ಪದಗಳು ದ್ರಾವಿಡ ಭಾಷಾ ಪದಗಳಾಗಿವೆ.

**ಕನ್ನಡ ಕಸ್ತೂರಿ ಕೋಶದಲ್ಲಿ** 'ಬುಡ' ಎಂಬ ಪದಕ್ಕೆ ತಳ, ಆದಿ, ಕೆಳಭಾಗ, ವಂಶ ಎಂದು ಅರ್ಥೈಸಿದೆ. ರೆವರೆಂಡ್ ಎಫ್ ಕಿಟ್ಟಲ್ ಅವರು ತಮ್ಮ "A Kannada-English Dictionary (೧೮೯೪)"ಯಲ್ಲಿ 'ಬುಡ' ಎಂದರೆ 'ಡಮರು' ಎಂದು ಅರ್ಥೈಸಿದೆ. 'ಡಮರು' ಎಂದರೆ ಬುಡ್ಗ ಜಂಗಮರು ನುಡಿಸುವ ಬುಡ್ಗ ವಾದ್ಯ. 'ಬುಡ್ಗ' ಎಂದರೆ ಬುರ್ರಕಥಾ ಕಲಾಪ್ರಕಾರದಲ್ಲಿ ಬಹುಮುಖ್ಯವಾಗಿ ಬಳಸುವ ಒಂದು ಸಂಗೀತದ ವಾದ್ಯ*(ಭಾ:೩.೧)*.

**ರೆವರೆಂಡ್ ಎಫ್ ಕಿಟ್ಟಲ್ ಅವರ** "A Kannada-English Dictionary (೧೮೯೪)"ರಲ್ಲಿ 'ಬೇಡ' ಎಂಬ ಪದವು ಇಂಗ್ಲೀಷ್‌ನಲ್ಲಿ A huntsman ಎಂದು, ಬೇಟೆಯಾಡುವ ವ್ಯಕ್ತಿ ಅಥವಾ ಬೇಟೆಗಾರ ಎಂದು ಅರ್ಥೈಸಿದ್ದಾರೆ.

**ಕೆ ಎಸ್ ಸಿಂಗ್ ಅವರು** Anthropological Survey of India. The Scheduled Castes ಎಂಬ ಕೃತಿಯಲ್ಲಿ 'The Beda/Budga Jangam were a community of hunters' ಬೇಟೆಯಿಂದ ಜೀವನಾರಂಭಿಸಿದ ಇವರನ್ನು ಬೇಡ ಬುಡ್ಗ ಜಂಗಮರು ಎಂದು ಕರೆದಿದ್ದಾರೆ.

**ಡಾ ಕೆ ಎಂ ಮೇತ್ರಿಯವರು** ಬುಡ್ಗ ಜಂಗಮ್ ದರ್ಶಿನಿ ಎಂಬ ಕೃತಿಯಲ್ಲಿ ಬೇಟೆಗಾರಿಕೆಯ ಪ್ರಾರಂಭದ ಜನರೇ ಬುಡರು. ಬುಡರೇ ಕಾಲಾಂತರದಲ್ಲಿ ಬುಡ್ಗರಾದರು ಎಂದು ಹೇಳುತ್ತಾರೆ.

**ಪಾಣ್ಯಂ ರಾಮಶೇಷಶಾಸ್ತ್ರಿ** ಅವರ ತೆಲುಗು-ಕನ್ನಡ ನಿಘಂಟು ಶಬ್ದಕೋಶದಲ್ಲಿ **"ಬೇಡ"** ಎಂದರೆ ಎರಡಾಣೆ; ೧೭೮೦ನೇ ಇಸವಿಯಲ್ಲಿ ಚಲಾವಣೆ ಇದ್ದ ನಾಣ್ಯವಾಗಿದೆ, ಇದರ ಮುಖಬೆಲೆ ೧/೮ ನೇ ರೂಪಾಯಿ ಎಂದರ್ಥ ನೀಡಿದೆ"[೫] ತೆಲುಗು ಭಾಷೆಯಲ್ಲಿ **'ಬೇಡ'** ಎಂಬ ಪದಕ್ಕೆ **ರೆಂಡುಅಣಾಲು** ಎಂದು ಕರೆಯುತ್ತಾರೆ. *(ಭಾ:ಃ.೨).* ಬೇಡ (ಎರಡಾಣೆ)ನಾಣ್ಯವು ಬ್ರಿಟಿಷರ ಕಾಲದ ನಾಣ್ಯವಾಗಿದೆ.

ತೆಲುಗು ಭಾಷಿಕ ಪ್ರದೇಶದ ವಿವಿಧ ಬಿಳ್ಳ(ನಾಣ್ಯ)ಗಳ ಮಾನಗಳು ಈ ಕೆಳಕಂಡಂತೆ ಅರ್ಥ ನೀಡಿದೆ. (ಒಂದು ದಮ್ಮಡಿ =೦.೫೨೦೮೩೩ paise, ಒಂದು ಕಾನಿ =೧.೫೬೨೫, ಒಂದು ಪರಕ =೩.೧೨೫ ಪೈಸಾ, ಒಂದು ಅಣಾ=೬.೨೫ ಪೈಸಾ, **ಒಂದು ಬೇಡ =೧೨.೫ ಪೈಸಾ (೨ Anna),** ಒಂದು ಪಾವಲ =೨೫ ಪೈಸಾ, ಒಂದು ಅರ್ಧ ರೂಪಾಯಿ =೫೦ Paise,(8 Anna ಎಂಟಾಣೆ), ಒಂದು ರೂಪಾಯಿ =೧೦೦ Paise (16 Anna), ೨ ರೂಪಾಯಿ, ೫ ರೂಪಾಯಿ, ೧೦ ರೂಪಾಯಿ ನಾಣ್ಯಗಳು)

**ಡಾ ಮಿಕ್ಕಿಲಿನಿ ರಾಧಕೃಷ್ಣಮೂರ್ತಿ** ಅವರು 'ತೆಲುಗುವಾರಿ ಜಾನಪದ ಕಲಾರೂಪಾಲು' ಎಂಬ ಕೃತಿಯಲ್ಲಿ ಬುಡ್ಗ ಜಂಗಲಾರು ಹೇಳುವ ಬುರ್ರಕಥೆಗಳಿಗೆ 'ಜಂಗಂ' ಕಥೆಗಳು ಎಂದು ಕರೆಯುತ್ತಾರೆ. ಈ 'ಜಂಗಂ' ಕಥೆಗಳನ್ನು ಹೆಚ್ಚಾಗಿ ಜಂಗಾಲರೇ ಹೇಳುವುದರಿಂದ ಇವುಗಳಿಗೆ 'ಜಂಗಂ' ಕಥೆಗಳು ಎಂದು ಹೇಳಿದ್ದಾರೆ. "ಬುಡ್ಗ ಜಂಗಾಲರು, ಹರಿಜನ, ಗಿರಿಜನ, ಮಾಲ ಮಾದಿಗರ ಮತ್ತು ಅತ್ಯಂತ ಹಿಂದುಳಿದ ಅಲ್ಪಸಂಖ್ಯಾತ ಸಮುದಾಯಗಳ ಮನೆಯಲ್ಲಿ ಯಾರಾದರೂ ಸಾವನ್ನಪಿದರೆ, ಶವಸಂಸ್ಕಾರದ ಸಂದರ್ಭದಲ್ಲಿ ಶವದ ಮುಂದೆ ಶಂಖವನ್ನು ಊದುತ್ತಾ ಗಂಟೆಯನ್ನು ಭಾರಿಸುತ್ತಾ ಸ್ಮಶಾನದವರೆಗೂ ಹೋಗಿ ಶವಸಂಸ್ಕಾರದ ಕಾರ್ಯಗಳನ್ನು ನೆರವೇರಿಸುತ್ತಿದ್ದರಿಂದ ಜನರು ಸಂಭಾವನೆಯಾಗಿ 'ಬೇಡ'(ಎರಡಾಣೆ) ಹಣವನ್ನು ನೀಡುತ್ತಿದ್ದರು. ಬೇಡ ಹಣವನ್ನು ನೀಡಿದರೆ ಮಾತ್ರ ಜನರನ್ನು ಚೆನ್ನಾಗಿ ಹೊಗುಳುತ್ತಾರೆ. ಹೀಗಾಗಿ ಬುಡ್ಗ ಜಂಗಮರಿಗೆ ಬೇಡ ಬುಡ್ಗ ಜಂಗಮರು ಎಂದು ಕರೆಯುತ್ತಾರೆ ಎಂದು ಡಾ ಮಿಕ್ಕೇಲೇನಿ ರಾಧಕೃಷ್ಣ ಮೂರ್ತಿ ಅವರು ಹೇಳುತ್ತಾರೆ"[೬].

ಬೇಡ ಬುಡ್ಗರ 'ಜಂಗಮ್' ಪದವನ್ನು ಜಂಗಾಲ್, ಜಗಂ, ಜಂಗಮ್, ಜಂಗಮೋಳು, ಜಂಗಮ ಎಂದು ಜನಪದರು ಸಾಂಧರ್ಭಿಕನುಸಾರವಾಗಿ ಬಳಿಸಿದ್ದಾರೆ. ಜಂಗಲ್ ಮತ್ತು ಜಂಗಮ ಪದಗಳ

ಅರ್ಥವು **ಸಂಕ್ಷಿಪ್ತ ಕನ್ನಡ ನಿಘಂಟು ಪ್ರಕಾರ** ಜಂಗಲ್(ನಾ) ಎಂದರೆ ಕಾಡು; ಅರಣ್ಯ ಎಂದು, 'ಜಂಗಮ' ಎಂದರೆ ಚಲನೆಯುಳ್ಳದು, ಸಂಚಾರವುಳ್ಳದು, ಲೋಕಸಂಚಾರಿ ಎಂದು ಅರ್ಥೈಸಿದೆ.

**ಪ್ರೊ ಬಿರುದು ರಾಮರಾಜುರವರ** "ತೆಲುಗು ಜಾನಪದ ಗೇಯ ಸಾಹಿತ್ಯಂ" ಎನ್ನುವ ಕೃತಿಯಲ್ಲಿ ಈ ಸಮುದಾಯವನ್ನು ಕುರಿತು "ಬುಡಿಗೆ" ಎನ್ನುವ ವಾದ್ಯವನ್ನು ನುಡಿಸುತ್ತಾ ಕಥೆ ಹೇಳುವ ಜನರನ್ನು "ಬುಡ್ಗ ಜಂಗಾಲು" ಎಂದು ಕರೆದಿದ್ದಾರೆ.

**ಮರವೂರು ಕೋದಂಡ ರಾಮರೆಡ್ಡಿ** ಅವರು "ಮಾಂಡಲಿಕ ಪದಕೋಶಂ" ಎನ್ನುವ ಗ್ರಂಥದಲ್ಲಿ "ತಂದನಾ" ಕಥೆಗಳನ್ನು ಹೇಳಿ ಜೀವಿಸುವ "ಬುಡಿಗೇಲು" ವಾದ್ಯವನ್ನು ನುಡಿಸುತ್ತಾ ಭಿಕ್ಷೆ ಎತ್ತುವವರು "ಬುಡ್ಗ ಜಂಗಾಲು" ಎಂದು ಹೇಳಿದ್ದಾರೆ***(ಛಾ:೩.೩)***.

**ಆರ್ ವಿ ಎಸ್ ಸುಂದರಂ ಅವರು** 'ಆಂಧ್ರುಲ ಜಾನಪದ ವಿಜ್ಞಾನಂ' ಎಂಬ ಕೃತಿಯಲ್ಲಿ ಬುಡ್ಗ ಜಂಗಮರು ಹೇಳುವ ಬೊಬ್ಬಿಲಿ ಕಥೆ, ಕುಮಾರರಾಮನ ಕಥೆ, ಬಾಲನಾಗಮ್ಮನ ಕಥೆ ಇತ್ಯಾದಿ ಕಥೆಗಳನ್ನು ಹಾಡುವ ಕಥೆಗಳಿಗೆ **'ಜಂಗಮ್'** ಕಥೆಗಳು ಎಂದು ಉಲ್ಲೇಖಿಸಿದ್ದಾರೆ. ಈ ಮೇಲಿನ ತಜ್ಞರ ಹೇಳಿಕೆಗಳು ಮತ್ತು ಬುಡ್ಗ ಜಂಗಮ್ ಸಮುದಾಯದ ವೃತ್ತಿ ಮತ್ತು ಜೀವನಾವರ್ತಕ ಆಚರಣೆಗಳ ಹಿನ್ನೆಲೆಯಲ್ಲಿ ನೋಡಿದಾಗ, ಮಾಂಸಹಾರಿಗಳಾದ ಬುಡ್ಗ ಜಂಗಮರು ಬೇಟೆಯಾಡುವ ಸಂಸ್ಕೃತಿ ಮತ್ತು ಜೀವನಾವರ್ತಕ ಆಚರಣೆಯಲ್ಲಿ ಎರಡಾಣೆ(ಬೇಡ) ನಾಣ್ಯವು ಪ್ರಮುಖ ಪಾತ್ರವಹಿಸಿದೆ.

ಬೇಟೆಯಿಂದ ಜೀವನಾರಂಭಿಸಿದ ಹಾಗೂ ಧಾರ್ಮಿಕ ಕ್ರಿಯಾವಿಧಾನಗಳಲ್ಲಿ ಮತ್ತು ಜೀವನಾರ್ತಕ ಆಚರಣೆಗಳಲ್ಲಿ ಎರಡಾಣೆ(ಬೇಡ) ನಾಣ್ಯವನ್ನು ಬಳಸುವುದರಿಂದ ಮತ್ತು ಈ ಸಮುದಾಯದ ಪ್ರಮುಖ ಸಂಗೀತದ ವಾದ್ಯವಾದ **'ಬುಡ್ಗ'** ವಾದ್ಯದಿಂದ ಕಥೆ ಕಲಾ ಪ್ರದರ್ಶನದಿಂದ ಜೀವನ ಸಾಗಿಸುವವರನ್ನು ಬೇಡ ಬುಡ್ಗ ಜಂಗಮರು ಎಂದು ಕರೆದಿದ್ದಾರೆ.

**ಸಮುದಾಯದ ಚಾರಿತ್ರಿಕ ಹಿನ್ನೆಲೆ**

**೧೯೦೯ರಲ್ಲಿ ಎಡ್ಗರ್ ಥರ್ಸ್ಟನ್ ಮತ್ತು ರಂಗಚಾರಿ ಕೆ ಅವರು** ತಮ್ಮ "The Castes and Tribes of Southern India" ಎಂಬ ಕೃತಿಯಲ್ಲಿ ಬುಡ್ಗ ಜಂಗಮರನ್ನು(ಹಗಲುವೇಷದವರನ್ನು) ಕುರಿತು (Pagati vesham) "A class of Telugu beggars, who put on disguises(vesham) while begging (Madras Census report 1901) At he annual festival at Thirupati in honour of the godess Gangamma, Custom requires the people to appear in a different disguise every morning and evening. These disguise include those of a Bairagi, serpent etc"[೭] ಎಂದು ಬರೆಯುತ್ತಾರೆ. ತಿರುಪತಿ ಗಂಗಮ್ಮ ಎನ್ನುವ ದೇವತೆಯ ಗೌರವಾರ್ಥ ನಡೆಯುವ ವಾರ್ಷಿಕ ಜಾತ್ರೆಯಲ್ಲಿ ಪ್ರತಿದಿನ ಬೆಳಿಗ್ಗೆ ಸಂಜೆ ಬೈರಾಗಿ, ಸರ್ಪಧಾರಿ ಶಿವನ ವೇಷ ಮುಂತಾದ ಬೇರೆ ಬೇರೆ ವೇಷ ಧರಿಸಿ ಭಿಕ್ಷೆ ಎತ್ತುವ ತೆಲುಗು ಭಿಕ್ಷುಕ ವರ್ಗದವರನ್ನು ಹಗಲು ವೇಷದವರು (ಬುಡ್ಗ ಜಂಗಮರು) ಎಂದು ಥರ್ಸ್ಟನ್ ದಾಖಲಿಸಿದ್ದಾರೆ.

೧೯೨೦ರಲ್ಲಿ ಸೈಯದ್ ಸಿರಾಜ್ ಉಲ್ ಹಸನ್ ಅವರು The Cast and Tribes of H E H the Nizam's Dominions, ಎಂಬ ಗ್ರಂಥದಲ್ಲಿ Mendicants Telegas ಎಂಬ ಲೇಖನದಲ್ಲಿ ಬುಡ್ಗ ಜಂಗಮರನ್ನು "Tolubommalawaru Also called Badgi Jangam, earn money by exhibiting idols of leather and by a skilful contrivance making them dance to the music of cymbals and drums. They are recruited from the Munnur caste. They are. also said to be the illegitimate descendants of a Jangam father>and a Golla mother."[೮] ತೊಗಲುಗೊಂಬೆಯಾಡಿಸುವ ಕಲಾವಿದರನ್ನು ಬುಡ್ಗ ಜಂಗಮರು ಎಂದು ದಾಖಲಿಸಿದ್ದಾರೆ. ಪ್ರಾಣಿಗಳ ಚರ್ಮದಿಂದ ತೊಗಲುಗೊಂಬೆಗಳನ್ನು ಮತ್ತು ಸಂಗೀತ ನುಡಿಸುವ ಚರ್ಮ ವಾದ್ಯಗಳ್ನು ತಯಾರಿಸುವ ಅದ್ಭುತ ಕಲೆಯನ್ನು ಹೊಂದಿದ್ದಾರೆ ಎಂದು ಹೇಳಿದ್ದಾರೆ.

ತೆಲುಗು ಭಿಕ್ಷುಕ ವರ್ಗದ ಶಾರದಗಾಳು ಎನ್ನುವ ಇವರು ಎಡಗೈಯಲ್ಲಿ ಅಂದೇಲು ಎನ್ನುವ ಗಗ್ಗರಿ ವಾದ್ಯ, ಬಲಗೈಯಲ್ಲಿ ತಂಬೂರಿ, ಮತ್ತೊಂದು ಸೋರೆಕಾಯಿಯಂತಿರುವ ಟೊಳ್ಳಾದ ಹಿತ್ತಾಳೆಯ 'ಬುಡ್ಗ'ವಾದ್ಯವನ್ನು ನುಡಿಸುತ್ತಾ ಶ್ರೀರಾಮಚಂದ್ರನ ಹಾಗೂ ಧರ್ಮ ಗ್ರಂಥಗಳ ಕಥೆಗಳನ್ನು ಹೇಳುತ್ತಾರೆ. ಅವರು ಕರಿಮಣಿ 'ನಲ್ಲಪುಸಲು' ಎಂಬ ಸರವನ್ನು ಧರಿಸುತ್ತಾರೆ. ಮಾಂಸ ಮತ್ತು ಮದ್ಯವನ್ನು ಸೇವಿಸುತ್ತಾರೆ. ಇವರಲ್ಲಿ ಕುಲಪಂಚಾಯಿತಿಯಿಂದ ತಮ್ಮ ವ್ಯಾಜ್ಯಗಳನ್ನು ಬಗೆಹರಿಸಿಕೊಳ್ಳುತ್ತಾರೆ. ತಮ್ಮ ಸಮುದಾಯದೊಳಗೆ ಮಾತ್ರ ಮದುವೆಯಾಗುತ್ತಾರೆ. ಮಹಿಳೆಗೆ ಮರು ಮದುವೆ ಮತ್ತು ಬಹುಪತ್ನಿತ್ವ ಪದ್ಧತಿ ಇವರಲ್ಲಿ ಜಾರಿ ಇದೆ. ಇವರ ಧಾರ್ಮಿಕ ಕಾರ್ಯಗಳಿಗೆ ಬೇರೆ ಸಮುದಾಯಗಳಂತೆ ಬ್ರಾಹ್ಮಣ, ಸ್ವಾಮಿ, ಜಂಗಮರನ್ನು ನೇಮಿಸುವುದಿಲ್ಲ. ಎಲ್ಲಾ ಕಾರ್ಯಗಳನ್ನು ಸಮುದಾಯದ 'ಕುಲಪೆದ್ದಲು'(ಹಿರಿಯರು) ನೆರವೇರಿಸುತ್ತಾರೆ. ಇವರು ಪೋಚಮ್ಮ, ಎಲ್ಲಮ್ಮ, ಯಾಸಿಡಮ್ಮ ಮುಂತಾದ ಸ್ತ್ರೀದೇವತೆಗಳನ್ನು ಆರಾಧಿಸುತ್ತಾರೆ. ಸತ್ತವರನ್ನು ಕುಳಿತುಕೊಳ್ಳುವ ಭಂಗಿಯಲ್ಲಿ ಹೂಳುತ್ತಾರೆ. ಡೇರೆಗಳನ್ನು ಹಾಕಿಕೊಂಡು ನಿರಂತರವಾಗಿ ಅಲೆಮಾರಿಗಳಾಗಿ ಅಲೆದಾಡುತ್ತಾ ಎಂಟು ತಿಂಗಳಿಗೊಮ್ಮೆ ತಮ್ಮ ಮೂಲ ಸ್ಥಳದ ಒಂದು ಕಡೆ ಸೇರುತ್ತಾರೆ. ಇವರು ಸಮಾಜದಲ್ಲಿ ತುಂಬಾ ಕಡಿಮೆ ಸ್ಥಾನದಲ್ಲಿದ್ದಾರೆ. ಸಾಮಾಜಿಕವಾಗಿ ತುಂಬಾ ಹಿಂದುಳಿದಿದ್ದಾರೆ. ಇವರು ಹಂದಿ, ಕುರಿ ಕೋಳಿ, ಮೀನು, ಅಳಿಲು ಮುಂತಾದ ಕಾಡುಪ್ರಾಣಿಗಳನ್ನು ತಿನ್ನುತ್ತಾರೆ ಎಂದು ದಾಖಲಿಸಿದ್ದಾರೆ. ಒಂದೇ ಕೃತಿಯಲ್ಲಿ ಇವರ ತೊಗಲುಗೊಂಬೆಯಾಟದವರೆಂದು ಮತ್ತೊಂದು ಕಡೆ ಶಾರದಗಾಳು ಎಂದು ಗುರುತಿಸಿದ್ದಾರೆ. ಕರ್ನಾಟಕದಲ್ಲಿ ತೊಗಲುಗೊಂಬೆಯಾಡಿಸುವ ಮತ್ತೊಂದು ವರ್ಗ ಶಿಳ್ಳೆಕ್ಯಾತ/ಕಿಳ್ಳೆಕ್ಯಾತ ಸಮುದಾಯವು ಇದೆ. ಪ್ರಾರಂಭದಲ್ಲಿ ಬುಡ್ಗ ಜಂಗಮರು ತೊಗಲುಗೊಂಬೆಯಾಟ, ಚಕ್ಕೆ ಗೊಂಬೆಯಾಟ, ಗಂಗಿಗೌರಿಗಾಯನ, ಬುರ್ರಕಥಾ ಕಲೆಯನ್ನು ಪ್ರದರ್ಶಿಸುತ್ತಿದ್ದರಿಂದ ಇವರನ್ನು ತೊಗಲುಗೊಂಬೆಯಾಟದವರು, ಶಾರದಗಾಳು ಎಂದು ಕರೆದಿದ್ದಾರೆ.

೧೯೯೩ರಲ್ಲಿ ಕೆ ಎಸ್ ಸಿಂಗ್ ಅವರು 'ಪೀಪಲ್ ಆಫ್ ಇಂಡಿಯಾ'ದ The Scheduled Castes ಎಂಬ ಪುಸ್ತಕದಲ್ಲಿ ಮಾನವ ಕುಲವಿವರಣಾ ವಿಜ್ಞಾನದ ಹಿನ್ನೆಲೆಯಲ್ಲಿ ಅಧ್ಯಯನಿಸಿ ಈ

ಸಮುದಾಯವು ಆಂಧ್ರದ ಕರಾವಳಿ, ರಾಯಲ್‌ಸೀಮಾ ಮತ್ತು ತೆಲಂಗಾಣ ಪ್ರದೇಶದಲ್ಲಿ ಹರಡಿದ್ದು, ಇವರು ಬುಡ್ಗ ಜಂಗಮ/ಬೇಡ ಜಂಗಮ ಎಂಬ ಹೆಸರಿನಿಂದ ಗುರುತಿಸಲ್ಪಟ್ಟಿದ್ದಾರೆ. ಬೇಡ ಜಂಗಮ್‌ರು ಎಂದರೆ ಬುಡ್ಗ ಜಂಗಮರು ಎಂದು ಅರ್ಥ, ಹೀಗಾಗಿ ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಬೇಡ(ಬುಡ್ಗ) ಜಂಗಮ್ ಎಂದು ದಾಖಲಿಸಿದ್ದಾರೆ. ಅವರು ತೆಲುಗು ಭಾಷೆ ಮಾತನಾಡುತ್ತಾರೆ. ಇವರು ಮಾಂಸಹಾರಿಗಳಾಗಿದ್ದು, ಮದ್ಯ ಸೇವನೆ ಮಾಡುತ್ತಾರೆ. ಇವರಿಗೆ ಇಂಟಿಪೇರ್ಲು ಎಂದರೆ ಅಡ್ಡ ಹೆಸರುಗಳಿವೆ. ಅವು ಗಂಧಂ. ಧೂಪಂ, ಅಶ್ವ, ಯಡವಲಿ, ಮೋತಿ, ಕಲ್ಯಾಣಂ, ಪಾಡೋಳ್ಳು, ಪಸ್ತಮೋಳು, ಮುಗ್ಗೋಳು, ತಿರುಪಾಟಿ, ಹೀಗೆ ಮುಂತಾದವುಗಳು. ಈ ಅಡ್ಡ ಹೆಸರು ಅಥವಾ ಬಳಿಗಳಿಂದಲೇ ಮದುವೆ ಸಂಬಂಧಗಳನ್ನು ಬೆಳೆಸುತ್ತಾರೆ. ಇವರು ಕುಲದ ಹಿರಿಯರನ್ನು **ಕುಲಪೆದ್ದ** ಎಂದು ಕರೆಯುತ್ತಾರೆ. ಇವರಲ್ಲಿ ನ್ಯಾಯ ಪಂಚಾಯಿತಿ, ಮದುವೆ ಇವನ ಸಮ್ಮುಖದಲ್ಲಿಯೇ ನಡೆಯುತ್ತವೆ. ಇವರು ಚಾಪೆ ಹೆಣೆಯುವುದರಲ್ಲಿ ನಿಸ್ಸಿಮರು. ಇವರು ಜನಪದ ಕಥೆಗಳನ್ನು ಹೇಳುವ ವೃತ್ತಿ ಕಲಾವಿದರಾಗಿದ್ದಾರೆ. ಈ ಸಮುದಾಯ ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ, ಶೈಕ್ಷಣಿಕ ಹೀಗೆ ಎಲ್ಲ ಕ್ಷೇತ್ರಗಳಲ್ಲಿ ಹಿಂದುಳಿದಿದ್ದಾರೆ. ಭಾರತದ ಸಂವಿಧಾನಾತ್ಮಕ ಸೌಲಭ್ಯಗಳಿಂದ ವಂಚಿತವಾಗಿದೆ"[೧೦] ಎಂದು ದಾಖಲಿಸಿದ್ದಾರೆ.

### ಬುಡ್ಗ ಜಂಗಮ್ ಸಮುದಾಯದ ತಾಮ್ರ ಪತ್ರದಲ್ಲಿ ಉಲ್ಲೇಖ

ಬುಡ್ಗ ಜಂಗಮರಲ್ಲಿ ದೊರೆತ ಒಂದು ತೆಲುಗು ತಾಮ್ರ ಪತ್ರದ ವಿಷಯವಸ್ತು ಈ ಕೆಳಗಿನಂತೆ ಇದೆ.

'ಪರ್ವತ ಸಿಂಹಾಸನಂ'

ತೇದಿ ೧೭.೪.೧೭೩೪: ಗರುವಾರ್ತ್ರಂ

ಶ್ರೀ ಜಯವತ್ಯಧಾರಯಕುರಾಮ ವೈರಾಗ್ಯ ಸಿಂಘಾನ ನಾದಸ್ಕರ ಜಗದ್ಗುರು ಚರಪಟ್ಟಾಧ್ಯಕ್ಷ ಇಚ್ಚಿನ ಲಿಂಗ ಶಿವಾಚಾರ್ಯ ಮದಾಸ್ಕ ಮುಲೂರಿ ಅಧಿಕಾರ ಸ್ಥಾನಮುನುಂಚಿ. ನಿಜಾಮಯಿಲಾಖ ವನಪರ್ತಿಸಂಸ್ಥಾನ 'ಕೃಷ್ಟಾರೆಡ್ಡಿಪ್ಯಾಟ ಗ್ರಾಮ ಮುವುಂಡು ಗಣಾಯತಿ ಜಂಗಾಲು ಕಲ್ಯಾಣಂ ರಾಮಲಿಂಗಕು ಯಿಚ್ಚಿನ

(ಹುಕುಂ)

ಇಮಂತ್ಕೆಲ ಮಠಂ, ಶಂಶಾಬಾದ ಬಂಗಾರಿ ನೀಲಕಂಠ ಸ್ವಾಮಿ ಯಿಚ್ಚಿನ ಬಿರುದುಲು ರೂಪು ರುದ್ರಾಕ್ಷ ಕುಂಕುಮ ಪಸುಪು ಭಸ್ಮ ಅಡ್ಡಬೊಟ್ಟು ವೀರಗಂಧಮು ಇರ್ನಮುನಗಾರ ತಾಲಂಗುರ್ಪ ವೇಷಂಧರಿಂಚಿನಪ್ಪುಡು ಯವರು ಆಕ್ಷೇಪಿಂಚ ಕೂಡದು ಆಟ್ಟು ಅತಪನ ಚೇಸಿನಟ್ಟು ಐತೆ ಸಂಸ್ಥಾನಮಕು ತೆಲುಪವಲೆನು..

(ಸಹಿ)

ಈ ತಾಮ್ರ ಪತ್ರದ ಶಾಸನವು ಅಧಿಕಾರಿ ಪತ್ರವಾಗಿದ್ದು, ತೆಲುಗು ಭಾಷೆಯಲ್ಲಿ ಬರೆಯಲ್ಪಟ್ಟಿದೆ. 'ನಿಜಾಮ ಇಲಾಖೆಯ ವನಪರ್ತಿ ಸಂಸ್ಥಾನದ ಕೃಷ್ಣಾರೆಡ್ಡಿ ಪೇಟೆ ಗ್ರಾಮದಲ್ಲಿರುವ ಗಣಾಯತಿ ಜಂಗಮ ಕುಲದ ಕಲ್ಯಾಣ ರಾಮಲಿಂಗನಿಗೆ ನೀಡಿದ ಹುಕುಂ(ಆದೇಶ) ಪತ್ರವಾಗಿದೆ. ಯಮಂತ್ಕಲ ಮಠದ ಶಂಶಾಬಾದ್ ಬಂಗಾರಿ ನೀಲಕಂಠಸ್ವಾಮಿ ನೀಡಿದ ಬಿರುದು(ಲಾಂಛನ)ರೂಪ ರುದ್ರಾಕ್ಷಿ ಕುಂಕುಮ ಅರಿಸಿಣ ವಿಭೂತಿ ಆಡ್ಡಬೊಟ್ಟು ವೀರಗಂಧ ಧರಿಸಿದ ನಗಾರಿ ತಾಳ ಸೇರಿ ವೇಷಧರಿಸಿದಾಗ ಯಾರೂ ಆಕ್ಷೇಪಿಸಬಾರದು, ಹಾಗೆ ಆಕ್ಷೇಪಿಸಿದರೆ ಸಂಸ್ಥಾನಕ್ಕೆ ತಿಳಿಸಬೇಕು"[೨] ಎಂದಿದೆ. ಇಲ್ಲಿ ನಿರೂಪಿತರಾದ ಶಂಶಾಬಾದ್ ನೀಲಕಂಠಸ್ವಾಮಿಗಳು ನೀಡಿದ ಲಾಂಛನಗಳಾದ ರೂಪ, ರುದ್ರಾಕ್ಷಿ, ಕುಂಕುಮ ಅರಿಷಿಣ, ವಿಭೂತಿ, ಅಡ್ಡಬೊಟ್ಟು ವೀರಗಂಧ ಮೊದಲಾದವುಗಳು ಶೈವಸಂಪ್ರದಾಯದವುಗಳಾಗಿವೆ. ಈ ತಾಮ್ರಶಾಸನ ರಕ್ಷಿಸಿಕೊಂಡಿರುವ ಬುಡ್ಗ ಜಂಗಮರು ಅದೇ ಮಾದರಿಯಲ್ಲಿ ಬದುಕುತ್ತಿರುವುದರಿಂದ ಅವರು ಶೈವ ಮೂಲದವರೆಂಬುದು ಸ್ಪಷ್ಟವಾಗುತ್ತದೆ.

ಗಣಾಯತಿ ಜಂಗಾಲು ಕಲ್ಯಾಣಂ ರಾಮಲಿಂಗನಿಗೆ ನೀಡಿದ ಪತ್ರದ ಉಲ್ಲೇಖಸಿದಂತೆ ಗಣಾಯತಿ ಜಂಗಾಲು ಎಂದರೆ ಈ ಬುಡ್ಗ ಜಂಗಮರ ಕುಲಪಂಚಾಯಿತಿಯಲ್ಲಿ ನ್ಯಾಯಗಾರ, ಮಹಾಂತುಗಾರ ಮತ್ತು ಗಣಾಚಾರಿ ಎಂಬ ಮೂರು ಒಳಾಡಳಿತ ವ್ಯವಸ್ಥೆಯ ಆಡಳಿತ ವರ್ಗವನ್ನು ಕಾಣಬಹುದು. ಒಂದೊಂದು ವರ್ಗಕ್ಕೆ ಪ್ರತ್ಯೇಕವಾದ ಬೆಡಗುಗಳು ಕಾರ್ಯನಿರ್ವಹಿಸುತ್ತವೆ. ಬುಡ್ಗ ಜಂಗಾಲದ ಕಲ್ಯಾಣಂ ಬೆಡಗಿನವರು 'ಗಣಾಚಾರಿ' ಕೆಲಸವನ್ನು ನಿರ್ವಹಿಸುತ್ತದೆ. ಹಾಗಾಗಿ ಈ ಪತ್ರದ ಉಲ್ಲೇಖ ಮಾಡಿರುವ 'ಗಣಾಯತ ಜಂಗಾಲ ಕಲ್ಯಾಣಂ ರಾಮಲಿಂಗ' ಎನ್ನುವ ಹೆಸರು ಈ ಸಮುದಾಯ ವ್ಯಕ್ತಿಗೆ ಅನ್ವಯಿಸುತ್ತದೆ. ಈ ವ್ಯಕ್ತಿಯ ಕುಟುಂಬವು ಬಳ್ಳಾರಿಯಿಂದ ವಲಸೆ ಹೋಗಿ ಸಂಡೂರುನಲ್ಲಿ ನೆಲೆಸಿದ್ದಾರೆ. ಬುಡ್ಗ ಜಂಗಮರು ಜಾತಿಗೊಂದು ವೇಷಗಳನ್ನು ಧರಿಸಿ, ರುದ್ರಾಕ್ಷಿ ಕುಂಕುಮ ಅರಿಸಿಣ ವಿಭೂತಿ ಅಡ್ಡಬೊಟ್ಟು ವೀರಗಂಧ ಧರಿಸಿದ ನಗಾರಿ ತಾಳಗಳನ್ನು ಬಳಸಿ ಕುರುಬರ ಗೊಲ್ಲರ ವೇಷಗಳನ್ನು ಧರಿಸುವಾಗ ಇವರನ್ನು ಯಾರು ಆಕ್ಷೇಪಣೆ ಮಾಡಬಾರದು. ಬುಡ್ಗ ಜಂಗಮರು ವೇಷಧರಿಸಿ ಭಿಕ್ಷಾಟನೆ ಮಾಡುವ ಸಂದರ್ಭದಲ್ಲಿ ಕುರುಬರು ಮತ್ತು ಗೊಲ್ಲರು ತಮ್ಮ ವೃತ್ತಿ ಆಚರಣೆಯಾದ ಗೊರವನವೇಷ ಪ್ರದರ್ಶಿಸಿ ಧಾರ್ಮಿಕ ಭಿಕ್ಷಾಟನೆಗೆ ಮಾಡುವ ಸಂದರ್ಭದಲ್ಲಿ ಅವರ ಆಚರಣೆಗೆ ಕುಂದು ಬರುತ್ತದೆಯೆಂದು ಆಕ್ಷೇಪಿಸಿರಬಹುದೆಂದು ಈ ಶಾಸನದ ಮೂಲಕ ತಿಳಿಯಬಹುದು. ಈ ಪತ್ರವು ದಿನಾಂಕ ೧೭.೪.೧೭೩೪ರಲ್ಲಿ ನೀಡಿದೆ. ಅಂದರೆ ೨೦೨೦ಕ್ಕೆ ೨೮೬ ವರ್ಷಗಳು ಹಿಂದೆಯೇ ಈ ಸಮುದಾಯವು ದಾಖಲಾಗಿರುವುದನ್ನು ಕಾಣಬಹುದು. ಈ ಪತ್ರವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ವೀರಶೈವ ಲಿಂಗಾಯತ ಜಂಗಮರು ಅಂದು ಮಠಮಾನ್ಯಗಳನ್ನು ಹೊಂದಿ ಇಡೀ ತಳಸಮುದಾಯಗಳನ್ನು, ತಮ್ಮ ಅಧಿಕಾರದ ಹಿಡಿತದಲ್ಲಿ ಇಟ್ಟುಕೊಂಡು ಈ ಸಮುದಾಯಗಳಿಂದ ತೆರಿಗೆಯನ್ನು ಸಂಗ್ರಹಿಸಿಕೊಂಡು ತಮ್ಮ ಪ್ರಾಬಲ್ಯವನ್ನು ಕಾಪಾಡಿಕೊಳ್ಳುತ್ತಿರುವುದು ಕಾಣಬಹುದು.

ಸಮಾಜದಲ್ಲಿ ಉನ್ನತ ಸ್ಥಾನದಲ್ಲಿರುವ ಮೇಲ್ವರ್ಗಗಳ ಸವರ್ಣೀಯರು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಪ್ರಬಲರಾಗಿ ಒಂದುಕಡೆ ನೆಲೆನಿಂತು ಜಂಗಮ,

ದಾಸ, ಜೋಗಿ, ಸಿದ್ಧ, ನಾಥ, ಲಿಂಗಾಯತ ದೀಕ್ಷಾ ಮತ್ತು ಆಚರಣೆಗಳನ್ನು, ತತ್ವ ಸಿದ್ಧಾಂತಗಳನ್ನು ಪಾಲನೆ ಮಾಡುತ್ತಾ ತಮ್ಮದೇ ಶ್ರೇಷ್ಠ ಧರ್ಮ ಎಂದು ಪ್ರತಿಪಾದಿಸುತ್ತಾ ಸಮಾಜದಲ್ಲಿ ಸ್ಪೃಶ್ಯ ಅಸ್ಪೃಶ್ಯ, ಮೇಲು-ಕೀಳು, ಬಡವ-ಶ್ರೀಮಂತ ಎಂಬ ವ್ಯವಸ್ಥೆಗೆ ನಾಂದಿಯಾಯಿತು. ಕಾಲಾಂತರದಲ್ಲಿ ಈ ದೀಕ್ಷಾ ಆಚರಣೆಗಳು ಜಾತಿಗಳೆಂದು ಗುರುತಿಸುತ್ತಾ ಬಂದಿರುವುದನ್ನು ಕಾಣಬಹುದು. ಈ ಮೇಲ್ವರ್ಗಗಳು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿ ಮಠಮಾನ್ಯಗಳನ್ನು ನಿರ್ಮಿಸಿಕೊಂಡು, ಸಮಾಜದಲ್ಲಿ ಅಧಿಕಾರ ಆಡಳಿತದ ಚುಕ್ಕಾಣಿ ಹಿಡಿದು ಕಾರ್ಯನಿರ್ವಹಿಸುತ್ತಿವೆ. ತಮ್ಮ ಸಂಸ್ಕೃತಿ ಧರ್ಮಗಳನ್ನು ಪ್ರಚಾರ ಮಾಡಲು (ಜಂಗಮ, ದಾಸ, ಜೋಗಿ, ಸಿದ್ಧ, ನಾಥ, ಲಿಂಗಾಯತ ಪರಂಪರೆಗಳು) ಶೈವ, ವೈಷ್ಣವ ಮತ್ತು ವೀರಶೈವ ಧರ್ಮಗಳನ್ನು, ತತ್ವಸಿದ್ಧಾಂತಗಳನ್ನು ಪ್ರಚಾರಮಾಡಲು ಅಸ್ಪೃಶ್ಯ ಕಲಾ ಸಮುದಾಯಗಳನ್ನು ಬಳಸಿಕೊಂಡಿರುವುದರ ಕಾರಣಕ್ಕಾಗಿ ಅಲೆಮಾರಿ ಕಲಾಸಮುದಾಯಗಳಾದ ಬುಡ್ಗರು, ಮಾಲರು, ಮಾದಿಗರು ಇತ್ಯಾದಿ ಸಮುದಾಯಗಳು ಜಂಗಮ, ದಾಸ, ಜೋಗಿ, ಸಿದ್ಧ ಎಂಬ ಹೆಸರುಗಳನ್ನು ಬಳಸಿಕೊಂಡಿರುವುದು ಕಾಣಬಹುದು. ಉದಾ: ಪರಿಶಿಷ್ಟ ಜಾತಿಯ ಬೇಡ ಜಂಗಮ್/ಬುಡ್ಗ ಜಂಗಮ್‌ರು, ಮಾಲ ಜಂಗಮರು, ಮಾದಿಗ ಜಂಗಮರು, ಚೆನ್ನದಾಸರು, ಹಂಡಿಜೋಗಿಗಳು, ಸುಡುಗಾಡು ಸಿದ್ಧರು ಇತ್ಯಾದಿ ಸಮುದಾಯಗಳು(ಜಂಗಮ ಹೆಸರಿನ ಅನೇಕ ಅಸ್ಪೃಶ್ಯ ಸಮುದಾಯಗಳ ಪಟ್ಟಿಯನ್ನು ಅನುಬಂಧ-೩ರಲ್ಲಿ ನೋಡಬಹುದು).

ಸ್ಪರ್ಶ ಅಸ್ಪರ್ಶ ಸಮುದಾಯಗಳೆಂದು ಶೋಷಣೆಗೆ ಒಳಾಗಾಗಿದ್ದ ತಳಸಮುದಾಯಗಳು ಮತ್ತು ಅಲೆಮಾರಿ ಬುಡಕಟ್ಟು ಸಮುದಾಯಗಳು ಮತ್ತು ಅವರ ಬದುಕು ಅತ್ಯಂತ ಶೋಚನೀಯವಾಗಿತ್ತು. ಜಾತಿ, ಧರ್ಮ ಸಂಘರ್ಷಗಳು ಉಂಟಾಗುತ್ತಿದ್ದ ಸಂದರ್ಭದಲ್ಲಿ ಒಂದ್ಹೊತ್ತಿನ ಊಟಕ್ಕಾಗಿ ಪರದಾಡಬೇಕಾಗಿತ್ತು. ಬುಡ್ಗ ಜಂಗಾಲರು ಮೂಲತಃ ಅಸ್ಪೃಶ್ಯರು, "ಅಸ್ಪೃಶ್ಯತೆ ಎನ್ನುವುದು ಒಂದು ಕಳಂಕಿತ ಹೆಸರು, ಅದರಲ್ಲಿ ನಿಷೇಧ, ತಿರಸ್ಕಾರ ಮತ್ತು ದುರ್ವಾಸನೆಗಳಿವೆ. 'ಅಸ್ಪೃಶ್ಯ' ಎಂದ ಕೂಡಲೇ ಅವನನ್ನು ಕುರಿತು ಒಬ್ಬ ವ್ಯಕ್ತಿಯ ಧೋರಣೆ ನಿಶ್ಚಿತವಾಗುತ್ತದೆ. 'ಅಸ್ಪೃಶ್ಯ' ಎಷ್ಟೇ ಸಮರ್ಥನಾಗಿದ್ದರೂ ಅವನು ವ್ಯಕ್ತಿಗತ ಸಾಮರ್ಥ್ಯ ಕುರಿತು ವಿವೇಚಿಸಲು ಕೂಡ ಅವರಿಗೆ ಇರುವುದಿಲ್ಲ, ಎಲ್ಲ ಅಸ್ಪೃಶ್ಯರೂ ಇದನ್ನು ಅರಿತಿದ್ದಾರೆ. 'ಅಸ್ಪೃಶ್ಯ'ರನ್ನು ಬೇರೆ ಹೆಸರಿನಿಂದ ಕರೆಯುವ ಒಂದು ಪ್ರಯತ್ನ ಮಾಡಿದ್ದಾರೆ. ಚಮ್ಮಾರರು ತಮ್ಮನ್ನು ಕಾವಿದರು ಅಥವಾ 'ಜಾತವರು' ಎಂದು, ಡೊಂಬರು ತಮ್ಮನ್ನು 'ಶಿಲ್ಪಕಾರರು' ಎಂದು, 'ಪರಯಾ'ಗಳು ತಮ್ಮನ್ನು 'ಆದಿ ದ್ರಾವಿಡರೆಂದು, ಮಾದಿಗರು ತಮ್ಮನ್ನು 'ಅರುಂಧತ್ಯರೆಂದು, ಮೆಹರರು ತಮ್ಮನ್ನು ಚೋಖಮೇಳ ಅಥವಾ ಸೋಮವಂಶಿ ಎಂದು, ಭಂಗಿಗಳು ತಮ್ಮನ್ನು 'ವಾಲ್ಮೀಕಿಗಳೆಂದು ಕರೆದುಕೊಳ್ಳಲಾಗಿದೆ."[೧೩] ಹೀಗೆ ಬೇಡ ಬುಡ್ಗ ಜಂಗಾಲರು 'ಜಂಗಮ' ಪದವನ್ನು ಬಳಸಿಕೊಂಡು ತಮ್ಮ ಅಸ್ಪೃಶ್ಯಧೋರಣೆಯಿಂದ ಸುಧಾರಿಸಿಕೊಳ್ಳುವ ಪ್ರಯತ್ನದಲ್ಲಿ ಬೇಡ ಬುಡ್ಗ ಜಂಗಮರೆಂದು ಕರೆದುಕೊಂಡಿರಬಹುದು. ತಾವು ಅಸ್ಪೃಶ್ಯ ಬೇಡ ಅಥವಾ ಜಂಗಾಲರೆಂದು ಹೇಳಿದ ಕೂಡಲೇ ಸವರ್ಣೀಯರು ಇವರು ಭಿಕ್ಷುಕರು, ಮಾಂಸತಿನ್ನುವವರು ಎಂದು ಶೋಷಣೆ ಮಾಡುತ್ತಿದ್ದರು. ಆದ್ದರಿಂದ ಬುಡ್ಗರು ಜಂಗಮ ಹೆಸರನ್ನು ಬಳಸಿಕೊಂಡಿರಲು ಸಾಧ್ಯತೆ ಇದೆ.

ಏಕೆಂದರೆ ಹನ್ನೆರಡನೇ ಶತಮಾನದಲ್ಲಿ ಮಠಮಾನ್ಯಗಳಲ್ಲಿ 'ಜಂಗಮ' ಎಂಬ ಪದಕ್ಕೆ ಸಾಮಾಜಿಕ ಮನ್ನಣೆ ಇತ್ತು. ಈ ಮಠಮಾನ್ಯಗಳನ್ನು ಬಹುಸಂಖ್ಯಾತರಾದ ಮತ್ತು ಮೇಲ್ವರ್ಗದ ವೀರಶೈವ ಲಿಂಗಾಯತ ಸಮುದಾಯಗಳು ಕಾರ್ಯ ನಿರ್ವಹಿಸುತ್ತಿದ್ದವು. ಅನೇಕ ಅಲೆಮಾರಿ ಬುಡಕಟ್ಟು ಸಮುದಾಯಗಳಿಗೆ ಇವರು ನೀಡಿದ ತಾಮ್ರಪತ್ರಗಳೇ ಸಾಕ್ಷಿಯಾಗುತ್ತವೆ. ಶೋಷಿತ ಅಲೆಮಾರಿ ದಮನಿತ ಸಮುದಾಯಗಳು ಇವರ ಆಶ್ರಯ ಪಡೆದುಕೊಂಡಿದ್ದವು ಕೂಡ. ಮತ್ತು ಅವರ ವೀರಶೈವ ಧರ್ಮ ಪ್ರಚಾರಕ್ಕೆ ಈ ಸಮುದಾಯಗಳನ್ನು ಬಳಸಿಕೊಂಡಿದ್ದಾರೆ. ಹೀಗಾಗಿ ಈ ಜಂಗಮ ಎನ್ನುವ ಪದವನ್ನು ಸೇರಿಸಿಕೊಂಡು 'ವರ್ಣರಹಿತ' ರಕ್ಷಣೆಯ ಪ್ರಕ್ರಿಯೆಗೆ ಒಳಗಾಗಲಿಕ್ಕೆ ಪ್ರಯತ್ನಿಸಿದ್ದಾರೆ ಎನ್ನಬಹುದು. ಬುಡ್ಗ ಜಂಗಮರು ಗ್ರಾಮೀಣ ಪ್ರದೇಶಗಳಲ್ಲಿ ಮೇಳಕಟ್ಟಿಕೊಂಡು ಉರಾಡಲು ಹಳ್ಳಿಗಳಲ್ಲಿ ಹೋದಾಗ ಮೊದಲು ಆ ಗ್ರಾಮದ ಮೇಟಿ ಗೌಡ ಅಥವಾ ಮೇಲ್ವರ್ಗದ ಬಹುಸಂಖ್ಯಾತ ಪ್ರಬಲ ನಾಯಕನನ್ನು ನಮಸ್ಕರಿಸಿ ಅವರ ಮನೆ ಮುಂದೆ ಪ್ರದರ್ಶನ ಮಾಡಿದ ನಂತರವೇ ಬೇರೆಯವರ ಮನೆಮುಂದೆ ಪ್ರದರ್ಶನ ಮಾಡುತ್ತಾರೆ. ಆ ಗ್ರಾಮದ ಮನೆಯ ಮುಂದೆ ಪ್ರದರ್ಶನ ಮಾಡಿದ ನಂತರ ಬೇರೆ ಜನರು ಇವರ ಪ್ರದರ್ಶನಕ್ಕೆ ಅಡ್ಡಿಪಡಿಸಬಾರದು ಎಂಬ ಉದ್ದೇಶದಿಂದ ತಮ್ಮ ಬದುಕಿನ ರಕ್ಷಣೆಗಾಗಿ ಈ ರೀತಿ ಗ್ರಾಮದ ಮುಖಂಡನ ಮನೆ ಮುಂದೆ ಮೊದಲು ಪ್ರದರ್ಶನ ಮಾಡುತ್ತಾರೆ. ಯಾರಾದರೂ ಅನ್ಯ ವ್ಯಕ್ತಿ ಕೇಳಿದರೆ ನಾವು ಜಂಗಮರು ಎಂದು ಹೇಳಿಕೊಳ್ಳುತ್ತಾರೆ. ಊರಲ್ಲಿ ಇದ್ದರಾಲ್ಲ ಲಿಂಗಾಯತ ಜಂಗಮರು ಅವರು ನಾವು ಒಂದೇ; ಏನೆಂದರೆ ಅವರು ಲಿಂಗ ಕಟ್ಟಿಕೊಳ್ಳುತ್ತಾರೆ ಮತ್ತು ಮಾಂಸ ತಿನ್ನುವುದಿಲ್ಲ, ನಾವು ಲಿಂಗ ಕಟ್ಟಲ್ಲ, ಮಾಂಸ ತಿನ್ನುತ್ತೇವೆ ಅಷ್ಟೇ ವ್ಯತ್ಯಾಸ ಎಂದು ಹೇಳಿ ಅವರನ್ನು ಮನವೊಲಿಸುತ್ತಾರೆ. ಆಗ ಅವರಿಂದ ಊರಲ್ಲಿ ಭಿಕ್ಷಾಟನೆ ಮಾಡಲು ಅವಕಾಶ ಮತ್ತು ಅನ್ಯರು ಇವರ ದಬ್ಬಾಳಿಕೆ ಮಾಡದಂತೆ ರಕ್ಷಣೆ ದೊರಕಿದಂತೆ ಆಗುತ್ತದೆ. ಹೀಗೆ ತಮ್ಮನ್ನು ತಾವು ರಕ್ಷಣೆ ಮಾಡಿಕೊಳ್ಳಲು ಅನ್ಯ ಸಮುದಾಯದ ಹೆಸರುಗಳನ್ನು ಹೇಳಿಕೊಂಡು ಜೀವಿಸಿದ್ದಾರೆ.

ಬುಡ್ಗ ಜಂಗಮ್ ಸಮುದಾಯವು ಒಂದುಕಡೆ ನಿರ್ದಿಷ್ಟ ಊರಿನಲ್ಲಿ ನೆಲೆ ನಿಲ್ಲೋರಲ್ಲ. ಇವರು ಬೇಟೆ, ಪಶುಪಾಲನೆ ಹಾಗೂ ಕಲಾಪ್ರದರ್ಶನ ಮಾಡುತ್ತಾ ಅಲೆಯುವವರು. ತಮ್ಮ ಅಲೆಮಾರಿ ಬದುಕಿನಲ್ಲಿ ಯಾರದರೂ ಸಾವನ್ನಪ್ಪಿದಾಗ ಆಯಾ ಊರಿನಲ್ಲಿ ಶವವನ್ನು ಮಣ್ಣು ಮಾಡಬೇಕಾದ ಸಂದರ್ಭದಲ್ಲಿ; ಮೇಲ್ವರ್ಗದ ಸಮಾಜದ ವಿರೋಧದಿಂದ ಹಾಗೂ ಇವರ ಅಸ್ಪೃಶ್ಯತೆ ಸಮಸ್ಯೆಯಿಂದ ಬುಡ್ಗ ಜಂಗಮರಲ್ಲಿ ಯಾರಾದರೂ ಒಬ್ಬರೂ ಜಂಗಮನ ವೇಷ ಹಾಕಿಕೊಂಡೇ ಶವವನ್ನು ಹೂಳಬೇಕಾದ ಪರಿಸ್ಥಿತಿ ಇದೆ. ಮುಂದೆ ಜಂಗಮ ವೇಷವು ಒಂದು ಕಲೆಯಾಗಿ ಒಂದು ವೃತ್ತಿಯಾಗಿ ಮಾರ್ಪಟಿತ್ತು. ಈಗಲೂ ಮಾಲ ಮಾದಿಗ ಸಮುದಾಯಗಳ ಮನೆಯಲ್ಲಿ ಮತ್ತು ತಮ್ಮ ಸಮುದಾಯದಲ್ಲಿ ಯಾರಾದರೂ ಸಾವನ್ನಪ್ಪಿದಾಗ ಗಂಟೆ ಮತ್ತು ಶಂಖು ಹಿಡಿದುಕೊಂಡು ಶವಸಂಸ್ಕಾರ ಕಾರ್ಯವನ್ನು ತಾವೇ ನೆರವೇರಿಸಿ ಎರಡಾಣೆ(ಬೇಡ) ನಾಣ್ಯಗಳನ್ನು ಕೇಳಿ ಪಡೆದುಕೊಳ್ಳುತ್ತಿದ್ದರು. ಯಾರು ಬೇಡ ಹಣವನ್ನು ನೀಡುತ್ತಾರೋ ಅವರಿಗೆ ಜಂಗಮ ವೇಷಧಾರಿ ಸಂತೋಷಪಟ್ಟು ಹೆಚ್ಚು ಹೊಗಳುತ್ತಿದ್ದರು.

ಈ ಕಾರಣದಿಂದಾಗಿ ಬುಡ್ಗ ಜಂಗಮರಿಗೆ ಬೇಡ ಜಂಗಮರೆಂದು ಕರೆದಿದ್ದಾರೆ. ಹೀಗೆ ಒಂದು ಸಮುದಾಯವು ಇನ್ನೊಂದು ಪ್ರಬಲ ಸಮುದಾಯದ ಹೆಸರೇಳಿಕೊಂಡು ಜೀವನ ನಡೆಸಬೇಕಾದ ಅನಿವಾರ್ಯತೆಯನ್ನು ಅಂದಿನ ಸಾಮಾಜಿಕ ಸಂದರ್ಭದಲ್ಲಿ ಇತ್ತು. ಅನೇಕ ಅಸ್ಪೃಶ್ಯ ಸಮುದಾಯಗಳು ಪ್ರಬಲ ಸಮುದಾಯಗಳ ಹೆಸರೇಳಿಕೊಂಡು ಬದುಕಬೇಕಾದ ಪರಿಸ್ಥಿತಿ ನಿರ್ಮಾಣವಾಗಿದ್ದೆ ಅಸ್ಪೃಶ್ಯತೆಯ ಧೋರಣೆಯಿಂದ ಹೀಗಾಗಿ ಅಲ್ಲಿನ ಸ್ಥಳೀಯ ಪ್ರಬಲ ಸಮುದಾಯಗಳ ಹೆಸರೇಳಿಕೊಂಡು ತಮ್ಮನ್ನು ತಾವು ರಕ್ಷಿಸಿಕೊಳ್ಳಬೇಕಾಗಿತ್ತು. ಈ ನೆಲೆಯಲ್ಲಿ ಬುಡ್ಗಗರು ಬುಡ್ಗ ಜಂಗಮರೆಂದು, ಮಾಲರು ಮಾಲ ಜಂಗಮರೆಂದು, ಮಾದಿಗರು ಮಾದಿಗ ಜಂಗಮರು ಹೀಗೆ ಹಲವು ಹೆಸರುಗಳಿಂದ ಅಸ್ಪೃಶ್ಯರು ಕರೆದುಕೊಂಡಿದ್ದಾರೆ. ಜಂಗಮ ಹೆಸರಿನಲ್ಲಿರುವ ಅಸ್ಪೃಶ್ಯ ಸಮುದಾಯಗಳ ಪಟ್ಟಿ ನಿಜಾಮ್ ಕಾಲದಲ್ಲಿ ಗುರುತಿಸಿರುವುದನ್ನು ಅನುಬಂಧ-೩ರಲ್ಲಿ ನೋಡಬಹುದು.

ಇನ್ನೊಂದು ಅರ್ಥದಲ್ಲಿ ಹೇಳಬೇಕಾದರೆ 'ಜಂಗಮ' ಎನ್ನುವ ಪದ ಯಾವುದೇ ಸಮುದಾಯಕ್ಕೆ ಸೀಮಿತವಾಗುವುದಿಲ್ಲ. ಮತ್ತು ಅದು ಜಾತಿಯು ಅಲ್ಲ. ಜಂಗಮ ಎನ್ನುವಂತದು ಒಂದು ರೀತಿಯಲ್ಲಿ ಶರಣ, ಶರಣೆಯರು, ಜಂಗಮ, ದಾಸರು, ಜೋಗಿಗಳು, ಸ್ವಾಮಿಗಳು, ಫಕ್ಕಿರರು, ಸಂತರು, ಸಾಧರು, ಸಿದ್ಧರು, ಅಲೆಮಾರಿಗಳು, ಸಂಚಾರಿಗಳು, ತಾತನವರು ಹೀಗೆ ವ್ಯಕ್ತಿಯ ಧರ್ಮ ಕ್ರಿಯಾರೂಪಗಳಿಗೆ ಬಳಸುವ ನಾಮಪದಗಳಾಗಿವೆ. ಇವುಗಳು ಮೂಲದಲ್ಲಿ ಜಾತಿಗಳಲ್ಲ.

ಬುಡ್ಗ ಜಂಗಮರಲ್ಲಿ 'ಮಾತು' ಎನ್ನುವುದು ಒಂದು ಮೌಲ್ಯವಾಗಿದೆ. ಈ ಸಮುದಾಯದಲ್ಲಿ ಆಡುವ ಮಾತಿನ ಬಗ್ಗೆ ತಮ್ಮದೇಯಾದ ತತ್ವ ದರ್ಶನವನ್ನು ನೀಡುತ್ತವೆ. 'ಮಾಟಂಟೆ ಸಿನ್ನದಿ ಕಾದು, ಮಾಟಂಟೆ ಪೆದ್ದದಿ ಕಾದು' ಅಂದರೆ ಮಾತು ಆಡಿದರೆ ಹೋಯಿತು, ಮುತ್ತು ಹೊಡೆದರೆ ಹೋಯಿತು ಎನ್ನುವಂತೆ, ಮಾತೆಂದರೆ ಸಣ್ಣದು ಅಲ್ಲ, ಮಾತೆಂದರೆ ದೊಡ್ಡದು ಅಲ್ಲ, ಒಂದು ಸಾರಿ ಮಾತು ಕೊಟ್ಟಮೇಲೆ ಪ್ರಾಣ ಕೊಟ್ಟ ಹಾಗೆ ಎನ್ನುವ ಸಿದ್ಧಾಂತದ ಮೇರೆಗೆ ಒಮ್ಮೆ ಆಡಿದ ಮಾತು, ಕೊಟ್ಟ ಮಾತು ತಪ್ಪಬಾರದು ಎಂಬ ತತ್ವಸಿದ್ಧಾಂತದ ಮೇಲೆ ತಮ್ಮ ಬದುಕಿನ ಜೀವನವಿಧಾನವನ್ನು ರೂಪಿಸಿಕೊಂಡಿದ್ದಾರೆ. ಒಂದುವೇಳೆ ಯಾರಾದರೂ ಮಾತು ತಪ್ಪಿದರೆ ಮೌಲ್ಯ ತೆರಬೇಕಾಗುತ್ತದೆ. ಅಂದರೆ ಬೆಲೆ ಕಟ್ಟಬೇಕಾಗುತ್ತದೆ. ಹೀಗೆ ಸಮುದಾಯದ ತತ್ವ ಸಿದ್ಧಾಂತ ಮತ್ತು ಪದ್ಧತಿ ಕಟ್ಟುಪಾಡುಗಳನ್ನು ಸಮಾಜದ ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ. ಇವರಲ್ಲಿ ಮಾತು ಎನ್ನುವುದೇ ಒಂದು ಅಲಿಖಿತವಾದ ಶಾಸನ, ಇವರಲ್ಲಿ ಮಾತು ಒಂದು ಮೌಲ್ಯವಾಗಿ ಪರಿಗಣಿಸಲ್ಪಡುತ್ತದೆ. ಹಾಗಾಗಿ ಆಡುವ ಮಾತು, ಕೊಟ್ಟ ಮಾತು ತುಂಬಾ ಆಲೋಚಿಸಿ ವ್ಯವಹರಿಸುತ್ತಾರೆ. ಈಗಾಗಿ ತಮ್ಮ ಜೀವನಾವರ್ತಕ ಆಚರಣೆಗಳಲ್ಲಿ ಹುಟ್ಟಿನಿಂದ ಸಾವಿನವರೆಗೂ ತಮ್ಮದೇಯಾದ ಮೌಲ್ಯಗಳನ್ನು ಹೊಂದಿದ್ದಾರೆ. ಈ ಕೆಳಗಿನಂತೆ ವಿವರಿಸಲಾಗಿದೆ.

೧.ದೇವರಿಗೆ ಹರಕೆಯನ್ನು ತೀರಿಸಬೇಕಾದರೆ ಮೊದಲು ಮುಡುಪನ್ನು ಕಟ್ಟುತ್ತಾರೆ. ಮುಡುಪು ಕಟ್ಟುವಾಗ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ಕಟ್ಟುತ್ತಾರೆ.

೨.ಚಿಕ್ಕಮಕ್ಕಳಿಗೆ ಸಂದುಗಳು ಬರುವಾಗ ಕೊರಳಿಗೆ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ಕಟ್ಟುತ್ತಾರೆ.

೩.ನಿಶ್ಚಿತಾರ್ಥ ಮಾಡುವ ಸಂದರ್ಭದಲ್ಲಿ ಹೆಣ್ಣಿನ ಹೆತ್ತ ತಾಯಿಗೆ ಓಲಿಕೊಡುವಾಗ ಎರಡಾಣೆ(ಬೇಡ) ನಾಣ್ಯವನ್ನು ಕೊಟ್ಟು ಹೆಣ್ಣನ್ನು ತಮ್ಮದಾಗಿಸಿಕೊಳ್ಳುತ್ತಾರೆ.

೪.ಮದುವೆ ಸಂದರ್ಭದಲ್ಲಿ ಮದುಮಕ್ಕಳಿಗೆ ಬ್ರಹ್ಮಗಂಟು ಹಾಕುವಾಗ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ಕಟ್ಟುತ್ತಾರೆ.

೫.ಮದುವೆ ಸಂದರ್ಭದಲ್ಲಿ ಮದುಮಕ್ಕಳಿಗೆ ನೀರು ಹಾಕುವಾಗ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ಬ್ರಹ್ಮಗಂಟು ಕಟ್ಟುತ್ತಾರೆ.

೬.ಮದುವೆ ಸಂದರ್ಭದಲ್ಲಿ ಕಲಿಕುಂಡ ದೇವೆದಿ ಎಂಬ ಕಾರ್ಯಕ್ರಮದಲ್ಲಿ ಎರಡಾಣೆ(ಬೇಡ)ವನ್ನು ಇಟ್ಟು ಬ್ರಹ್ಮಗಂಟು ಕಟ್ಟುತ್ತಾರೆ.

೭.ಮದುವೆ ಸಂದರ್ಭದಲ್ಲಿ ಬೇರೆ ಬೇರೆ ಊರುಗಳಿಂದ ಬಂದ ಕುಲಸ್ಥರಿಗೆ ಕುಲದ ಆಚಾರಂ ಎಂದು ಎರಡಾಣೆ(ಬೇಡ) ನಾಣ್ಯವನ್ನು ಕೊಡುತ್ತಾರೆ.(ಈಗ ಹತ್ತು, ಇಪ್ಪತ್ತು ರೂಪಾಯಿಗಳನ್ನು ಕೊಡುತ್ತಿದ್ದಾರೆ)

೮.ಗಂಡನ ಮನೆಗೆ ಕಳಿಸುವಾಗ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ಕಟ್ಟಿ ಬ್ರಹ್ಮಗಂಟು ಹಾಕಿ ಕಳಿಸುತ್ತಾರೆ. (ಈಗ ಒಂದು ರೂಪಾಯಿ ಅಥವಾ ಎರಡು ರೂಪಾಯಿ ನಾಣ್ಯಗಳನ್ನು ಬಳಸುತ್ತಿದ್ದಾರೆ)

೯.ಮದುವೆ ಸಂದರ್ಭದ ನಾಗೋಲಿ ದಿನದಂದು ನೀರು ಹಾಕುವಾಗ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ಬ್ರಹ್ಮಗಂಟು ಕಟ್ಟುತ್ತಾರೆ.

೧೦.ವಿಚ್ಛೇದನ ನೀಡುವ ಸಂದರ್ಭದಲ್ಲಿ ಹೆಣ್ಣಿಗೆ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ತನ್ನ ಸಂಬಂಧ ಕಳಚಿಕೊಳ್ಳುತ್ತಾನೆ. (ಈಗ ಪಾವಲ ನಾಣ್ಯ(೨೫ ಪೈಸೆ) ಇಟ್ಟು ಕಳಚಿಕೊಳ್ಳುತ್ತಿದ್ದಾರೆ)

೧೧.ಮರುಮದುವೆ ಮಾಡಿಕೊಳ್ಳುವ ಸಂದರ್ಭದಲ್ಲಿ ಹೆಣ್ಣಿಗೆ ಅರ್ಧರೂಪಾಯಿ ನಾಣ್ಯವನ್ನು ಇಟ್ಟು ಮರುಮದುವೆ ಮಾಡಿಕೊಳ್ಳುತ್ತಾರೆ.

೧೨.ಶವಸಂಸ್ಕಾರದ ಸಂದರ್ಭದಲ್ಲಿ, ಒಬ್ಬ ಕುಲಸ್ಥನು ಜಂಗಮನ ವೇಷ ಧರಿಸಿ ಶವ ಸಂಸ್ಕಾರದ ಕಾರ್ಯವಿಧಾನಗಳನ್ನು ನೆರವೇರಿಸಿದ ವ್ಯಕ್ತಿಗೆ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ಆಶೀರ್ವಾದ ತೆಗೆದುಕೊಳ್ಳುವರು.

೧೩.ಚುಸುಕುನೇದಿ(ಪ್ರೇತರಾಧನೆ) ಸಂದರ್ಭದಲ್ಲಿ ಮುಡುಪು ಕಟ್ಟುವಾಗ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ಕೈಗೆ ಕಟ್ಟುತ್ತಾರೆ. (ಇತ್ತೀಚಿನ ದಿನಗಳಲ್ಲಿ ಒಂದು, ಎರಡು ರೂಪಾಯಿ ನಾಣ್ಯ ಬಳಸುತ್ತಾರೆ)

೧೪.ಅಂತರ್ ಜಾತಿ ವಿವಾಹವಾದಾಗ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ದಂಡ ಕಟ್ಟುತ್ತಾರೆ. (ಇತ್ತೀಚಿನ ದಿನಗಳಲ್ಲಿ ಎರಡು ರೂಪಾಯಿ ದಂಡ ವಿಧಿಸುತ್ತಿದ್ದಾರೆ).

೧೫.ಈ ಸಮಾಜದಲ್ಲಿ ಯಾರಾದರೂ, ಯಾರನಾದರೂ ಚಪ್ಪಲಿಯಿಂದ ಹೊಡಿತಿನಿ ಎಂದರೆ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ದಂಡ ಕಟ್ಟುತ್ತಾರೆ. (ಇತ್ತೀಚಿನ ದಿನಗಳಲ್ಲಿ ಎರಡು ರೂಪಾಯಿ ದಂಡ ವಿಧಿಸುತ್ತಿದ್ದಾರೆ)

೧೬. ಕುಲವನ್ನು ಧಿಕ್ಕರಿಸಿ ಕೋರ್ಟ್ ಕಚೇರಿಗೆ, ಪೋಲೀಸ್ ಮೆಟ್ಟಿಲುಗಳಿಗೆ ಹೋದರೆ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ದಂಡ ಕಟ್ಟುತ್ತಾರೆ. (ಇತ್ತೀಚಿನ ದಿನಗಳಲ್ಲಿ ಎರಡು ರೂಪಾಯಿ ದಂಡ ವಿಧಿಸುತ್ತಿದ್ದಾರೆ).

ಹೀಗೆ ಬುಡ್ಗ ಜಂಗಮರು ತಮ್ಮ ಜೀವನದ ಆಚರಣೆಯಲ್ಲಿ ಎರಡಾಣೆ(ಬೇಡ) ಹಣದಷ್ಟು ಮೌಲ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ. ಇತ್ತೀಚಿನ ದಿನಗಳಲ್ಲಿ ಆ ನಾಣ್ಯಗಳು ಚಲಾವಣೆ ಇಲ್ಲದಿದ್ದರಿಂದ ಇಂದು ಕಾಲಕ್ಕೆ ತಕ್ಕಂತೆ ಪಾವಲ, ಅರ್ಧರೂಪಾಯಿ, ರೂಪಾಯಿ, ಎರಡು ರೂಪಾಯಿ ನಾಣ್ಯವನ್ನು ಬಳಸುತ್ತಿದ್ದಾರೆ.

ಬುಡ್ಗ ಜಂಗಮರು ಇತರೆ ಸಮಾಜದಲ್ಲಿ ಯಾರಾದರೂ ಸಾವನ್ನಪ್ಪಿದಾಗ ಬುಡ್ಗ ಜಂಗಮರ ಬುರ್ರಕಥಾ ಕಲಾವಿದರನ್ನು ಕರೆಯಿಸಿ ಇಡೀ ರಾತ್ರಿ ದಿನ ಸಾವಿನ ಕಥೆಗಳನ್ನು ಹೇಳಿಸಿಕೊಂಡು ಅವರಿಗೆ ಗೌರವ ಸಂಭಾವನೆಯಾಗಿ ಎರಡಾಣೆ(ಬೇಡ) ಹಣವನ್ನು ನೀಡುತ್ತಿದ್ದರು. ಈ ಬೇಡ ಹಣವನ್ನು ತೆಗೆದುಕೊಳ್ಳುತ್ತಿದ್ದರಿಂದ ಇವರನ್ನು ಬೇಡ ಬುಡ್ಗ ಜಂಗಮ್ ಎಂದು ಕರೆದಿದ್ದಾರೆ.

"ಬುಡ್ಗ ಜಂಗಾಲರು, ಹರಿಜನ, ಗಿರಿಜನ, ಮಾಲ ಮಾದಿಗರ ಮತ್ತು ಅತ್ಯಂತ ಹಿಂದುಳಿದ ಅಲ್ಪಸಂಖ್ಯಾತ ಸಮುದಾಯಗಳ ಮನೆಯಲ್ಲಿ ಯಾರಾದರೂ ಸಾವನ್ನಪಿದರೆ, ಶವಸಂಸ್ಕಾರದ ಸಂದರ್ಭದಲ್ಲಿ ಶವದ ಮುಂದೆ ಶಂಖವನ್ನು ಊದುತ್ತಾ ಗಂಟೆಯನ್ನು ಭಾರಿಸುತ್ತಾ ಸ್ಮಶಾನದವರೆಗೂ ಹೋಗಿ ಶವಸಂಸ್ಕಾರದ ಕಾರ್ಯಗಳನ್ನು ನೆರವೇರಿಸುತ್ತಿದ್ದರಿಂದ ಜನರು ಸಂಭಾವನೆಯಾಗಿ 'ಬೇಡ'(ಎರಡಾಣೆ) ಹಣವನ್ನು ನೀಡುತ್ತಿದ್ದರು. ಬೇಡ ಹಣವನ್ನು ನೀಡಿದರೆ ಮಾತ್ರ ಚೆನ್ನಾಗಿ ಹೊಗುಳುತ್ತಾರೆ. ಹೀಗಾಗಿ ಬುಡ್ಗ ಜಂಗಮರಿಗೆ ಬೇಡ ಬುಡ್ಗ ಜಂಗಮರು ಎಂದು ಕರೆಯುತ್ತಾರೆ ಎಂದು ಡಾ ಮಿಕ್ಕೇಲೇನಿ ರಾಧಕೃಷ್ಣ ಮೂರ್ತಿ ಅವರು ಹೇಳುತ್ತಾರೆ"[೧೪]. ಪ್ರಸ್ತುತ ಸಂದರ್ಭದಲ್ಲಿಯೂ ಕೆಲವು ಸಮುದಾಯಗಳ ಸಾವಿನ ಸೂತಕವಿರುವ ಕುಟುಂಬಗಳು ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿಸಿಗಲೆಂದು ಮತ್ತು ಆ ಮನೆಯಲ್ಲಿರುವ ಮಕ್ಕಳು ಮರಿಗಳಿಗೂ ದೊಡ್ಡವರಿಗೂ ಕನಸಲ್ಲಿ ನನಸಲ್ಲಿ ಬರಬಾರದು ನೀನು ನೇರವಾಗಿ ವೈಕುಂಠಕ್ಕೆ ಹೋಗಿ ಎಲ್ಲರನ್ನೂ ಕಾಪಾಡಿಕೊಂಡು ಬರಬೇಕು ಎಂದು ಬುಡ್ಗ ಜಂಗಮರಿರುವ ಕಡೆ ಬಂದು ದಕ್ಷಿಣೆ ಕೊಟ್ಟು ಹೊಗಳಿಸಿಕೊಂಡು(ಆಶೀರ್ವಾದ)ಹೋಗುತ್ತಾರೆ. ಇಂತಹ ಸಂದರ್ಭದಲ್ಲಿ ಅಂದಿನ ಕಾಲದಲ್ಲಿ ಪೂರ್ವಜರು; ಎರಡಾಣೆ(ಬೇಡ) ಕೊಟ್ಟರೆ ಮಾತ್ರ ಹೆಚ್ಚು ಹೊಗುಳುತ್ತಿದ್ದರು. ಇಂದು ಅವರವರ ಶಕ್ತಾನುಸಾರವಾಗಿ, ಕೈಲಾದಷ್ಟು ಸಾವಿರ, ಎರಡು ಸಾವಿರ ರೂಪಾಯಿಗಳನ್ನು ನೀಡುತ್ತಾರೆ ಎಂದು ಬುರ್ರಕಥಾ ಕಲಾವಿದ ಬಲಗೊಲ್ಲ ಮಾರೆಪ್ಪ ಅವರು ಹೇಳುತ್ತಾರೆ. ಹೀಗೆ ಬೇಡ ಎಂಬ ಪದವು ಬುಡ್ಗ ಜಂಗಮರಿಗೆ ಬಂದಿರುವ ಸಾಧ್ಯತೆ ಇದೆ.

ಬುಡ್ಗ ಜಂಗಮರು ದೇವರಿಗೆ ಮುಡಿಪು ಕಟ್ಟುವಾಗ, ಮಕ್ಕಳಿಗೆ ಸಂದುಗಳು ಬಂದಾಗ, ಮದುವೆಯ ಸಂದರ್ಭದಲ್ಲಿ ಓಲಿ(ತೆರ) ಕೊಡುವಾಗ, ಗಂಡನ ಮನೆಗೆ ಕಳಿಸುವಾಗ, ವಿಚ್ಛೇದನ ನೀಡುವ ಸಂದರ್ಭದಲ್ಲಿ, ಕುಲ ಪಂಚಾಯಿತಿಯ ನ್ಯಾಯ ತೀರ್ಮಾನಿಸಿದ ನಂತರ ತಪ್ಪು ದಂಡ ಇಡುವ ಸಂದರ್ಭದಲ್ಲಿ, ಮರುಮದುವೆ ಮಾಡಿಕೊಳ್ಳುವ ಸಂದರ್ಭದಲ್ಲಿ, ತಮ್ಮ ಸಮುದಾಯದ ಶವಸಂಸ್ಕಾರ ನೆರವೇರಿಸುವ ಸಂದರ್ಭದಲ್ಲಿ ವಿಶೇಷವಾಗಿ 'ಎರಡಾಣೆ'(ಬೇಡ) ನಾಣ್ಯವನ್ನು ಬಳಸುತ್ತಿದ್ದರಿಂದ

ಇವರಿಗೆ ಬೇಡ ಬುಡ್ಗ ಜಂಗಮರು ಎಂದು ಕರೆದಿರುವ ಸಾಧ್ಯತೆಗಳಿವೆ. ಈ ಎರಡು ಪದಗಳು ಒಂದೇ ಸಮುದಾಯದ ಸಂಸ್ಕೃತಿ ಆಚಾರ ವಿಚಾರವನ್ನು ಪ್ರತಿನಿಧಿಸುವ ಸಮಾನಾರ್ಥಕ ಪದಗಳಾಗಿವೆ. ಈಗಲೂ ತೆಲಂಗಾಣ ರಾಜ್ಯದ ಪರಿಶಿಷ್ಟ ಜಾತಿ ಪಟ್ಟಿಯ ಕ್ರಮಸಂಖ್ಯೆ ೪ರಲ್ಲಿ ಬೇಡ(ಬುಡ್ಗ)ಜಂಗಮ್ ಎಂದು ದಾಖಲಾಗಿದೆ. ಬೇಡ (ಬುಡ್ಗ) ಜಂಗಮ್ ಎಂಬ ಹೆಸರಿನಲ್ಲಿ ಬುಡ್ಗ ಜಂಗಮರು ಜಾತಿ ಪ್ರಮಾಣಪತ್ರಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಮತ್ತು ಅವರ ಸಂಘಟನೆಗಳ ಶಿರೋನಾಮೆಯಲ್ಲಿ ಬೇಡ(ಬುಡ್ಗ)ಜಂಗಂ ಎಂದು ಬಳಸುತ್ತಿದ್ದಾರೆ. ತೆಲಂಗಾಣ, ಆಂಧ್ರ ಪ್ರದೇಶ, ಕರ್ನಾಟಕ, ಮಹಾರಾಷ್ಟ್ರದಲ್ಲಿರುವ ಒಂದೇ ಕುಲ ಬಳಿಗಳು ಹೊಂದಿರುವ ಬೇಡ ಬುಡ್ಗ ಜಂಗಮರು ಒಬ್ಬರಿಗೊಬ್ಬರಿಗೂ ಕೊಡು ತೆಗೆದುಕೊಳ್ಳುವ ಬೀಗಸ್ಥನ ಮಾಡಿದ್ದಾರೆ. ಬೇಡ ಜಂಗಮರೆಂದರೆ ಬುಡ್ಗ ಜಂಗಮರೆಂದು ೧೯೬೫ರಲ್ಲಿ ಲೋಕುರ್ ಸಮಿತಿಯಲ್ಲಿ ವರದಿ ಮಾಡಿದ್ದಾರೆ. ಆದರೆ ಇವರು ವೀರಶೈವ ಲಿಂಗಾಯತ ಜಂಗಮರಲ್ಲ.

ಕರ್ನಾಟಕದಲ್ಲಿ ಬುಡ್ಗ ಜಂಗಮರು ೧೯೬೧ ಮತ್ತು ೧೯೭೧ರಲ್ಲಿ ಜನಗಣತಿಯಲ್ಲಿ ಬೇಡ(ಬುಡ್ಗ) ಜಂಗಮ್ ಎಂದು ಒಂದೇ ಪದದಲ್ಲಿ ದಾಖಲಾಗಿದ್ದ ಹೆಸರನ್ನು, ಕೆಲವು ಪ್ರಬಲ ಸಮುದಾಯಗಳು ರಾಜಕೀಯ ಪ್ರಭಾವನ್ನು ಬಳಸಿಕೊಂಡು ಪರಿಶಿಷ್ಟ ಜಾತಿ ಪಟ್ಟಿಯ ಕ್ರಮ ಸಂಖ್ಯೆ ೧೯ರಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್ ಎಂದು ಎರಡು ಬೇರೆ ಬೇರೆ ಪದಗಳಾಗಿ ದಾಖಲಿಸಿದ್ದಾರೆ. ಅಧಿಕಾರಿಗಳು ಹಾಗೂ ಅನ್ಯ ಸಮುದಾಯದ ಸಮಸ್ಯೆ ಕಿರಿಕಿರಿಗಳಿಂದ ಬೇಡ(ಬುಡ್ಗ) ಜಂಗಮರು ಕೇವಲ ಬುಡ್ಗ ಜಂಗಮ್ ಹೆಸರಿನಲ್ಲಿ ಮಾತ್ರ ಜಾತಿ ಪ್ರಮಾಣಪತ್ರಗಳನ್ನು ಪಡೆಯುತ್ತಿದ್ದಾರೆ. ಕರ್ನಾಟಕದಲ್ಲಿ ಬೇಡ ಜಂಗಮ್ ಎಂಬ ಹೆಸರಿನಲ್ಲಿ ಬುಡ್ಗ ಜಂಗಮರಾರು ಜಾತಿಪ್ರಮಾಣ ಪತ್ರಗಳು ಪಡೆದುಕೊಂಡಿಲ್ಲ, ಅನ್ಯ ಸಮುದಾಯದವರು ಬೇಡ ಜಂಗಮರ ಹೆಸರಿನಲ್ಲಿ ಪರಿಶಿಷ್ಟರ ಜಾತಿ ಪ್ರಮಾಣಪತ್ರಗಳನ್ನು ಪಡೆದಿದ್ದಾರೆ.

**ಸಂವಿಧಾನದ ಪರಿಶಿಷ್ಟ ಜಾತಿ ಮೀಸಲಾತಿ ಪಟ್ಟಿಯಲ್ಲಿ ಬುಡ್ಗ ಜಂಗಮರು**

ಅಸ್ಪೃಶ್ಯತೆಯ ನಿರ್ಮೂಲನೆ, ಅಸಮಾನತೆ ಹೋಗಲಾಡಿಸಲು, ಶೋಷಣೆಯ ನಿರ್ಮೂಲನೆಗೊಳಿಸಲು ದಮನಿತರ ಅಭಿವೃದ್ಧಿಯನ್ನು ಕಾಣಲೆಂದೇ ಮೀಸಲಾತಿಯ ವ್ಯವಸ್ಥೆಯನ್ನು ಜಾರಿಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಭಾರತದ ಸಂವಿಧಾನವು ಅನುಚ್ಛೇದ ೩೪೧/೩೪೨ರ ಪ್ರಕಾರ ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟು ಎಂದು ಆದೇಶಿಸಿ ೧೦೧ ಜಾತಿಗಳನ್ನು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ, ೫೦ ಬುಡಕಟ್ಟುಗಳನ್ನು ಮೀಸಲಾತಿ ಪಟ್ಟಿಯಲ್ಲಿ ಸೇರಿಸಲ್ಪಟ್ಟಿದೆ. "ಹಲವಾರು ಜಾತಿಗಳನ್ನು ಒಳಗೊಂಡಿರುವ ಭಾರತದ ಸಮಾಜದಲ್ಲಿ ಏಣಿ-ಶ್ರೇಣಿಗಳನ್ನು ಕಾಣುತ್ತೇವೆ. ಮೊದಲಿಗೆ ನಾಲ್ಕು ವರ್ಣಗಳಾಗಿ ವಿಭಾಗಿಸಲ್ಪಟ್ಟಿದ್ದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಸಮಾಜವು ಕಡೆಗೆ ಶೂದ್ರರ ಆಚೆ ಅಸ್ಪೃಶ್ಯರು ಎನ್ನುವ ವಿಭಾಗವೊಂದನ್ನು ಹುಟ್ಟುಹಾಕಲ್ಪಟ್ಟಿತು. ಈ ಅಸ್ಪೃಶ್ಯ ಅಥವಾ ಅಂತ್ಯಜ ಎಂದು ಸಮಾಜದಲ್ಲಿ ಗುರುತಿಸಲ್ಪಡುವವರನ್ನು ಪರಿಶಿಷ್ಟ ಜಾತಿ ಎಂದು ಕರೆಯಲ್ಪಟ್ಟಿತ್ತು" ಅದೇ

ರೀತಿಯಾಗಿ "ಭಾರತದಲ್ಲಿ ಅನಾದಿ ಕಾಲದಿಂದ ನೆಲೆನಿಂತು ತನ್ನದೇ ಆದ ಭಾಷೆ, ಸಂಸ್ಕೃತಿ, ಆಚರಣೆ, ಜೀವನ ವಿಧಾನದಿಂದ ಜೀವಿಸುವ ಸಮುದಾಯಗಳನ್ನು ಬುಡಕಟ್ಟುಗಳೆಂದು ಗುರುತಿಸುವರು. ಇವು ಎಂಥದೇ ಪರಿಸ್ಥಿಯಲ್ಲೂ ತನ್ನ ಬುಡಕಟ್ಟಿನ ಅನನ್ಯತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುವವು"[೧೫]. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಹಿಂದುಳಿದ ಸಮುದಾಯಗಳನ್ನು ಸಂವಿಧಾನದ ಅನುಚ್ಛೇದ ೩೪೧/೩೪೨ರ ಪ್ರಕಾರ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದಲ್ಲಿ ಮೀಸಲಾತಿಯನ್ನು ಕಲ್ಪಿಸಿದ್ದಾರೆ*(ಅ:೧)*. ಅಸ್ಪೃಶ್ಯ ಅಲೆಮಾರಿ ಬುಡ್ಗ ಜಂಗಮ್ ಸಮುದಾಯವನ್ನು ತೆಲುಗು ಭಾಷಿಕ ಪ್ರದೇಶದ ಆಂಧ್ರ ಪ್ರದೇಶದಲ್ಲಿ ೧೯೫೦ರಲ್ಲಿ ಹೈದರಾಬಾದಿನ ಹಿಂದಿನ ನಿಜಾಂ ಪ್ರಭುತ್ವದಲ್ಲಿ ಪರಿಶಿಷ್ಟ ಜಾತಿ ಪಟ್ಟಿಯ ಕ್ರಮಸಂಖ್ಯೆ ೪ರಲ್ಲಿ ಬೇಡ(ಬುಡ್ಗ)ಜಂಗಮ್ ಎಂದು ದಾಖಲಾಗಿದೆ.

೧೯೫೬ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ತಿದ್ದುಪಡಿ ಪ್ರಕಾರ ಬೇಡ(ಬುಡ್ಗ) ಜಂಗಮರು ಹೈದರಾಬಾದ್, ಮೆಹಬೂಬ್ ನಗರ, ಆದಿಲ್ ಬಾದ್, ನಿಜಾಮಬಾದ್, ಮೇದಕ್ ನಗರ, ಕರಿಂ ನಗರ, ವರಂಗಲ್, ಕಮ್ಮಂ ಮತ್ತು ನಲ್ಲಗೊಂಡ ಜಿಲ್ಲೆಗಳಲ್ಲಿ ದಾಖಲಾಗಿದ್ದಾರೆ. ೧೯೭೬ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಪರಿಷ್ಕೃತ ತಿದ್ದುಪಡಿ ಪಟ್ಟಿ ಪ್ರಕಾರ ಬೇಡ ಜಂಗಮ್, ಬುಡ್ಗ ಜಂಗಮ್ ಎಂದು ರಾಜ್ಯದಾದ್ಯಂತ ಇದ್ದಾರೆ ಎಂದು ತಿದ್ದುಪಡಿಯಾಗುತ್ತದೆ. ದಕ್ಷಿಣ ಭಾರತದ ದ್ರಾವಿಡ ಭಾಷಾವಾರು ಪ್ರದೇಶಗಳಾದ ಆಂಧ್ರಪ್ರದೇಶ, ತೆಲಂಗಾಣ, ಮಹಾರಾಷ್ಟ್ರ ಹಾಗೂ ಕರ್ನಾಟಕದಲ್ಲಿ ನೆಲೆಸಿರುವ ಬುಡ್ಗ ಜಂಗಮರು ಭಾಷಾವಾರು ಪ್ರಾಂತ್ಯಗಳು ರಚನೆಯಾದ ಮೇಲೆ ಕನ್ನಡ ನಾಡಿನ ಹೈದ್ರಾಬಾದ್ ಕರ್ನಾಟಕ ಗಡಿಭಾಗದ ಪ್ರದೇಶದಲ್ಲಿ ಬುಡ್ಗ ಜಂಗಮರು ದಾಖಲಿದ್ದಾರೆ.

ಕನ್ನಡ ಭಾಷಿಕ ಪ್ರದೇಶದ ಕರ್ನಾಟಕದಲ್ಲಿ ೧೯೫೦ರಲ್ಲಿ ಬೇಡ(ಬುಡ್ಗ) ಜಂಗಮ್ ಸಮುದಾಯವು ಬೀದರ್, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಯಲ್ಲಿ ನೆಲೆಸಿದ್ದಾರೆಂದು ದಾಖಲಾಗಿದೆ. ೧೯೫೬ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ತಿದ್ದುಪಡಿ ಪ್ರಕಾರ ಬೇಡ(ಬುಡ್ಗ) ಜಂಗಮ್ ಸಮುದಾಯವು ಬೀದರ್, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಯಲ್ಲಿ ನೆಲೆಸಿದ್ದಾರೆಂದು ದಾಖಲಾಗಿದೆ.

೧೯೬೦ರಲ್ಲಿ ಕರ್ನಾಟಕದಲ್ಲಿ ಅಂದಿನ ಮೈಸೂರು ರಾಜ್ಯದ ಬೀದರ, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳಿಗೆ ಸೀಮಿತಗೊಂಡಂತೆ ಸಂವಿಧಾನಬದ್ಧವಾಗಿ ಪರಿಶಿಷ್ಟ ಜಾತಿ ಪಟ್ಟಿಯ ಕಮ್ರ ಸಂಖ್ಯೆ ೪ರಲ್ಲಿ 'ಬೇಡ(ಬುಡ್ಗ)ಜಂಗಮ್' ಎಂದು ದಾಖಲಾದರು.

೧೯೬೫ರ ಲೋಕುರ್ ಬಿ ಎನ್ ಕಮಿಟಿ ಪರಿಶಿಷ್ಟ ಜಾತಿಗಳ ಪಟ್ಟಿಯ ವರದಿಯ ಅನುಸಾರ ಆಂಧ್ರ ಪ್ರದೇಶ, ಮಹಾರಾಷ್ಟ್ರ, ಮೈಸೂರು ರಾಜ್ಯದಲ್ಲಿ ಬೇಡ ಜಂಗಮ್ ಸಮುದಾಯದ ಸಮನಾರ್ಥಕ ಪದ ಬುಡ್ಗ ಜಂಗಮ್ ಸಮುದಾಯ ಎಂದು ಗುರುತಿಸಿದ್ದಾರೆ. ಹಾಗಾಗಿ ಬೇಡ ಜಂಗಮ್ ರೆಂದರೆ ಬುಡ್ಗ ಜಂಗಮರೆಂದು ಎಂದು ಕರೆದಿದ್ದಾರೆ.

**B N Lokur Committe** Report Advisory committee on the revision of the lists of scheduled castes and scheduled tribes,1965

| State | S.l | Cast | Synonym | Sub Cast |
|---|---|---|---|---|
| **Andra Pradesh**<br>Appendix-VII, Page no -63 | 8 | BEDA JANGM | BUDGA JANGAM | - |
| **Maharashtra**<br>Appendix-VII, Page no -73 | 7 | BEDA JANGM | BUDGA JANGAM | - |
| **Mysore**<br>Appendix-VII, Page no -75 | 10 | BEDA JANGM | BUDGA JANGAM | - |

ಭಾರತ ಸರಕಾರ ೧೯೭೬ರಲ್ಲಿ ಪರಿಶಿಷ್ಟ ಜಾತಿಯ ಪರಿಷ್ಕೃತ ಪಟ್ಟಿಯಲ್ಲಿ ರಾಜ್ಯದಾದ್ಯಂತ ವಿಸ್ತರಸಿದ ಪಟ್ಟಿಯ ಪ್ರಕಾರ ಆಂಧ್ರ ಪ್ರದೇಶ ಮತ್ತು ಮಹಾರಾಷ್ಟ್ರದ ರಾಜ್ಯದ ಪರಿಶಿಷ್ಟ ಜಾತಿ ಪಟ್ಟಿಯ ಕ್ರಮ ಸಂಖ್ಯೆ ೯ರಲ್ಲಿ ಮತ್ತು ಕರ್ನಾಟಕದ ಅದೇ ಪಟ್ಟಿಯ ಕ್ರಮಸಂಖ್ಯೆ ೧೯ರಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್ ಎಂದು ದಾಖಲಾಗಿದೆ. ಆರಂಭದಲ್ಲಿ ಒಂದೇ ಕ್ರಮಸಂಖ್ಯೆಯಲ್ಲಿ 'ಬೇಡ(ಬುಡ್ಗ)ಜಂಗಮ್' ಎಂದು ಇದ್ದ ಹೆಸರನ್ನು ಕಾಲಂತರದಲ್ಲಿ ಒಂದೇ ಕ್ರಮಸಂಖ್ಯೆಯಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್ ಎಂದು ದಾಖಲಿಸಿದ್ದಾರೆ. ಈ ಪದಗಳು ಒಂದೇ ಸಮುದಾಯವನ್ನೇ ಪ್ರತಿನಿಧಿಸುವ ಪರ್ಯಾಯ ಪದಗಳಾಗಿರುವುದರಿಂದ, ಒಂದೇ ಕ್ರಮ ಸಂಖ್ಯೆಯಲ್ಲಿ ದಾಖಲಿಸಿದ್ದಾರೆ. ಉದಾ: ಪಜಾ ಪಟ್ಟಿಯ ಕ್ರಮ ಸಂ: ೧೭ರಲ್ಲಿ ಬಂಜಾರ ಸಮುದಾಯವನ್ನೇ ಪ್ರತಿನಿಧಿಸುವ ಪರ್ಯಾಯ ಪದಗಳಾದ ಬಂಜಾರ, ಲಂಬಾಣಿ, ಲಂಬಡ, ಲಂಬಾಡಿ, ಲಮಣಿ, ಸುಗಾಲಿ, ಸುಕಾಲಿ ಎಂಬ ಹೆಸರುಗಳಾಗಿವೆ. ಅದೇರೀತಿಯಾಗಿ ಪಜಾ ಪಟ್ಟಿಯ ಕ್ರಮ ಸಂ: ೯೭ ರಲ್ಲಿ ಸಿಂಧೋಳ್ ಸಮುದಾಯವನ್ನೇ ಪ್ರತಿನಿಧಿಸುವ ಪರ್ಯಾಯ ಪದಗಳಾದ ಸಿಂಧೊಳ್ಳು, ಚಿಂದೊಳ್ಳು ಹೀಗೆ ಹಲವಾರು ಶೋಷಿತ ಸಮುದಾಯಗಳನ್ನು ಒಂದೇ ಆಚಾರ ವಿಚಾರ, ಸಂಸ್ಕೃತಿಗಳನ್ನು ಹೊಂದಿರುವ ಸಮುದಾಯಗಳ ಪರ್ಯಾಯ ಹೆಸರುಗಳನ್ನು ಒಂದೇ ಕ್ರಮಸಂಖ್ಯೆಯಲ್ಲಿ ದಾಖಲಿಸಿರುವುದು ಕಂಡು ಬರುತ್ತದೆ.



ಆಂಧ್ರ ಪ್ರದೇಶ(ತೆಲಂಗಾಣ) ಮತ್ತು ಕರ್ನಾಟಕದಲ್ಲಿ ಜನಗಣತಿ ಪಟ್ಟಿಯಲ್ಲಿಯೂ ಮೂಲದಲ್ಲಿ ೧೯೬೧ ರಲ್ಲಿ ಬೇಡ(ಬುಡ್ಗ)ಜಂಗಮ್ ಹೆಸರಿನಲ್ಲಿ, ೧೯೭೧ ರಲ್ಲಿ ಬೇಡ(ಬುಡ್ಗ)ಜಂಗಮ್, ೧೯೮೧ ರಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್, ೧೯೯೧ ರಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್, ೨೦೦೧ ರಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್, ೨೦೧೧ ರಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್ ಹೆಸರಿನಲ್ಲಿ ದಾಖಲಾಗಿದೆ.

೨೦೧೬ರಲ್ಲಿ ಕರ್ನಾಟಕ ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಪಟ್ಟಿಯಲ್ಲಿ ಕೆಲವು ಸೂಕ್ಷ್ಮ ಅತಿಸೂಕ್ಷ್ಮ ಅಲೆಮಾರಿ ಅರೆಅಲೆಮಾರಿ ಸಮುದಾಯಗಳ ಅಭಿವೃದ್ಧಿಗಾಗಿ ೨೦೧೧ರ ಜನಗಣತಿ ಮಾಹಿತಿಯಂತೆ ಲಭ್ಯವಿರುವ ಜನಸಂಖ್ಯಾ ಅನಕ್ಷರತೆ ಇತ್ಯಾದಿ ವಿಷಯಗಳನ್ನು ಪರಿಶೀಲಿಸಿ ಮತ್ತು ಈ ಜಾತಿಗಳ ವೃತ್ತಿ ಮತ್ತು ಇತರೆ ಲಕ್ಷಣಗಳನ್ನು ಗಂಭೀರವಾಗಿ ಪರಿಗಣಿಸಿ ಕ್ರಮ ಸಂಖ್ಯೆ ೦೨ರಲ್ಲಿ ಬುಡ್ಗ ಜಂಗಮರನ್ನು ದಾಖಲಿಸಿದ್ದಾರೆ. (ಅನುಬಂಧ ೪: ಸರ್ಕಾರದ ಆದೇಶ ಸಂಖ್ಯೆ: ಸಕಇ ೧೦ ಎಸ್ ಎಲ್ ಪಿ ೨೦೧೫ ಬೆಂಗಳೂರು, ದಿನಾಂಕ ೧೨.೦೧.೨೦೧೬).

**ಬುಡ್ಗ ಜಂಗಮರ ಮೂಲ:** ಬುಡ್ಗ ಜಂಗಮರು ಕರ್ನಾಟಕ ಆಂಧ್ರ ಗಡಿಭಾಗದಲ್ಲಿರುವ ಶ್ರೀಶೈಲ ಪರ್ವತದ ಮೂಲನಿವಾಸಿಗಳಾಗಿದ್ದಾರೆ. ಕಾಲಾಂತರದಲ್ಲಿ ನಾಡಿಗೆ ಪ್ರವೇಶ ಪಡೆದ ಬುಡ್ಗ ಜಂಗಮರು ಬುರ್ರಕಥೆ ಮತ್ತು ಹಗಲುವೇಷದ ಮೂಲಕ ಜಂಗಂ ಕಥೆಗಳನ್ನು ಹೇಳುತ್ತಾ, ಕಲಾ ಪ್ರದರ್ಶನ ಮಾಡುತ್ತಾ ದನಕರ ಆಡು ಕುರಿ ಕೋಳಿಗಳನ್ನು ಮತ್ತು ಬಟ್ಟೆ–ಬರೆ, ಕಾಳುಕಡ್ಡಿ ಹಣವನ್ನು ದಾನ ಧರ್ಮವಾಗಿ ನಿತ್ಯ ನಿರಂತರವಾಗಿ ಊರೂರು ಅಲೆಯುತ್ತಾ ಜೀವನ ಮಾಡುತ್ತಿದ್ದರು. ಹೀಗೆ ಊರಲ್ಲಿ ಕೊಟ್ಟ ದನಕರುಗಳನ್ನು ಸಾಕುತ್ತಾ ಬೆಟ್ಟಗುಡ್ಡ ಪ್ರದೇಶದಲ್ಲಿ ಅಲೆಯುತ್ತಾ ಅಲ್ಲಿರುವ ಪ್ರಾದೇಶಿಕ ದೇವರುಗಳನ್ನು ಆರಾಧಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಇವರ ಧಾರ್ಮಿಕ ಕೇಂದ್ರಗಳಲ್ಲಿಯೇ ಅವರು ನಡೆದು ಬಂದ ಹಾದಿಯನ್ನು ಮತ್ತು ಅವರ ಮೂಲವನ್ನು ಕಂಡುಕೊಳ್ಳಬಹುದಾಗಿದೆ. ವಲಸೆ ಹೋದಲ್ಲಿ ಪ್ರಾದೇಶಿಕವಾಗಿ ಸ್ಥಳೀಯ ದೇವರುಗಳನ್ನು ಆರಾಧಿಸುವುದನ್ನು ಕಾಣಬಹುದು. ಬಹುಮುಖ್ಯವಾಗಿ ಈ ಸಮುದಾಯದ ಕುಲದೇವರು ಜಮ್ಮುಲಮ್ಮ ಮತ್ತು ಸುಂಕ್ಲಮ್ಮ ದೇವರುಗಳಾಗಿವೆ. ಬುಡ್ಗ ಜಂಗಮರ ವಲಸೆಕ್ರಮಗಳನ್ನು ಈ ಕೆಳಗಿನಂತೆ ಧಾರ್ಮಿಕ ಕೇಂದ್ರಗಳ ಮೂಲಕ ವಿವರಿಸಲಾಗಿದೆ.

ಗದ್ವಾಲ್ ಶ್ರೀ ಜಮ್ಮುಲಮ್ಮ, ಗೋಲ್ಕಂಡ ಶ್ರೀ ಮಹಾಕಾಳಿ ಜಗದಾಂಬ, ಧನ್ನಾವಾಡ ಶ್ರೀ ಮಾರೆಮ್ಮ, ಕನಕಪುರಂ ಶ್ರೀ ಭೂಲಕ್ಷ್ಮೀ ದೇವಿ, ವೆಂಕಯ್ಯಪಲ್ಲಿ ಜಮ್ಮುಲಮ್ಮ, ಕೆ ನಾಗಲಾಪುರದ ಶ್ರೀ ಸುಂಕ್ಲಮ್ಮ, ಗದ್ದರಾಳ ಶ್ರೀ ಮಾರೆಮ್ಮ, ಕಂದನಾತಿ ಮಾರೆಮ್ಮ, ಆದೋನಿ ಶ್ರೀ ಎಲ್ಲಮ್ಮ, ಕಡವಲಕುಂಡ ಶ್ರೀ ಸುಂಕ್ಲಮ್ಮ, ಉರವಕೊಂಡ ಲಾಲಸ್ವಾಮಿ, ಬಳ್ಳಾರಿ ಶ್ರೀ ಕನಕ ದುರ್ಗಮ್ಮ, ಗೌರಸಮುದ್ರ ಶ್ರೀ ಮಾರೆಮ್ಮ, ನಾಗಸಮುದ್ರ ಶ್ರೀ ಮಾರೆಮ್ಮ, ರಾಯಪುರದ ಶ್ರೀ ಮಾರೆಮ್ಮ, ವಡ್ಡು ಶ್ರೀ ಮಾಯಮ್ಮ, ಹುಲಿಗಿ ಶ್ರೀ ಹುಲಿಗೆಮ್ಮ, ಹಿರೇ ಮೊಮ್ಮನಾಳ್ ಶ್ರೀ ಕೂಗಮ್ಮ, ಚಿಕ್ಕ ಮೊಮ್ಮನಾಳ್ ಶ್ರೀ ಗಾಳಿ ದುರ್ಗಮ್ಮ, ಚಿಲುಕಮುಖಿ ಶ್ರೀ ಕೂಗಮ್ಮ, ಸೂಳೆಕಲ್ಲು ಶ್ರೀ ಗಾಳಿ ದುರ್ಗಮ್ಮ, ಮುಸ್ಲಪುರ ಶ್ರೀದುರ್ಗಮ್ಮ, ಕುದರೆಮೋತಿ ಹುಸೇನ್ ಬಾಷಾ ಅಲಾನಿ ಹೀಗೆ ಅವರ 'ಬಿಡಾರು' ಆಚರಣೆಯ ಕಟ್ಟಾಗಳಿಂದ ಬುಡ್ಗ ಜಂಗಮರ ಮೂಲವನ್ನು ಕಂಡುಕೊಳ್ಳಬಹುದಾಗಿದೆ.

**ಗದ್ವಾಲ್ ಶ್ರೀ ಜಮ್ಮುಲಮ್ಮ:** ಆಂಧ್ರಪ್ರದೇಶದ ಮೆಹಬೂಬ್‌ನಗರ ಜಿಲ್ಲೆಯ ಗದ್ವಾಲ್ ಕೋಟೆಯ ಜಮ್ಮಿಚೆಡ್ ಗ್ರಾಮದ ಶ್ರೀ ಗದ್ವಾಲ್ ಜಮ್ಮುಲಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಮೆಹಬೂಬ್‌ನಗರದಿಂದ ೧೦೦ ಕಿ.ಮೀ, ಕರ್ನೂಲ್‌ನಿಂದ ೬೦ ಕಿ.ಮೀ, ಗದ್ವಾಲ್‌ನಿಂದ ೩ ಕಿ.ಮೀ

ದೂರದಲ್ಲಿದೆ. ಈ ದೇವಿಯು ಫಲವಂತಿಕೆಯ ಸಂಕೇತವಾಗಿ ಬಿತ್ತನೆ ಮಾಡುವ ಬೀಜಗಳನ್ನು ಮೊದಲು ದೇವಿಯ ಹತ್ತಿರ ಬಂದು ಪ್ರಾರ್ಥಿಸಿಕೊಂಡು ಹೋಗಿ ಹೊಲದಲ್ಲಿ ಬಿತ್ತನೆ ಮಾಡುತ್ತಾರೆ. ದ್ವಾಪರಯುಗದಲ್ಲಿ ಪಾಂಡವರು ಈ ದೇವಿಗೆ ಮೊದಲ ಆದ್ಯತೆಯನ್ನು ನೀಡುತ್ತಿದ್ದರು ಎಂದು ಹೇಳಲಾಗಿದೆ. ಈ ದೇವರನ್ನು ಗದ್ವಾಲ್ ದೊರೆಗಳು ಸಹ ಪೂಜಿಸುತ್ತಿದ್ದರು. ಪಶುಪಾಲನೆ, ಕುರಿಸಾಕಾಣಿಕೆಗೆ ಈ ಬಯಲು ಗುಡ್ಡಗಾಡು ಪ್ರದೇಶವು ಸೂಕ್ತವಾಗಿದ್ದರಿಂದ ಇವರ ಪೂರ್ವಜರು ಇಲ್ಲೇ ನೆಲೆಸಿದರು ಎಂದು ಹೇಳುತ್ತಾರೆ. ತಾವು ಎಷ್ಟೇ ದೂರದಲ್ಲಿ, ಬದುಕಿಗಾಗಿ ವಲಸೆ ಹೋದರೂ ವರ್ಷಕ್ಕೊಮ್ಮೆಯಾದರೂ ಇಲ್ಲಿಗೆ ಬಂದು ಕಾಯಿ ಕರ್ಪೂರ ಕೊಟ್ಟು ನಮಸ್ಕರಿಸಿ ಹೋಗುತ್ತಾರೆ. ಒಂದು ವೇಳೆ ಕೆಲವರಿಗೆ ಅಷ್ಟು ದೂರ ಹೋಗಲಿಕ್ಕೆ ಸಾಧ್ಯವಾಗದಿದ್ದರೆ ಎಲ್ಲಿ 'ಹುತ್ತ' ಇರುತ್ತದೆಯೋ ಅಲ್ಲಿ ಹೋಗಿ ಪೂಜೆ ಮಾಡಿ ಬರುತ್ತಿದ್ದರು ಎಂದು ಹೇಳುತ್ತಾರೆ. ಇವರು ಹುತ್ತವನ್ನು ಜಮ್ಮುಲಮ್ಮ ದೇವರು ಎಂದು ಪರಿಗಣಿಸುತ್ತಾರೆ. ಬುಡ್ಗ ಜಂಗಮರು ಇಲ್ಲಿ 'ಬಿಡಾರು' ಆಚರಣೆ ಸಹ ಮಾಡುತ್ತಿದ್ದರು. ಹಾಗಾಗಿ ಬುಡ್ಗ ಜಂಗಮರು ಈ ಪ್ರದೇಶವನ್ನು ಗದ್ವಾಲ್ ಬಿಡಾರು ಅಥವಾ ಗದ್ವಾಲ್ ಕಟ್ಟಾ ಎಂದು ಕರೆಯುತ್ತಾರೆ.

**ಗೋಲ್ಕಂಡ ಶ್ರೀ ಮಹಾಕಾಳಿ ಜಗದಾಂಬ:** ತೆಲಂಗಾಣದ ರಾಜ್ಯದ ಹೈದರಾಬಾದ್ ಜಿಲ್ಲೆಯ ಗೋಲ್ಕಂಡ ಕೋಟೆಯಲ್ಲಿ ಶ್ರೀ ಮಹಾಕಾಳಿ ಜಗದಾಂಬ ದೇವಸ್ಥಾನವು ಇದೆ. ಈ ದೇವಸ್ಥಾನವು ಹೈದರಾಬಾದ್‌ನ ಪಶ್ಚಿಮಕ್ಕೆ ೧೧ ಕಿ.ಮೀ ದೂರದಲ್ಲಿದೆ. ಗೋಲ್ಕಂಡವು ಮೊದಲು ಕುರುಬರ ಬೆಟ್ಟವಾಗಿದ್ದು ಎಂದು ಹೇಳುತ್ತಾರೆ. ಪಶುಪಾಲನೆಗೆ ಮತ್ತು ಕುರಿಸಾಕಾಣಿಕೆಗೆ ಈ ಬಯಲು ಪ್ರದೇಶ ಅಲೆಮಾರಿಗಳಿಗೆ ಸೂಕ್ತವಾದ ಪ್ರದೇಶವಾಗಿತ್ತು. ಇಲ್ಲಿ ಅಲೆಮಾರಿಗಳು ನೆಲೆಸಿದರಿಂದ ಈ ಕೋಟೆಗೆ ಗೊಲ್ಲಾ ಕೊಂಡ, ಗೋಲ್ ಕೊಂಡ, ಗೋಲ್ಕಂಡ, ಗೋಲ್ಕಂಡಾ ಎಂದು ಆಗಿದೆ. ಇಲ್ಲಿ ನೆಲೆಸಿರುವ ಶ್ರೀ ಜಗದಾಂಭ ಮಹಾಕಾಳಿ ದೇವತೆ, ಅಲೆಮಾರಿ ಸಮುದಾಯದ ಕುಲದೇವತೆಯಾಗಿ ಪೂಜನೀಯವಾಗಿದ್ದಾಳೆ. ಪ್ರತಿ ವರ್ಷ ಈ ದೇವಿಗೆ 'ಬೋನಾಲುಪಂಡಗ'(ಬೋನಾಲು ಹಬ್ಬ)ವನ್ನು ಅಲ್ಲಿನ ಸ್ಥಳೀಯ ಜನರು ಮತ್ತು ಅಲೆಮಾರಿಗಳು ಆಚರಿಸುತ್ತಾರೆ. ಬುಡ್ಗ ಜಂಗಮರು ಇಲ್ಲಿ 'ಬಿಡಾರು' ಆಚರಣೆ ಸಹ ಮಾಡುತ್ತಿದ್ದರು. ಹಾಗಾಗಿ ಈ ಪ್ರದೇಶವನ್ನು ಗೋಲ್ಕಂಡ ಬಿಡಾರು ಅಥವಾ ಗೋಲ್ಕಂಡ ಕಟ್ಟಾ ಎಂದು ಕರೆಯುತ್ತಾರೆ.

**ಧನ್ನಾವಾಡ ಶ್ರೀ ಮಾರೆಮ್ಮ:** ಆಂಧ್ರ ಪ್ರದೇಶ ರಾಜ್ಯದ ಕಡಪ ಜಿಲ್ಲೆಯ ಮೈಲವರಂ ಮಂಡಲದಲ್ಲಿರುವ ಒಂದು ಸಣ್ಣ ಕುಗ್ರಾಮ ಧನ್ನಾವಾಡದಲ್ಲಿ ಶ್ರೀ ಮಾರೆಮ್ಮ ದೇವಿ ನೆಲೆಸಿದ್ದಾಳೆ. ಈ ದೇವಸ್ಥಾನವು ಹೈದರಾಬಾದ್ ರಾಜ್ಯದಿಂದ ೨೩೫ ಕಿ.ಮೀ, ಕಡಪದಿಂದ ಪಶ್ಚಿಮಕ್ಕೆ ೮೫ ಕಿ.ಮೀ ದೂರದಲ್ಲಿದೆ. ಅಲೆಮಾರಿ ಬುಡ್ಗ ಜಂಗಮರು ಪಶುಪಾಲನೆ ಹಿನ್ನೆಲೆಯಿಂದ ತಮ್ಮ ಬದುಕಿಗಾಗಿ ವಲಸೆ ಬಂದಾಗ ಅಲ್ಲಿನ ಈ ದೇವತೆಯನ್ನು ಆರಾಧಿಸಿರುವುದನ್ನು ಕಾಣಬಹುದು. ಮತ್ತು ಬಿಡಾರು ಆಚರಣೆಯನ್ನು ಕೂಡ ಮಾಡುತ್ತಿದ್ದರು.

**ಕನಕಪುರಂ ಶ್ರೀ ಭೂಲಕ್ಷ್ಮೀ ದೇವಿ:** ಆಂಧ್ರ ಪ್ರದೇಶದ ಗೋದಾವರಿ ಜಿಲ್ಲೆಯ ಜೀಲುಗುಮಿಲ್ಲಿ ಮಂಡಲದ ಒಂದು ಸಣ್ಣ ಕುಗ್ರಾಮ ಕನಕಪುರಂನಲ್ಲಿ ಶ್ರೀ ಭೂಲಕ್ಷೀಮಿ ದೇವಿಯ ದೇವಸ್ಥಾನವು

ಇದೆ. ಈ ದೇವಸ್ಥಾನವು ಜೀಲುಗುಮಿಲ್ಲಿ ನಿಂದ ೫.೬ ಕಿ.ಮೀ, ಗೋದಾವರಿ ಜಿಲ್ಲೆಯಿಂದ ೬೫ ಕಿ.ಮೀ, ಹೈದರಾಬಾದ್ ನಿಂದ ೩೩೫ ಕಿ.ಮೀ ದೂರದಲ್ಲಿದೆ. ಅಲೆಮಾರಿ ಬುಡ್ಗ ಜಂಗಮರು ಪಶುಪಾಲನೆ ಹಿನ್ನೆಲೆಯಿಂದ ತಮ್ಮ ಬದುಕಿಗಾಗಿ ವಲಸೆ ಬಂದು ಈ ದೇವತೆಯನ್ನು ಆರಾಧಿಸುತ್ತಿದ್ದರು. ಹೀಗೆ ಆರಾಧಿಸುತ್ತಾ ಹೊಟ್ಟೆಪಾಡಿಗಾಗಿ ಕರ್ನೂಲ್ ಜಿಲ್ಲೆಗೆ ಪ್ರವೇಶ ಪಡೆಯುತ್ತಾ ಅಲ್ಲಿನ ಸ್ಥಳೀಯ ದೇವರುಗಳನ್ನು ಆರಾಧಿಸಿದ್ದಾರೆ.

**ವೆಂಕಯ್ಯಪಲ್ಲಿ ಜಮ್ಮುಲಮ್ಮ:** ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ರಾಯಲಸೀಮೆಯ, ಕರ್ನೂಲ್ ಮಂಡಲಂ, ರುದ್ರವರಂ ಗ್ರಾಮಪಂಚಾಯಿತಿಯ ವೆಂಕಯ್ಯಪಲ್ಲಿ ಗ್ರಾಮದಲ್ಲಿ ಎಲ್ಲಮ್ಮ (ಜಮ್ಮುಲಮ್ಮ) ದೇವಸ್ಥಾನವು ಇದೆ. ಈ ದೇವಸ್ಥಾನವು ಕರ್ನೂಲ್ ಜಿಲ್ಲೆಯಿಂದ ಪೂರ್ವ ದಿಕ್ಕಿನಲ್ಲಿ ೮ ಕಿಮೀ ದೂರದಲ್ಲಿದೆ. ಈ ಜಮ್ಮುಲಮ್ಮ ದೇವಸ್ಥಾನವು ಮೊದಲು ಹುತ್ತದ ರೂಪದಲ್ಲಿ ಮಾತ್ರ ಇತ್ತು, ಕಾಲಾಂತರದಲ್ಲಿ ಗುಡಿ ಗೋಪುರ ಕಟ್ಟಿ ಅಲಂಕರಿಸಿದ್ದಾರೆ. ಈಗಲೂ ಈ ದೇವಸ್ಥಾನದ ಕೆಳಗೆ ಹುತ್ತವು ಕಂಡುಬರುತ್ತದೆ. ಕೇಳಿದ ಭಕ್ತರಿಗೆ ಅಲ್ಲಿನ ಪೂಜಾರಿಗಳು ತೋರಿಸುತ್ತಾರೆ. ಈ ದೇವಸ್ಥಾನಕ್ಕೆ ಮೊದಲು ಜಮ್ಮುಲಮ್ಮ ಎಂದು ಹೆಸರು ಕರೆಯುತ್ತಿದ್ದರು ಈಗ ಎಲ್ಲಮ್ಮ ದೇವಸ್ಥಾನ ಎಂದು ಕರೆಯುತ್ತಿದ್ದಾರೆ. ಈ ದೇವಸ್ಥಾನಕ್ಕೆ ಅಲೆಮಾರಿ ಬುಡ್ಗ ಜಂಗಮರು ತಾವು ಎಷ್ಟೇ ದೂರದಲ್ಲಿ ವಲಸೆ ಹೋದರು ಕನಿಷ್ಠ ವರ್ಷಕೊಮ್ಮೆಯಾದರೂ ಇಲ್ಲಿಗೆ ಬಂದು ಕಾಯಿ ಕರ್ಪೂರ, ಸೀರೆ ಕೊಟ್ಟು, ಭಂಡಾರ ತೆಗೆದುಕೊಂಡು ಹೋಗುತ್ತಾರೆ. *(ಭಾ:೩.೫)*

**ಕೆ ನಾಗಲಾಪುರದ ಶ್ರೀ ಸುಂಕ್ಲಮ್ಮ:** ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ರಾಯಲ ಸೀಮೆಯ, ಗುಡೂರು ಮಂಡಲಂ, ಕೆ ನಾಗಲಾಪುರಂ ಗ್ರಾಮದಲ್ಲಿ ಶ್ರೀ ಸುಂಕ್ಲಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಕರ್ನೂಲ್ ಜಿಲ್ಲೆಯಿಂದ ಪಶ್ಚಿಮ ದಿಕ್ಕಿನ ೩೦ ಕಿಮೀ ದೂರದಲ್ಲಿದೆ. ಅಲ್ಲಿ ಕೂಡ ಕಾಯಿ ಕರ್ಪೂರ, ಸೀರೆ ಕೊಟ್ಟು ಪೂಜಿಸಿಕೊಂಡು ಭಂಡಾರ ತೆಗೆದುಕೊಂಡು ಆರಾಧಿಸುತ್ತಾರೆ. *(ಭಾ:೩.೬)*

**ಗದ್ದರಾಳ ಶ್ರೀ ಮಾರೆಮ್ಮ:** ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ರಾಯಲ ಸೀಮೆಯ ಪತ್ತಿಕೊಂಡ ತಾಲೂಕಿನ ದೇವನಕೊಂಡ ಮಂಡಲಂ, ಗದ್ದರಾಳ ಗ್ರಾಮದಲ್ಲಿ ಮಾರೆಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಕರ್ನೂಲ್ ಜಿಲ್ಲೆಯಿಂದ ಪಶ್ಚಿಮ ದಿಕ್ಕಿನ ೬೨ ಕಿಮೀ ದೂರದಲ್ಲಿದೆ. ಅಲ್ಲಿ ಕೂಡ ಕಾಯಿ ಕರ್ಪೂರ, ಸೀರೆ ಕೊಟ್ಟು, ಭಂಡಾರ ತೆಗೆದುಕೊಂಡು ಆರಾಧಿಸುತ್ತಾರೆ *(ಭಾ:೩.೭)*. ಎರಡು ವರ್ಷಕ್ಕೊಮ್ಮೆ ತಮ್ಮ ಬಂಧು ಬಳಗದವರು ಸಮೇತ ಹೋಗಿ ಕುರಿಕೋಳಿಗಳನ್ನು ಬಲಿಕೊಟ್ಟು 'ಬಿಡಾರು' ಆಚರಣೆಯನ್ನು ಮಾಡುತ್ತಿದ್ದರು. ಈಗಲೂ ೩ ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯಲ್ಲಿ ಸಾವಿರಾರು ಜನಸಂಖ್ಯೆಯಲ್ಲಿ ಅಲೆಮಾರಿಗಳು ಭಾಗವಹಿಸಿ ಆರಾಧಿಸುತ್ತಾರೆ.

**ಕಂದನಾತಿ ಶ್ರೀ ಮಾರೆಮ್ಮ:** ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ರಾಯಲ ಸೀಮೆಯ ಯಮ್ಮಿಗನೂರು ಮಂಡಲದ ಕಂದನಾತಿ ಗ್ರಾಮದಲ್ಲಿ ಶ್ರೀ ಮಾರೆಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಕರ್ನೂಲ್ ಜಿಲ್ಲೆಯಿಂದ ಪಶ್ಚಿಮಕ್ಕೆ ೭೨ ಕಿ.ಮೀ ಯಮ್ಮಿಗನೂರಿನಿಂದ ೮ ಕಿ.ಮೀ ಗುಡಿಕಲ್ ನಿಂದ

೬ ಕಿ.ಮೀ ದೂರದಲ್ಲಿದೆ. ಎರಡು ವರ್ಷಕ್ಕೊಮ್ಮೆ ತಮ್ಮ ಬಂಧು ಬಳಗದವರು ಕರೆದುಕೊಂಡು ಹೋಗಿ ಕುರಿಕೋಳಿಗಳನ್ನು ಬಲಿ ಕೊಟ್ಟು ಆರಾಧಿಸುತ್ತಾರೆ.

**ಆದೋನಿ ಶ್ರೀ ಎಲ್ಲಮ್ಮ:** ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ರಾಯಲ ಸೀಮೆಯ ಆದೋನಿಯಲ್ಲಿ ಶ್ರೀ ಎಲ್ಲಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಕರ್ನೂಲ್ ಜಿಲ್ಲೆಯಿಂದ ಪಶ್ಚಿಮಕ್ಕೆ ೧೧೦೪ ಕಿ.ಮೀ ದೂರದಲ್ಲಿದೆ. ಅಲೆಮಾರಿ ಬುಡ್ಗ ಜಂಗಮರು ತಮ್ಮ ಬದುಕಿಗಾಗಿ ವಲಸೆ ಬಂದು ಈ ದೇವತೆಯನ್ನು ಆರಾಧಿಸುತ್ತಾರೆ.

**ಕಡವಲಕುಂಡ ಶ್ರೀ ಸುಂಕ್ಲಮ್ಮ:** ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ರಾಯಲ ಸೀಮೆಯ ಉರವಕೊಂಡದ ಹತ್ತಿರ ಕಡವಲಕುಂಡ ಗ್ರಾಮದಲ್ಲಿ ಶ್ರೀ ಸುಂಕ್ಲಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನಕ್ಕೆ ಅಲೆಮಾರಿ ಬುಡ್ಗಜಂಗಮರು ಪ್ರತಿ ಮೂರು ವರ್ಷಕ್ಕೊಮ್ಮೆ ಕುರಿ ಕೋಳಿಗಳನ್ನು ಬಲಿಕೊಡುವುದರ ಮೂಲಕ ದೇವತೆಯನ್ನು ಆಚರಿಸುತ್ತಿದ್ದಾರೆ. ಮತ್ತು ಬಿಡಾರು ಆಚರಣೆ ಕೂಡ ಮಾಡುತ್ತಿದ್ದರು. ಇದೀಗ ಗುಂತಕಲ್ಲು ಪಟ್ಟಣದಲ್ಲಿ ನೆಲೆಸಿರುವುದರಿಂದ ಅಲ್ಲೆ ದೇವಸ್ಥಾನವು ಪ್ರತಿಷ್ಠಾಪಿಸಿಕೊಂಡು ಆರಾಧನೆ ಮಾಡಿಕೊಳ್ಳುತ್ತಿದ್ದಾರೆ. ಆದರೂ ಪ್ರಸ್ತುತ ದಿನದಲ್ಲೂ ಎರಡು ವರ್ಷಕ್ಕೊಮ್ಮೆ ತಮ್ಮ ಬಂಧು ಬಳಗದವರು ಕರೆದುಕೊಂಡು ಹೋಗಿ ಕುರಿ, ಕೋಳಿ ಬಲಿ ಆರಾಧಿಸುತ್ತಾರೆ.

**ಉರವಕೊಂಡ ಲಾಲ್‌ಸ್ವಾಮಿ:** ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ರಾಯಲ ಸೀಮೆಯ ಉರವಕೊಂಡದಲ್ಲಿ ಮುಸ್ಲಿಂ ಸಮಾಜದ ಲಾಲಸ್ವಾಮಿ ದೇವಸ್ಥಾನವು ಇದೆ. ಈ ದೇವಸ್ಥಾನಕ್ಕೆ ಅಲೆಮಾರಿ ಬುಡ್ಗ ಜಂಗಮರು ಆರಾಧಿಸುತ್ತಾರೆ. ಬುಡ್ಗ ಜಂಗಮರು ತಮ್ಮ ವಲಸೆಯ ಪಯಣದಲ್ಲಿ ಕಂಡುಬರುವ ಕಂಡ ದೇವರುಗಳನ್ನು ಕೈ ಮುಗಿಯುತ್ತಾರೆ. ಅಲ್ಲಿನ ಪವಾಡ ಮತ್ತು ಪ್ರಭಾವಗಳಿಗೆ ಮನಸೋತು ತಮ್ಮ ಹರಕೆಯನ್ನು ಕಟ್ಟುತ್ತಾರೆ. ಹರಕೆ ಈಡೇರಿದರೆ ತಮ್ಮ ಹುಟ್ಟುವ ಮಕ್ಕಳಿಗೆ ಆ ದೇವರ ಹೆಸರುಗಳನ್ನು ಇಟ್ಟು ಕರೆಯುತ್ತಾರೆ. ಉದಾ: ಲಾಲಪ್ಪ, ಲಾಲಸ್ವಾಮಿ, ಹುಸೇನಿ, ಹೊನ್ನೂರಪ್ಪ ಇತ್ಯಾದಿ ಹೀಗಾಗಿ ಇವರು ಧರ್ಮಾತೀತವಾಗಿ ಬುಡಕಟ್ಟು ಧರ್ಮವನ್ನು ಆಚರಿಸುವುದನ್ನು ಕಾಣಬಹುದು.

**ಬಳ್ಳಾರಿ ಶ್ರೀ ಕನಕ ದುರ್ಗಮ್ಮ:** ಬಳ್ಳಾರಿ ಜಿಲ್ಲೆಯ ಬಳ್ಳಾರಿ ಶ್ರೀ ಕನಕ ದುರ್ಗಮ್ಮ ದೇವಸ್ಥಾನವು ಬಳ್ಳಾರಿ ಜಿಲ್ಲೆಯ ಕೇಂದ್ರಸ್ಥಾನದಲ್ಲಿದೆ. ಹಳೇ ದರೋಜಿಯಿಂದ ಪೂರ್ವದಿಕ್ಕಿಗೆ ೩೫ ಕಿಮೀ ದೂರದಲ್ಲಿದೆ. ಅಲ್ಲಿ ಕೂಡ ಕಾಯಿಕರ್ಪೂರ, ಸೀರೆ ಕೊಟ್ಟು ಆರಾಧಿಸುತ್ತಾರೆ. ಎರಡು ವರ್ಷಕ್ಕೊಮ್ಮೆ ತಮ್ಮ ಬಂಧು ಬಳಗದವರು ಕರೆದುಕೊಂಡು ಹೋಗಿ ಕುರಿ, ಕೋಳಿ ಬಲಿ ಕೊಟ್ಟು ಆಚರಣೆ ಮಾಡುತ್ತಾರೆ.

**ಗೌರಸಮುದ್ರ ಶ್ರೀ ಮಾರೆಮ್ಮ:** ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಗೌರಸಮುದ್ರ ಗ್ರಾಮದ ಶ್ರೀ ಮಾರೆಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಚಿತ್ರದುರ್ಗ ಜಿಲ್ಲೆಯಿಂದ ಉತ್ತರಕ್ಕೆ ೪೧ ಕಿಮೀ ದೂರದಲ್ಲಿದೆ. ಈ ದೇವರಿಗೆ ಕಾಯಿ ಕರ್ಪೂರ, ಸೀರೆ ಕೊಟ್ಟು ಭಂಡಾರ ತೆಗೆದುಕೊಂಡು ತಮ್ಮ ಪೆಟ್ಟಿಗೆಯಲ್ಲಿಟ್ಟುಕೊಂಡು ಆರಾಧಿಸುತ್ತಾರೆ*(ಛಾಚಿ ೩.೮)*. ಎರಡು ವರ್ಷಕ್ಕೊಮ್ಮೆ ಬಂಧುಬಳಗವೆನ್ನೆಲ ಕರೆಸಿಕೊಂಡು ಕುರಿಕೋಳಿಗಳನ್ನು ಬಲಿ ಕೊಟ್ಟು ಆಚರಣೆ ಮಾಡುವರು. ಕೆಲವರು ಮೂಲ ದೇವಸ್ಥಾನಕ್ಕೆ ಹೋಗಿ ಕುರಿ, ಕೋಳಿ ಬಲಿ ಕೊಟ್ಟು ಆಚರಣೆ ಮಾಡುತ್ತಾರೆ.

**ನಾಗಸಮುದ್ರ ಶ್ರೀ ಮಾರೆಮ್ಮ:** ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ನಾಗಸಮುದ್ರ ಗ್ರಾಮದ ಶ್ರೀ ಮಾರೆಮ್ಮ ದೇವಸ್ಥಾನವು ಇದೆ***(ಛಾಚಿ ೩.೯)***. ಈ ದೇವಸ್ಥಾನವು ಚಿತ್ರದುರ್ಗ ಜಿಲ್ಲೆಯಿಂದ ಉತ್ತರಕ್ಕೆ ೮೬ ಕಿಮೀ, ಮೊಳಕಾಲ್ಮೂರು ತಾಲೂಕಿನಿಂದ ೭ಕಿಮೀ ದೂರದಲ್ಲಿದೆ. ಬುಡ್ಗ ಜಂಗಮರು ಕಾಯಿ ಕರ್ಪೂರ, ಸೀರೆ ಕೊಟ್ಟು ಪೂಜಿಸಿ, ಭಂಡಾರ ತೆಗೆದುಕೊಂಡು ತಮ್ಮ ಪೆಟ್ಟಿಗೆಯಲ್ಲಿಟ್ಟುಕೊಂಡು ಆರಾಧಿಸುತ್ತಾರೆ. ಎರಡು ವರ್ಷಕ್ಕೊಮ್ಮೆ ಕುರಿ, ಕೋಳಿ ಬಲಿ ಕೊಟ್ಟು ಆಚರಣೆ ಮಾಡುತ್ತಾರೆ.

**ರಾಯಪುರದ ಶ್ರೀ ಮಾರೆಮ್ಮ:** ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ರಾಯಪುರ ಗ್ರಾಮದ ಶ್ರೀಮಾರೆಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಚಿತ್ರದುರ್ಗ ಜಿಲ್ಲೆಯಿಂದ ಉತ್ತರಕ್ಕೆ ೭೩ ಕಿಮೀ, ಮೊಳಕಾಲ್ಮೂರು ತಾಲೂಕಿನಿಂದ ೭ಕಿಮೀ ದೂರದಲ್ಲಿದೆ***(ಛಾಚಿ ೩.೧೦)***. ಬುಡ್ಗ ಜಂಗಮರು ಕಾಯಿ ಕರ್ಪೂರ, ಸೀರೆ ಕೊಟ್ಟು ಭಂಡಾರ ತೆಗೆದುಕೊಂಡು ತಮ್ಮ ಪೆಟ್ಟಿಗೆಯಲ್ಲಿಟ್ಟುಕೊಂಡು ಆರಾಧಿಸುತ್ತಾರೆ. ಎರಡು ವರ್ಷಕ್ಕೊಮ್ಮೆ ಕುರಿ, ಕೋಳಿ ಬಲಿ ಕೊಟ್ಟು ಆಚರಣೆ ಮಾಡುತ್ತಾರೆ.

**ವಡ್ಡು ಶ್ರೀ ಮಾಯಮ್ಮ:** ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಜಿಂದಾಲ್ ಕಾರ್ಖಾನೆ ಹತ್ತಿರ ವಡ್ಡು ಗ್ರಾಮದಲ್ಲಿ ಶ್ರೀ ಮಾಯಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೩೬ ಕಿ.ಮೀ, ಸಂಡೂರು ತಾಲೂಕಿನಿಂದ ೧೭ ಕಿ.ಮೀ ದೂರದಲ್ಲಿದೆ***(ಛಾಚಿ ೩.೧೧)***. ಪ್ರತಿ ವರ್ಷ ಬುಡ್ಗ ಜಂಗಮರು ಆಂಧ್ರ ಪ್ರದೇಶದಿಂದ ಮತ್ತು ಕರ್ನಾಟಕದಿಂದ ಬಂದು ಕಾಯಿ ಕರ್ಪೂರ, ಸೀರೆ ಕೊಟ್ಟು ಪೂಜಿಸಿ, ಭಂಡಾರ ತೆಗೆದುಕೊಂಡು ತಮ್ಮ ಪೆಟ್ಟಿಗೆಯಲ್ಲಿಟ್ಟುಕೊಂಡು ಆರಾಧಿಸುತ್ತಾರೆ. ಈ ದೇವತೆಗೆ ಮೊದಲೆಲ್ಲ ಪ್ರಾಣಿಬಲಿ ನೆಡೆಯುತ್ತಿತ್ತು ನಂತರದಲ್ಲಿ ಈ ದೇವತೆ ಲಿಂಗದೀಕ್ಷೆಯನ್ನು ಸ್ವೀಕರಿಸಿದರಿಂದ ಈಗ ಪ್ರಾಣಿಬಲಿಯನ್ನು ಕೊಡುವುದಿಲ್ಲ.

**ಹುಲಿಗಿ ಶ್ರೀ ಹುಲಿಗೆಮ್ಮ:** ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲೂಕಿನ ಹುಲಿಗಿ ಗ್ರಾಮದಲ್ಲಿ ಹುಲಿಗೆಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಕೊಪ್ಪಳ ಜಿಲ್ಲಾಕೇಂದ್ರದಿಂದ ೨೩ ಕಿ.ಮೀ, ಮುನಿರಾಬಾದ್ ಅಣೆಕಟ್ಟುನಿಂದ ೪ ಕಿ.ಮೀ ದೂರದಲ್ಲಿದೆ. ಈ ಭಾಗದ ಐತಿಹಾಸಿಕ ಪ್ರಸಿದ್ಧಿ ಪಡೆದಿರುವ ಮತ್ತು ನೂರಾರು ವರ್ಷಗಳ ಇತಿಹಾಸ ಹೊಂದಿರುವ ಈ ಕ್ಷೇತ್ರಕ್ಕೆ ಅನೇಕ ತಳಸಮುದಾಯಗಳು ಹಾಗೂ ಅಲೆಮಾರಿ ಸಮುದಾಯಗಳ ಆರಾಧ್ಯ ದೈವವಾಗಿದೆ. ಇಲ್ಲಿಗೆ ವಲಸೆ ಬಂದ ಬುಡ್ಗ ಜಂಗಮರು ದೇವಿ ಆರಾಧನೆ ಮಾಡುತ್ತಾ ಎರಡು ವರ್ಷಕ್ಕೊಮ್ಮೆ ಬಿಡಾರು ಆಚರಣೆ ಮಾಡುತ್ತಿದ್ದರು.

**ಹಿರೇ ಬೊಮ್ಮನಾಳ್ ಶ್ರೀ ಕೂಗಮ್ಮ:** ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲೂಕಿನ ಹಿರೇ ಬೊಮ್ಮನಾಳ್ ಗ್ರಾಮದಲ್ಲಿ ಚಿಲಕಮುಖಿ ಗ್ರಾಮದಿಂದ ವಲಸೆ ಬಂದಿರುವ ಶ್ರೀ ಕೂಗಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಕೊಪ್ಪಳ ಜಿಲ್ಲಾಕೇಂದ್ರದಿಂದ ೩೮ ಕಿ.ಮೀ ದೂರದಲ್ಲಿದೆ. ಇಲ್ಲಿ ಬುಡ್ಗ ಜಂಗಮರು ದೇವಿ ಆರಾಧನೆ ಮಾಡುತ್ತಾ ಎರಡು ವರ್ಷಕ್ಕೊಮ್ಮೆ ಬಿಡಾರು ಆಚರಣೆಯನ್ನು ಮಾಡುತ್ತಿದ್ದರು. ಇದೀಗ ಬಿಡಾರನ್ನು ಆಚರಣೆಯನ್ನು ಕುದಿರೆಮೋತಿ ಗ್ರಾಮದಲ್ಲಿ ಮಾಡುತ್ತಿದ್ದಾರೆ.

**ಚಿಕ್ಕ ಬೊಮ್ಮನಾಳ್ ಶ್ರೀ ಗಾಳಿ ದುರ್ಗಮ್ಮ:** ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲೂಕಿನ ಚಿಕ್ಕ ಮೊಮ್ಮನಾಳ್ ಗ್ರಾಮದಲ್ಲಿ ಗಾಳಿ ದುರ್ಗಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಕೊಪ್ಪಳ ಜಿಲ್ಲಾಕೇಂದ್ರದಿಂದ ೪೦ ಕಿ.ಮೀ ದೂರದಲ್ಲಿದೆ. ಇಲ್ಲಿ ಬುಡ್ಗ ಜಂಗಮರು ದೇವಿ ಆರಾಧನೆ ಮಾಡುತ್ತಾ ಎರಡು ವರ್ಷಕ್ಕೊಮ್ಮೆ ಬಿಡಾರು ಆಚರಣೆ ಮಾಡುತ್ತಿದ್ದರು.

**ಚಿಲುಕಮುಖಿ ಶ್ರೀ ಕೂಗಮ್ಮ:** ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲೂಕಿನ ಚಿಲುಕಮುಖಿ ಗ್ರಾಮದಲ್ಲಿ ಶ್ರೀ ಕೂಗಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಕೊಪ್ಪಳ ಜಿಲ್ಲಾಕೇಂದ್ರದಿಂದ ೨೫ ಕಿ.ಮೀ ದೂರದಲ್ಲಿದೆ. ಇಲ್ಲಿ ಬುಡ್ಗ ಜಂಗಮರು ದೇವಿ ಆರಾಧನೆ ಮಾಡುತ್ತಾ ಎರಡು ವರ್ಷಕ್ಕೊಮ್ಮೆ ಬಿಡಾರು ಆಚರಣೆ ಮಾಡುತ್ತಿದ್ದರು.

**ಸೂಳೆಕಲ್ಲು ಶ್ರೀ ಗಾಳಿ ದುರ್ಗಮ್ಮ:** ಕೊಪ್ಪಳ ಜಿಲ್ಲೆಯ ಕನಕಗಿರಿ ತಾಲೂಕಿನ ಸೂಳೆಕಲ್ಲು ಗ್ರಾಮದಲ್ಲಿ ಶ್ರೀ ಗಾಳಿ ದುರ್ಗಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಕೊಪ್ಪಳ ಜಿಲ್ಲಾಕೇಂದ್ರದಿಂದ ೭೦ ಕಿ.ಮೀ, ಕನಕಗಿರಿ ತಾಲೂಕು ಕೇಂದ್ರದಿಂದ ೦೮ ಕಿ.ಮೀ ದೂರದಲ್ಲಿದೆ. ಇಲ್ಲಿ ಬುಡ್ಗ ಜಂಗಮರು ದೇವಿ ಆರಾಧನೆ ಮಾಡುತ್ತಾ ಎರಡು ವರ್ಷಕ್ಕೊಮ್ಮೆ ಬಿಡಾರು ಆಚರಣೆ ಮಾಡುತ್ತಿದ್ದರು.

**ಮುಸ್ಲಪುರ ಶ್ರೀದುರ್ಗಮ್ಮ:** ಕೊಪ್ಪಳ ಜಿಲ್ಲೆಯ ಕನಕಗಿರಿ ತಾಲೂಕಿನ ಮುಸ್ಲಪುರ ಗ್ರಾಮದಲ್ಲಿ ಶ್ರೀ ದುರ್ಗಮ್ಮ ದೇವಸ್ಥಾನವು ಇದೆ. ಈ ದೇವಸ್ಥಾನವು ಕೊಪ್ಪಳ ಜಿಲ್ಲಾಕೇಂದ್ರದಿಂದ ೩೦ ಕಿ.ಮೀ, ಕನಕಗಿರಿ ತಾಲೂಕು ಕೇಂದ್ರದಿಂದ ೧೦ ಕಿ.ಮೀ ದೂರದಲ್ಲಿದೆ. ಇಲ್ಲಿ ಬುಡ್ಗ ಜಂಗಮರು ದೇವಿ ಆರಾಧನೆ ಮಾಡುತ್ತಾ ಎರಡು ವರ್ಷಕ್ಕೊಮ್ಮೆ ಬಿಡಾರು ಮಾಡುತ್ತಿದ್ದರು.

**ಕುದಿರೆಮೋತಿ ಹುಸೇನ್ ಬಾಷಾ ಅಲಾನಿ:** ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುದಿರೆಮೋತಿ ಗ್ರಾಮದಲ್ಲಿ ಹುಸೇನ್ ಬಾಷಾ ಅಲಾನಿ ದೇವಸ್ಥಾನವು ಇದೆ. ಈ ದೇವಸ್ಥಾನವು ಕೊಪ್ಪಳ ಜಿಲ್ಲಾಕೇಂದ್ರದಿಂದ ೨೫ ಕಿ.ಮೀ, ಯಲಬುರ್ಗಾ ತಾಲೂಕಿನಿಂದ ೨೨ ಕಿ.ಮೀ ದೂರದಲ್ಲಿದೆ. ಈ ದೇವಸ್ಥಾನಕ್ಕೆ ಅಲೆಮಾರಿ ಬುಡ್ಗ ಜಂಗಮರು ಮೊಹರಂ ಹಬ್ಬದಿನದಂದು ಪ್ರತಿ ಎರಡು ವರ್ಷಕ್ಕೊಮ್ಮೆ ಬಂದು ಟೆಂಟ್ ಹಾಕಿ ಮೊಹರಂ ಹಬ್ಬವನ್ನು ಬಹು ವಿಜೃಂಭಣೆಯಿಂದ ಆಚರಿಸುತ್ತಾರೆ. ಇದೇ ಗ್ರಾಮದಲ್ಲಿ ಇಂದಿಗೂ ಬುಡ್ಗ ಜಂಗಮರು 'ಬಿಡಾರು' ಆಚರಣೆಯನ್ನು ಮೊಹರಂ ಹಬ್ಬದಂದು ಆಚರಿಸುತ್ತಾರೆ. ಹೀಗೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಆಹಾರಕ್ಕಾಗಿ ಅಲೆದಿದ್ದಾರೆ.

ಆಂಧ್ರ ಪ್ರದೇಶದ ಶ್ರೀಶೈಲ ಅರಣ್ಯದ ಭಾಗಗಳಲ್ಲಿ ಬೇಟೆಯನ್ನೆ ಪ್ರಧಾನವಾಗಿ ಇಟ್ಟುಕೊಂಡು ನೆಲೆಸಿರುವ ಬುಡ್ಗ ಜಂಗಮರು, ಬೇಟೆಯಾಡಿ ತಂದ ಮಾಂಸವನ್ನು ಸ್ವಲ್ಪ ಭಾಗವನ್ನು ಶಿವನಿಗೆ ಭಕ್ತಿಯಿಂದ ಸಮರ್ಪಿಸಿ ತಾವು ಊಟ ಮಾಡುವುದು ಸಂಪ್ರದಾಯ ಎಂದು ಶ್ರೀ ಕಾಳಹಸ್ತಿ ಮಹತ್ಮಮು ಎಂಬ ಪುಸ್ತಕದಲ್ಲಿ ಪುಟ ೩-೮೮, ಮತ್ತು ೩-೫೦ರಲ್ಲಿ ಉಲ್ಲೇಖಿಸಲಾಗಿದೆ.

ಬುಡ್ಗ ಜಂಗಮರ ಅಲೆಮಾರಿ ಜೀವನದಲ್ಲಿ ಅನೇಕ ಮಹಾ ದಾರ್ಶನಿಕರ ಆಗಮನದಿಂದ ವೃತ್ತಿಗಳಲ್ಲಿ ಅನೇಕ ಬದಲಾವಣೆಗಳಾದವು. ಆಂಧ್ರ ಪ್ರದೇಶ ಮತ್ತು ಕರ್ನಾಟಕದಲ್ಲಿ ೧೨ನೇ

ಶತಮಾನದಲ್ಲಿ ಇವರನ್ನು ಧರ್ಮ ಪ್ರಚಾರಕ್ಕಾಗಿ ಬಳಸಿಕೊಂಡರು. ಶಿವಾಜಿ ಕಾಲದಲ್ಲಿ ಸ್ವತಂತ್ರ್ಯ ಹೋರಾಟಕ್ಕೆ ಇವರನ್ನು ಗೂಡಾಚಾರಿಗಳಾಗಿ ಬಳಸಿಕೊಂಡಿರುವ ನಿದರ್ಶನಗಳಿವೆ ಮತ್ತು ಬ್ರಿಟೀಷರ ವಿರುದ್ಧ ಹೋರಾಡಿದ ನಿದರ್ಶನಗಳಿವೆ ಎಂದು ಈ ಸಮುದಾಯದ ಮುಖಂಡ ಮೀರಾಲಿ ಶಿವಲಿಂಗಪ್ಪನವರು ಹೇಳುತ್ತಾರೆ.

ಕಾಡಿನಲ್ಲಿ ಸಣ್ಣಪುಟ್ಟ ಸಮುದಾಯಗಳ ಒಳಜಗಳಗಳು ಮತ್ತು ಆಂಗ್ಲ, ನಿಜಾಮ್ ಹಾಗೂ ಮುಸ್ಲಿಮರ ದಬ್ಬಾಳಿಕೆಗಳನ್ನು ಸಹಿಸದ ಇಡೀ ಸಮುದಾಯ ಅನೇಕ ತಿರುವುಗಳನ್ನು ಕಂಡಿತು. ಕಾಡಿನಿಂದ ನಾಡಿನತ್ತ ಮರಳುವ ಸಂದರ್ಭದಲ್ಲಿ ಹೊಟ್ಟೆಪಾಡಿಗಾಗಿ ಸಾಂಸ್ಕೃತಿಕ ವೇಷಗಳನ್ನು ಹಾಕಿ ಕಲೆ ಪ್ರದರ್ಶನ ನೀಡುತ್ತಾ ನಾಡಿನಲ್ಲಿ ಪ್ರವೇಶ ಪಡೆದಿದ್ದಾರೆ. ಒಂದೊಂದು ತಂಡವಾಗಿ ಊರಿನಲ್ಲಿ ಪ್ರವೇಶ ಮಾಡಿದ ಇವರು ಆ ಕಾಲದ ಘಟನೆಗಳನ್ನು ಹಾಗೂ ಧಾರ್ಮಿಕ ಪ್ರಚಾರವನ್ನು ತಮ್ಮ ವಿವಿಧ ವೇಷಭೂಷಣಗಳ ಹಾಗೂ ಕಲಾ ಪ್ರಕಾರಗಳ ಮೂಲಕ ದೇಶದ ಹಲವು ಪ್ರದೇಶಗಳಿಗೆ ಭಿಕ್ಷಾಟನೆ ಅರಿಸಿ ವಿವಿಧ ಕಡೆ ನೆಲೆಸಿದ್ದಾರೆ.

**ಬುಡ್ಗ ಜಂಗಮ್ ಸಮುದಾಯದ ಭೌಗೋಳಿಕ ನೆಲೆಗಳು**

ದಕ್ಷಿಣ ಭಾರತದ ದ್ರಾವಿಡ ಭಾಷಾವಾರು ಪ್ರದೇಶಗಳಾದ ಆಂಧ್ರಪ್ರದೇಶ, ತೆಲಂಗಾಣ, ಮಹಾರಾಷ್ಟ್ರ ಹಾಗೂ ಕರ್ನಾಟಕದಲ್ಲಿ ನೆಲೆಸಿರುವ ಬುಡ್ಗ ಜಂಗಮರು, ಕರ್ನಾಟಕದಲ್ಲಿ ಬಳ್ಳಾರಿ, ರಾಯಚೂರು, ಯಾದಗಿರಿ, ಕೊಪ್ಪಳ, ಕಲಬುರ್ಗಿ, ಬೀದರ್, ವಿಜಯಪುರ, ಬೆಂಗಳೂರು ಗ್ರಾಮಂತರ, ಬೆಂಗಳೂರು ನಗರ. ರಾಮನಗರ, ಕೋಲಾರ, ಮೈಸೂರು, ಚಿಕ್ಕಬಳ್ಳಾಪುರ, ತುಮಕೂರು, ಚಿತ್ರದುರ್ಗ, ಬೆಳಗಾವಿ, ಬಾಗಲಕೋಟೆ, ಹಾವೇರಿ, ದಾವಣಗೆರೆ, ಹುಬ್ಬಳ್ಳಿ, ಧಾರವಾಡ, ಗದಗ, ಶಿವಮೊಗ್ಗ, ಉಡುಪಿ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಲೆಮಾರಿ ಬುಡ್ಗ ಜಂಗಮರು ನೆಲೆಸಿದ್ದಾರೆ.

**ಬುಡ್ಗ ಜಂಗಮ್ ಸಮುದಾಯದ ಜನಸಂಖ್ಯೆ ಅಂಕಿಅಂಶಗಳು**

೨೦೧೧ರ ಜನಗಣತಿ ಪ್ರಕಾರ ಬೇಡ ಬುಡ್ಗ ಜಂಗಮರು ಭಾರತದಲ್ಲಿ ಒಟ್ಟು ಜನಸಂಖ್ಯೆ ೨,೫೬,೦೪೨, ಕರ್ನಾಟಕದಲ್ಲಿ ಒಟ್ಟು ಜನಸಂಖ್ಯೆ ೧,೧೭,೧೬೪ ಮತ್ತು ಕಲ್ಯಾಣ(ಹೈದರಾಬಾದ್) ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿ ೨೬,೨೩೧, ಕೊಪ್ಪಳ ಜಿಲ್ಲೆಯಲ್ಲಿ ೧೭,೫೨೬, ಯಾದಗಿರಿ ಜಿಲ್ಲೆಯಲ್ಲಿ ೨,೦೪೭, ರಾಯಚೂರು ಜಿಲ್ಲೆಯಲ್ಲಿ ೧೨,೫೧೩, ಕಲಬುರುಗಿ ಜಿಲ್ಲೆಯಲ್ಲಿ ೨,೬೦೭, ಬೀದರ್ ಜಿಲ್ಲೆಯಲ್ಲಿ ೭,೪೨೮ ಒಟ್ಟು ಆರು ಜಿಲ್ಲೆಗಳಲ್ಲಿ ೬೮,೩೫೨ (೩೪,೬೧೦ ಗಂಡು, ೩೩,೭೪೨ ಹೆಣ್ಣು) ಜನಸಂಖ್ಯೆ ದಾಖಲಾಗಿದ್ದಾರೆ.

**ಕೋಷ್ಟಕ ೩.೧: ಕರ್ನಾಟಕದ ಬೇಡ ಜಂಗಮ್, ಬುಡ್ಗ ಜಂಗಮ್‌ರ ಜಿಲ್ಲಾ ಮತ್ತು ಲಿಂಗವಾರು ಜನಸಂಖ್ಯೆ (೨೦೦೧ ಮತ್ತು ೨೦೧೧)**

| | | ೨೦೦೧ರ ಜನಗಣತಿ | | | ೨೦೧೧ರ ಜನಗಣತಿ | | | ವ್ಯತ್ಯಾಸ |
|---|---|---|---|---|---|---|---|---|
| ಕ್ರಸಂ | ಜಿಲ್ಲೆಗಳು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | |
| ೧ | ಬಾಗಲಕೋಟೆ | ೧೭೯ | ೧೬೫ | ೩೪೪ | ೬೫೮ | ೫೯೫ | ೧,೨೫೩ | +೯೦೯ |
| ೨ | ಬೆಂಗಳೂರು ಗ್ರಾ | ೭೦೫ | ೬೭೯ | ೧,೩೮೪ | ೬೩೧ | ೬೪೦ | ೧,೨೭೧ | –೧,೩೮೪ |
| ೩ | ಬೆಂಗಳೂರು ನಗರ | ೫೮೫ | ೫೫೮ | ೧,೧೪೩ | ೮೧೫ | ೭೫೯ | ೧,೫೭೪ | +೪೩೧ |
| ೪ | ಬಳ್ಳಾರಿ | ೧,೩೧೮ | ೧,೧೬೬ | ೨,೪೮೪ | ೧೩,೩೩೪ | ೧೨,೮೯೭ | ೨೬,೨೩೧ | +೨೩,೭೪೭ |
| ೫ | ಬೆಳಗಾವಿ | ೧,೦೫೩ | ೧,೦೪೮ | ೨,೧೦೧ | ೩,೬೦೦ | ೩,೫೮೪ | ೭,೧೮೪ | +೫,೦೪೭ |
| ೬ | ಬೀದರ | ೩,೮೭೨ | ೩,೮೦೫ | ೭,೬೭೭ | ೩,೬೯೮ | ೩,೭೩೦ | ೭,೪೨೮ | –೨೪೯ |
| ೭ | ಬಿಜಾಪುರ | ೩೮೨ | ೩೩೮ | ೭೨೦ | ೧,೦೧೪ | ೯೬೮ | ೧,೯೮೨ | +೧,೨೬೨ |
| ೮ | ಚಾಮರಾಜನಗರ | ೫ | ೫ | ೧೦ | ೨೪೩ | ೨೪೨ | ೪೮೫ | ೪೭೫ |
| ೯ | ಚಿಕ್ಕಮಗಳೂರು | ೧,೭೬೪ | ೧,೬೯೫ | ೩,೪೫೯ | ೧,೧೧೮ | ೧,೧೬೦ | ೨,೨೭೮ | –೧,೧೮೧ |
| ೧೦ | ಚಿತ್ರದುರ್ಗ | ೧,೫೨೯ | ೧,೪೭೯ | ೩,೦೦೮ | ೧,೩೪೦ | ೧,೩೫೧ | ೨,೬೯೧ | –೩೧೭ |
| ೧೧ | ದಕ್ಷಿಣ ಕನ್ನಡ | ೨೦ | ೨೨ | ೪೨ | ೫೭ | ೪೨ | ೯೯ | +೫೭ |
| ೧೨ | ದಾವಣಗೆರೆ | ೩,೭೮೭ | ೩,೫೬೫ | ೭,೩೫೨ | ೩,೩೦೪ | ೩,೧೨೨ | ೬,೪೨೬ | –೯೨೬ |
| ೧೩ | ಧಾರವಾಡ | ೫೦೦ | ೪೪೫ | ೯೪೫ | ೨,೯೦೭ | ೨,೮೭೮ | ೫,೭೮೫ | +೪,೮೪೦ |
| ೧೪ | ಗದಗ | ೨೪೫ | ೨೧೨ | ೪೫೭ | ೧,೫೭೪ | ೧,೫೦೭ | ೩,೦೮೧ | +೨,೬೨೪ |
| ೧೫ | ಗುಲಬರ್ಗಾ | ೭೪೮ | ೭೪೧ | ೧,೪೮೯ | ೧,೩೪೧ | ೧,೨೬೬ | ೨,೬೦೭ | +೧,೧೧೮ |
| ೧೬ | ಹಾವೇರಿ | ೧,೩೨೩ | ೧,೨೩೭ | ೨,೫೬೦ | ೩,೮೬೧ | ೩,೫೯೧ | ೭,೪೫೨ | +೪,೮೯೨ |
| ೧೭ | ಹಾಸನ | ೨೪೯ | ೨೨೯ | ೪೭೮ | ೭೮ | ೭೭ | ೧೫೫ | –೩೨೩ |
| ೧೮ | ಕೊಡಗು | ೩ | ೧ | ೪ | ೧೦ | ೫ | ೧೫ | ೧೧ |
| ೧೯ | ಕೋಲಾರ | ೧,೧೭೯ | ೧,೧೭೯ | ೨,೩೫೮ | ೧,೨೬೪ | ೧,೨೮೮ | ೨,೫೫೨ | +೧೯೪ |
| ೨೦ | ಕೊಪ್ಪಳ | ೨,೧೧೭ | ೨,೦೪೨ | ೪,೧೫೯ | ೮,೮೯೬ | ೮,೬೩೦ | ೧೭,೫೨೬ | +೧೩,೩೬೭ |
| ೨೧ | ತುಮಕೂರು | ೧,೧೪೪ | ೧,೦೯೪ | ೨,೨೩೮ | ೧೭೯ | ೧೮೨ | ೩೬೧ | –೧,೮೭೭ |
| ೨೨ | ಮಂಡ್ಯ | ೪೩ | ೩೬ | ೭೯ | ೧೨ | ೧೧ | ೨೩ | –೫೬ |
| ೨೩ | ಮೈಸೂರು | ೧೪೦ | ೧೪೩ | ೨೮೩ | ೨೨೩ | ೨೧೫ | ೪೩೮ | +೧೫೫ |

| | | | | | | | | |
|---|---|---|---|---|---|---|---|---|
| ೨೪ | ರಾಯಚೂರು | ೩,೮೫೮ | ೩,೮೯೫ | ೭,೭೫೩ | ೬,೩೨೩ | ೬,೧೯೦ | ೧೨,೫೧೩ | +೪,೭೬೦ |
| ೨೫ | ಶಿವಮೊಗ್ಗ | ೧,೦೯೪ | ೧,೦೪೮ | ೨,೧೪೨ | ೩೫೬ | ೩೬೫ | ೭೨೧ | -೧,೪೨೧ |
| ೨೬ | ಉಡುಪಿ | ೪ | ೩ | ೭ | ೧೧ | ೭ | ೧೮ | -೧೧ |
| ೨೭ | ಉತ್ತರ ಕನ್ನಡ | ೧೧೨ | ೮೫ | ೧೯೭ | ೧೦೮ | ೮೭ | ೧೯೫ | -೨ |
| ೨೮ | ಯಾದಗಿರಿ | – | – | – | ೧,೦೧೮ | ೧,೦೨೯ | ೨,೦೪೭ | – |
| ೨೯ | ಚಿಕ್ಕಬಳ್ಳಾಪುರ | – | – | – | ೧,೩೭೯ | ೧,೩೪೯ | ೨,೭೨೮ | – |
| ೩೦ | ರಾಮನಗರ | – | – | – | ೩೦ | ೨೫ | ೫೫ | – |
| | **ಕರ್ನಾಟಕದ ಒಟ್ಟು** | **೨೭,೯೫೮** | **೨೬,೯೧೫** | **೫೪,೮೭೩** | **೫೯,೩೭೨** | **೫೭,೭೯೨** | **೧೧೭,೧೬೪** | **+೬೨,೨೯೧** |

ಅಲೆಮಾರಿ ಬುಡ್ಗ ಜಂಗಮರು ಕರ್ನಾಟಕ ರಾಜ್ಯದಲ್ಲಿ ಗಣನೀಯ ಪ್ರಮಾಣದಲ್ಲಿದ್ದಾರೆ. ೧೯೯೧ ಮತ್ತು ೨೦೦೧ರ ಜನಗಣತಿಯ ಅಂಕಿಅಂಶಗಳಲ್ಲಿ ಬುಡ್ಗ ಜಂಗಮ ಸಮುದಾಯದ ಜನಸಂಖ್ಯೆಯಲ್ಲಿ ಈ ರೀತಿ ಏರಿಳಿತಗಳಾಗಿರುವುದಕ್ಕೆ ಮುಖ್ಯ ಕಾರಣ ಕರ್ನಾಟಕ ರಾಜ್ಯದಲ್ಲಿಯ ವೀರಶೈವ ಜಂಗಮರು ಬೇಡ ಜಂಗಮರ ಹೆಸರಿನಲ್ಲಿ ದಾಖಲಾಗಿರುವುದಾಗಿದೆ. ೧೯೯೧ ಮತ್ತು ೨೦೦೧ರ ಮಧ್ಯದ ಅವಧಿಯಲ್ಲಿ ವೀರಶೈವರು 'ಬೇಡ ಜಂಗಮ' ಎಂಬ ಹೆಸರಿನಿಂದ ಹೊರಬರುತ್ತಲಿದ್ದುದರಿಂದ ಈ ಒಂದು ದಶಕದಲ್ಲಿ ಗಣನೀಯ ಪ್ರಮಾಣದಲ್ಲಿ ಬುಡ್ಗ ಜಂಗಮರ ಜನಸಂಖ್ಯೆ ಇಳಿಕೆಯಾಗಿದೆ.

**ಕೋಷ್ಟಕ ೩.೨: ಆಂಧ್ರಪ್ರದೇಶ ಮತ್ತು ಕರ್ನಾಟಕದ ಬೇಡ ಜಂಗಮ್, ಬುಡ್ಗ ಜಂಗಮ್‌ರ ಗ್ರಾಮೀಣ ಮತ್ತು ನಗರವಾರು ಜನಸಂಖ್ಯೆ ವಿವರ**

| ಜನಗಣತಿ ವರ್ಷ | ಒ | ಆಂಧ್ರ ಪ್ರದೇಶ | | | ಕರ್ನಾಟಕ | | |
|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧೯೬೧ (ಬೇಡ (ಬುಡ್ಗ)ಜಂಗಮ್) | ಒ | ೧,೦೧೫ | ೮೨೫ | ೧,೮೪೦ | ೨,೩೯೩ | ೨,೭೪೮ | ೫,೧೪೧ |
| | ಗ್ರಾ | ೯೬೬ | ೭೬೯ | ೧,೭೩೫ | ೧,೫೩೩ | ೧,೯೭೮ | ೩,೫೧೧ |
| | ನ | ೪೯ | ೫೬ | ೧೦೫ | ೮೬೦ | ೭೭೦ | ೧,೬೩೦ |
| ೧೯೭೧(ಬೇಡ (ಬುಡ್ಗ)ಜಂಗಮ್) | ಒ | ೬೧೩ | ೧,೩೧೯ | ೧,೯೩೨ | ೬,೭೮೧ | ೬,೮೯೫ | ೧೩,೬೭೬ |
| | ಗ್ರಾ | ೫೨೮ | ೧,೨೯೨ | ೧,೮೨೦ | ೬,೦೧೫ | ೬,೦೮೪ | ೧೨,೦೯೯ |
| | ನ | ೮೫ | ೨೭ | ೧೧೨ | ೭೬೬ | ೮೧೧ | ೧,೫೭೭ |
| ೧೯೮೧(ಬೇಡ ಜಂಗಮ್, ಬುಡ್ಗ | ಒ | ೬,೧೪೮ | ೫,೮೭೬ | ೧೨,೦೨೪ | ೧,೫೫೩ | ೧,೫೮೨ | ೩,೧೩೫ |
| | ಗ್ರಾ | ೪,೩೫೭ | ೪,೧೮೪ | ೮,೫೪೧ | ೧,೨೨೦ | ೧,೧೬೬ | ೨,೩೮೬ |

| | | | | | | | |
|---|---|---|---|---|---|---|---|
| ಜಂಗಮ್) | ನ | ೧,೭೯೧ | ೧,೬೯೨ | ೩,೪೮೩ | ೩೩೩ | ೩೧೬ | ೬೪೯ |
| ೧೯೯೧ (ಬೇಡ ಜಂಗಮ್, ಬುಡ್ಗ ಜಂಗಮ್) | ಒ | ೧೭,೫೭೧ | ೧೭,೦೮೫ | ೩೪,೬೫೬ | ೬೨,೪೬೧ | ೫೮,೫೯೫ | ೧,೨೧,೦೫೬ |
| | ಗ್ರಾ | ೧೩,೧೯೦ | ೧೨,೭೪೨ | ೨೫,೯೩೨ | ೪೪,೭೧೧ | ೪೨,೪೦೧ | ೮೭,೧೧೨ |
| | ನ | ೪,೩೮೧ | ೪,೩೪೩ | ೮,೭೨೪ | ೧೭,೭೫೦ | ೧೬,೧೯೪ | ೩೩,೯೪೪ |
| ೨೦೦೧(ಬೇಡ ಜಂಗಮ್, ಬುಡ್ಗ ಜಂಗಮ್) | ಒ | ೩೭,೦೭೯ | ೩೬,೩೧೦ | ೭೩,೩೮೯ | ೨೭,೯೫೮ | ೨೬,೯೧೫ | ೫೪,೮೭೩ |
| | ಗ್ರಾ | ೨೮,೮೧೬ | ೨೮,೧೬೫ | ೫೬,೯೮೧ | ೨೦,೧೪೨ | ೧೯,೫೪೦ | ೩೯,೬೮೨ |
| | ನ | ೮,೨೬೩ | ೮,೧೪೫ | ೧೬,೪೦೮ | ೭,೮೧೬ | ೭,೩೭೫ | ೧೫,೧೯೧ |
| ೨೦೧೧(ಬೇಡ ಜಂಗಮ್, ಬುಡ್ಗ ಜಂಗಮ್) | ಒ | ೫೬,೨೯೦ | ೫೫,೪೨೦ | ೧೧೧,೭೧೦ | ೫೯,೩೭೨ | ೫೭,೭೯೨ | ೧೧೭,೧೬೪ |
| | ಗ್ರಾ | ೩೯,೩೧೭ | ೩೮,೪೫೬ | ೭೭,೭೭೩ | ೪೨,೮೬೦ | ೪೧,೭೨೮ | ೮೪,೫೮೮ |
| | ನ | ೧೬,೯೭೩ | ೧೬,೯೬೪ | ೩೩,೯೩೭ | ೧೬,೫೧೨ | ೧೬,೦೬೪ | ೩೨,೫೭೬ |

**ಕೋಷ್ಟಕ ೩.೩: ಆಂಧ್ರಪ್ರದೇಶ ಮತ್ತು ಕರ್ನಾಟಕದ ಬೇಡ ಜಂಗಮ್, ಬುಡ್ಗ ಜಂಗಮ್‌ರ ಜನಗಣತಿಯಲ್ಲಿ ಏರಿಳಿತ ವಿವರ**

| ಜನಗಣತಿ ವರ್ಷ | ಆಂಧ್ರಪ್ರದೇಶ | | | ಕರ್ನಾಟಕ | | | ಕರ್ನಾಟಕದಲ್ಲಿ ಜನಸಂಖ್ಯೆ ಏರಿಳಿತ |
|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | |
| ೧೯೬೧ | ೧,೦೧೫ | ೮೨೫ | ೧,೮೪೦ | ೨,೩೯೩ | ೨,೭೪೮ | ೫,೧೪೧ | ೫,೧೪೧ |
| ೧೯೭೧ | ೬೧೩ | ೧,೩೧೯ | +೧,೯೩೨ | ೬,೭೮೧ | ೬,೮೯೫ | +೧೩,೬೭೬ | +೮,೫೩೫ |
| ೧೯೮೧ | ೬,೧೪೮ | ೫,೮೭೬ | +೧೨,೦೨೪ | ೧,೫೫೩ | ೧,೫೮೨ | –೩,೧೩೫ | –೧೦,೫೪೧ |
| ೧೯೯೧ | ೧೭,೫೭೧ | ೧೭,೦೮೫ | +೩೪,೬೫೬ | ೬೨,೪೬೧ | ೫೮,೫೯೫ | +೧,೨೧,೦೫೬ | +೧,೧೭,೯೨೧ |
| ೨೦೦೧ | ೩೭,೦೭೯ | ೩೬,೩೧೦ | +೭೩,೩೮೯ | ೨೭,೯೫೮ | ೨೬,೯೧೫ | –೫೪,೮೭೩ | –೬೬,೧೮೩ |
| ೨೦೧೧ | ೫೬,೨೯೦ | ೫೫,೪೨೦ | +೧,೧೧,೭೧೦ | ೫೯,೩೭೨ | ೫೭,೭೯೨ | +೧,೧೭,೧೬೪ | +೬೨,೨೯೧ |

(ಸೂಚನೆ: + ಚಿಹ್ನೆ ಏರಿಕೆಯಾಗಿವುದು, – ಚಿಹ್ನೆ ಇಳಿಕೆಯಾಗಿರುವ ಸೂಚಿಸುವ ಚಿಹ್ನೆಗಳನ್ನು ಬಳಸಲಾಗಿದೆ)

ಕರ್ನಾಟಕ ರಾಜ್ಯದಲ್ಲಿ ೧೯೬೧ರ ಜನಗಣತಿ ವರದಿಯಲ್ಲಿ ದಾಖಲಾಗಿರುವಂತೆ ಕರ್ನಾಟಕದ ಬೇಡಜಂಗಮ್, ಬುಡ್ಗ ಜಂಗಮ ಸಮುದಾಯದ ಜನಸಂಖ್ಯೆ ೫,೧೪೧, ೧೯೭೧ರ ಜನಗಣತಿಯ

ವರದಿಯಲ್ಲಿ ೧೩,೬೭೬ ಜನ ದಾಖಲಾಗಿದ್ದಾರೆ ಅದರಲ್ಲಿ ೮,೫೩೫ ಜನ ಏರಿಕೆಯಾಗಿದೆ. ೧೯೮೧ರ ಜನಗಣತಿಯು ವರದಿಯಲ್ಲಿ ೩,೧೩೫ ಜನ ದಾಖಲಾಗಿ ಅದರಲ್ಲಿ ೧೦,೫೪೧ ಜನ ಇಳಿಕೆಯಾಗಿರುವುದು ಕಾಣಬಹುದಾಗಿದೆ. ೧೯೯೧ರ ಜನಗಣತಿ ವರದಿಯಲ್ಲಿ ೧,೨೧,೦೫೬ ಜನಸಂಖ್ಯೆ ದಾಖಲಾಗಿದ್ದಾರೆ ಈ ಹತ್ತು ವರ್ಷದಲ್ಲಿ ೧,೧೭,೯೨೧ ಜನ ಗಣನೀಯವಾಗಿ ಏರಿಕೆಯಾಗಿರುವುದು ಕಂಡುಬರುತ್ತದೆ. ಆದರೆ ೨೦೦೧ರಲ್ಲಿ ಇವರ ಜನಸಂಖ್ಯೆ ೫೪,೮೭೩ ಎಂದು ದಾಖಲಾಗಿದ್ದು ೧೯೯೧ ಜನಸಂಖ್ಯೆಯ ಅರ್ಧಕ್ಕಿಂತಲೂ ಹೆಚ್ಚಿಗೆ ೬೬,೧೮೩ ಜನ ಇಳಿಮುಖವಾಗಿರುವುದನ್ನು ಕಾಣಬಹುದು. ೨೦೧೧ರ ಜನಗಣತಿ ವರದಿಯಲ್ಲಿ ೧,೧೭,೧೬೪ ಜನಸಂಖ್ಯೆ ದಾಖಲಾಗಿದ್ದಾರೆ ಅದರಲ್ಲಿ ಈ ಹತ್ತು ವರ್ಷದಲ್ಲಿ ೬೨,೨೯೧ ಜನ ಏರಿಕೆಯಾಗಿದೆ. ಜನಗಣತಿಯ ಅಂಕಿಅಂಶಗಳಲ್ಲಿ ಈ ಪ್ರಮಾಣದ ಏರಿಳಿತಗಳಿರುವುದಕ್ಕೆ ಮುಖ್ಯ ಕಾರಣ ಕರ್ನಾಟಕ ರಾಜ್ಯದಲ್ಲಿನ ವೀರಶೈವ ಜಂಗಮರು 'ಬೇಡ ಜಂಗಮ್' ಎಂಬ ಹೆಸರಿನಲ್ಲಿ ದಾಖಲಾಗಿರುವುದಾಗಿದೆ. ಈ ಮಧ್ಯದ ಅವಧಿಯಲ್ಲಿ ವೀರಶೈವ ಜಂಗಮರು ಕಾನೂನುಗಳ ಭೀತಿಯಿಂದಾಗಿ 'ಬೇಡ ಜಂಗಮ್' ಹೆಸರಿನಿಂದ ಹೊರಬರುತ್ತಲಿದ್ದುದರಿಂದ ಗಣನೀಯ ಪ್ರಮಾಣದ ಇಳಿಕೆ ಕಂಡುಬಂದಿದೆ. ಆಂಧ್ರ ಪ್ರದೇಶದಲ್ಲಿ ಜನಗಣತಿ ವರದಿಯಲ್ಲಿ ದಾಖಲಾಗಿರುವಂತೆ ಪ್ರತಿಜನಗಣತಿಯಲ್ಲಿ ಹಂತಹಂತವಾಗಿ ಏರಿಕೆಯಾಗುವುದನ್ನು ಸ್ಪಷ್ಟವಾಗಿದೆ. ೨೦೦೭ರಲ್ಲಿ ಬೆಂಗಳೂರು ಕನ್ನಡ ಪುಸ್ತಕ ಪ್ರಾಧಿಕಾರವು ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆಗಾಗಿ ನಡೆಸಿದ ಬುಡ್ಗ ಜಂಗಮ ಸಮುದಾಯದ ವಾಸ್ತವ ಸಮೀಕ್ಷೆಯ ಜಿಲ್ಲಾವಾರು ಮತ್ತು ಲಿಂಗವಾರು ಅಂಕಿಅಂಶಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

**ಕೋಷ್ಟಕ ೩.೪ : ಕನ್ನಡ ಪುಸ್ತಕ ಪ್ರಾಧಿಕಾರವು ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆಗಾಗಿ ಮಾಡಿದ ಕರ್ನಾಟಕದ ಬುಡ್ಗ ಜಂಗಮರ ಸಮೀಕ್ಷೆ(೨೦೦೭)**

| ಸಂ. | ಜಿಲ್ಲೆಗಳು | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ೧ | ಬಾಗಲಕೋಟೆ | ೧೪ | ೫೨ | ೩೧ | ೮೩ |
| ೨ | ಬೆಂಗಳೂರು ಗ್ರಾಮಾಂತರ | ೭೬ | ೧೭೯ | ೧೭೮ | ೩೫೭ |
| ೩ | ಬೆಂಗಳೂರು ನಗರ | ೪೬೩ | ೧,೫೩೬ | ೧,೩೭೯ | ೨,೯೧೫ |
| ೪ | ಬೆಳಗಾವಿ | ೨೩೪ | ೫೩೪ | ೪೭೨ | ೧,೦೦೬ |
| ೫ | ಬಳ್ಳಾರಿ | ೬೪೫ | ೧,೪೭೨ | ೧,೪೮೨ | ೨,೯೫೪ |
| ೬ | ಬೀದರ್ | ೨೧೭ | ೫೬೧ | ೫೬೫ | ೧,೧೨೬ |
| ೭ | ಬಿಜಾಪುರ | ೩೨ | ೧೨೪ | ೧೦೨ | ೨೨೬ |
| ೮ | ಚಿತ್ರದುರ್ಗ | ೧೧ | ೨೮ | ೩೨ | ೬೦ |
| ೯ | ದಾವಣಗೆರೆ | ೮೫ | ೧೮೧ | ೧೯೭ | ೩೭೮ |

| | | | | | |
|---|---|---|---|---|---|
| ೧೦ | ಧಾರವಾಡ | ೭೭ | ೨೧೬ | ೨೨೧ | ೪೩೭ |
| ೧೧ | ಗದಗ | ೭೯ | ೨೩೪ | ೨೧೭ | ೪೫೧ |
| ೧೨ | ಗುಲಬರ್ಗಾ | ೪೪೫ | ೧,೩೬೯ | ೧,೨೬೧ | ೨,೬೩೦ |
| ೧೩ | ಹಾಸನ | ೧೭೭ | ೪೪೫ | ೪೧೭ | ೮೬೨ |
| ೧೪ | ಹಾವೇರಿ | ೩೮ | ೯೧ | ೯೧ | ೧೮೨ |
| ೧೫ | ಕೋಲಾರ | ೯೯೦ | ೨,೦೭೩ | ೨,೨೮೨ | ೪,೩೫೫ |
| ೧೬ | ಕೊಪ್ಪಳ | ೫೫೦ | ೧,೧೭೧ | ೧,೧೪೬ | ೨,೩೧೭ |
| ೧೭ | ರಾಯಚೂರು | ೨೫೭ | ೬೩೮ | ೬೦೯ | ೧,೨೪೭ |
| ೧೮ | ರಾಮನಗರ | ೪೬೬ | ೧,೧೨೨ | ೧,೦೭೪ | ೨,೧೯೬ |
| ೧೯ | ಶಿವಮೊಗ್ಗ | ೨೨ | ೧೯ | ೩೨ | ೫೧ |
| ೨೦ | ತುಮಕೂರು | ೫೭ | ೧೬೨ | ೧೩೭ | ೨೯೯ |
| | **ಒಟ್ಟು** | **೪,೯೩೫** | **೧೨,೨೦೭** | **೧೧,೯೨೫** | **೨೪,೧೩೨** |

೨೦೦೭ರಲ್ಲಿ ಕರ್ನಾಟಕದ ಬುಡ್ಗ ಜಂಗಮರ ಸಮೀಕ್ಷೆಯ ಪ್ರಕಾರ ಕರ್ನಾಟಕದ ಅಲೆಮಾರಿ ಬುಡ್ಗಜಂಗಮರು ೨೪,೧೩೨ ಜನಸಂಖ್ಯೆ ದಾಖಲಾಗಿದ್ದಾರೆ ಮತ್ತು ಎ ಜೆ ಸದಾಶಿವ ಆಯೋಗ ವರದಿಯಲ್ಲಿ ದಾಖಲಿಸಿದ ಕರ್ನಾಟಕದ ಅಲೆಮಾರಿ ಬುಡ್ಗ ಜಂಗಮರು ೨೦,೭೩೩ ಜನಸಂಖ್ಯೆ ದಾಖಲಾಗಿದ್ದಾರೆ ಇದು ವಾಸ್ತವಕ್ಕೆ ಸಮೀಪವಾಗಿದೆ. ಆದರೆ ಜನಗಣತಿ ವರದಿಯಲ್ಲಿ ದಾಖಲಾತಿಯಾದ ಜನಸಂಖ್ಯೆಗೂ ವಾಸ್ತವದಲ್ಲಿ ೨೦೦೭ರಲ್ಲಿ ಮಾಡಿದ ಕರ್ನಾಟಕದ ಬುಡ್ಗ ಜಂಗಮರ ಸಮೀಕ್ಷೆಗೂ ಅಜಗಜಾಂತರ (ಒಂದು ಲಕ್ಷಕ್ಕಿಂತ ಹೆಚ್ಚಿಗೆ) ಪ್ರತಿ ಜನಗಣತಿಯಲ್ಲಿ ವ್ಯತ್ಯಾಸಗಳಾಗುತ್ತಿರುವುದು ಕಂಡುಬರುತ್ತಿದೆ.

ಮೀಸಲಾತಿಯ ಅರಿವೇ ಇಲ್ಲದ ಅಲೆಮಾರಿ ಬುಡ್ಗ ಜಂಗಮರು ಸಮಾಜದಲ್ಲಿ ತನ್ನ ಐಡೆಂಟಿಟಿಯನ್ನು ಮತ್ತು ಅನನ್ಯತೆಯನ್ನು ಉಳಿಸಿಕೊಳ್ಳಲು ಊರೂರು ತಿರುಗುತ್ತಾ ಬುರ್ರಕಥಾ, ಹಗಲುವೇಷ ಹಾಕುತ್ತಾ ತನ್ನದೇ ಆಚಾರ ವಿಚಾರ, ಸಂಸ್ಕೃತಿ, ಭಾಷೆ, ಕುಲಪಂಚಾಯಿತಿ, ದೈವಾರಾಧನೆಯನ್ನು ನಂಬಿಕೊಂಡು ಜೀವಿಸುತ್ತಿದ್ದಾರೆ. ಇತ್ತ ಕಡೆ ಕೆಲವು ವೀರಶೈವ ಲಿಂಗಾಯತ ಜಂಗಮರು ಇದು ನಮ್ಮದೆಂದು ಭಾವಿಸಿ ಮೀಸಲಾತಿಯನ್ನು ಪಡೆದು ಉನ್ನತ ಹುದ್ದೆಗಳನ್ನು, ಸಂವಿಧಾನಬದ್ಧ ಸವಲತ್ತುಗಳನ್ನು ಬಳಸಿಕೊಳ್ಳುತ್ತಿದ್ದಾರೆ.

**ಇತರೆ ಸಮುದಾಯಗಳು ಮತ್ತು ಬುಡ್ಗ ಜಂಗಮ್ ಸಮುದಾಯದ ತೌಲನಿಕತೆ**

ಬುಡ್ಗ ಜಂಗಮರು ಮತ್ತು ಇತರೆ ಸಮುದಾಯಗಳೊಂದಿಗೆ ಇರುವ ಸಾಮ್ಯತೆಗಳು, ಭಿನ್ನತೆಗಳನ್ನು ಮತ್ತು ಸಂಬಂಧಗಳನ್ನು ಕುರಿತು ಈ ಕೆಳಗೆ ವಿವರಿಸಲಾಗಿದೆ.

## ಬೇಡ ಬುಡಕಟ್ಟು ಮತ್ತು ಬುಡ್ಗ ಜಂಗಮ್ ಸಮುದಾಯ

ಕರ್ನಾಟಕದಲ್ಲಿ ಕಂಡುಬರುವ ಐವತ್ತು ಬುಡಕಟ್ಟುಗಳಲ್ಲಿ ಬೇಡ ಬುಡಕಟ್ಟು ಒಂದಾಗಿದೆ. ಬೇಡ ಬುಡಕಟ್ಟನವರು ವಿಶಿಷ್ಟ ಸಂಪ್ರದಾಯ, ಆಚರಣೆ, ಸಂಸ್ಕೃತಿಗಳನ್ನು ಹೊಂದಿರುವಂತಹ ಬುಡಕಟ್ಟಾಗಿದೆ. ಮೂಲತಃ ಆದಿಮಾನವನ ಕಾಲದಿಂದಲೂ ಬೇಟೆಯಾಡುವುದು, ಗೆಡ್ಡೆ–ಗೆಣಸುಗಳನ್ನು ಅಗೆಯುವುದು ಇತ್ಯಾದಿ ಕಸುಬು ಮತ್ತು ಆಹಾರ ಸಂಗ್ರಹಣೆಯ ಮೂಲಗಳಾಗಿದ್ದವು. ಕರ್ನಾಟಕದಲ್ಲಿ ನಾಯಕ ತಳವಾರ, ವಾಲ್ಮೀಕಿ, ಬೇಡ ಮುಂತಾದ ಹೆಸರುಗಳಿಂದ ಗುರುತಿಸಲ್ಪಡುತ್ತಾರೆ. ಮೂಲತಃ ಬೇಡರು ಅರಣ್ಯವಾಸಿಗಳು, ಇವರು ತಮ್ಮ ಜೀವನಕ್ಕಾಗಿ ಬೇಟೆಯಾಡಿ ಬದುಕುವುದೇ ಪ್ರಮುಖವಾಗಿ ಜೀವನವಾಗಿತ್ತು. ಇದರಿಂದ ಬೇಟೆ ಮತ್ತು ಬೇಡ ಎರಡು ಪದಗಳು ಒಂದೇ ಎಂದು ತಿಳಿದು ಬರುತ್ತದೆ. ಈ ಕಾರಣದಿಂದ ಬೇಟೆ ವೃತ್ತಿಗನುಗುಣವಾಗಿ ಬೇಡ ಪದವು ಬಳಕೆಗೆ ಬಂದಿದೆ. ಆಡು ಭಾಷೆ ರೂಢಿಯಲ್ಲಿ ಈ ಪದವು ಬೇಟೆ ನಂತರ ಬೇಡ ಎಂದು ರೂಪಾಂತರಗೊಂಡಿದೆ ಎನ್ನಬಹುದು,

**ಬೇಡ:** 'ಬೇಡ' ಎಂಬ ಪದವು ನಾಮಪದವಾಗಿದ್ದು, ಬೇಡನು, ಬೇಟೆಗಾರ, ಬೇಟೆಯಾಡುವ ವೃತ್ತಿ ಎಂದರ್ಥ. 'ಬೇಟೆ' ಎನ್ನುವ ಪದಕ್ಕೆ ಪ್ರಾಣಿಗಳನ್ನು ಹಿಂಸಿಸುವ, ಕೊಲ್ಲುವ ಅರ್ಥ ರೂಢಿಯಲ್ಲಿದೆ. ಇಲ್ಲಿ ಪ್ರಾಣಿ, ಪಕ್ಷಿ, ಜಲಚರಗಳನ್ನು ನಾನಾ ತರಹದ ಆಯುಧಗಳಿಂದ ಕೊಲ್ಲುವ ಪ್ರಕ್ರಿಯೆಗೆ ಬೇಟೆ ಎನ್ನಲಾಗುತ್ತಿದೆ. ಇದಕ್ಕೆ ಶಿಕಾರಿ, ಮೃಗಯಾ ಎಂತಲೂ ಕರೆಯುವರು, ಇಂಗ್ಲೀಷ್‌ನಲ್ಲಿ 'hunting' ಎಂದು ಕರೆಯುತ್ತಾರೆ. ಈ ಪದಕ್ಕೆ ಕನ್ನಡದಲ್ಲಿ 'ಬೇಟೆ' ಎಂದು ಪ್ರಯೋಗಿಸಲಾಗಿದೆ. "ಈ ಬೇಟೆಯಾಡುವವರಿಗೆ ಬೇಟೆಗಾರರು, ಗುರಿಕಾರ, ಬೇಡರೆಂದು ಕರೆಯುವರು"[೧೬]. ಕಿಟ್ಟೆಲ್ ಶಬ್ಧಕೋಶದಲ್ಲಿ ಬೇಡ ಎಂಬ ಪದಕ್ಕೆ ಇಂಗ್ಲೀಷ್‌ನಲ್ಲಿ A huntsman ಎಂದು, ಅಂದರೆ ಬೇಟೆಯಾಡುವ ವ್ಯಕ್ತಿ ಅಥವಾ ಬೇಟೆಗಾರ ಎಂದು ಅರ್ಥೈಸಿದ್ದಾರೆ. ಬೇಟೆಯನ್ನು ತಮಿಳಿನಲ್ಲಿ ವೇಟ್ಟೈ, ತೆಲುಗಿನಲ್ಲಿ ವೇಟ, ವ್ಯಾಟ(ಯಾಟ) ಎಂದು ಕರೆಯುತ್ತಾರೆ. "ಬೇಟೆಯಾಡುವವರನ್ನು ಬೇಡರು ಎಂದು ಕರೆದಿರುವುದು ವೃತ್ತಿಯಿಂದಲೇ ಇರಬೇಕು"[೧೭]. "ಶಿವನು ಬೇಟೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿರುವುದು ಸ್ಪಷ್ಟ. ಭಾರತೀಯ ಸಂಸ್ಕೃತಿಯಲ್ಲಿ ಶಿವನಿಗೂ ಮತ್ತು ಬೇಟೆಗೂ ಅವಿನಾಭಾವ ಸಂಬಂಧವಿದೆ. ಬೇಟೆಯ ಬದುಕಿನ ವೇಳೆ ಮನುಷ್ಯ ಉಪಯೋಗಿಸಿದ ಈಟಿ, ಭರ್ಚಿ, ತ್ರಿಶೂಲ ಶಿವನ ಕೈಯ್ಯ ಆಯುಧ, ಶಿವನ ಕೊರಳಲ್ಲಿ ಹಾವು ಇದೆ. ಆತನ ವಾಹನ ರೈತನ ಬದುಕಿನ ಮೂಲಧಾರವೆನಿಸುವ ಎತ್ತು. ಹೀಗೆ ಪ್ರಾಣಿ ಮತ್ತು ಮನುಷ್ಯ ಸಂಬಂಧ ಅನಾದಿಕಾಲದಿಂದಲೂ ನಡೆದು ಬಂದಿದೆ"[೧೮] ಎಂದು ಡಾ ವಿರುಪಾಕ್ಷಿ ಪೂಜಾರಳ್ಳಿಯವರು ವಿವರಿಸುತ್ತಾರೆ.

ಮಾನವನ ಉಗಮದ ನಂತರದಲ್ಲಿ ಎಲ್ಲಾರೂ ಬೇಟೆಗಾರರೇ ಆಗಿದ್ದರು. ನಂತರ ಒಂದೊಂದು ಜನಸಮುದಾಯಗಳು ವಿಕಾಸವನ್ನು ಕಂಡುಕೊಂಡು ಶ್ರೇಣಿಕೃತವಾಗಿ ಬೆಳೆಯಲಾರಂಭಿಸಿದರು, ಇದರಲ್ಲಿ ಬುಡ್ಗ ಜಂಗಮರ ಇತಿಹಾಸವು ದಾಖಲಾಗಿಲ್ಲವಾದ್ದರಿಂದ ತಮ್ಮ ಪ್ರಾಚೀನತೆಯನ್ನು ಮೌಖಿಕವಾಗಿ ತಮ್ಮ ಮಹಾಕಾವ್ಯಗಳ ಮೂಲಕ ವ್ಯಕ್ತಪಡಿಸುವುದುಂಟು. ಬೇಡ ಬುಡಕಟ್ಟಿನ ಕುಮಾರರಾಮನ

ಮಹಾಕಾವ್ಯ ಈ ಸಮುದಾಯವು ತನ್ನ ಬುರ್ರಕಥಾ ಕಾವ್ಯದಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದ ಮತ್ತು ಈ ಸಮುದಾಯದ ನೆಚ್ಚಿನ ಕಾವ್ಯವಾಗಿ ಜನಮನ್ನಣೆ ಪಡೆದಿರುವುದು ಕಾಣಬಹುದು. ಭಾರತದಲ್ಲಿ ಇವರು ಮೂಲದ್ರಾವಿಡರಾಗಿದ್ದಾರೆ. ಬೇಡ ಬುಡ್ಗ ಜಂಗಮರು ಆದಿ ಜನಸಮುದಾಯಕ್ಕೆ ಸೇರಿದ್ದು ಕರ್ನಾಟಕದಲ್ಲಿ ಇವರನ್ನು ವಿವಿಧ ಪರ್ಯಾಯ ಹೆಸರುಗಳಿಂದ ಕರೆಯುತ್ತಾರೆ. ಭಾರತ ಉಪಖಂಡದಲ್ಲಿ ಬುಡ್ಗ ಜಂಗಮ್ ಸಮುದಾಯ ಕುರಿತಂತೆ ಸಮಗ್ರವಾದ ಸಂಶೋಧನೆ ನಡೆದಿಲ್ಲ. ಬ್ರಿಟಿಷರ ಸಂದರ್ಭದಲ್ಲಿ ಬೇಡ ಬುಡ್ಗ ಜಂಗಮರ ಬಗ್ಗೆ ಸ್ಥಿತಿಗತಿಯ ಬಗ್ಗೆ ಬರವಣಿಗೆಗಳಿವೆ. ಬೇಟೆಗೂ ಮತ್ತು ಬುಡ್ಗ ಜಂಗಮರಿಗೂ ಅವಿನಾಭಾವ ಸಂಬಂಧವಿದೆ. ಬೇಟೆಯಿಂದ ಜೀವನಾರಂಭಿಸಿದ ಇವರನ್ನು ಬೇಡ ಜಂಗಮರು ಎಂದು ಕರೆದಿದ್ದಾರೆ. ಹಾಗಾಗಿ ಕೆ ಎಸ್ ಸಿಂಗ್ ಅವರು Anthropological Survey of India. The Scheduled Castes ಎಂಬ ಕೃತಿಯಲ್ಲಿ "The Beda/Budga Jangam were a community of hunters"ಎಂದು ಖಚಿತಪಡಿಸಿದ್ದಾರೆ.

"ಬೇಡರಲ್ಲಿ ಮರಗಿಬೇಡರು, ದಾಸಬೇಡರು, ನಾಯಕ ಮಕ್ಕಳು ಎಂಬ ಒಳಜಾತಿಗಳಿರುತ್ತವೆ. ಇವರೊಳಗೆ ಪರಸ್ಪರ ಊಟದ ಬಳಕೆಯಾಗುವುದಿಲ್ಲ. ಕೆಲವು ಬೇಡರ ಕುಲದೇವತೆ ದುರುಗಮ್ಮ ಅಥವಾ ಮರಿಯಮ್ಮ ಮತ್ತೆ ಕೆಲವರ ಕುಲದೇವತೆ ನಾಗಲಮ್ಮ, ಇನ್ನೂ ಕೆಲವರಿಗೆ ಲಕ್ಷ್ಮೀ, ಆದರೆ ಇವರು ಎಲ್ಲಮ್ಮ, ಹನುಮಂತ ಮುಂತಾದ ದೇವತೆಗಳಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಮರಗಿಬೇಡರು ದುರುಗಮ್ಮನ ಪೂರ್ಣಭಕ್ತರು, ಅವರು ದುರಗಮುರಗಿಯ ಸದುಕವನ್ನು ತಲೆಯಮೇಲೆ ಹೊತ್ತುಕೊಂಡು ಮನೆ ಮನೆ ಭಿಕ್ಷೆ ಯಾಡುತ್ತಾ ತಿರುಗುತ್ತಾರೆ. ದಾಸಬೇಡರು ವೆಂಕಟರಮಣನನ ಇಲ್ಲವೇ ಹನುಮಂತನ ದಾಸರಾಗಿ, ನಾಮಹಚ್ಚಿಕೊಂಡು ದಾಸಯ್ಯನಾಗಿ ಭಿಕ್ಷೆ ಬೇಡುತ್ತಾರೆ ಅಥವಾ ತಂಬೂರಿ ಹಿಡಿದು ಹಾಡುತ್ತಾ ಭಿಕ್ಷೆ ಬೇಡುತ್ತಾರೆ. ಸಿಂಧಿ(ಸರಾಯಿ) ಕುಡಿಯುವುದರಲ್ಲಿ ಮಾಂಸ ತಿನ್ನುವುದರಲ್ಲಿಯೂ ಬೇಡರು ಹೆಸರಾಗಿದ್ದಾರೆ." ಬೇಡರು "ಮದುವೆ ಜರುಗಿದ ನಂತರ ನಾಗಬಲಿ ಅಥವಾ ಹಾವಿನ ಪೂಜೆಯನ್ನು ಮಾಡುವರು"[೧೯] ಅದೇರೀತಿಯಾಗಿ ಬೇಡ ಬುಡ್ಗ ಜಂಗಮರಲ್ಲಿಯೂ, ಮದುವೆಯ ಸಂದರ್ಭದಲ್ಲಿ ನಾಗೋಲಿ ಕಾರ್ಯಕ್ರಮದಂದು ಹುತ್ತದ ಮಣ್ಣಿನಿಂದ ದೃಷ್ಟಿಗೊಂಬೆ ಮೂರ್ತಿಯನ್ನು ನಿರ್ಮಿಸಿ ಕುರಿ, ಮೇಕೆ ಬಲಿ ನೀಡುವುದನ್ನು ಕಾಣಬಹುದು. ಇಲ್ಲಿ 'ಹಾವಿನ ಹುತ್ತು' ಮತ್ತು 'ಬಲಿ' ಆಚರಣೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಬೇಡ ಬುಡ್ಗಜಂಗಮರ ಮೂಲವನ್ನು ತಿಳಿಯಲು ಸಹಕಾರಿಯಾಗುತ್ತದೆ. 'ಹುತ್ತು'ನ್ನು ಬುಡ್ಗ ಜಂಗಮರು ತಮ್ಮ ಕುಲದೇವತೆಯಾದ ಜಮ್ಮುಲಮ್ಮ ದೇವರು ಎಂದು ಪರಿಗಣಿಸುತ್ತಾರೆ. ದೃಷ್ಟಿಗೊಂಬೆ ಮೂರ್ತಿಗೆ ಕುರಿ, ಮೇಕೆ ಬಲಿ ನೀಡುವ ಆಚರಣೆಯು ಅವರ ಮೂಲ ವೃತ್ತಿಯನ್ನು ಸೂಚಿಸುತ್ತದೆ. ಈಗಾಗಿ ಈ ಸಮುದಾಯವು ಬೇಡ ಬುಡಕಟ್ಟಿನ ಒಂದು ಪ್ರಭೇದವಾಗಿದೆ. ಕಾಲಾಂತರದಲ್ಲಿ ಈ ಸಮುದಾಯವು ಪ್ರತ್ಯೇಕವಾಗಿರುವ ಸಾಧ್ಯತೆ ಇದೆ. ಬೇಡರು, ಬೇಡ ಬುಡ್ಗ ಜಂಗಮರು, ಮೊಂಡರು ಮತ್ತು ಸಿಂಧೋಳ್‌ರು ಮೂಲತಃ ಬೇಟೆಗಾರ ವೃತ್ತಿಯನ್ನು ಅವಲಂಬಿಸಿದ ಬೇಟೆಗಾರರು. ಇವರು ತಮ್ಮ ದೇವರುಗಳನ್ನು ತಮ್ಮ ಜೊತೆಯಲ್ಲಿಯೇ ಪೆಟ್ಟಿಗೆಯಲ್ಲಿ ಇಟ್ಟುಕೊಂಡು ಪೂಜಿಸುತ್ತಾರೆ. ಆಚರಣೆಗಳು, ಗುಗ್ಗರಿ(ಕುಡುಂ,ಗುಗ್ಗುಳು)ಹಬ್ಬ, ಕುಲದೇವತಾ ಆಚರಣೆಗಳು, ಭಾಷೆಗಳು, ಅವರ ವಲಸೆ ಕ್ರಮಗಳು, ಜಾತಿಪಂಚಾಯಿತಿಗಳು, ಗುಡಿಕಟ್ಟೆಗಳು ಮತ್ತು

ವೃತ್ತಿಲಕ್ಷಣಗಳನ್ನು ಗಮನಿಸಿದಾಗ ಈ ಬುಡಕಟ್ಟು ಸಮುದಾಯಗಳು ಮೂಲದಲ್ಲಿ ಒಂದೇಯಾಗಿದ್ದು, ಕಾಲಾಂತರದಲ್ಲಿ ಒಡೆದು ಕೆಲವರು ಕೃಷಿಯನ್ನು, ಕಲಾಪ್ರದರ್ಶನಗಳನ್ನು ಅವಲಂಬಿಸಿದರು, ಇನ್ನೂ ಕೆಲವರು ಬೇಟೆಯನ್ನು ಅವಲಂಬಿಸಿದರು ಹೀಗೆ ವೃತ್ತಿಯಾಧಾರಿತವಾಗಿ ಪ್ರಾದೇಶಿಕತೆಯ ಭಾಷೆ, ಸಂಸ್ಕೃತಿ, ಧರ್ಮಗಳ ಪ್ರಭಾವಬೀರಿ ಪ್ರತ್ಯೇಕವಾಗಿರುವ ಸಾಧ್ಯತೆಗಳಿವೆ. ಈ ಮೇಲಿನ ಲಕ್ಷಣಗಳನ್ನು ಊಹಿಸಿಕೊಳ್ಳಲು ಪ್ರೊ ವಿರುಪಾಕ್ಷಿ ಪೂಜಾರಳ್ಳಿಯವರು ಮೇಲೆ ವಿವರಿಸಿದ ಬೇಡರ ಒಳಜಾತಿಗಳ ವಿವರಗಳು ಪುಷ್ಟಿ ನೀಡುತ್ತವೆ.

ಬೇಡರಿಗೆ ಕೃಷಿಭೂಮಿಯಿಂದ ಅರಣ್ಯದಲ್ಲೇಯೇ ವಾಸಮಾಡುತ್ತಾ ಕೃಷಿ ಮತ್ತು ಬೇಟೆಯನ್ನು ಅವಲಂಬಿಸಿದರು. ಬುಡ್ಗ ಜಂಗಮರಿಗೆ ಕೃಷಿಭೂಮಿ ಇಲ್ಲದೇ ಬೇಟೆಗಾರಿಕೆ ಮತ್ತು ಕಲೆಯನ್ನು ಪ್ರದರ್ಶಿಸುತ್ತಾ ಕಾಡಿನಿಂದ ನಾಡಿನೊಳಗೆ ಪ್ರವೇಶಿಸಿದರು. ನಾಡಿನೊಳಗೆ ಮೇಲ್ವರ್ಗದ ಸಮುದಾಯಗಳು ಜಂಗಮ, ದಾಸ, ಸಿದ್ದ, ಜೋಗಿ ಪಂಥಗಳು ಶೈವ ಮತ್ತು ವೈಷ್ಣವ ಧರ್ಮಗಳು ಮತ ಸಂಘರ್ಷಗಳಿಗೆ ಒಳಗಾಗಿ ಧರ್ಮ ಪ್ರಚಾರಕ್ಕಾಗಿ ಅಲೆಮಾರಿ ಬುಡ್ಗ ಜಂಗಮರನ್ನು ವ್ಯವಸ್ಥಿತವಾಗಿ ಬಳಸಿಕೊಂಡಿರುವುದು ಕಾಣಬಹುದು.

### ಮಾಲ ಜಂಗಮ್ ಮತ್ತು ಬುಡ್ಗ ಜಂಗಮ್

ಕರ್ನಾಟಕದಲ್ಲಿ ಕಂಡುಬರುವ ಪರಿಶಿಷ್ಟ ಜಾತಿಯ ಮಾಲ ಜಂಗಮ್‌ರನ್ನು ಪ್ರಾದೇಶಿಕವಾಗಿ ಇವರನ್ನು ಮಾಲ, ಮಾಲೇಯರು, ಮಲ್ಲಯ್ಯನವರು, ಪರ್ವತ ಮಲ್ಲಯ್ಯನವರು, ಶಿವನಾಗಮಯ್ಯನವರು ಎಂದು ಕರೆಯುತ್ತಾರೆ. "ಮಾಲ ಎಂಬ ಶಬ್ದ 'ಮೈಲಾ' ಎಂಬ ಸಂಸ್ಕೃತ ಪದದಿಂದ ನಿಷ್ಪತ್ತಿಯಾಗಿದೆ. ಮಾಲ ಎಂದರೆ ಶಪಚ ಎಂದು, ಕನ್ನಡದಲ್ಲಿ ಮೈಲಿಗೆ ಆದವನೆಂಬ ಅರ್ಥವಿದೆ. ಅನಾದಿಕಾಲದಿಂದಲೂ ಅಸ್ಪೃಶ್ಯ ಜಾತಿಯ ಹಿನ್ನೆಲೆಯಲ್ಲಿ ಅನೈರ್ಮಲ್ಯದ ಕಸುಬುದಾರರೆಂದು ಗುರುತಿಸಿಕೊಂಡಿದ್ದಾರೆ. ತಮಿಳು ಗ್ರಂಥದಲ್ಲಿ 'ಮಾಲೇರು' ಎಂಬ ಪದಕ್ಕೆ ಪರ್ವತದವನೆಂಬ ಅರ್ಥವಿದೆ"[೨೦]. ಮಾಲ ಎಂದರೆ ಹೊಲೆಯ(ಚಲುವಾದಿಗಳು) ಎಂದು ಕರೆಯುತ್ತಾರೆ. ಇವರು ತಲೆಯಮೇಲೆ ಮಲ್ಲಯ್ಯನ ಮೂರ್ತಿ ಇಟ್ಟುಕೊಂಡು ಪ್ರದರ್ಶಿಸುತ್ತಾ ಭಿಕ್ಷಾಟನೆ ಮಾಡಿ ಜೀವನ ಸಾಗಿಸುವ ಸಮುದಾಯವಾಗಿದೆ. ಇವರ ಪಾರಂಪರಿಕ ಕಲೆಗಳಾದ ದಾಲಪಟ, ಕತ್ತಿ ವರಸೆ. ಚಕ್ರ ತಿರುಗಿಸುವುದು ಇತ್ಯಾದಿ ಶಕ್ತಿ ಪ್ರದರ್ಶನ ಸಾಹಸ ಕಲೆಗಳನ್ನು ಪ್ರದರ್ಶಿಸಿ ಜೀವನ ಸಾಗಿಸುತ್ತಾರೆ. ಇವರ ಮಾತೃಭಾಷೆ ತೆಲಗು ಮತ್ತು ಮರಗು ಭಾಷೆಯಾಗಿದೆ. ಇವರು ಆಂಧ್ರ ಮೂಲದವರಾಗಿದ್ದು ಕ್ರಮೇಣವಾಗಿ ಕರ್ನಾಟಕಕ್ಕೆ ವಲಸೆ ಬಂದಿದ್ದಾರೆ. ಕರ್ನಾಟಕದಲ್ಲಿ ಕೊಪ್ಪಳ, ರಾಯಚೂರು, ಹುಬ್ಬಳ್ಳಿ, ಗದಗ, ಹಾವೇರಿ, ಶಿವಮೊಗ್ಗ ಜಿಲ್ಲೆಗಳಲ್ಲಿ ಕಂಡು ಬರುತ್ತಾರೆ. ಕರ್ನಾಟಕದಲ್ಲಿ ಇವರ ಒಟ್ಟು ಜನಸಂಖ್ಯೆ ೧,೬೧೨ ಜನ ಕಂಡುಬರುತ್ತಾರೆ.

**ಮಾಲ ಜಂಗಮ್ ಪಂಗಡಗಳು:** ಉಳ್ಳಿ, ಕೊಂಡರೆಡ್ಡಿ, ಗುಡುದೋರು, ನರಸಲೋಳು, ಪರ್ವತೇಯರಯ, ಬಂಗಾರಿ, ಬಂದೂಕು, ಬೊಬ್ಬರ್, ಭೋಗಿ, ಮುತ್ತುಗಾರರು, ಲಡ್ಡಾಲು ಇತ್ಯಾದಿ ಪಂಗಡಗಳು ಕಂಡುಬರುತ್ತವೆ.

ಮಾಲ ಜಂಗಮರ ಕುಲ, ಬಳಿಗಳು: ಇರುಕುಳ, ಕರಿನೀಲು(ಕರಿನೀರು), ನರೇಂದ್ರ(ನಟರಾಜ), ಪಶುಮೋಳ(ಹರಿಷಿಣಕೊಂಬು), ಪಾಯಲ್, ಮಂದ್ಲಿನೀರು, ಸಿಶೇಂದ್ರ, ಸೈನೀಳಿ(ಸಿಹಿನೀರು), ಬೊಗಡಿಷಟ್, ಇರಸೆಟ್, ಕೊಂಡೋಳು ಇತ್ಯಾದಿ ಬೆಡಗುಗಳನ್ನು ಕಾಣುತ್ತೇವೆ.

ಬುಡ್ಗ ಜಂಗಮರ ಸಂಸ್ಕೃತಿ ಮತ್ತು ಆಚಾರ ವಿಚಾರಗಳಿಗೆ ಯಾವುದೇ ಸಾಮ್ಯತೆ ಕಂಡು ಬರುವುದಿಲ್ಲ. ಬುಡ್ಗ ಜಂಗಮರು ಇವರನ್ನು ರಾಜಣ್ಣೋಳು ಎಂದು ಕರೆಯುತ್ತಾರೆ. ಬುಡ್ಗ ಜಂಗಮರಿಗೂ ಮತ್ತು ಮಾಲ ಜಂಗಮರಿಗೂ ಯಾವುದೇ ರೀತಿಯ ಕೊಡುಕೊಳ್ಳುವಿಕೆ ವಿವಾಹ ಕ್ರಮಗಳು ನಡೆದಿರುವುದು ಕಂಡುಬಂದಿರುವುದಿಲ್ಲ. ಇವರಿಬ್ಬರ ಮೂಲ ಹಾಗೂ ಭಾಷೆ ಮಾತ್ರ ಒಂದೇಯಾಗಿದ್ದು, ಕಾಲಾಂತರದಲ್ಲಿ ವೃತ್ತಿಯೇ ಪ್ರತ್ಯೇಕವಾಗಿ ಹಂಚಿಕೊಂಡು ಪ್ರಾದೇಶಿಕವಾಗಿ ವಲಸೆಹೋಗಿ ಅದೇ ಒಂದು ಪ್ರತ್ಯೇಕ ಸಮುದಾಯವಾಗಿ ರೂಪುಗೊಂಡಿದೆ. ಮಾಲ ಪದದ ಹೆಸರಿನಲ್ಲಿ ಅನೇಕ ಅಸ್ಪೃಶ್ಯ ಸಮುದಾಯಗಳ ಉಪಜಾತಿಗಳ ಪಟ್ಟಿಯನ್ನು ನಿಜಾಮರ ಕಾಲದಲ್ಲಿ ಗುರುತಿಸಿರುವ ಪಟ್ಟಿಯನ್ನು ಅನುಬಂಧ-೩ರಲ್ಲಿ ನೋಡಬಹುದು.

**ಸುಡುಗಾಡು ಸಿದ್ಧರು ಮತ್ತು ಬುಡ್ಗ ಜಂಗಮರು**

ಕರ್ನಾಟಕದಲ್ಲಿ ಕಂಡು ಬರುವ ಪರಿಶಿಷ್ಟ ಜಾತಿಯ ಸುಡುಗಾಡು ಸಿದ್ದರನ್ನು ಪ್ರಾದೇಶಿಕವಾಗಿ ಇವರನ್ನು ಕಾಡುಸಿದ್ಧರು, ಸಿದ್ಧರು, ಸ್ಮಶಾನದ ಜೋಗಿಗಳು ಎಂದು ಕರೆಯುತ್ತಾರೆ. ಆಂಧ್ರದಲ್ಲಿ ಇವರನ್ನು ಕಾಟಿಪಾಪಲು, ಮಹಾರಾಷ್ಟ್ರದಲ್ಲಿ ಮಸಣಜೋಗಿಗಳು, ಕರ್ನಾಟಕದಲ್ಲಿ ಸುಡುಗಾಡು ಸಿದ್ಧರು ಇತ್ಯಾದಿ ಹೆಸರುಗಳಿಂದ ಗುರುತಿಸುತ್ತಾರೆ. ವಿವಿಧ ವೇಷಭೂಷಣಗಳನ್ನು ಹಾಕಿಕೊಂಡು ಕೈಚಳಕದ ವಿದ್ಯೆಯನ್ನು ಪ್ರದರ್ಶಿಸುತ್ತಾ ಭಿಕ್ಷಾಟನೆ ಮಾಡಿ ಜೀವನ ಸಾಗಿಸುವ ಸಮುದಾಯವಾಗಿದೆ.

ಇವರು ಆಂಧ್ರ ಮೂಲದವರಾಗಿದ್ದು, ಕ್ರಮೇಣವಾಗಿ ಕರ್ನಾಟಕ. ಮಹಾರಾಷ್ಟ್ರ ರಾಜ್ಯಗಳಿಗೆ ವಲಸೆ ಹೋಗಿದ್ದಾರೆ. ಇವರಲ್ಲಿ ಗೋಲ್ಕಂಡ ಕಟ್ಟಾ, ಗದ್ವಾಲ ಕಟ್ಟಾ ಮತ್ತು ಹರಪನಹಳ್ಳಿ ಕಟ್ಟಾ(ಕಟ್ಟೆಮನೆಗಳು) ಹೀಗೆ ೩ ಕಟ್ಟೆಗಳಲ್ಲಿ ಇವರು ಪ್ರಮುಖವಾಗಿ ಕಂಡುಬರುತ್ತಾರೆ. ಇವರ ಮಾತೃಭಾಷೆ ತೆಲುಗು ಮತ್ತು ಮರಗು ಭಾಷೆಯಾಗಿದೆ. ಇವರ ಜನಸಂಖ್ಯೆಯು ೨೦೧೧ರ ಜನಗಣತಿಯ ಪ್ರಕಾರ ಒಟ್ಟು ೨೯,೪೫೭ ಇದ್ದು, ಇದರಲ್ಲಿ ಗಂಡು ೧೪೪೪೯ ಹಾಗೂ ಹೆಣ್ಣು ೧೪೫೦೮ರಷ್ಟು ದಾಖಲಾಗಿದ್ದಾರೆ.

ಸುಡುಗಾಡು ಸಿದ್ಧರ ಕುಲ, ಬಳಿ, ಬೆಡಗು: "ಇಪ್ಪಿಯವರು, ಉದಂಡಿಯವರು, ಓಂಟೆತ್ತಿನವರು, ಕಲ್ಲಪರಿಯವರು, ಕಲ್ಯಾಣಮೊಳು, ಕಿನ್ನೂರಿ, ಕೂಗಡಿಯವರು, ಕೋಮಾರಿಯವರು, ಗಂಟಿಯವರು, ತೋಟದವರು, ದೂಪದವರು, ಪತಾಬಿರೋಳರು, ಪರಿಯವರು, ಬಸರಿಯವರು, ಮದ್ದಿಯವರು, ಮಾವಡಿಯವರು, ಮಾದನಂ, ಮಾವಿನೋಳು, ಯಾಪಲೋಳರು, ರಾಚೂಟಿಯವರು, ವಲಾತ್ತಿಯವರು, ವಿಭೂತಿಯವರು, ಶೆಂಕಿನವರು, ಸತಾಸಿನ್‌ರವರು, ಹಾವಿನವರು, ಹಾವಿನ ಗಂಟಿಯವರು, ಹಂದಿಯವರು"[೨೧]. ಇತ್ಯಾದಿ ಬೆಡಗುಗಳು ಕಂಡುಬರುತ್ತವೆ. ಸುಡುಗಾಡು ಸಿದ್ಧರಲ್ಲಿ ಮೊದಲಿನಿಂದಲೂ

ತೆರಕೊಟ್ಟು ಹೆಣ್ಣನ್ನು ಮದುವೆ ಮಾಡಿಕೊಳ್ಳುವ ಸಂಪ್ರದಾಯ ಇನ್ನು ಜಾರಿಯಲ್ಲಿದೆ. ತೆರ ಕೊಡುವ ಪದ್ಧತಿಯು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಭಿನ್ನವಾಗಿದೆ.

ಇವರ ಮೂಲ ವೃತ್ತಿ ಕುಲಕಸಬು ಸುಡುಗಾಡು ಸಿದ್ಧ ಹಾಗೂ ನಿರಂಜಯ್ಯನ ಕಾಯಕದಂತಹ ಭಿಕ್ಷೆ ಬೇಡುವ ಕಸುಬಾಗಿದೆ. ಇವರು ಒಂದೆಡೆ ನೆಲಸದೆ ಊರಿಂದೂರಿಗೆ ವಲಸೆ ಹೋಗಿ ಭಿಕ್ಷೆಯಿಂದಲೆ ಅವರ ಕುಟುಂಬದ ನಿರ್ವಹಣೆ ಮಾಡುತ್ತಾರೆ. ಭಿಕ್ಷಾಟನೆ ಎಂಬುವುದು ಒಂದು ಪವಿತ್ರವಾದ ಕಾಯಕವೆಂಬುದು ಸಿದ್ಧರ ಅಭಿಪ್ರಾಯವಾಗಿದೆ. ಇವರು ತಮ್ಮಲ್ಲಿ ಸಂಗ್ರಹಿಸಿಕೊಂಡಿರುವ ಗಿಡಮೂಲಿಕೆಗಳಿಂದ ಜನರಿಗೆ ಔಷಧಿಗಳನ್ನು ಕೊಡುತ್ತಾರೆ. ಕ್ರಮೇಣವಾಗಿ ಇವರು ತಮ್ಮ ಕುಲಕಸುಬು ಸುಡುಗಾಡು ಸಿದ್ಧ ಹಾಗೂ ನಿರಂಜಯ್ಯನ ಕಾಯಕವನ್ನು ಮಾಡುವುದು ಕಡಿಮೆಗೊಳಿಸಿದ್ದಾರೆ. ಊರುಗಳನ್ನು ಅಲೆದಾಡುವುದನ್ನು ನಿಲ್ಲಿಸಿ, ತಮಗೆ ಅನುಕೂಲವಾದ ಗ್ರಾಮಗಳನ್ನು ಗುರುತಿಸಿಕೊಂಡು ಕೂಲಿ ಕೆಲಸ ಮತ್ತು ಹೆಣ್ಣುಮಕ್ಕಳು ಚಾಪೆ ಹೆಣೆಯುವುದು, ಕೌದಿ ಹೊಲಿಯುವುದು, ಸಣ್ಣಪುಟ್ಟ ವ್ಯಾಪಾರ ಮಾಡಿಕೊಂಡು ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಾರೆ. ಮೂಲದಲ್ಲಿ ಬುಡ್ಗ ಜಂಗಮರು ಸುಡುಗಾಡು ಸಿದ್ಧರು ಒಂದೇ ಆಗಿದ್ದರು. ಅವರ ಜನಾಂಗಿಕವಾಗಿ, ಭಾಷಿಕವಾಗಿ, ಸಾಂಸ್ಕೃತಿಕವಾಗಿ ಒಂದೇಯಾಗಿದ್ದು, ಬೆಡಗುಗಳು, ಆಚಾರ ವಿಚಾರ, ಜಾತಿ ಪಂಚಾಯಿತಿ ಒಂದೇಯಾಗಿದ್ದು, ಇಂದಿಗೂ ಕೆಲವು ಕಡೆ ವಿವಾಹ ಸಂಬಂಧಗಳು ಏರ್ಪಟ್ಟಿರುವುದು ಕಂಡುಬರುತ್ತದೆ. ಬುಡ್ಗ ಜಂಗಮರು ಮೂಲದಲ್ಲಿ ಜಾತಿಗೊಂದು ವೇಷ ಹಾಕಿದಂತೆ ಸುಡುಗಾಡು ಸಿದ್ಧರ ವೇಷವನ್ನು ಪ್ರದರ್ಶಿಸುತ್ತಿದ್ದರು. ಬುಡ್ಗ ಜಂಗಮರು ಈ ವೇಷವನ್ನು ಕಿಟ್ಟುಪಂತು ಎಂದು ಕರೆಯುತ್ತಾರೆ. ಕಾಲಾಂತರದಲ್ಲಿ ವೃತ್ತಿಯೇ ಪ್ರತ್ಯೇಕವಾಗಿ ಹಂಚಿಕೊಂಡು ಪ್ರಾದೇಶಿಕವಾಗಿ ವಲಸೆಹೋಗಿ ಅದೇ ಒಂದು ಪ್ರತ್ಯೇಕ ಸಮುದಾಯವಾಗಿ ರೂಪುಗೊಂಡಿರುವುದು  ಕಂಡುಬರುತ್ತದೆ.

**ಬಹುರೂಪಿಗಳು (BAHURUPI) ಮತ್ತು ಬುಡ್ಗ ಜಂಗಮರು**

ಬಹುರೂಪಿಗಳು ಉತ್ತರ ಭಾರತದ ಮಹಾರಾಷ್ಟ್ರ, ಮಧ್ಯಪ್ರದೇಶ, ಹರಿಯಾಣ, ಪಂಜಾಬ್, ಉತ್ತರಪ್ರದೇಶದಲ್ಲಿ ಕಂಡುಬರುತ್ತಾರೆ. ಇವರು ಮುಸ್ಲಿಂ ಧರ್ಮದ ಅನುಯಾಯಿಗಳಾಗಿದ್ದಾರೆ.

**ಬಹಿರೂಪಿಗಳು (BAHIRUPI):** ಬಾಂಬೆ ಪ್ರಸಿಡೆನ್ಸಿಯಲ್ಲಿ ೧೯೩೧ರ ಜನಗಣತಿಯಲ್ಲಿ ದಾಖಲಾದ ಬಹುರೂಪಿ, ಬಹುರೂಪಿಯಾ, ಬಹುರೂಪ ಎನ್ನುವ ಸಮುದಾಯವು "ಹರಿಯಾಣ ರಾಜ್ಯದಲ್ಲಿ ಹಿಸರ್, ಕರ್ನಲ್. ಮಧ್ಯಪ್ರದೇಶ ರಾಜ್ಯದಲ್ಲಿ ಉಜ್ಜೈನ್. ಮಹಾರಾಷ್ಟ್ರದಲ್ಲಿ ಅಹಮದನಗರ್, ಅಕೋಲ, ಭಂಡಾರ, ಭುಲ್ದಾನ, ಚಂದಾಪುರ್, ಗ್ರೇಟರ್ ಬಾಂಬೆ, ನಾಗಪುರ್, ರತ್ನಗಿರಿ, ವಾರ್ದ, ಯವತ್ಮಲ್. ಪಂಜಾಬ್ ರಾಜ್ಯದಲ್ಲಿ ಗುರುದಾಸ್‌ಪುರ್, ಹೋಸ್ಯೆರ್ ಪುರ್, ಲುದ್ಯೆನಾ, ಪತ್ಯೆಲಾ, ಉತ್ತರಪ್ರದೇಶದಲ್ಲಿ ರಾಜ್ಯಾದಾದ್ಯಂತ  ಇದ್ದಾರೆ.

**ಬಹುರೂಪ (BAHURUPA):** ೧೯೩೧ರ ಜನಗಣತಿಯಲ್ಲಿ ಸೆಂಟ್ರಲ್ ಇಂಡಿಯಾ ಏಜೆನ್ಸಿದಲ್ಲಿ ದಾಖಲಾಗುತ್ತಾರೆ.

**ಬಹುರೂಪಿ (BAHARUPI):** ೧೯೩೧ರ ಜನಗಣತಿಯಲ್ಲಿ ಗೋಲಿಯರ್ ಸ್ಟೇಟ್‌ನಲ್ಲಿ ದಾಖಲಾಗುತ್ತಾರೆ.

**ಬಹುರೂಪಿಯಾ (BAHURUPIA):** ೧೮೮೧ರ ಜನಗಣತಿಯಲ್ಲಿ ಇವರು ಬಾಂಬೆ ಪ್ರಸಿಡೆನ್ಸಿ, ಸೆಂಟ್ರಲ್ ಇಂಡಿಯಾ ಏಜೆನ್ಸಿದಲ್ಲಿ ಮತ್ತು ಬೆರಾರು, ಪಂಜಾಬ್ ರಾಜ್ಯದಲ್ಲಿ ಕಂಡು ಬರುತ್ತಾರೆ"[೨೨].

**ಬಹುರೂಪಿಗಳ ಪರ್ಯಾಯ ಹೆಸರುಗಳು:** ಇವರನ್ನು ಮಹಾರಾಷ್ಟ್ರದಲ್ಲಿ ಬಿಂಗಿ, ಭೋರೈ, ನೂರ್ಬೊಡ್ಡಿ, ರೈರಂಗು ಎಂದು, ಉತ್ತರಪ್ರದೇಶದಲ್ಲಿ ನಟ್ ಎಂದು ಕರೆಯುತ್ತಾರೆ.

**ಉಪ ಪಂಗಡಗಳು:** ಮಹಾರಾಷ್ಟ್ರದಲ್ಲಿ ಮಹಾರ್ ಬಹುರೂಪಿ, ಮಾಂಗ್ ಬಹುರೂಪಿ, ಪಂಜಾಬ್ ರಾಜ್ಯದಲ್ಲಿ ಪವರ್, ರಾಥೋರ್. ಉತ್ತರಪ್ರದೇಶದಲ್ಲಿ ಹಿಂದು ಬಹುರೂಪಿಯಾ ಮುಸ್ಲಿಂ ಬಹುರೂಪಿಯಾ ಎಂದು ಗುರುತಿಸುತ್ತಾರೆ.

**ಬಹುರೂಪಿಗಳ ಕುಲ ಬೆಡಗು ಅಥವಾ ಅಡ್ಡ ಹೆಸರುಗಳು** : ಗುಜರಾತ್ ರಾಜ್ಯದಲ್ಲಿ ಬಹುರೂಪಿ, ಮಹಾರಾಷ್ಟ್ರದಲ್ಲಿ ಡಯೋಪೋಡೆ, ಜಾದವ್, ಜಗತಪ್ಪ್, ಕಡಂ, ಮಹೂರೆ, ಸಿಂಧೆ, ಸುರತ್ಕರ್, ಟಂಬೇರ್ ಎಂದು ಗುರುತಿಸುತ್ತಾರೆ.

**ಬಹುರೂಪಿಗಳ ಕುಲ ಬೆಡಗುಗಳು:** ಉತ್ತರ ಪ್ರದೇಶದಲ್ಲಿ ಥಪ್ರೈವ್, ದಿಲ್‌ವಾಲಿ, ಜಾನ್ಕೈ, ಕೊಟ್ಯೈ, ರಸಿದೀಯಾ, ಶಿಕಾರಿ, ಚೂಹಾನ್, ಪನ್ವಾರ್, ರಥೂರ್, ಸಪವತ್. ಹರಿಯಾಣ ರಾಜ್ಯದಲ್ಲಿ ಚರಣ್, ಚೂಹಾನ್, ಜೋ, ಕಿಚ್ಚಿ, ಪವಾರ್, ರಾಥಿ, ಶೆಂಖಲೆ, ಸೋಲಂಕಿ ಎಂದು. ಪಂಜಾಬ್ ರಾಜ್ಯದಲ್ಲಿ ಭನಾನ, ಚೂಹಾನ, ಗಗರಾನ, ಕರ್ನಟ್, ಮಜಾರತ್, ಪವಾರ್, ರಮ್ನೆ, ರಾಥೋರೆ, ಸಖನ್ರೆ, ಶಂಟ್ ಎಂದು ಕರೆಯುತ್ತಾರೆ"[೨೩].

ಬುಡ್ಗ ಜಂಗಮರ ಸಂಸ್ಕೃತಿಗಳಾದ ಇಂಟಿಪೇರ್ಲು(ಬೆಡಗುಗಳು), ಯಾಟ(ಬೇಟೆ), ಮ್ಯಾಳಂ(ಮೇಳ), ಷಂಡ್ರಾ, ಚಿಲ್ಲರ ಭಿಕ್ಷಂ, ಪುರುಡು(ನಾಮಕರಣ), ಪುಟ್ಟೆಂಟಿಕಲು ತಿಸೆದಿ, ಸಾಪಲೆಸೆದಿ, ಬೋದುಗುಡುಪು(ಓಲಿ ಅಥವಾ ತೆರ ಕೊಡುವುದು), ಮಂಗಳಸೂತ್ರಂ, ನಲ್ಲಪೂಸಲು, ನಾಗೋಲಿ, ಬೊಟ್ಟು ಪೆಟ್ಟುಕುನೇದಿ(ಇಂಟಿಪೇರು(ಬೆಡಗು) ಬದಲಾಗುವುದು), ಮುಂತಕಲ್ಲು, ಮ್ಯಾರ, ಪೊಟ, ಕಲ್ಲುಕುನೇದಿ ಆಚಾರಂ, ಬಿಡಾರು ಆಚರಣೆ, ಕುಲದ ಕಟ್ಟಾಚಾರ, ಚಾಪೆ ಹೆಣೆಯುವುದು, ಬಲೆ ನೇಯುವುದು, ಕೌದಿ ಹೊಲಿಯುವುದು, ಜೋಳಿಗೆ ಹೊಲಿಯುವುದು ಇತ್ಯಾದಿ ಲಕ್ಷಣಗಳಿಗೂ ಬಹುರೂಪಿಗಳು ತುಂಬಾ ಅಜಗಜಾಂತರ ವ್ಯತ್ಯಾಸಗಳಿವೆ.

ಬುಡ್ಗ ಜಂಗಮರು ಪ್ರದರ್ಶಿಸುವ ಕಲೆಗೆ ಪ್ರತಿದಿನ ಇವರು ಬಹುಮಾನ ಕೇಳುವುದಿಲ್ಲ. ತಮ್ಮ ಕ್ಯಾಂಪಿನ ಕೊನೆಯ ಆಕರ್ಷಣೆಯಾಗಿ ಪೋಟಿವೇಷ ಹಾಕಿದ ನಂತರ ಮರುದಿನ ಕಾಡಿಬೇಡಿ ಹಣ ಧಾನ್ಯ, ದನಕರ ಮೇಕೆಗಳನ್ನು ಪಡೆದುಕೊಳ್ಳುತ್ತಾರೆ. ಬಹುರೂಪಿಗಳು ಕೇವಲ ವೇಷ ಹಾಕಿ ಮನೆಮನೆಗೆ ನೇರವಾಗಿ ಭಿಕ್ಷೆ ಕೇಳುತ್ತಾರೆ. ಇವರಲ್ಲಿ ಬುಡ್ಗ ಜಂಗಮರು ಪ್ರದರ್ಶಿಸುವ ಕಲಾ ಸಾಹಿತ್ಯ ಸಂಗೀತ

ಕಂಡುಬರುವುದಿಲ್ಲ. ಬಯಲಾಟದ ಕೆಲವು ಪಾತ್ರಗಳ ವೇಷ-ಭೂಷಣಗಳಲ್ಲಿ ಹಾಡುಗಳ ಸಂಯೋಜನೆಯಲ್ಲಿ ಕುಣಿತದಲ್ಲಿ ವೇಷಗಾರರ ಪ್ರಭಾವವನ್ನು ಗುರುತಿಸಬಹುದಾಗಿದೆ ಆದರೆ ಬುಡ್ಗ ಜಂಗಮರ ಸಂಘಟನೆಯಲ್ಲಿಯೇ ಈ ಬಯಲಾಟಗಳು ಹುಟ್ಟಿಕೊಂಡಿವೆ. ರಂಗಭೂಮಿಯಲ್ಲಿ ಬಹುಮುಖ್ಯವಾಗಿ ಬುಡ್ಗ ಜಂಗಮರ ಕಲಾಪ್ರಕಾರಗಳು ಎಲ್ಲಾ ಕಲೆಗಳಿಗೆ ತಾಯಿಬೇರು ಆಗಿದೆ. ಹೊರನೋಟಕ್ಕೆ ಬುಡ್ಗ ಜಂಗಮರ "ವೇಷಗಾರರು ಮತ್ತು ಬಹುರೂಪಿಗಳು ಒಂದೇ ವೃತ್ತಿಯವರಾಗಿ ಕಂಡರೂ ಅವರಿಬ್ಬರ ವೃತ್ತಿ, ಪರಂಪರೆಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಕನ್ನಡ ನಾಡಿನಲ್ಲಿ ಒಂದು ಕಾಲದಲ್ಲಿ ಸಾಕಷ್ಟು ಪ್ರಚಾರದಲ್ಲಿದ್ದ ಬಹುರೂಪಿಗಳು ವೇಷಗಾರರಷ್ಟು ಸಾಧಾರಣ ವರ್ಗದವರಲ್ಲ. ವೀರಶೈವ ಧರ್ಮದ ಆಶ್ರಯದಲ್ಲಿ ಈ ಕಲೆ ಬೆಳೆದದ್ದು ಗಮನಿಸಬೇಕಾದ ಸಂಗತಿ."[೨೪] "ಬಹುರೂಪ ಮಹಾರಾಷ್ಟ್ರದಲ್ಲಿದ್ದುದಾಗಿ ಎಚ್ ಎಂ ದಾಸಗುಪ್ತಾ ಹೇಳುತ್ತಾರೆ. ಒಮ್ಮೆ ಮಹಾರಾಷ್ಟ್ರದ ಬಹುರೂಪ ಕಲಾವಿದನೊಬ್ಬ ಔರಂಗಜೇಬನ ಆಸ್ಥಾನಕ್ಕೆ ಹೋಗಿ ಹುಲಿಯಂತೆ ಅಭಿನಯಿಸುತ್ತ ರಾಜದೂತನೊಬ್ಬನನ್ನು ಕೊಂದು ಸೇಡು ತೀರಿಸಿಕೊಂಡನಂತೆ, ಔರಂಗಜೇಬ ಬಿಟ್ಟಾನೆಯೇ?'ಸತಿ'ಯಾಗಿ ಅಭಿನಯಿಸಲು ಹೇಳಿ ಚಿತೆಯಲ್ಲಿಟ್ಟು ಸತಿ ಸಹಗಮನ ಮಾಡಿಸಿದನಂತೆ"[೨೫]. ಹೀಗೆ ಅಲೆಮಾರಿ ಬುಡ್ಗ ಜಂಗಮ ವೇಷಗಾರರು ಮತ್ತು ಬಹುರೂಪಿಗಳ ಆಚಾರ ವಿಚಾರಗಳು, ಪ್ರದರ್ಶನ ಸ್ವರೂಪ, ಪರಂಪರೆಗಳು ಭಿನ್ನವಾಗಿರುವ ವ್ಯತ್ಯಾಸಗಳನ್ನು ಬಸವರಾಜ ಮಲಶೆಟ್ಟಿಯವರು ಸರಿಯಾಗಿ ವಿವರಿಸಿದ್ದಾರೆ. ಒಟ್ಟಾರೆಯಾಗಿ ಬುಡ್ಗ ಜಂಗಮರ ಸಂಸ್ಕೃತಿ ಮತ್ತು ಬಹುರೂಪಿಗಳ ಸಂಸ್ಕೃತಿ ಬೇರೆ ಬೇರೆ. ಬುಡ್ಗ ಜಂಗಮರು ಬಹುರೂಪಿಯಗಳಲ್ಲ.

### ಬೈರಾಗಿಗಳು ಮತ್ತು ಬುಡ್ಗ ಜಂಗಮರು

ಬೈರಾಗಿಗಳು ೧೮೮೧, ೧೮೯೧, ೧೯೩೧ ಜನಗಣತಿ ಪ್ರಕಾರ ಇವರು ಗುಜರಾತ್, ಹರಿಯಾಣ, ಹಿಮಾಚಲ ಪ್ರದೇಶ, ಮಧ್ಯಪ್ರದೇಶ, ಮಹಾರಾಷ್ಟ್ರ, ಕರ್ನಾಟಕ, ಪಂಜಾಬ್, ರಾಜಸ್ತಾನ್, ಓರಿಸ್ಸಾ, ಪಶ್ಚಿಮ ಬಂಗಾಳ ರಾಜ್ಯದಲ್ಲಿ ಕಂಡುಬರುತ್ತಾರೆ. ಇವರನ್ನು ಸಾಧು, ಬೈರಾಗಿ, ಭೈರಾಗಿ, ಬಾವ, ಬಾವಚ, ಬಾಬ, ಎಂದು ವಿವಿಧ ಹೆಸರಿನಿಂದ ಗುರುತಿಸುತ್ತಾರೆ. ಇವರು ನಾಗಸಾಧುಗಳಂತೆ ಉದ್ದನೆಯ ಜಡೆಯನ್ನು ಬಿಟ್ಟಿರುತ್ತಾರೆ. "ಇವರು ಎಲ್ಲಿಯೂ ನೆಲೆ ಮಾಡಿಕೊಂಡು ನಿಲ್ಲುವುದಿಲ್ಲ. ವಾಡಿಕೆಯಾಗಿ ಹಿಂದುಸ್ತಾನಿ ಭಾಷೆಯನ್ನು ಮಾತನಾಡುತ್ತಾರೆ. ಜಟೆಯನ್ನು ಬೆಳೆಸುವರೇ ಬಹಳ; ಮೂರು ನಾಮಗಳನ್ನು ಹಚ್ಚುವರು; ತೀರ್ಥಯಾತ್ರೆಯನ್ನು ಮಾಡುತ್ತಾ ತಿರುಗುವರು"[೨೬].

**ಪರ್ಯಾಯ ಪದಗಳು:** ಬಿಹಾರ್ ರಾಜ್ಯದಲ್ಲಿ ಬೈರಾಗಿ ಬೋಸ್ಟಮ್, ಬೋಸ್ಟಮ್. ಗುಜರಾತ್ ರಾಜ್ಯದಲ್ಲಿ ಬರಥರಿ. ಹಿಮಾಚಲ ಪ್ರದೇಶದಲ್ಲಿ ಬಾಬ, ಭೈರಾಗಿ, ಗಿರ್, ವೈರಾಗಿ. ಮಧ್ಯಪ್ರದೇಶದಲ್ಲಿ ರಜಪೂತ್, ಥಾಕೂರ್. ಓರಿಸ್ಸಾದಲ್ಲಿ ಭೈಷ್ಣವ. ಪಂಜಾಬ್‌ದಲ್ಲಿ ಬರೇಗಿ, ಪಂಡಿತ್, ಸಾದ್. ಪಶ್ಚಿಮ ಬಂಗಾಳದಲ್ಲಿ ಬೈಷ್ಣಬಾ. ದೆಹಲಿಯಲ್ಲಿ ಬಾಬಾಜಿ, ಸ್ವಾಮಿ ಎಂದು ಕರೆಯುತ್ತಾರೆ.

**ಪಂಗಡಗಳು:** "ಬಿಹಾರ್ ರಾಜ್ಯದಲ್ಲಿ ಗೋಸಾಮಿ, ಗೃಹಸ್ತಾ, ರಣಾಯತ್, ಸಹಜೈ. ಹಿಮಾಚಲ ಪ್ರದೇಶದಲ್ಲಿ ಭಟ್, ನಿಮನಂದಿ, ರಾಧಬಲ್ಲಭಿ, ರಾಮನಂದಿ, ರಾಮಾನುಂಜಿ. ಮಹಾರಾಷ್ಟ್ರದಲ್ಲಿ

ಬೈರಾಗಿ, ನಿಮನಂದಿ, ರಾಮನಂದಿ, ತ್ಯಾಗಿ, ವಿಷ್ಣುಸ್ವಾಮಿ. ಪಂಜಾಬ್‌ನಲ್ಲಿ ನಿಮನಂದಿ, ಸುಖನಂದಿ. ಪಶ್ಚಿಮ ಬಂಗಾಳದಲ್ಲಿ ಆಚಾರ್ಯ, ಮಹಾದೇವಚಾರ್ಯ, ನಿಮಯುತ್, ರಾಮಾನುಂಜ್ ಅಥವಾ ರಮಯುತ್. ನಂಜುಂಡಯ್ಯ ಮತ್ತು ಅಯ್ಯರ್ ಗುರುತಿಸಿದಂತೆ ಬೈರಾಗಿಗಳನ್ನು ಮಹಾದೇವಚಾರ್ಯ, ನಿಮನಂದಿ, ನಿಮತ್ ಅಥವಾ ನಿಂಬ್ಡತಿಯಾ, ರಾಮಾನುಂಜಿ, ವಲ್ಲಭಚಾರ್ಯ ಅಥವಾ ವಿಷ್ಣುಸ್ವಾಮಿ ಎಂದು ಗುರುತಿಸುತ್ತಾರೆ.

**ಕುಲ ಬಳಿಗಳು**: ಭಾಟಿ, ಭಿಜಲಾ, ಡನ್, ಗತ್ವಾಲ, ಗೋತಾನ್, ಕಾಳಿಯಮ್ಮ, ಕುಹರ್, ಲಖಾರ್, ಮಾನ್, ನರವಲ್, ನಿರಮಾನ್, ತತ್ವಾಲ್ ಎಂಬ ಕುಲಬಳಿಗಳಿವೆ. ಗುಜರಾತ್ ರಾಜ್ಯದಲ್ಲಿ ಅಗರ್‌ಬಟ್, ಗಿನರೆ, ಕರ್ನಾಟಕದಲ್ಲಿ ಅಂದೋಲಿರ್, ಬೈಲ್ಪಟಿ, ಭಾರಧನ್‌ಮೋತಿ, ಕರಾಂಚಿ, ಪಡಿಗಲ್ಲು, ಪೆಗೊಲ್ಲರ್, ಅಪ್ತಲ್ಲು ಎಂದು. ಮಧ್ಯ ಪ್ರದೇಶದಲ್ಲಿ ಚರಣ್, ಚೌಹಾಣ್, ಡವಿ, ಧಬೈ, ಗೋಲತ್ತೂರ್, ಪವಾರ್, ಸಲೊಂಕಿ. ಮಹಾರಾಷ್ಟ್ರದಲ್ಲಿ ವಿಷ್ಣು, ಒರಿಸ್ಸಾ ರಾಜ್ಯದಲ್ಲಿ ಅಚುತ್ಯಾ, ಪಂಜಾಬ್ ರಾಜ್ಯದಲ್ಲಿ ನಿಮನಂದಿ, ರಾಮನಂದಿ, ಸುಖನಂದಿ. ರಾಜಸ್ಥಾನ್ ನಲ್ಲಿ ಅಗ್ರಾಜೀ, ಕಾಸ್ಕರಿ, ಕೋಬಾಬಟ್, ನಿಮವತ್. ಪಶ್ಚಿಮ ಬಂಗಾಳದಲ್ಲಿ ಅಚ್ಚಿದಾನಂದ, ದೆಹಲಿಯಲ್ಲಿ ಜರೈ ಎಂದು ಕುಲ ಬಳಿಗಳು ಕಂಡುಬರುತ್ತವೆ.

**ಗೋತ್ರಗಳು**: ಭಾರದ್ವಜ, ಕಂಡಿತ್ಯಾ, ವಸಿಷ್ವ, ಭಾರದ್ವಜಾ, ಕಷ್ಯಪ, ಕೌಶಿಕ್, ಪರಸರ್ ಗೋತ್ರಗಳಿವೆ"[೨೭]

ಬುಡ್ಗ ಜಂಗಮರ ಮೂಲ, ಭಾಷೆ, ಆಚಾರ ವಿಚಾರ, ಕುಲ ಬಳಿ ಇಂಟಿಪೇರ್ಲುಗಳಿಗೂ ಬೈರಾಗಿಗಳ ಕುಲಬಳಿ ಗೋತ್ರಗಳಿಗೂ ಯಾವುದೇ ಸ್ವಾಮ್ಯತೆಗಳು ಕಂಡುಬರುವುದಿಲ್ಲ. ಹೀಗಾಗಿ ಬೈರಾಗಿಗಳು ಬುಡ್ಗ ಜಂಗಮರಲ್ಲ. ಬುಡ್ಗ ಜಂಗಮರು ಕೇವಲ ಜಾತಿಗೊಂದು ವೇಷ ಹಾಕಿದಂತೆ ಬೈರಾಗಿ ವೇಷ ಹಾಕಿ ಪ್ರದರ್ಶನ ನೀಡುತ್ತಾರೆ. ಹೀಗಾಗಿ ಬುಡ್ಗ ಜಂಗಮರು ಬೈರಾಗಿಗಳಲ್ಲ.

### ವೀರಶೈವ ಲಿಂಗಾಯತ ಜಂಗಮರು ಮತ್ತು ಬುಡ್ಗ ಜಂಗಮರು

ವೀರಶೈವ ಲಿಂಗಾಯತ ಜಂಗಮರು ಕಾಶೀ, ರಂಭಾಪುರಿ, ಶ್ರೀಶೈಲ, ಉಜ್ಜಿನಿ ಮತ್ತು ಕೇದಾರ ಎಂಬ ಪಂಚಪೀಠಗಳನ್ನು ಹೊಂದಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಪ್ರಬಲರಾಗಿ ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಹೊಂದಿರುವ ವೀರಶೈವ ಲಿಂಗಾಯತ ಜಂಗಮರು ಮೇಲ್ವರ್ಗದವರಾಗಿದ್ದಾರೆ. ಇವರನ್ನು ಲಿಂಗಿ ಬ್ರಾಹ್ಮಣರು ಎಂದೂ ಕರೆದುಕೊಳ್ಳುತ್ತಾರೆ.

ವೀರಶೈವ ಲಿಂಗಾಯತ ಜಂಗಮರು ತಮ್ಮ ಗೋತ್ರವನ್ನು ಈ ಆಚಾರ್ಯದಿಂದಲೇ ಗುರುತಿಸುತ್ತಾರೆ. ಈ ಕಾರಣದಿಂದಾಗಿ ಅವರ ಮಠಗಳು ಯಾವುದಾದರೂ ಒಂದು ಪೀಠಕ್ಕೆ ಸಂಬಂಧಿಸಿರುತ್ತವೆ ಮತ್ತು ಈ ಪಂಚಪೀಠಗಳ ಪ್ರತಿನಿಧಿಗಳೆಂಬಂತೆ ಅಲ್ಲಲ್ಲಿಯ ಮಠದ ಅಧಿಪತಿಗಳು ಅಲ್ಲಿಯ ವೀರಶೈವ ಸಮಾಜದವರ ಎಲ್ಲಾ ಧಾರ್ಮಿಕ ಕಾರ್ಯಗಳನ್ನು ಸಾಂಗಗೊಳಿಸುತ್ತ ಬಂದಿದ್ದಾರೆ.

"ಪಂಚಪೀಠಗಳ ಅಧೀನದಲ್ಲಿ ೩೦ ರಿಂದ ೪೦ ಗ್ರಾಮಗಳಿಗೆ ಒಂದರಂತೆ ಶಾಖೆಗಳಿರುತ್ತವೆ. ಈ ಶಾಖಾಮಠಗಳ ಮುಖ್ಯಸ್ಥರಿಗೆ **ಪಟ್ಟದ ದೇವರು** ಎಂದು ಕರೆಯುತ್ತಾರೆ. ತಮ್ಮ ವ್ಯಾಪ್ತಿಯ ಧಾರ್ಮಿಕ

ಕ್ಷೇತ್ರದಲ್ಲಿ ಸಕಲ ಧಾರ್ಮಿಕ ಕಾರ್ಯಗಳ ಉಸ್ತುವಾರಿಯನ್ನು ಹಾಗೂ ವಿವಾದಗಳ ನ್ಯಾಯ ನಿರ್ಣಯವನ್ನು ಇವರು ಮಾಡುತ್ತಾರೆ. ಪಟ್ಟದ ದೇವರು ಬ್ರಹ್ಮಚಾರಿಗಳಾಗಿರುತ್ತಾರೆ. ಜಂಗಮ ಮನೆತನಗಳ ಚಾಲಕರು ವಟುಗಳಾಗಿ ಸೂಕ್ತ ಧಾರ್ಮಿಕ ಅಧ್ಯಯನದ ಬಳಿಕ ಪಟ್ಟಕ್ಕೆ ಅಂದರೆ ಅಧಿಕಾರಕ್ಕೆ ಬರುತ್ತಾರೆ. ಪಟ್ಟದ ದೇವರಲ್ಲಿ ಇಬ್ಬರು ಅಧಿಕಾರಿಗಳಾಗಿರುತ್ತಾರೆ. ಸ್ಥಿರ ಪಟ್ಟಾಧ್ಯಕ್ಷರು ಮತ್ತು ಚರ ಪಟ್ಟಾಧ್ಯಕ್ಷರು. ಇವರ ಕೈಕೆಳಗೆ ಗ್ರಾಮ ಮಟ್ಟದಲ್ಲಿ ಮಠದಯ್ಯನೇ ಪ್ರಮುಖ. ಸಾಮಾನ್ಯವಾಗಿ ಇವರು ಹಿರೇಮಠದವರು. ಇವರು ಆಯಾ ಗ್ರಾಮದ ವೀರಶೈವದ ಸಮಸ್ತ ಕ್ರಿಯಾವಿಧಿಗಳನ್ನು ನೆರವೇರಿಸುತ್ತಾರೆ. ಬಾಲ್ಯದಿಂದ ಮೊದಲಾಗುವ ಶಿಶುನಾಮಕರಣ, ವಿವಾಹ, ರುದ್ರಾಭಿಷೇಕ ಹಾಗೂ ಅಂತ್ಯಸಂಸ್ಕಾರಗಳವರೆಗಿನ ಎಲ್ಲ ಧಾರ್ಮಿಕ ಕ್ರಿಯಾವಿಧಿಗಳನ್ನು ಹಿರೇಮಠದವರು ನಡೆಸಿಕೊಡುತ್ತಾರೆ. ಹಿರೇಮಠದ ಅಯ್ಯನವರಿಗೆ ಸಹಾಯಕವಾಗಿ ಮಠಪತಿ ಇರುತ್ತದೆ. ಗುಣಕುಮಾರ ಹಾಗೂ ಸ್ಥಾವರಿಕರು ಪೂಜಾ ಪರಿಕರಗಳನ್ನು ಅಣಿಗೊಳಿಸುವಲ್ಲಿ ನೆರವಾಗುತ್ತಾರೆ"[೨೮]. ಮಠದಯ್ಯ, ಅಯ್ಯನವರು ಅಥವಾ ಹಿರೇಮಠದವರು ಗ್ರಾಮದಲ್ಲಿ ನಿತ್ಯ ಪ್ರಭಾತ ಸಮಯದಲ್ಲಿ ವೀರಶೈವ ಭಕ್ತರ ಮನೆಗೆ ಮಾತ್ರ ಹೋಗಿ ಜೋಳದ ಹಿಟ್ಟಿನ ಭಿಕ್ಷೆಯನ್ನು ಪಡೆಯುತ್ತಾರೆ. ಇವರಿಗೆ ಭಿಕ್ಷೆ ನೀಡಿ ಭಕ್ತರು ಪಾದಗಳಿಗೆ ನಮಸ್ಕರಿಸುತ್ತಾರೆ. ಜಂಗಮನು ಗುರುವಾಗಿ ಭಕ್ತನ ಧಾರ್ಮಿಕ ಕ್ರಿಯಾವಿಧಿಗಳನ್ನು ನಡೆಸಿಕೊಡುವುದರ ಜೊತೆ ಆಧ್ಯಾತ್ಮಕ ಮಾರ್ಗದರ್ಶನ ನೀಡುತ್ತಾನೆ. "ವೀರಶೈವ ಸಮಾಜದಲ್ಲಿ ಜಂಗಮನಿಗೆ ಅತ್ಯಂತ ಉನ್ನತ ಸ್ಥಾನಮಾನಗಳಿವೆ. ಪಾದ ಪ್ರಕ್ಷಾಲನ ಮಾಡಿ ಪಾದೋದಕ ಪಡೆಯುವ ಸಂಪ್ರದಾಯ ಇಂದಿಗೂ ರೂಢಿಯಲ್ಲಿದೆ. ಕೆಲವು ಭಕ್ತರು ನಿತ್ಯ ಪಾದ ಪೂಜೆ ಮಾಡಿ ಪಾದೋದಕ ಸ್ವೀಕರಿಸುತ್ತಾರೆ. ಕೆಲವರು ಸೋಮವಾರಕ್ಕೊಮ್ಮೆ, ಅಮವಾಸ್ಯೆಗಳಂದು ಜಂಗಮನನ್ನು ಆಹ್ವಾನಿಸುತ್ತಾರೆ. ಶ್ರಾವಣಮಾಸದಲ್ಲಿ ಕೆಲವರು ಇಡೀ ತಿಂಗಳು ಜಂಗಮನನ್ನು ಬರಮಾಡಿಕೊಂಡು ಪಾದಪೂಜೆ ಮಾಡಿ ಊಟೋಪಚಾರಗಳ ಮೂಲಕ ಅವನನ್ನು ತೃಪ್ತಿಪಡಿಸಿ, ಶಿವನನ್ನೆ ತೃಪ್ತಿಪಡಿಸಿದ ಸಮಾಧಾನ ಪಡೆಯುತ್ತಾರೆ. ಇವನ ಸ್ವಾಮಿತ್ವದಲ್ಲಿರುವ ಯಾವುದೇ ಗದ್ದುಗೆ, ದೇವಾಲಯಗಳಿವೆಯೋ ಭಕ್ತರು ಹಬ್ಬ ಹುಣ್ಣಿಮೆ ದಿನ ಅರ್ಪಿಸುವ ನೈವೇದ್ಯವನ್ನು ಇವನು ಸ್ವೀಕರಿಸುತ್ತಾನೆ"[೨೯] ಎಂದು ಹೇಳುತ್ತಾರೆ. "ಜೋಳಿಗೆಧಾರಿಯಾಗಿ ಬೇಡುವುದರಿಂದ ಇವನನ್ನು ಬಡವನೆಂದು, ಭಿಕ್ಷುಕನೆಂದು ಭಾವಿಸುವುದಿಲ್ಲ. ಭಿಕ್ಷೆ ಭಕ್ತಿಯ ಕಾಣಿಕೆ, ಇಂಥ ಆದಾಯದಿಂದ ಬಹಳಷ್ಟು ವೀರಶೈವ ಮಠಗಳು ದಾಸೋಹವನ್ನು ನಡೆಸುತ್ತವೆ. ಧಾರ್ಮಿಕ ಚಟುವಟಿಕೆಗಳಾದ ಪುರಾಣಶ್ರವಣ, ವಿದ್ಯಾರ್ಥಿನಿಲಯಗಳು, ಉಚಿತ ಪ್ರಸಾದ ನಿಲಯಗಳು ಮುಂತಾದವುಗಳನ್ನು ನಡೆಸಿಕೊಂಡು ಬರುತ್ತವೆ. ಪೀಠಾಧಿಪತಿಗಳು ಬರಗಾಲದಂತಹ ಭೀಕರ ಸಂದರ್ಭಗಳಲ್ಲಿ ಗಂಜಿಕೇಂದ್ರಗಳನ್ನು ಸ್ಥಾಪಿಸಿ, ಜನರ ನೈತಿಕತೆಯನ್ನು ಉಳಿಸಿ ಸ್ಥೈರ್ಯ ನೀಡಿ ಸಮಾಜವನ್ನು ರಕ್ಷಿಸುವ ಕೆಲಸಗಳು ಇಂದಿಗೂ ವೀರಶೈವ ಮಠಗಳಿಂದ ನಡೆಯುತ್ತಿವೆ. ಇವರೆಲ್ಲ ಜೋಳಿಗೆಯೇ ಸಂಪನ್ಮೂಲ"[೩೦] ಎಂದು ಹೇಳುತ್ತಾರೆ. "ಜಂಗಮರ ಪ್ರತಿಯೊಂದು ಗಂಡು ಹೆಣ್ಣು ಮಗುವಿಗೂ ಶೈಶವದಲ್ಲಿಯೇ ಲಿಂಗದೀಕ್ಷೆ ನೀಡಲಾಗುತ್ತದೆ. ಅಯ್ಯನವರ ಮಗು ಜಂಗಮನಾಗುವುದು 'ಅಯ್ಯಚಾರ'ದ ಸಂಸ್ಕಾರ ದೊರೆತ ನಂತರವೇ ಎಂಟನೆಯ ವರ್ಷದಲ್ಲಿ ಈ ದೀಕ್ಷೆ ಪಟ್ಟದ ದೇವರಿಂದಲೇ

ನಡೆಯಬೇಕು. ಈ ಸಂದರ್ಭದಲ್ಲಿ ಬಹಳ ದೀರ್ಘವಾದ ವಿಧಿ ವಿಧಾನಗಳು, ಸಂಸ್ಕೃತ ಮಂತ್ರೋಚ್ಚಾರಣೆ ನಡೆಯುತ್ತವೆ. ಬ್ರಾಹ್ಮಣರಲ್ಲಿಯು ಇದನ್ನು ಹೋಲುತ್ತದೆ"[೩೧] ಎಂದು ಎನ್ ಎಚ್ ಹಿರೇಮಠ ಅವರು ಹೇಳುತ್ತಾರೆ.

"ಜಂಗಮ"ಕ್ಕೆ

ಜಂ–ಜವನಮ್ ನಾಸ್ತಿ

ಗ–ಗಮನಮ್ ನಾಸ್ತಿ

ಮ–ಮರಣಮ್ ನಾಸ್ತಿ"[೩೨] ಎಂಬ ಅರ್ಥವನ್ನು ನೀಡುತ್ತಾರೆ.

**ಜಂಗಮ ಜಾತಿ ಆಚಾರಗಳು:** ಜಂಗಮ ಜಾತಿಯ ಒಂದು ಮುಖ್ಯಲಕ್ಷಣವೆಂದರೆ "ಹಿರೇಮಠಕ್ಕೆ ಸೇರಿದ ಜಂಗಮನು ಪೂಜಾರಿ, ಗಣಾಚಾರಿ ಮನೆತನದವರೊಂದಿಗೆ ಮದುವೆ ಮಾಡಲು ಇಚ್ಛಿಸುವುದಿಲ್ಲ ಭಕ್ತರ ಮನೆಯ ಹುಡುಗ ಜಂಗಮ ಹುಡುಗಿಯನ್ನು ಮದುವೆ ಆದದ್ದೆ ಆದರೆ ಅದು ಜಂಗಮರ ದೃಷ್ಟಿಯಲ್ಲಿ ಪ್ರತಿಲೋಮ ಎಂದು ಪರಿಗಣಿಸುತ್ತಾರೆ. ಸಾಮಾನ್ಯವಾಗಿ ಇವರ ಹೆಸರು ಅಯ್ಯ ಎಂಬುದರಿಂದ ಕೊನೆಗೊಳ್ಳುವುದಾದರೂ, ಅದರ ಮುಂದೆ ಸ್ವಾಮಿ ಎಂದು ಸೇರಿಸುತ್ತಾರೆ. ಅಡ್ಡ ಹೆಸರಿನಿಗೆ ಮಠ ಪ್ರತ್ಯಯವನ್ನು ಸೇರಿಸಿಕೊಳ್ಳುತ್ತಾರೆ. ಇವರ ಅಡ್ಡ ಹೆಸರು ಜಾತಿಸೂಚಕವಾಗಿದ್ದರೂ ಪಾಟೀಲ, ಕುಲಕರ್ಣಿ ಎಂದು ವೃತ್ತಿ ಸೂಚಕ ಹೆಸರು ಹಾಗೂ ವಲಸೆ ಬಂದ ಊರಿನ ಹೆಸರುಗಳಿಂದಲೂ ಕರೆಯಲ್ಪಡುತ್ತಾರೆ.

ಇವರಲ್ಲಿ ವಿವಾಹದ ನಿಶ್ಚಿತಾರ್ಥಗಳು ಗಂಡಿನ ಮನೆತನದ ಆಸ್ತಿ, ಅಂತಸ್ತು, ಶಿಕ್ಷಣ, ನೌಕರಿಗಳಿಗೆ ಅನುಗುಣವಾಗಿ ವರದಕ್ಷಿಣೆಯನ್ನು ಕೇಳುವ ಪ್ರತೀತಿ ಇವರಲ್ಲಿದೆ. ಇವರಲ್ಲಿ ವಧುದಕ್ಷಿಣೆ ತೆರಕೊಡುವ ಪದ್ಧತಿ ಇಲ್ಲ. ಇವರು ನಿಶ್ಚಿತಾರ್ಥಕ್ಕೆ 'ಕುಂಕುಮ ಹಚ್ಚುವ ಕಾಯಕ' ಎನ್ನುತ್ತಾರೆ. ಜಂಗಮರಲ್ಲಿ ವಿವಾಹ ವಿಚ್ಛೇದನ ಮತ್ತು ವಿಧವಾ ವಿವಾಹಗಳು ಮನ್ನಣೆ ಪಡೆದಿಲ್ಲ.

ವೀರಶೈವ ಜಂಗಮರಲ್ಲಿ ಎರಡು ವಿಧದಲ್ಲಿ ಭಿಕ್ಷೆಯನ್ನು ಬೇಡುತ್ತಾರೆ.

೧. **ಸಾಮಾಗ್ರಿ ಭಿಕ್ಷೆ:** ಮಠದಯ್ಯನಿಗೆ ಹಿಟ್ಟು ಭಿಕ್ಷೆಯನ್ನು ಮಠಪತಿಗೆ ಜೋಳದ ಭಿಕ್ಷೆಯನ್ನು ನೀಡುತ್ತಾರೆ.

೨. **ಕಂತಿ ಭಿಕ್ಷೆ:** ಸಿದ್ಧಪಡಿಸಿದ ಆಹಾರವನ್ನು ಲಿಂಗಾಯತರ ಮನೆಗಳಲ್ಲಿ ಪಡೆಯುತ್ತಾರೆ. ಸುಗ್ಗಿಯ ಕಾಲದಲ್ಲಿ ಕಣದಿಂದ ಕಣಕ್ಕೆ ಸುತ್ತುತ್ತಾ ಧಾನ್ಯಗಳನ್ನು ಸಂಗ್ರಹಿಸುತ್ತಾರೆ

**ವೀರಶೈವ ಲಿಂಗಾಯತ ಜಂಗಮರ ಸೂತಕ ಅಥವಾ ಮೈಲಿಗೆ:** ಇವರಲ್ಲಿ ಮೈಮೇಲೆ ಲಿಂಗವಿರುವಾಗ ಸೂತಕವಿಲ್ಲ. ಮನೆಯಲ್ಲಿ ಜನನ ಮರಣಗಳಾದಾಗ ಸೂತಕವನ್ನು ಆಚರಿಸುವುದಿಲ್ಲ. ಜನನಕ್ಕೆ ಮೊದಲೇ ಲಿಂಗಧಾರಣೆಯಾಗಿರುವುದರಿಂದ ಜನನ ಕಾಲಕ್ಕೆ ಸೂತಕವನ್ನು ಆಚರಿಸುವುದಿಲ್ಲ. ಮನೆಯಲ್ಲಿ ಹೆಣ್ಣು ಮಗಳು ಮೈನೆರೆದರೆ ಒಂದೆರೆಡು ದಿನಗಳ ನಂತರ ಸ್ನಾನ ಮಾಡಿಸಿ ಒಳಗೆ ಕರೆದುಕೊಳ್ಳುತ್ತಾರೆ. ಮಾಸಿಕ ಶ್ರಮದ ಸಂದರ್ಭದಲ್ಲೇ ಸೂತಕದ ಆಚರಣೆಯಿಲ್ಲ.

**ವೀರಶೈವ ಲಿಂಗಾಯತ ಜಂಗಮರ ಅಂತ್ಯಸಂಸ್ಕಾರ:** ಅಂತ್ಯಸಂಸ್ಕಾರದಲ್ಲಿ ಶವವನ್ನು ಹೂಳುವ ಜಾಗದಲ್ಲಿ ನಾಲ್ಕು ಕಡೆಗಳಲ್ಲಿ ಲಿಂಗಮುದ್ರೆಯ ಕಲ್ಲುಗಳನ್ನು ನೆಡುತ್ತಾರೆ."[೩೩]

"ಜಂಗಮ ಎಂದರೆ ಚಲಿಸುವ ದೇವರು, ಅವನಲ್ಲಿ ದೈವತ್ವವುಂಟಾಗಬೇಕಾದರೆ ನಡೆ–ನುಡಿ ಶುದ್ಧವಾಗಿರಬೇಕು. ಆಗಲೇ ಅವನು ಜಂಗಮನಾಗಲು ಸಾಧ್ಯ. ಅವನು ತನ್ನಲ್ಲಿ ಸಕಲ ಸದ್ಗುಣಗಳನ್ನು ಹೊಂದಿ ಆದರ್ಶ ಜೀವನ ನಡೆಸುತ್ತಾ, ಇನ್ನೊಬ್ಬರಿಗೆ ಮಾರ್ಗದರ್ಶನ ಮಾಡುವಂತಿರಬೇಕು. ಅವನೆ ನಿಜವಾದ ಜಂಗಮ. ಜಂಗಮನೆಂದರೆ ಅದು ಜಾತಿ ಅಲ್ಲ, ಅದೊಂದು ಧರ್ಮವು ಅಲ್ಲ. ಒಂದು ಜನಾಂಗವು ಅಲ್ಲ. ಜಂಗಮವೆಂದರೆ ಅದೊಂದು ಶ್ರೇಷ್ಠವಾದ ಶಕ್ತಿ ಅದೊಂದು ಪರಿಪೂರ್ಣವಾದ ವ್ಯಕ್ತಿ"[೩೪] ಎಂದು ಹೇಳುತ್ತಾರೆ.

**ಜಂಗಂ (ಜಂಗಮಯ್ಯ ಅಥವಾ ಜಂಗಮದೇವರ):** "ಜಂಗಮರಲ್ಲಿ ಪೂಜ್ಯನೀಯವಾದವರನ್ನು ಜಂಗಮಯ್ಯ, ಜಂಗಮ ದೇವರ ಎಂದು ಕರೆಯುತ್ತಾರೆ. ಈ ಮಾಲ ಜಂಗಂ, ಬೇಡ ಜಂಗಂ, ಬುಡಿಗೆ ಜಂಗಂ ಜಾತಿಗಳು ನಿಮ್ನ ವರ್ಗಕ್ಕೆ ಅಂದರೆ ಅಶ್ಪೃಶ್ಯ ಸಮುದಾಯಗಳಲ್ಲಿ ಕಂಡುಬರುತ್ತವೆ. ಆದರೆ 'ಜಂಗಮ' ಕುಲ ಮಾತ್ರ ಸಮಾಜದಲ್ಲಿ ಗೌರವ ಸ್ಥಾನಮಾನಗಳನ್ನು ಪಡೆದುಕೊಂಡು ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಉನ್ನತ ಸ್ಥಾನದಲ್ಲಿದ್ದಾರೆ."[೩೫] ವೀರಶೈವ ಮತ ಪ್ರಭಾವದಿಂದ ಆಂಧ್ರ ಪ್ರದೇಶದಲ್ಲಿ 'ಜಂಗಾಲ' ಎಂಬ ಹೆಸರಿನಲ್ಲಿ ಎಷ್ಟೊ ಗ್ರಾಮನಾಮಗಳನ್ನು ಕಾಣಬಹುದಾಗಿದೆ ಎಂದು ಡಾ ಎನ್ ಆರ್ ವೆಂಕಟೇಶಂ ಅವರು ವಿವರಿಸುತ್ತಾರೆ.

"೧೮೯೧ರಲ್ಲಿ ವೀರಶೈವ ಲಿಂಗಾಯತ ಜಂಗಮರು 'ವೀರಶೈವ ಬ್ರಾಹ್ಮಣ'ರೆಂದು ಗುರುತಿಸಿಕೊಳ್ಳುವ ಹಕ್ಕನ್ನು ಪ್ರತಿಪಾದಿಸುತ್ತಾರೆ. ೧೯೦೪ರಲ್ಲಿ ಹಿಂದಿನ ಬಾಂಬೆ ಪ್ರೆಸಿಡೆನ್ಸಿಯ ಧಾರವಾಡದಲ್ಲೊಂದು ಶ್ರೀಮದ್ ವೀರಶೈವ ಮಹಾಸಭಾವು ವೀರಶೈವ ಲಿಂಗಾಯತ ಸಮಾಜದ ಎಲ್ಲ ಜಾತಿ ಉಪಜಾತಿಗಳನ್ನು ಬ್ರಾಹ್ಮಣರೆನ್ನುವ ಬದಲು 'ಪ್ರತ್ಯೇಕ ಧರ್ಮ'ದವರೆಂದು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಾರೆ"[೩೬]. ಭಾರತದ ಮೊದಲ ಜನಗಣತಿ ನಡೆದಿದ್ದು ೧೮೮೧ರಲ್ಲಿ. ೧೯೦೧ರ ತನಕ ಜನಗಣತಿಯಲ್ಲಿ ಮೂಲ ಅಸ್ಪೃಶ್ಯ, ಆದಿಮ ಜಾತಿ, ಮತ್ತು ಆದಿವಾಸಿಗಳ ಬಗ್ಗೆ ಪ್ರತ್ಯೇಕ ಉಲ್ಲೇಖವಿರಲಿಲ್ಲ.

೧೯೩೬–೩೭ರಲ್ಲಿ ಭಾರತದ ಸಂವಿಧಾನದ ಅನ್ವಯ ಪರಿಶಿಷ್ಟಜಾತಿ–ವರ್ಗಗಳ ಪರಿಸ್ಕೃತ ಪಟ್ಟಿ ತಯಾರಾಯಿತು. ಇದರಲ್ಲಿ ಸೇರಲ್ಪಟ್ಟ ಜಾತಿಗಳೆಲ್ಲವೂ ವರ್ಣಾಶ್ರಮದೊಳಗಿನ ಶೋಷಿತ ಜಾತಿಗಳ ಹೆಸರುಗಳಾಗಿದ್ದವು. ಅತ್ಯಂತ ತೃಪ್ತಿದಾಯಕವಾದ ಜೀವನ ನಡೆಸಿದ ಸ್ಪೃಶ್ಯಜಾತಿಗಳ ಜನರಾಗಿರಲಿಲ್ಲ. ಅದರಲ್ಲಿ ವೀರಶೈವ ಜಂಗಮರ ಉಲ್ಲೇಖವಿಲ್ಲ. ಕರ್ನಾಟಕ ರಾಜ್ಯದ ಹಿಂದುಳಿದ ವರ್ಗಗಳ ಚಾರಿತ್ರಿಕ ದಾಖಲೆಗಳಲ್ಲಿ ವೀರಶೈವ ಲಿಂಗಾಯತ ಜಂಗಮರಾರು ಅಸ್ಪೃಶ್ಯರಲ್ಲ ಎನ್ನುವುದು. ಚಾರಿತ್ರಿಕ ದಾಖಲೆಗಳನ್ನು ಸುಳ್ಳುಹೇಳಿದರೆ ಜನಾಂಗವೊಂದರ ಸಂಸ್ಕೃತಿ ಹಿನ್ನೆಲೆಗೆ ದ್ರೋಹಬಗೆದಂತೆ ಎಂದು ದಾಸನೂರು ಕೂಸಣ್ಣನವರು ತಮ್ಮ ಶೋಷಿತರ ಜಂಗಮರ ಮೀಸಲಾತಿ ಕೃತಿಯಲ್ಲಿ ಹೇಳುತ್ತಾರೆ.

ಸಮಾಜದ ಅಂಕುಡೊಂಕುಗಳನ್ನು ಹೋಗಲಾಡಿಸಲು ಹಲವಾರು ಶರಣರು, ಜನಪದ ಕಲಾವಿದರು, ಸಾಹಿತಿಗಳು, ತತ್ವಜ್ಞಾನಿಗಳು, ಸಂತರು, ಧಾರ್ಮಿಕ ಸುಧಾರಕರು ಪ್ರಮುಖ ಪಾತ್ರವಹಿಸುತ್ತಾರೆ.

ಅದರಲ್ಲಿ ಸಮಾಜ ಸುಧಾರಕ ಬಸವಣ್ಣನವರು ಈ ದೇಶದ ಎಲ್ಲಾ ಜಾತಿ ಉಪಜಾತಿಗಳ ಬಗ್ಗೆ ಸ್ಪಷ್ಟ ಮಾಹಿತಿ ಪಡೆದವರು. ಅಂದಿನ ಸಮಾಜ ವ್ಯಕ್ತಿಯೊಬ್ಬನನ್ನು ಗುರುತಿಸಬೇಕಾದರೆ ಬಸವಣ್ಣನವರು ಅವರ ವೃತ್ತಿಗಳನ್ನು ಆಧರಸಿ ಹೊಲೆಯರ ಮಾರಯ್ಯ, ಮಾದಿಗರ ಚೆನ್ನಯ್ಯ, ಅಂಬಿಗರ ಚೌಡಯ್ಯ, ಮಾಡಿವಾಳ ಮಾಚಿವಯ್ಯ ಎಂದು ಸಂಬೋಧಿಸುತ್ತಿದ್ದರು. ವೀರಶೈವ ಜಂಗಮರಿಗೆ ಮಾತ್ರ ನಾಮಪದಗಳಿಗೆ ಗುಣವಾಚಕವಿಲ್ಲದೆ ಸಂಬೋಧಿಸುತ್ತಿದ್ದರು. ಅಂದೇ ವೀರಶೈವ ಜಂಗಮರಿಗೂ ಬೇಡ, ಬುಡ್ಗ, ಮಾಲ ಜಂಗಮರೆಂದು ಕರೆಯುವ ವಾಡಿಕೆ ಇದ್ದಿದ್ದರೆ ಇವರಂತು ಸುಳ್ಳು ಜಾತಿ ನಮೂದಿಸುತ್ತಿರಲಿಲ್ಲ. ಜಂಗಮರಲ್ಲಿ ದೇವದಾಸಿಯರಿಲ್ಲ, ಜಂಗಮರಾರು ಗುಡಿಸಲನಿವಾಸಿಗಳಲ್ಲ. ಪೌರಕಾರ್ಮಿಕರಾಗಿರಲಿಲ್ಲ. ಜಂಗಮರ ಆದಾಯದ ಮೂಲ ಭಿಕ್ಷಾಟನೆಯಲ್ಲ. ಜಂಗಮರು ಹಂದಿ ಸಾಕುವುದಿಲ್ಲ. ಜಂಗಮರು ಚಿಂದಿ ಬಟ್ಟೆ ಧರಿಸುವುದಿಲ್ಲ, ಹೊಟ್ಟೆಪಾಡಿಗಾಗಿ ಜಂಗಮರು ಬೇಡುವುದಿಲ್ಲ. ವೀರಶೈವ ಜಂಗಮರು ನಿರಕ್ಷರ ಕುಕ್ಷಿಗಳಲ್ಲ, ಇವರು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಸಾರ್ವಜನಿಕ ಉದ್ಯೋಗಗಳಲ್ಲಿ ಉನ್ನತ ಅವಕಾಶಗಳನ್ನು ಪಡೆದುಕೊಂಡಿದ್ದಾರೆ.

ದಾಸನೂರು ಕೂಸಣ್ಣ ಅವರು ತಮ್ಮ ಶೋಷಿತರ ಜಂಗಮರ ಮೀಸಲಾತಿ ಎಂಬ ಕೃತಿಯಲ್ಲಿ ದಕ್ಷಿಣ ಭಾರತದ ಜನಸಮಾನ್ಯರ ಸೇವಾ ಮತ್ತು ವರ್ಗೀಕರಣವನ್ನು ಮೈಸೂರು ಪ್ರಾಂತ್ಯದ ವರ್ಗೀಕರಣ ನಿಯಮ ಕುರಿತು ೧೮೮೧ ಮತ್ತು ೧೯೩೧ ಜನಗಣತಿಯಂತೆ ವಿಭಜಿಸಿ ಈ ಕೆಳಕಂಡಂತೆ ದಾಖಲಿಸುತ್ತಾರೆ.

**೧.ವ್ಯವಸಾಯದ ಜಾತಿಗಳು**

**ಅ. ಭೂಮಾಲೀಕರು ಮತ್ತು ವ್ಯವಸಾಯಗಾರರು:** ಲಿಂಗಾಯತರು, ಕಮ್ಮ, ಕಾಪು ಮತ್ತು ರೆಡ್ಡಿಗಳು (ಒಕ್ಕಲಿಗರು), ನಿಯೋಗಿ ಬ್ರಾಹ್ಮಣರು, ವೆಲ್‌ಮಾ, ಮರಾಠರು, ಇತ್ಯಾದಿ,

**ಆ. ಸ್ವಲ್ಪ ಹಿಡುವಳಿವುಳ್ಳ ಕೃಷಿಕಾರ್ಮಿಕರು:** ಮುನ್ನಾವರ್, ಮುತ್ರಾಸಿಗಳು(ಉಪ್ಪಾರ), ತೆನಗ, ಬೆಸ್ತರು (ಬೋಹಿಗಳು), ಬೇಡರು ಇತ್ಯಾದಿ

**೨. ಸೇವೆ ನೀಡುವ ಜಾತಿಗಳು**

**ಇ. ಪುರೋಹಿತಿಕೆ ಮತ್ತು ಜನಾಂಗದ ಧಾರ್ಮಿಕ ಪ್ರಮುಖರು:** ವೀರಶೈವ ಜಂಗಮರು ಮತ್ತು ಬ್ರಾಹ್ಮಣರು (ಈ ಸೇವೆಗಳು ಸಾರ್ವತ್ರಿಕ ವಾಗಿರುವುದಿಲ್ಲ), ಜೈನವಾಸಿಗಳು, ಬೌದ್ಧಭಿಕ್ಷುಗಳು.

**ಈ. ಅಸ್ಪೃಶ್ಯ ಭಕ್ತಾದಿ ಪುರೋಹಿತರು:** ಮಾದಿಗ ಜಂಗಮ, ಮಾಲಜಂಗಮ, ಮಹಾರ್ ಜಂಗಮ, ಮುಂಡಾಲ ಜಂಗಮ, ವೆಲ್ಲುವನ್, ತಿರುವುಳ್ಳವರ್, ಜ್ಯೋತಿಧಾರ್, ಓದುಗಾರ್, ಸತ್ನಾಮಿಗಳು, ಜೋಗಿ, ತಂಬಡಿ, ಗೊಂಡ್ವಾಲ ಮತ್ತು ಗೋಸಾಯಿಗಳು ಇತ್ಯಾದಿ.

**ಉ. ಕನಿಷ್ಟ ಮಟ್ಟದ ಅಗತ್ಯ ಸೇವೆ ನೀಡುವ ಜಾತಿಗಳು (ಸೀಮಿತ ಜನರಿಗೆ)**

ಸಾಕಾಲಿ(ಅಗಸ) ಮತ್ತು ಹಡಪದರು, ಮಂಗಳರು (ಕ್ಷಾರಿಕರು) ಇತ್ಯಾದಿ.

**ಊ. ಅತ್ಯಂತ ಕನಿಷ್ಟ ಸೇವೆ ನೀಡುವ ಜಾತಿಗಳು (ಎಲ್ಲರಿಗೂ ಏಕರೂಪದ ಸೇವೆ):** ಮಾದಿಗರು (ಚರ್ಮಗಾರಿಕೆ), ಮಾಲ (ಕೃಷಿಕಾರ್ಮಿಕರು ಮತ್ತು ಗ್ರಾಮದ ಅಗತ್ಯ ಸೇವಕರು) ಹಾಗೂ ಬೇಗಾರಿಕೆಗಳು (ಚಂಡಾಲ ಕೆಲಸ ನಿರ್ವಹಿಸುವವರು).

**೩.ವೃತ್ತಿ ನಿರತ ಕಸುಬುದಾರ ಜಾತಿಗಳು**

**ಋ.**ದೇವಾಂಗ ಅಥವಾ ಸಾಲೆ(ಮಗ್ಗದವರು) ಗೌಂಡ್ಲ ಅಥವಾ ಈಡಿಗ (ಮದ್ಯ ತಯಾರಕರು), ಚಿಪ್ಪ(ದರ್ಜಿ), ಗೊಲ್ಲ(ಪಶುಪಾಲನೆ), ಕರ್ಮ(ಹಾಸಿಗೆ ಮಾಡುವವರು), ಕೋಮಟಿ ಮತ್ತು ಬಲಿಜರು (ವ್ಯಾಪಾರಸ್ಥರು) ಪಂಚ ಆಚಾರಿಗಳು (ಚಿನ್ನಬೆಳ್ಳಿ ಕೆಲಸಗಾರರು) ಮತ್ತು ಕಂಚಾರಿ (ಹಿತ್ತಾಳೆ ಮಾಡುವ ಆಚಾರಿಗಳು) ಈ ಸೇವೆ ಪಡಿಯಲಿಕ್ಕೆ ಯಾವುದೇ ನಿರ್ಬಂಧಗಳಿಲ್ಲ.

**೪. ಅವಲಂಬಿತ ಜಾತಿ ಮತ್ತು ಅಲೆಮಾರಿಗಳು**

**ಋ. ಬುಡಕಟ್ಟು ಜಾತಿಗಳು**

ಎರಕುಲ (ಹಂದಿ ಸಾಗಣಿಕೆ), ವಡ್ಡೆ (ಕಲ್ಲು ಗುಣಿ ಕೂಲಿಕಾರರು), ಕಾಸೆ (ಕಲ್ಲಿ ಕಟುಕ), ಕುರುಬ (ಕುರಿ ಸಾಕಾಣಿಕೆ), ಲಂಬಾಣಿ (ಕಿರುಕುಳ ವ್ಯಾಪಾರ), ಬಿಲ್ಲ್, ಅಂದ್, ಗೊಂಡ್ಡರು, ಕೋಯ, ಪರದಿ (ಅರಣ್ಯ ನಿವಾಸಿ ಅಲೆಮಾರತಿಗಳು) ಮತ್ತು ಇತ್ಯಾದಿ.

**ಎ. ಭಿಕ್ಷುಕ ಮತ್ತು ಅಲೆಮಾರಿಗಳು:** ಬುಡುಗಿ ಜಂಗಮರು(ಸಂಗೀತಗಾರರು ಮತ್ತು ಬಹುರೂಪ ವೇಷದಾರಿಗಳು), ಗುಡ್ಡೆಸಿ, ದಾಸರಿಗಳು(ನಾಟಕಕಾರರು), ಪಚ್ಚಬೊಟ್ಲ(ಸಂಗೀತಗಾರರು), ಬಾಳ ಸಂತೋಷಿಗಳು(ಹಾಡುಗಾರರು), ಪಾಮುಲ(ಹಾವಾಡಿಗರು ಅಂದರೆ Snake chammars), ಮಾಂಗ್ ಗಾರುಡಿಗಳು (ಸಂಗೀತಗಾರರು), ದೊಂಬರು (ಶಕ್ತಿ ಸೇವತೆಗಳೊಂದಿಗೆ ಭಿಕ್ಷಾಟನೆ), ಇತ್ಯಾದಿ. ವೀರಶೈವ ಜಂಗಮರನ್ನು ಎಲ್ಲಿಯೂ ಭಿಕ್ಷುಕ ಅಥವಾ ಕನಿಷ್ಟ ವೃತ್ತಿ ಅವಲಂಬಿತರೆಂದು ವರ್ಗೀಕರಿಸಿಲ್ಲ.

**ಜಾತಿ ವ್ಯವಸ್ಥೆಯು ಸಾಮಾಜಿಕ ನಿಯಂತ್ರಣ ಮತ್ತು ನ್ಯಾಯ ನಿರ್ಧಾರಕ ಶಕ್ತಿಗಳಾಗಿವೆ. ಹೇಗೆಂದರೆ:**

೧. ಗ್ರಾಮಗಳಲ್ಲಿರುವ ಜನರೆಲ್ಲರೂ ಎರಡು ಭಾಗಗಳಾಗಿ ಅಂದರೆ:

ಅ. ಅಸ್ಪೃಶ್ಯರು ಮತ್ತು ಆ. ಸ್ಪೃಶ್ಯರೆಂದು ವಿಭಜಿಸಿಕೊಂಡು ವಾಸಿಸುತ್ತಾರೆ.

೨. ಸ್ಪೃಶ್ಯರಾದವರು ಬಹುಸಂಖ್ಯಾತ ಬಲಾಢ್ಯ ಸಮುದಾಯ ಮತ್ತು ಅಸ್ಪೃಶ್ಯರು, ಅಲ್ಪಸಂಖ್ಯಾತ ಶಕ್ತೀಹೀನ ಸಮುದಾಯ(ದುರ್ಬಲರು).

೩. ಸ್ಪೃಶ್ಯರು ಗ್ರಾಮದ ಮಧ್ಯಭಾಗದಲ್ಲಿ ವಾಸಿಸುತ್ತಾರೆ. ಅಸ್ಪೃಶ್ಯರಾದವರು ಊರಿನ ಹೊರವಲಯದಲ್ಲಿರುವ ಕೊಳಗೇರಿಗಳ(ಅನ್ಯೆರ್ಮಲದ) ನಿವಾಸಿಗಳು.

೪. ಸ್ಪೃಶ್ಯರು ಆರ್ಥಿಕವಾಗಿ ಉಳ್ಳವರು ಮತ್ತು ಆಳುವ ಸಮಾಜದ ಜನರು. ಅಸ್ಪೃಶ್ಯರು ಬಡವರು ಮತ್ತು ಆಸ್ತಿಪಾಸ್ತಿಗಳಿಲ್ಲದ ಪರಾವಲಂಬಿ ಜನಾಂಗ.

೫. ಕೆಲವು ನೈಸರ್ಗಿಕ ಮತ್ತು ಸ್ವಾಭಾವಿಕ ಸಂಪತ್ತಿಗೆ ಸ್ಪೃಶ್ಯರದೇ ಒಡೆತನ. ಅಸ್ಪೃಶ್ಯ ಜನಾಂಗಕ್ಕೆ ಇದರ ಮೇಲೆ ಸ್ವಾಭಾವಿಕ ಅನುಭೋಗದ ಹಕ್ಕನೇ ಹೊಂದಿರುವುದಿಲ್ಲ.

ವೀರಶೈವ ಜಂಗಮರನ್ನು ಈ ಸಂದರ್ಭದಲ್ಲಿ ಅವರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ರಾಜಕೀಯ ಸ್ಥಾನಮಾನಗಳನ್ನು ನಿರ್ದಿಷ್ಟವಾಗಿ ಹೇಳಬಹುದು. ಸಾಮಾಜಿಕವಾಗಿ ಶೋಷಿತ ಜನರಾರು ಸೇವಾ ನಿಯಮದ ನಿಬಂಧನೆ ಮುರಿಯುವಾಗಿಲ್ಲ. ಗ್ರಾಮದೊಳಗಿರುವ ಸ್ಪೃಶ್ಯರ ಪರಿಧಿ ಇವರಾರು ದಾಟಿ ಹೋಗುವಂತಿಲ್ಲ. ಇವುಗಳನ್ನು ಮುರಿದರೆ ಅಥವಾ ಪ್ರತಿಭಟಿಸಿದರೆ ಸ್ಪೃಶ್ಯರಿಂದ ದಾಳಿ, ಹಲ್ಲೆ ಮತ್ತು ಹಿಂಸಾಚಾರಗಳನ್ನು ಅನುಭವಿಸಬೇಕಾಗುತ್ತದೆ. ಲಿಂಗಾಯತ ಸಮಾಜದ ಜಂಗಮರು ಅತ್ಯಂತ ಶ್ರೇಷ್ಠ ಸಾಮಾಜಿಕ ಸ್ಥಾನಮಾನದೊಂದಿಗೆ ಬಾಳಿಬಂದವರು. ಅಸ್ಪೃಶ್ಯರಂತೆ ಪರಾಧೀನತ್ವದಿಂದ ಬಾಳಿದವರಲ್ಲ.

ಪ್ರತಿಯೊಂದು ಜನಸಮುದಾಯವು ಅವರದೇಯಾದ ಸಾಂಪ್ರದಾಯಿಕ ಕಸುಬುಗಳಲ್ಲಿ ಪರಿಣಿತಿ ಮತ್ತು ನೈಪುಣ್ಯತೆಗಳನ್ನು ಮೈಗೂಡಿಸಿಕೊಂಡಿದ್ದವರು. ಕಾಲಕ್ರಮೇಣ ಹಿಂದೂ ಸಮಾಜ ಇಂತಹವರನ್ನು ಪ್ರತ್ಯೇಕ ಜಾತಿಯವರೆಂದು ಅನುಮೋದಿಸತೊಡಗಿತು. ಆದರೂ ಸಹ ಸ್ವಲ್ಪ ಸುಧಾರಿಸಿದ ಜೀವನಕ್ರಮವನ್ನು ಉಳ್ಳವರಾಗಿ, ಹಿಂದುಳಿದವರ್ಗಗಳೆಂದು ಪರಿಗಣಿಸಲ್ಪಟ್ಟರು. ಅಸ್ಪೃಶ್ಯತೆಯ ಸೋಂಕು ಅಷ್ಟಾಗಿ ಇವರಿಗೆ ತಗುಲಿರಲಿಲ್ಲ. ಅದೇರೀತಿಯಲ್ಲಿ ದಕ್ಷಿಣ ಭಾರತದ ವೀರಶೈವ ಜಂಗಮರಾರು ಈ ವ್ಯಾಪ್ತಿಗೆ ಅಂದಿನಿಂದಲೂ ಸೇರಿದವರಲ್ಲ. ಹಿಂದುಳಿದವರ್ಗಗಳು ಸಾಂಪ್ರದಾಯಿಕ ಕಸುಬಗಳ ಮೇಲೆ ಗುರುತಿಸಿಕೊಂಡಂತೆ ಜಂಗಮರು ವರ್ಗೀಕರಣಗೊಂಡಿಲ್ಲ. ವೀರಶೈವ ಜಂಗಮರು ಬಹುಕಾಲದಿಂದಲೂ ಒಂದೇ ಮಾದರಿಯ 'ಜಂಗಮ' ನಾಮಾಂಕಿತಗಳಿಂದ ಕರೆಯಲ್ಪಡುತ್ತಿದ್ದವರು. ಇತರ ಭಾಷೆಯ ಜನ್ಯದೊಳಗೂ ಇವರಿಗೆ ಅನ್ಯಪದಗಳು ಪ್ರಯೋಗವಾಗಲಿಲ್ಲ. ಕಸುಬಿನ ಮೇಲೆ ಅವಲೋಕಿಸಿದರೂ ಸಹ ವ್ಯತ್ಯಾಸಗಳಿಲ್ಲ. ಇವರು ಬಹುಪ್ರಾಚೀನ ಕಾಲದ ಸಾಮಾಜಿಕ ಇತಿಹಾಸಗಳನ್ನೇ ಅವಿಚ್ಛಿನವಾಗಿ ಮುಂದುವರಿಸಿದ್ದಾರೆ. ಆದರೆ ಮೀಸಲಾತಿಗಾಗಿ ಮಾತ್ರ ಇವರಲ್ಲಿ ವ್ಯತ್ಯಾಸಗಳನ್ನು ಕಾಣಲಾರಂಭಿಸಿದ್ದೇವೆ ಎಂದು ದಾಸನೂರು ಕೂಸಣ್ಣನವರು ಹೇಳುತ್ತಾರೆ.

ನಿಜಾಂ ಪ್ರದೇಶದ ನೇರ ತೆಲುಗು ಪ್ರಾಂತ್ಯದ ಜಂಗಮರನ್ನು ಪ್ರತ್ಯೇಕವಾಗಿ ವಿಂಗಡಿಸಿದೆ. ಇನ್ನುಳಿದ ಅಧೀನಾಡಳಿತ ಪ್ರದೇಶಗಳಲ್ಲಿ ಇವರನ್ನು ಲಿಂಗಾಯತ ಸಮುದಾಯಗಳೊಂದಿಗೆ ಪರಿಗಣಿಸಿದೆ. ಕರ್ನಾಟಕದಲ್ಲಿಯೂ ವೀರಶೈವ ಜಂಗಮರನ್ನು ಇಲ್ಲಿಯ ತನಕ ಲಿಂಗಾಯತರೊಳಗೆ ಗುರುತಿಸಿದ್ದಾರೆ. ೧೯೨೧ರಲ್ಲಿ ಬೇಡ ಮತ್ತು ಬುಡ್ಗ ಜಂಗಮರು ಕೇವಲ ೧೯೮೪ ಜನರಿದ್ದರು. ಇವರೆಲ್ಲರೂ ಆಂಧ್ರದ ಮೂಲನಿವಾಸಿಗಳು. ಅಂದಿನಿಂದಲೂ ವೀರಶೈವ ಜಂಗಮರಿಗೆ ಬೇಡ ಜಂಗಮರೆಂದು ಕರೆಯುವ ವಾಡಿಕೆಯಿರಲಿಲ್ಲ. ಜಂಗಮರು ಈ ಪ್ರಾಂತ್ಯದೊಳಗೆ ನಾಗರೀಕತೆಯಿಲ್ಲದೆ ಅಸ್ಪೃಶ್ಯರಾಗಿದ್ದರೆ ಮಾಲ ಅಥವಾ ಬುಡ್ಗ ಜಂಗಮರ ನಿಮ್ನ ಜಾತಿ ಪಟ್ಟಿಯೊಗೆ ಸೇರುತ್ತಿದ್ದರು. ಜನಗಣತಿಯು ದೇಶವೊಂದರ ಜನಸಂಖ್ಯೆ ಇತಿಹಾಸ ಸಾರುವ ಚಾರಿತ್ರಿಕ ದಾಖಲೆಯಾಗಿದೆ. ಆಗಿದ್ದಾಗ್ಗೆ ವೈಜ್ಞಾನಿಕ

ಚಲಗಳನ್ನು ಬಳಸಿ ವಿಶ್ಲೇಷಿಸುತ್ತಾರೆ. ವಿದ್ಯಾವಂತ ವೀರಶೈವ ಜಂಗಮ ಕುಟುಂಬಗಳಿಗೆ ಅನ್ಯಾಯವಾಗಿದೆ ಎಂದರೆ ಆಶ್ಚರ್ಯವಾಗುತ್ತದೆ. ಆದುದರಿಂದ ಬೇರೊಂದು ಸಂಸ್ಕೃತಿಯುಳ್ಳ ಬೇಡ ಜಂಗಮರು ವೀರಶೈವರಾಗಲು ಸಾಧ್ಯವಿಲ್ಲ. ಬೇಡ ಜಂಗಮರು ಅಸ್ಪೃಶ್ಯ ಸಂಸ್ಕೃತಿಯುಳ್ಳ ಮತ್ತು ಸಾಂಸ್ಕೃತೀಕರಣಗೊಳ್ಳದ ಅಲೆಮಾರಿ ಭಿಕ್ಷುಕ ಜಾತಿಯ ಜನರಾಗಿದ್ದಾರೆ.

**ಬೇಡ(ಬುಡ್ಗ) ಜಂಗಮರು ವೀರಶೈವ ಲಿಂಗಾಯತ ಜಂಗಮರ ಉಪಜಾತಿಯಲ್ಲ**

ಒಂದು ಮೂಲ ಜಾತಿಗೆ ಹಲವಾರು ಉಪಜಾತಿಗಳಿರುತ್ತವೆ. ಆದರೆ ವೀರಶೈವ ಲಿಂಗಾಯತ ಜಂಗಮರಲ್ಲಿ ಬೇಡ/ ಬುಡ್ಗ ಜಂಗಮರು ೧೯೯೧ ರಿಂದಲೂ ಉಪಜಾತಿಗಳಾಗಿ ಕಾಣಿಸಿಕೊಂಡಿಲ್ಲ. ಈ ಕೆಳಗಿನ ಕೋಷ್ಟಕದಲ್ಲಿರುವ ಉಪಜಾತಿಗಳೆಲ್ಲವೂ ವೀರಶೈವ ಜಂಗಮರಿಗೆ ಸೇರಿವೆ.

| | | | |
|---|---|---|---|
| ೧. ಚರತಿ | ೨. ದಾವ್ವಾರಿ | ೩. ಗಣಾಚಾರ್ಯ | ೪. ಗೃಹಭಾರಿ |
| ೫. ಚಲುಲಕ್ಕರ್ | ೬. ಕಲಮಕರ್ | ೭. ಕಸಾನಾಮಿ | ೮. ಮಠಪತಿ |
| ೯. ಮಿತಮಠಿ | ೧೦. ನೂರುವಾರ | ೧೧. ಪಾದೋಳಭಂಗಿ | ೧೨. ಪಂಚಮ |
| ೧೩. ಪೇಶಿಮಾ | ೧೪. ಸೋಮವಂತ | ೧೫. ಸ್ಥಾವರ | ೧೬. ತೆಲಂಗ್ಥಿ |
| ೧೭. ತಾರ್ವತೀಕರು | ೧೮. ವೀರಶೈವ | | |

(ಮೂಲ: ಹೈದರಾಬಾದ್ ಸಂಯುಕ್ತ ಜಿಲ್ಲಾ ಜನಗಣತಿ–೧೯೯೧, ಪುಟ–CXIX).

ಬೇಡ/ಬುಡ್ಗಜಂಗಮರು ವೀರಶೈವ ಜಂಗಮರ ಉಪಜಾತಿಯಲ್ಲ, ೧೯೦೧ರ ಜನಗಣತಿಯಲ್ಲಿ ನಿಜಾಂ ಪ್ರದೇಶದಲ್ಲಿ ಲಿಂಗಾಯತ ಜಾತಿ ಪ್ರಭೇದವನ್ನು ನಾಲ್ಕು ವಿಭಾಗಗಳಲ್ಲಿ ವರ್ಗೀಕರಿಸಿದೆ. ಮೊದಲನೆಯವರು ಜಂಗಮರು, ಲಿಂಗಾಯತರ ಧಾರ್ಮಿಕ ಪುರೋಹಿತರು ಮತ್ತು ಜಾತಿಯಲ್ಲಿ ಪ್ರಥಮರು. ಎರಡನೆಯವರು ಪರಿವರ್ತನೆಯಾದ ಲಿಂಗಾಯತರು. ಇವರೇ ಜಾಸ್ತಿ ಜನಸಂಖ್ಯೆಯಲ್ಲಿದ್ದಾರೆ (ವಾಣಿ, ಪಂಚಮಶಾಲಿ, ಬಣಜಿಗರು, ಸಾದರು).

ಮೂರನೆಯವರು ವೃತ್ತಿಪರ ಜಾತಿಗಳ ಹಿನ್ನೆಲೆಯಿಂದ ಪರಿವರ್ತಿತರಾದವರು. ನಾಲ್ಕನೆಯವರು ಅನೈರ್ಮಲ್ಯದ ಮತ್ತು ಮಲೀನ ವೃತ್ತಿಗಳ ಜನರಾದ ಮಾದಿಗ ಜಂಗಮ ಮತ್ತು ಮಾಲ ಜಂಗಮರು.

"ಜಂಗಮರು ಅತ್ಯುನ್ನತ ಧಾರ್ಮಿಕ ಪ್ರಮುಖರು. ಮದ್ವಯ, ಸ್ಥಾವರ, ಗಣಾಚಾರಿಗಳೆಲ್ಲರು ಸಂಸಾರಸ್ಥರು. ಈ ಸಾಮಾನ್ಯ ಜಂಗಮರು ಸಹ ಧಾರ್ಮಿಕ ವಿಧಿವಿಧಾನಗಳಳೊಳಗೆ ಯಾವುದೇ ಭಿನ್ನಭಿಪ್ರಾಯವಲ್ಲ. ಆದರೆ ಬೇಡ, ಬುಡ್ಗ, ಮಾಲ ಜಂಗಮರು ಮಾತ್ರ ಇಂತಹ ಪದೋನ್ನತ್ತಿಗಳಿಸಿಲ್ಲ. ಏಕೆಂದರೆ ಇವರಾರು ವೀರಶೈವರಲ್ಲ. ೧೬೫೬ಕ್ಕಿಂತ ಮುಂಚೆ ಬುಡ್ಗ ಜಂಗಮರು ಮದ್ರಾಸು ಪ್ರಾಂತ್ಯದ ಬಳ್ಳಾರಿ ಸುತ್ತಲೂ, ಬೇಡುವ ಜಂಗಮರು ತೆಲಂಗಾಣದ ಗುಲಬರ್ಗಾ ಪ್ರಾಂತ್ಯದಲ್ಲಿ ವಾಸಿಸುತ್ತಿದ್ದರು. ಇವರು ಮಧ್ಯಪ್ರದೇಶದ ಸತ್ನಾಮಿ ಚಮ್ಮಾರರಂತೆ, ದಕ್ಷಿ ಹೊಲೆಮಾದಿಗರಿಗೆ ಪುರೋಹಿತರಾಗಿದ್ದಾರೆ"[೩೭] ಎಂದು ದಾಸನೂರು ಕೂಸಣ್ಣ ಅವರು ಹೇಳುತ್ತಾರೆ.

೧೯೮೬ರಲ್ಲಿ Report of Karnataka second Backward classes commission, volume-3, Annexure ೮.೧ And Statically Statements ಎಂಬ ವರದಿಯಲ್ಲಿ "State level list of castes and communities in the state of Karnataka Along with Synonyms sub-caste and Related groups as Reflected in the Socio Economic-cum-educational Survey, 1984" ಈ ಒಂದು ವರದಿಯಲ್ಲಿ ವೀರಶೈವ ಲಿಂಗಾಯತ ಸಮುದಾಯದ ಜಂಗಮ ಜಾತಿಯನ್ನು ಹಿಂದುಳಿದ ವರ್ಗದ ಪಟ್ಟಿಯಲ್ಲಿ ಜಂಗಮ/ ಆರಾಧ್ಯ ಎಂದು ದಾಖಲಿಸಿದ್ದಾರೆ.

ಡಾ ಎಂ ಚಿದಾನಂದಮೂರ್ತಿಯವರು ಹಿಂದೂ: ವೀರಶೈವ(ಲಿಂಗಾಯತ) ಎಂಬ ಕೃತಿಯಲ್ಲಿ 'ಜಂಗಮರು ಪರಿಶಿಷ್ಟರ ಮೀಸಲಾತಿ ಕಬಳಿಸುವ ತಂತ್ರವನ್ನು ಕುರಿತು ಉಲ್ಲೇಖಿಸಿದ ರೀತಿ ಈ ಕೆಳಗಿನಂತೆ ಅಖಿಲ ವೀರಶೈವ ಮಹಾಭೆಯು "ಕಳೆದ ನಾಲ್ಕೈದು ವರ್ಷಗಳಿಂದ ಕೆಲವು ಜಂಗಮರು ತಮ್ಮನ್ನು 'ಬೇಡ ಜಂಗಮ'ರೆಂದು ಕರೆದುಕೊಂಡು ಸರ್ಕಾರಿ ರಿಯಾಯ್ತಿಗಳನ್ನು ಪಡೆಯಲು ಯತ್ನಿಸುತ್ತಿದ್ದಾರೆ. ಆಂಧ್ರದಲ್ಲಿ ಬುಡುಗ ಜಂಗಮ, ಬೇಡ ಜಂಗಮ, ಮಾಲಾ ಜಂಗಮ ಎಂಬ ಪರಿಶಿಷ್ಟ ಜಾತಿ/ ವರ್ಗದ ಜನರಿದ್ದು ಅವರಿಗೆ ಆಂಧ್ರ ಸರಕಾರ ಕೊಟ್ಟಿರುವ ರಿಯಾಯತಿಗಳನ್ನು ತಮಗೂ ಕೊಡಲು ಒತ್ತಾಯಿಸುತ್ತಿದ್ದಾರೆ. ಈಚೆಗೆ ಬೆಂಗಳೂರಿನ ಮಠವೊಂದರಲ್ಲಿ "ಅಖಿಲ ಭಾರತ ಬುಡಗ ಜಂಗಮ, ಬೇಡ ಜಂಗಮ, ಮಾಲಜಂಗಮರ ಮಹಾಸಮ್ಮೇಳನ ನಡೆಯಿತು. ಆದರೆ ಅವರಲ್ಲಿ ಆ ಜಾತಿಗಳಿಗೆ ಸೇರಿದವರು ಯಾರೂ ಭಾಗವಹಿಸಿರಲಿಲ್ಲವೆಂದು, ಎಲ್ಲರೂ ವೀರಶೈವ ಜಂಗಮರೆಂದು ತಿಳಿಯಿತು. ತಾವು ಬೇಡು ಜಂಗಮರಾದ್ದರಿಂದ ತಮ್ಮನ್ನು "ಬೇಡ ಜಂಗಮ"ರೆಂದು ಪರಿಶಿಷ್ಟ ಪಟ್ಟಿಯಲ್ಲಿ ಸೇರಿಸಬೇಕೆಂಬ ನಿರ್ಣಯವು ಅಲ್ಲಿ ಸ್ವೀಕೃತವಾಯಿತೆಂದೂ ತಿಳಿಯಿತು. ಜನಗಣತಿ ಸಂದರ್ಭದಲ್ಲಿ 'ಧರ್ಮ' ವಿಭಾಗದ ಮುಂದೆ ವೀರಶೈವ/ಲಿಂಗಾಯತ ಎಂದು ಬರೆಯಿಸಬೇಕು ಎಂಬ ನಿರ್ಣಯವೂ ಆಯಿತು. ಜಂಗಮರು ಬೇಡುವುದಿಲ್ಲ; ಅವರು ಭಿಕ್ಷುಕರಲ್ಲ. ಭಿಕ್ಷೆಗೆ ಹೋಗುವುದು ಅವರ ಹಕ್ಕು: ಮತ್ತು ಅವರು ಮನೆಗಳಿಗೆ ಬಂದರೆ ಅವರ ಕಾಲುತೊಳೆದು ನಮಸ್ಕರಿಸಿ ಭಿಕ್ಷೆ ನೀಡಿ ಅವರ ಆಶೀರ್ವಾದವನ್ನು ಜನರು ಪಡೆಯುತ್ತಾರೆ. ಹೀಗಾಗಿ ಅವರು ಬೀದಿ ಭಿಕ್ಷುಕರಲ್ಲ; ಅವರ ಭಿಕ್ಷೆ ಬೇಡುವಿಕೆ ಬೀದಿ ಭಿಕ್ಷುಕರ ಬೇಡುವಿಕೆಗೆ ಎರಡಕ್ಕೂ ಸಂಬಂಧವೇ ಇಲ್ಲ. ವೀರಶೈವರಲ್ಲಿ ಅದು ಮೇಲ್ಜಾತಿಗೆ ಸೇರಿದೆ. ಅವರಲ್ಲಿ ಬಡವರಿದ್ದರೂ ಅವರು ಹಸಿವುನಿಂದ ನರಳಲು ಸಮಾಜ ಅವಕಾಶ ಕೊಡುವುದಿಲ್ಲ. ಹೀಗಿರುವಾಗ ಅವರು ಸುಳ್ಳು ಹೇಳಿ ರಿಯಾಯಿತಿ ಪಡೆಯಲು ನಡೆಸಿರುವ ಪ್ರಯತ್ನವು ಅನ್ಯಾಯ"[೩೮] ಎಂದು ಉಲ್ಲೇಖಿಸಿದ್ದಾರೆ.

"ಶೋಷಿತ ಸಮುದಾಯಗಳಿಗೆ ಸಿಗಬೇಕಾದ ಸವಲತ್ತುಗಳನ್ನು ಪಡೆದುಕೊಳ್ಳುವುದು ಯಾವ ನ್ಯಾಯ? ಇದು ಸರಿಯಾದ ಮಾತಿನಲ್ಲಿ ಹೇಳಬೇಕೆಂದರೆ ಮೀಸಲಾತಿಯ ಕಳ್ಳತನ. ವೀರಶೈವ ಜಂಗಮರು ಸಾಮಾಜಿಕವಾಗಿ, ಧಾರ್ಮಿಕವಾಗಿ ಯಾವ ರೀತಿಯಿಂದಲೂ ಬೇಡ ಜಂಗಮರಾಗಲೂ ಸಾಧ್ಯವೇ ಇಲ್ಲ ಎಂದು ವೀರಶೈವ ಜಂಗಮದ ನಿಡುಮಾಮಿಡಿ ಪೀಠದ ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿಯವರು ಹೇಳುತ್ತಾರೆ.

ಪರಿಶಿಷ್ಟ ಜಾತಿ ವರ್ಗಗಳಿಗೆ ಸಂವಿಧಾನ ನೀಡಿದ ಮೀಸಲಾತಿ ಸೌಲಭ್ಯವನ್ನು ಬೇಡ ಜಂಗಮರ ಹೆಸರಿನಲ್ಲಿ ವೀರಶೈವ ಜಂಗಮರು ಪಡೆಯುವುದು ಅನ್ಯಾಯದ ಪರಮಾವಧಿ ಎಂದು ಶ್ರೀ ತೋಂಟದಾರ್ಯ ಸಿದ್ಧಲಿಂಗ ಸ್ವಾಮೀಜಿ ಅವರು ಹೇಳುತ್ತಾರೆ. ಧಾರವಾಡ ಜಿಲ್ಲಾ ಆದಿ ಜಾಂಬವರ ಸಮ್ಮೇಳನದಲ್ಲಿ ಮಾತನಾಡುತ್ತಾ ವೀರಶೈವ ಜಂಗಮರು ಬೇಡ ಜಂಗಮರಲ್ಲ ಎಂದು ಅವರು ಬೇಡ ಜಂಗಮರ ಹೆಸರಿನಲ್ಲಿ ತಾವು ಪರಿಶಿಷ್ಟರು ಎಂದು ಘೋಷಿಸಿಕೊಂಡು ಪರಿಶಿಷ್ಟರಲ್ಲದವರಿಗೆ ಸಲ್ಲಬೇಕಾದ ಸೌಲಭ್ಯಗಳನ್ನು ಅನುಭವಿಸುವುದನ್ನು ಮುಂದಿನ ಪೀಳಿಗೆಯ ಜನರು ಕ್ಷಮಿಸುವುದಿಲ್ಲ ಎಂದು ಎಚ್ಚರಿಸಿದ ಸ್ವಾಮೀಜಿಯವರು, ಬೇಡ ಜಂಗಮರ ಹೆಸರಿನಲ್ಲಿ ವೀರಶೈವ ಜಂಗಮರು ರಾಯಚೂರು, ಬಳ್ಳಾರಿ, ಬೀದರ್ ಜಿಲ್ಲೆಗಳಲ್ಲಿ ರಾಜಕೀಯ ಮೀಸಲಾತಿ ಪಡೆಯುತ್ತಿದ್ದಾರೆ. ಈ ದುರುಪಯೋಗವನ್ನು ಕಾನೂನಿನ ಚೌಕಟ್ಟಿನಲ್ಲಿಯೇ ತಡೆಯಲು ದಲಿತ ಮುಖಂಡರು ಕ್ರಮಗಳನ್ನು ಕೈಗೊಳ್ಳದೇ ಇದ್ದರೆ ಅಂಬೇಡ್ಕರ್ ಮತ್ತು ಗಾಂಧೀಜಿಯವರ ಶ್ರಮ ವ್ಯರ್ಥವಾಗುತ್ತದೆ ಎಂದು ಎಚ್ಚರಿಸುತ್ತಾರೆ."[೩೯]

"ಅತ್ಯಂತ ಹಿಂದುಳಿದ, ನಿಜವಾದ ಬೇಡ, ಬುಡುಗ ಮತ್ತು ಮಾಲ ಜಂಗಮರಿಗೆ ಸಲ್ಲಬೇಕಾದ ಮೀಸಲಾತಿ ಸೌಲಭ್ಯವನ್ನು ಕರ್ನಾಟಕ ವೀರಶೈವ ಜಂಗಮರು ಅಪೇಕ್ಷಿಸುವುದು ಸರ್ವಥಾ ನ್ಯಾಯವಲ್ಲ ಎಂದು ಶ್ರೀ ನಿಡುಮಾಮಿಡಿ ಪೀಠಾಧ್ಯಕ್ಷರಾದ ವೀರಭದ್ರ ಚನ್ನಮಲ್ಲ ಸ್ವಾಮೀಜಿ ತಿಳಿಸುತ್ತಾರೆ. ವೀರಶೈವ ಸಾಹಿತ್ಯದಲ್ಲಿ ಜಂಗಮರು ಉಲ್ಲೇಖ ಬರುವ ಕಡೆ ಎಲ್ಲಿಯೂ ಬೇಡ, ಬುಡುಗ ಮತ್ತು ಮಾಲ ಎನ್ನುವ ಪ್ರಯೋಗಗಳು ಕಂಡುಬರುವುದಿಲ್ಲ. ಅಲ್ಲದೆ ವೀರಶೈವ ಜಂಗಮರನ್ನು ಸಮಾಜದವರೇ ಆಗಲಿ, ಅನ್ಯ ಸಮಾಜದವರೇ ಆಗಲಿ ಆ ಹೆಸರುಗಳಿಂದ ಕರೆಯುವ ರೂಢಿಯೂ ಇಲ್ಲ ಎಂದು ಪತ್ರಿಕಾಗೋಷ್ಠಿಯಲ್ಲಿ ವಿವರಿಸುತ್ತಾರೆ. ಮೂಲಭೂತವಾದಿ ಕೆಲ ಜಂಗಮರು ಮಾತ್ರ ಮೀಸಲಾತಿಗಾಗಿ ಒತ್ತಾಯಿಸುತ್ತಿದ್ದು ಇದೊಂದು ಆತ್ಮವಂಚನೆ ಮತ್ತು ಆತ್ಮದೌರ್ಬಲ್ಯ ಆಗಿರುತ್ತದೆ. ಸಾಮಾಜಿಕ ನ್ಯಾಯಕ್ಕೆ ಪ್ರತಿರೋಧ ಒಡ್ಡುತ್ತಿರುವ ಈ ಜನರು ಆರ್ಥಿಕ ಪ್ರಯೋಜನಕ್ಕಾಗಿ ಇಡೀ ಜಂಗಮ ಸಮುದಾಯವನ್ನು ತಪ್ಪುದಾರಿಗೆ ಎಳೆಯುತ್ತಿರುವುದು ಸರಿಯಲ್ಲ ಎಂದು ಟೀಕಿಸುತ್ತಾರೆ. ವೀರಶೈವ ಜಂಗಮರಲ್ಲಿ ಬಹಳಷ್ಟು ಜನ ಬಡವರು ಭಿಕ್ಷಾವೃತ್ತಿಯವರು ಇರುವುದು ಸತ್ಯಸಂಗತಿ. ಆದರೆ ಈ ಬಡತನದಿಂದ ಭಿಕ್ಷಾವೃತ್ತಿಯಿಂದ ಅವರ ಸಾಮಾಜಿಕ ಗೌರವಕ್ಕೆ ಬಾಧಕವೇನೂ ಆಗಿರುವುದಿಲ್ಲ. ವೀರಶೈವ ಜಂಗಮರು ಆರ್ಥಿಕ ಹಿಂದುಳಿವಿಕೆಗೆ ಸರ್ಕಾರದಿಂದ ಬೇರೆ ತೆರನಾಗಿ ಅನುಕೂಲ ಮಾಡಿಕೊಳ್ಳಲು ಪ್ರಯತ್ನಿಸಬೇಕೆ ಹೊರತು, ಸಾವಿರಾರೂ ವರ್ಷಗಳ ಕಾಲ ಅನ್ಯಾಯಕ್ಕೆ ಅನಾಧರಕ್ಕೆ ಗುರಿಯಾದ ಬೇಡ, ಬುಡುಗ, ಮಾಲ ಜಂಗಮರ ಮೀಸಲಾತಿ ಸೌಲಭ್ಯವನ್ನು ಕಸಿದುಕೊಂಡು ಆ ದಲಿತ ಸಮುದಾಯಗಳನ್ನು ವಂಚಿಸಬಾರದು ಎಂದು ಸ್ವಾಮೀಜಿ ಕೇಳಿಕೊಂಡರು. ಬೇಡ, ಬುಡುಗ, ಮಾಲ ಜಂಗಮರು ವೀರಶೈವ ಜಂಗಮರಂತಲ್ಲ. ಅವರು ಮಾಂಸಾಹಾರಿಗಳು, ಲಿಂಗಧಾರಿಗಳಲ್ಲ, ವೀರಶೈವ ಜಂಗಮರು ಪರಶಿವನ ಉಪಾಸಕರು, ಪ್ರಧಾನ ವೃತ್ತಿ ಪೌರೋಹಿತ್ಯ, ಬಹುಪಾಲು ವ್ಯವಸಾಯಗಾರರೂ ಹೌದು. ಅದೇ ಬೇಡ ಜಂಗಮರು ಊರಿಂದ ಊರಿಗೆ ಅಲೆಯುವವರು, ಕೂಲಿಕಾರರು, ಚಾಪೆ ಹೆಣೆಯುವರು ಎಂದು ಇಬ್ಬರ ನಡುವಿನ ಪ್ರಭೇಧಗಳನ್ನು ವಿವರಿಸುತ್ತಾರೆ"[೪೦].

"ಬೇಡ ಜಂಗಮರಿಗೆ ಮೀಸಲಾದ ಸೌಲಭ್ಯಗಳನ್ನು ಲಿಂಗಾಯತ ಜಂಗಮರು ಕಬಳಿಸಲು ಯತ್ನಿಸುವುದು ಅನ್ಯಾಯದ ಪರಮಾವಧಿ ಮತ್ತು ಇದನ್ನು ರಾಷ್ಟ್ರೀಯ ಬಸವ ದಳ ಖಂಡಿಸುತ್ತದೆ ಎಂದು ಜಗದ್ಗುರು ಮಾತೆ ಮಹಾದೇವಿ ಅವರು ಹೇಳುತ್ತಾರೆ. ಸಂವಿಧಾನದಲ್ಲಿ ಹೇಳಿರುವ ಬೇಡ, ಬುಡಗ ಮತ್ತು ಮಾಲ ಜಂಗಮರು ಅಲೆಮಾರಿಗಳು ಮತ್ತು ಮಾಂಸಾಹಾರಿಗಳು ಅವರು ಇಂದಿಗೂ ಎಲ್ಲ ವಿಷಯಗಳಲ್ಲಿ ಅತ್ಯಂತ ಹಿಂದುಳಿದಿದ್ದಾರೆ ಮತ್ತು ಆರ್ಥಿಕವಾಗಿ ಅತ್ಯಂತ ಹೀನ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಲಿಂಗಾಯತ ಜಂಗಮರು ಲಿಂಗಾಯತರ ಪೈಕಿ ತಾವು ಶ್ರೇಷ್ಠರೆಂದು ಹೇಳಿಕೊಳ್ಳುತ್ತಾರೆ. ವೀರಶೈವ ಜಂಗಮರನ್ನು ಧರ್ಮ ಪ್ರಚಾರಕರು ಎನ್ನುವ ರೀತಿಯಲ್ಲಿ ಅರ್ಥೈಸಲಾಗಿದೆ. ಅವರು ಈಗ ಅವರೇ ತಾವು ಬೇಡ ಜಂಗಮರೊಂದಿಗೆ ಹೋಲಿಸಿಕೊಳ್ಳುವುದು ಸರಿಯಲ್ಲ. ಸಮಾಜದ ಅವಜ್ಞೆಗೆ ಒಳಗಾದ ಜನರಿಗೆ ಮೀಸಲಾದ ಸೌಲಭ್ಯಗಳನ್ನು ಕಬಳಿಸಲು ಯತ್ನಿಸುವುದು ಅನ್ಯಾಯ ಎಂದು ಅವರು ಅಭಿಪ್ರಾಯಪಡುತ್ತಾರೆ"[೪೧].

"ಅಲೆಮಾರಿ ಬೇಡ(ಬುಡ್ಗ) ಜಂಗಮರ ಪರಿಶಿಷ್ಟಜಾತಿ ಪ್ರಮಾಣಪತ್ರಗಳನ್ನು ಪಡೆಯಲು ಯತ್ನಿಸುತ್ತಿರುವ ಬಹುಸಂಖ್ಯಾತ ಮೇಲ್ವರ್ಗದ ವೀರಶೈವ ಲಿಂಗಾಯತ ಜಂಗಮರನ್ನು ಕುರಿತು ಮೀಸಲಾತಿ ಕಳ್ಳತನ; ಸರ್ಕಾರವೇ ಅಪರಾಧಿ ಸ್ಥಾನದಲ್ಲಿರಿಸಬೇಕು ಎಂದು ವಿಧಾನ ಪರಿಷತ್ ಮಾಜಿ ಸದಸ್ಯರಾದ ಡಾ ಎಲ್ ಹನುಮಂತಯ್ಯ, ಬಿ ಟಿ ಲಲಿತಾ ನಾಯ್ಕ್, ದೇವನೂರು ಮಹಾದೇವಯ್ಯ ಅವರು ಹೇಳುತ್ತಾರೆ"[೪೨] *(ಪವ:೨)*.

"ವೀರಶೈವ ಜಂಗಮರು ಬೇಡ ಜಂಗಮರಲ್ಲ ಎಂದು ಸ್ಪಷ್ಟವಾಗಿ ಹೇಳಿದ ಅದೇ ಸಮುದಾಯದ ಸಂಶೋಧಕರಾದ ಡಾ ಎಂ ಎಂ ಕಲಬುರ್ಗಿಯವರು ಕಾರ್ಯಕ್ರಮವೊಂದರಲ್ಲಿ ಯಾರೋ ಮಾಡಿದ ತಪ್ಪಿಗೆ ಅಲೆಮಾರಿ ಬೇಡ ಬುಡ್ಗ ಜಂಗಮರನ್ನು ಬಹಿರಂಗವಾಗಿ ಕ್ಷಮೆಕೋರಿದ್ದಾರೆ"[೪೩] ***(ಪವ:೭&೮)***. "ಜಾತಿ ಜಂಗಮರಿಗೆ ಸದ್ಬುದ್ಧಿ ಬರಲಿ ಎಂದು ಸಂಗಯ್ಯ ಹಿರೇಮಠ ಸ್ವಾಮೀಜಿಗಳು ಹೇಳುತ್ತಾರೆ"[೪೪] ***(ಪವ:೯)***. "ದಲಿತರ ಹಕ್ಕು ಕಸಿದಿರುವ ಲಿಂಗಾಯತ ಜಂಗಮರು"[೪೫] ಎಂದು ತೋಂಟದ ಶ್ರೀಗಳು ಹೇಳುತ್ತಾರೆ***(ಪವ:೧೦)*** ಶೋಷಿತರ ಮೀಸಲಾತಿಯನ್ನು ಕಬಳಿಸುತ್ತಿರುವ ವೀರಶೈವ ಲಿಂಗಾಯತ ಜಂಗಮರಿಗೆ ಪರಿಶಿಷ್ಟ ಜಾತಿ ಬೇಡ ಜಂಗಮ ಪ್ರಮಾಣ ಪತ್ರವನ್ನು ನೀಡಬಾರದೆಂದು ಅನೇಕ ದಲಿತ ಸಂಘಟನೆಗಳು ಆರೋಪಿಸುತ್ತಿವೆ.

ಮೇಲ್ವರ್ಗಕ್ಕೆ ಸೇರಿದ ವೀರಶೈವ ಜಂಗಮರು ವೀರಶೈವ ಪಂಚ ಪೀಠ ಜಗದ್ಗುರುಗಳಾದ ಕಾಶೀ, ರಂಭಾಪುರಿ, ಶ್ರೀಶೈಲ, ಉಜ್ಜಿನಿ ಮತ್ತು ಕೇದಾರ ಪೀಠಗಳ ಪರಂಪರೆಗೆ ಸೇರಿದವರಾಗಿದ್ದು, ಮೊಟ್ಟಮೊದಲನೆಯದಾಗಿ. ಇವರು ಅಸ್ಪೃಶ್ಯರಲ್ಲ. ಇವರು ವೀರಶೈವ–ಲಿಂಗಾಯತರಿಗೆ ಗುರುಗಳಾಗಿದ್ದು, ಬಹುದೊಡ್ಡ ವೀರಶೈವ ಸಮಾಜವು ಇವರನ್ನು ಗುರುಗಳೆಂದು ಪೂಜ್ಯ ಭಾವನೆಯಿಂದ ಕಾಣುತ್ತದೆಯಲ್ಲದೆ, ಇವರನ್ನು ಲಿಂಗಾಯತರ ಮನೆಗಳಿಗೆ ಮಾತ್ರ ಕರೆದು ಪಾದಪೂಜೆ ಮಾಡಿ ಪಾದತೊಳೆದ ನೀರನ್ನು ಕುಡಿಯಲಾಗುತ್ತದೆ. ಹೀಗಾಗಿ ವೀರಶೈವ ಜಂಗಮರು ಮೊದಲನೆಯದಾಗಿ ಅಸ್ಪೃಶ್ಯರಲ್ಲ, ಶೋಷಿತರಲ್ಲ.

ಭಿಕ್ಷೆ ಬೇಡಿಕೊಂಡು ಇವರು ಜೀವನವನ್ನು ನಡೆಸುವುದಿಲ್ಲ ಇವರು ನಡೆಸುವುದು ಕೇವಲ ವೀರಶೈವ ಜಂಗಮರಿಗೆ ನೀಡಲಾಗುವ ಅಯ್ಯಾಚಾರ ಸಂಸ್ಕಾರ ನೀಡುವಾಗ ಸಾಂಕೇತಿಕವಾಗಿ ಐದು ಮನೆಗಳ ಧಾರ್ಮಿಕ ಭಿಕ್ಷೆಯನ್ನು ಮಾತ್ರ ಪಡೆಯುತ್ತಾರೆ. ಹೀಗಾಗಿ ಇವರು ಬೇಡ ಜಂಗಮರಲ್ಲ. ವೀರಶೈವ ಜಂಗಮರು ಅನೇಕ ವೀರಶೈವ ಮಠ-ಪೀಠಗಳಗೆ ವಿದ್ಯಾ ಸಂಸ್ಥೆಗಳಿಗೆ ಒಡೆಯಾರಾಗಿದ್ದಾರೆ. ಅಷ್ಟೆ ಅಲ್ಲಾ ಇವರು ದೊಡ್ಡದೊಡ್ಡ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದ್ದಾರೆ. ಎಂತಹ ಶ್ರೀಮಂತರಾಗಲಿ, ಕೋಟ್ಯಾಧೀಶರಾಗಲಿ, ಸವದತ್ತಿ ಯಲ್ಲಮ್ಮನ ಮನೆದೇವತೆಯನ್ನಾಗಿ ಮಾಡಿಕೊಂಡ ಒಕ್ಕಲು ಮಕ್ಕಳು ಕೆಲ ಮಾಸಗಳಲ್ಲಿ ಶುಕ್ರವಾರ, ಮಂಗಳವಾರ ಪಡ್ಲಿಗಿ ಹಿಡಿದು ಯಲ್ಲಮ್ಮನ ಹೆಸರಿನಲ್ಲಿ ಐದು ಮನೆಗಳಿಗೆ ಧಾರ್ಮಿಕ ಭಿಕ್ಷೆ ಬೇಡುತ್ತಾರೆ. ಅದೇ ರೀತಿ ತಿರುಪತಿ ತಿಮ್ಮಪ್ಪನನ್ನು ಮನೆ ದೇವರಾಗಿ ಸ್ವೀಕರಿಸಿ ಒಕ್ಕಲು ಮಾಡಿಕೊಂಡವರು ಎಂತಹ ಶ್ರೀಮಂತರಿದ್ದರು ಕೆಲ ಮಾಸಗಳಲಿ ದಂಡಿಗೆ, ಶಂಖ, ಜಾಗಟೆ ಹಿಡಿದು ಐದು ಮನೆಗಳ ಧಾರ್ಮಿಕ ಭಿಕ್ಷೆಯನ್ನು ಬೇಡುತ್ತಾರೆ. ಆದರೆ ಇವರನ್ನು ಭಿಕ್ಷುಕರೆಂದು ಪರಿಗಣಿಸಲಾಗದು. ಈ ದೇಶದಲ್ಲಿ ಅನೇಕ ಸಮುದಾಯಗಳು ಭಿಕ್ಷೆಯನ್ನು ಬೇಡಿಕೊಂಡು ಜೀವಿಸುವವರು ಇದ್ದಾರೆ, ಉದಾ: ಹಂಡಿ ಜೋಗಿಗಳು, ಸಿಂಧೋಳ್ಳರು, ದಾಸರು ಇತ್ಯಾದಿ ಆಗಿದ್ದರೆ ಅವರನ್ನು ಬೇಡ ಜೋಗಿಗಳು, ಬೇಡ ಸಿಂಧೋಳ್ಳರು, ಬೇಡ ದಾಸರು ಎಂದು ಕರೆಯಬಹುದಾಗಿತ್ತು. ಬೇಡ ಎನ್ನುವ ಪದದ ಮೂಲ ಅರ್ಥವೇ ಬೇರೆ ಇದೆ. ಈ ಪದವು ಭಿಕ್ಷಾಟನೆ ಮಾಡುವ ಕ್ರಿಯಾ ಪದವಲ್ಲ. ಬೇಡ ಎನ್ನುವುದು ಒಂದು ನಾಮಪದವಾಗಿದ್ದು, ಶಬ್ಧಕೋಶದಲ್ಲಿ ಬೇಟೆಗಾರ, ಬೇಡನು, ಮತ್ತು ಎರಡಾಣೆ (ಬೇಡ)ನಾಣ್ಯ ಎಂದು ಅರ್ಥೈಸಿದೆ. ವೀರಶೈವ ಲಿಂಗಾಯತ ಜಂಗಮರು ಕಲ್ಪಿಸಿಕೊಂಡಿರುವ ಬೇಡ ಎನ್ನುವ ಪದಕ್ಕೆ ಬೇಡು ಕ್ರಿಯಾ ಧಾತು ಸೇರಿಸಿಕೊಂಡು ಪರಿಶಿಷ್ಟರ ಮೀಸಲಾತಿಯ ಬೇಡ ಜಂಗಮ್ ಪ್ರಮಾಣಪತ್ರಗಳನ್ನು ಪಡೆಯಲು ಕೆಲವರು ಮುಂದಾಗಿದ್ದಾರೆ.

ಬೇಡ ಜಂಗಮ್-ಬುಡ್ಗ ಜಂಗಮ್ ಮೀಸಲಾತಿಯು ಕೇವಲ ಪರಿಶಿಷ್ಟ ಜಾತಿಗೆ ಮಾತ್ರ ಸೀಮಿತವಾಗಿದ್ದು, ಬೇಡ ಜಂಗಮ್-ಬುಡ್ಗ ಜಂಗಮರು ಮಾಂಸಹಾರಿಗಳು, ಗುಡ್ಡಗಾಡಿನಲ್ಲಿ ಗುಡಾರ ಗುಡಿಸಲಿನಲ್ಲಿ ವಾಸಿಸುವವರಾಗಿದ್ದು, ಒಂದು ಕಡೆ ನೆಲೆನಿಲ್ಲದೆ ನಿರಂತರವಾಗಿ ಅಲೆಮಾರಿಗಳಾಗಿ ಸಂಚಾರ ಮಾಡುತ್ತಾ, ಕುರಿ, ಕೋಳಿ, ನರಿ, ಮೊಲ, ಕಾಡು ಹಂದಿ, ಸಣ್ಣಪುಟ್ಟ ಪ್ರಾಣಿಪಕ್ಷಿಗಳನ್ನು ಬೇಟೆಯಾಡಿಕೊಂಡು ಜೀವಿಸುವ ಹಾಗೂ ಅದರಿಂದ ಬರುವ ಉತ್ಪನ್ನದಿಂದ ವಾದ್ಯಗಳನ್ನು ತಯಾರಿಸಿಕೊಂಡು ಜನರಿಗೆ ಜಾತಿಗೊಂದು ಕಥೆಗಳನ್ನು ಹೇಳಿಕೊಳ್ಳುತ್ತಾ ಊರಲ್ಲಿ ದಾನಧರ್ಮ ಸ್ವೀಕರಿಸಿಕೊಂಡು ಜೀವನ ಮಾಡುತ್ತಾ ಅಲೆಮಾರಿಗಳಾಗಿದ್ದಾರೆ. ಇವರಿಗೆ ಪಂಚಪೀಠಗಳಿಗೂ, ವಿರಕ್ತ ಪೀಠಗಳಿಗೂ ಯಾವುದೇ ಸಂಬಂಧವೇ ಇಲ್ಲ. ವೀರಶೈವ ಜಂಗಮರು ಕೇವಲ ಮೀಸಲಾತಿಗಾಗಿ ತಮ್ಮನ್ನು ಬೇಡ ಜಂಗಮವೆಂದು ಪರಿಗಣಿಸಬೇಕೆಂದಿರುವುದನ್ನು ಅತ್ಯಂತ ಶೋಚನೀಯವಾಗಿದೆ.

ಕರ್ನಾಟಕ ಸರ್ಕಾರ ೧೯೭೮ರಲ್ಲಿ ಸುತ್ತೋಲೆಯೊಂದನ್ನು ಹೊರಡಿಸಿ ನಂ: SWL:305, SAD:78 Date: ೨೨.೦೭.೧೯೭೮ ರಂದು ಲಿಂಗಾಯತ ಜಂಗಮರು ಬೇಡ ಜಂಗಮರಲ್ಲ ಎಂದಿತು. ಕರ್ನಾಟಕ ಸರ್ಕಾರವು ೧೯೭೬ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ತಿದ್ದುಪಡಿ

ಕಾಯಿದೆಯನ್ವಯ ಬೇಡ ಜಂಗಮರು ಮತ್ತು ಬುಡ್ಗ ಜಂಗಮ ಸಮುದಾಯಕ್ಕೆ ಸಂಬಂಧಪಟ್ಟಂತೆ ಸ್ಪಷ್ಟೀಕರಣ ನೀಡುವ ಸಲುವಾಗಿ ೧೯೭೮ನೇ ಇಸವಿಯಲ್ಲಿ ದಿನಾಂಕ ೨೨.೦೭.೧೯೭೮ ರಂದು ನಂ: SWL:೩೦೫, SAD:೭೮ ರ ಪ್ರಕಾರ ಸುತ್ತೋಲೆಯನ್ನು ಹೊರಡಿಸಿತು. ಅದರಲ್ಲಿ ಸ್ಪಷ್ಟವಾಗಿ "It is also clarified that the caste 'Jangama' which is a sub-caste of the Lingayat (Veerashaiva) community is not a caste declared as Scheduled Caste in the said Act. It is further clarified the Beda or Budga jangam' is not a section of Lingayats or Veerashaivas" ಎಂದು ಹೇಳುತ್ತಾ ಕೆಲವು ಲಿಂಗಾಯತ ಜಂಗಮರು ಬೇಡ ಜಂಗಮ ಹೆಸರಿನಲ್ಲಿ ಜಾತಿಪ್ರಮಾಣ ತೆಗೆದುಕೊಳ್ಳದಂತೆ ತಡೆಯೊಡ್ಡಿತ್ತು.

ಬುಡ್ಗ ಜಂಗಮ ಎಂಬ ಸಮುದಾಯವು ತೆಲುಗು ಮತ್ತು ಮರಗು ಭಾಷೆ ಹೊಂದಿರುವ ಅಲೆಮಾರಿ ಸಮುದಾಯವಾಗಿದೆ. ಮೂಲತಃ ಆಂಧ್ರ ಪ್ರದೇಶಕ್ಕೆ ಸೇರಿದ್ದು, ಬೇಟೆಯಾಡಿ, ಭಿಕ್ಷಾಟನೆ ಮಾಡಿ ಜೀವಿಸುವ ಜನಾಂಗವಾಗಿದೆ. ಅಳಿಲು, ಉಡ, ಮುಂಗಿಸಿ ಇತ್ಯಾದಿ ಸಣ್ಣಪುಟ್ಟ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುತ್ತಿದ್ದ ಭೂಹೀನ ಬುಡ್ಗ ಜಂಗಮರಾಗಿದ್ದಾರೆ. ಮಾಂಸ ಮತ್ತು ಮದ್ಯಸೇವನೆ ಇವರ ಆಹಾರ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದೆ. ಅಲೆಮಾರಿ ಬುಡ್ಗ ಜಂಗಮರನ್ನು ಕುರಿತು ಆಂಧ್ರಪ್ರದೇಶದ ಉಚ್ಚನ್ಯಾಯಲಯವು ೧೯೯೪ರಲ್ಲಿ ಆಂಧ್ರ ಹೈಕೋರ್ಟ್ ಪ್ರಕರಣ ನಂ: ೧೯೦೮೩ ಡಬ್ಲೂಪಿ ನಂ:೧೯೦೮೩/೧೯೯೪ರಲ್ಲಿ ಮಾನ್ಯ ಉಚ್ಚನ್ಯಾಯಾಲಯದ ತೀರ್ಪಿನಲ್ಲಿ Jangams are Purly vegetarians like Brahmins and Vysyas. They are Gurus of Saivite sects' ಎಂದು ಜಂಗಮರನ್ನು ವಿವರಿಸುತ್ತಾ ಬೇಡ/ಬುಡ್ಗ ಜಂಗಮರೆಂದರೆ Those who tell Stories and recite some legends, ie Burra Kathalu Known as Jangama Kathalu. They use thambura and Budga' ಎಂದು ಸ್ಪಷ್ಟವಾಗಿ ಘೋಷಿಸಿದೆ. ತೆಲುಗು ಸಾಹಿತ್ಯದಲ್ಲಿ ಪ್ರೊ ಬಿ. ಭೀಮರಾಜು ರವರು ಬುಡ್ಗ ಜಂಗಮರನ್ನು ವಿವರಿಸುತ್ತಾ "Those who tell stories with the help of Budiga (Leather mounted Pot) Instuments are Called Budga Jangamas or Jangaligas" ಎಂದಿದ್ದಾರೆ.

ವೀರಶೈವ ಲಿಂಗಾಯತ ಜಂಗಮರಿಗೆ, ಬೇಡ ಜಂಗಮ ಜಾತಿ ಪ್ರಮಾಣಪತ್ರಗಳನ್ನು ನೀಡುವುದಕ್ಕೆ ಡಾ ಸೂರ್ಯನಾಥ ಯು ಕಾಮತ್ ವರದಿ ಸಂಖ್ಯೆ ೧೪೮೨/೮೯-೯೦ ದಿ.೨೮.೦೮.೧೯೮೯) ಕರ್ನಾಟಕ ಗೆಜಿಟಿಯರ್ ವರದಿಯಲ್ಲಿನ ಉಲ್ಲೇಖಿತ ಮತ್ತು ವಿವರಣೆ ಮಾಡಿರುವ ಧಾರ್ಮಿಕ ಲಕ್ಷಣ ಮತ್ತು ಅಂಶಗಳನ್ನು ಒಳಗೊಂಡಿರುತ್ತವೆ ಎಂದು ಈ ಕೆಳಗಿನಂತೆ ವರದಿ ನೀಡುತ್ತಾರೆ.

೧. ಮಾಮುಲಿ ಜಂಗಮರೇ ಬೇಡ ಜಂಗಮರೆಂದು ಕರೆಯುತ್ತಾರೆ. ಜಂಗಮ ಎಂಬ ಪದವು ಲಿಂಗವಂತಕ್ಕೆ ಸೇರಿದ್ದು, ಇವರನ್ನು ಊರುಗಳಲ್ಲಿ ಜಂಗಮರು, ಅಯ್ಯಗೋಳು(ಐನೋರು), ಸ್ವಾಮಿಗಳು ಮುಂತಾದ ಪದಗಳಿಂದ ಕರೆಯುತ್ತಾರೆ.

೨. ಇವರ ಭಾಷೆ ಕನ್ನಡ ಹೊಂದಿದವರು.

೩. ಬಾಳೆಹೊನ್ನೂರು, ಉಜ್ಜಯಿನಿ, ಕೇದಾರ, ಶ್ರೀಶೈಲ, ಕಾಶಿ ಈ ಪಂಚಪೀಠಗಳ ಪೈಕಿ ಯಾವುದಾದರೂ ಪೀಠಕ್ಕೆ ಸೇರಿರುತ್ತಾರೆ.

೪. ಸಾಮಾನ್ಯವಾಗಿ ಇವರ ಹೆಸರು ಅಯ್ಯಾ, ಸ್ವಾಮಿ ಅಥವಾ ಕುಲಕ್ಕೆ ಊರಿಗೆ ಸಂಬಂಧಿಸಿದ ಅಡ್ಡ ಹೆಸರನ್ನು ಸೇರಿಸಿಕೊಳ್ಳುತ್ತಾರೆ. ದೇವರ ಹೆಸರುಗಳನ್ನು ಇಡುತ್ತಾರೆ. ಉದಾ: ವೀರಯ್ಯ, ಅಡಿವೆಯ್ಯ, ನಂದಿಸೂಗಯ್ಯ, ಸಿದ್ದರಾಮಯ್ಯ ಸ್ವಾಮಿ, ಶಂಕ್ರಯ್ಯ ಸ್ವಾಮಿ ಇತ್ಯಾದಿ

೫. ಹುಡುಗನಿಗೆ ೫ ರಿಂದ ೮ ವರ್ಷದ ವಯಸ್ಸಿನೊಳಗೆ ಅಯ್ಯಚಾರ, ದೀಕ್ಷೆ ನಡೆಸುತ್ತಾರೆ. ತಲೆಗೂದಲು ತೆಗೆಸಿ, ಕಾವಿಬಟ್ಟೆಗಳನ್ನು ತೊಡಸಿ, ಕೈಗೆ ದಂಡ, ಗಂಟೆ ಮತ್ತು ಜೋಳಿಗೆ ನೀಡಿರುತ್ತಾರೆ. ಗುರುಗಳು ಗುಟ್ಟಾಗಿ ಮಂತ್ರೋಪದೇಶ ಮಾಡುತ್ತಾರೆ. ಮೊದಲನೇ ದಿನ ಐದು ಮನೆಗಳಲ್ಲಿ ಭಿಕ್ಷೆ ಬೇಡುತ್ತಾರೆ.

೬. ಮರಣವಾದಾಗ ಹೊಸ ಬಟ್ಟೆ ಉಡಿಸಿ ವಿಭೂತಿ ಇಟ್ಟು ವಿಮಾನ ಕಟ್ಟಿ(ಇದಕ್ಕೆ ಉಚ್ಚಾಯಿ ಎನ್ನುತ್ತಾರೆ) ಅದರಲ್ಲಿ ಕುಳ್ಳಿರಿಸಿ ಹೊತ್ತುಕೊಂಡು ಹೋಗುತ್ತಾರೆ. ಸಾಮಾನ್ಯವಾಗಿ ಹೆಣವನ್ನು ಕುಳ್ಳಿರಿಸಿ ಮಾಡುತ್ತಾರೆ ಎಂಬ ಪ್ರಮುಖ ಅಂಶಗಳನ್ನು ಪರಿಗಣಿಸಲು ಉತ್ತೇಜನಕಾರಿಯಾದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾರೆ.

ವೀರಶೈವ–ಲಿಂಗಾಯತ ಜಂಗಮರ ಸ್ವಹಿತಾಸಕ್ತ ಕೈವಾಡದ ವಿರುದ್ಧದ ದೂರುಗಳನ್ನು ಪರಿಗಣಿಸಿದ ಮಾನ್ಯ ಸರ್ವೋಚ್ಛ ನ್ಯಾಯಲಯವು ಇಲ್ಲಿಯವರೆಗಿನ ನಡೆದ ಮಾನವಶಾಸ್ತ್ರಜ್ಞರ ವರದಿಗಳು, ನ್ಯಾಯಾಲಯದ ತೀರ್ಪುಗಳು, ಸರ್ಕಾರದಿಂದಲೇ ನೇಮಿಸಲಾದ ತನಿಖಾ ಸಂಸ್ಥೆಗಳ ಹಾಗೂ ಆಯೋಗಗಳ ವರದಿಗಳು, ಸುತ್ತೋಲೆಗಳು, ಮನವಿಗಳ ಮುಂತಾದವುಗಳೆಲ್ಲವನ್ನು ಪರಿಶೀಲಿಸಿ Supreme Court of India, ೧೯೯೬ ರಲ್ಲಿ No.431, Civil appeal 4247 of 1995 , diceded on April ೨೩–೧೯೯೬ ತೀರ್ಪಿನ ಅನ್ವಯ 'Veerashaiva Jangamas are not Beda Jangamas' ಎಂದು ಘೋಷಿಸುತ್ತದೆ. ವೀರಶೈವ ಲಿಂಗಾಯತ ಜಂಗಮರು 'ಜಂಗಮ' ಎನ್ನುವ ಹಿಂದುಳಿದ ವರ್ಗದ ಓಬಿಸಿ ಪಟ್ಟಿಯಲ್ಲಿ ಸ್ಥಾನಮಾನವನ್ನು ಹೊಂದಿದ್ದಾರೆ.

ವೀರಶೈವ–ಲಿಂಗಾಯತರಿಂದ ಪೂಜೆಪಡೆಯುವಲ್ಲಿ, ಪಾದೋದಕ ಕರುಣಪ್ರಸಾದ ಸ್ವೀಕರಿಸಿಕೊಂಡು ಗುರುಗಳೆಂದು ಹೇಳಿಕೊಳ್ಳುವ ಇವರು, ೨೦ನೇ ಶತಮಾನದ ಆದಿಭಾಗದಲ್ಲಿ ಸ್ಥಾವರ ಲಿಂಗಪೂಜೆಯ ಹಕ್ಕನ್ನು ಸ್ಥಾಪಿಸುವಲ್ಲಿ ಇವರು ತಾವು ಲಿಂಗೀ ಬ್ರಾಹ್ಮಣರೆಂದು ನ್ಯಾಯಾಲಯಕ್ಕೆ ಪ್ರಮಾಣ ಪತ್ರ ಸಲ್ಲಿಸಿ ಇಂದಿಗೂ ಸ್ಥಾವರ ಲಿಂಗದ ಮತ್ತು ವೇದಾಧಿಕಾರನ್ನು ಗಿಟ್ಟಿಸಿಕೊಂಡಿದ್ದಾರೆ. ಬೇಕಿದ್ದಾಗ, ಹಿಂದೂ ಜಂಗಮ, ವೀರಶೈವ ಜಂಗಮ, ಲಿಂಗೀಬ್ರಾಹ್ಮಣ ಎಂದು ಹೇಳಿಕೊಳ್ಳುವ ಇವರು ಪರಿಶಿಷ್ಟ ಜಾತಿಯ ಮೀಸಲಾತಿ ಪಡೆಯಲು ಸಲುವಾಗಿ ಬೇಡ ಜಂಗಮ, ಬೇಡುವ ಜಂಗಮ ಎಂದು ಹೀಗೆ ಕಾಲಕ್ಕೆ ತಕ್ಕಂತೆ ತಮ್ಮ ಜಾತಿಯನ್ನು ಬದಲಾಯಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಒಂದುಕಡೆ ಲಿಂಗೀ

ಬ್ರಾಹ್ಮಣರು ಇನ್ನೊಂದುಕಡೆ ವೀರಶೈವ ಲಿಂಗಾಯತರು ಬೇರೆ ಬೇರೆ ಅಲ್ಲ ಒಂದೇ ಎಂದು ಹೇಳಿಕೊಳ್ಳುತ್ತಾರೆ. ಮತ್ತೊಂದುಕಡೆ ಪ್ರತ್ಯೇಕ ಮೀಸಲಾತಿ ಬೇಕು ಎಂದು ಹಿಂದುಳಿದ ವರ್ಗಕ್ಕೆ ಸೇರಿಕೊಳ್ಳುತ್ತಾರೆ, ವೀರಶೈವ ಬೇರೆ ಲಿಂಗಾಯತ ಬೇರೆ ಪ್ರತ್ಯೇಕ ಧರ್ಮಕ್ಕಾಗಿ ಹೋರಾಡುತ್ತಿರುವ ಲಿಂಗಾಯತರನ್ನು ನಾವು ಒಂದೇ ಎಂದು ಹೇಳಿಕೊಳ್ಳುತ್ತಾರೆ, ಮತ್ತೊಂದು ಕಡೆ ನಾವು ಪರಿಶಿಷ್ಟರು ಎಂದು ಬೇಡ ಜಂಗಮ ಎಂದು ಮೀಸಲಾತಿಯನ್ನು ಪಡೆಯಲು ಪ್ರಯತ್ನಿಸುತ್ತಿದ್ದಾರೆ ಹೀಗೆ ಸಮಾಜವು ಕಾಲಕ್ಕೆ ತಕ್ಕಂತೆ, ರಾಜಕೀಯ ಪ್ರಭಾವ, ಅಧಿಕಾರ, ಕಾನೂನು ಬಳಸಿಕೊಂಡು ಈ ಅಲೆಮಾರಿ ಬೇಡ ಬುಡ್ಗ ಜಂಗಮರನ್ನು ವಂಚಿಸುತ್ತಿರುವುದು ಕಾಣಬಹುದು. ಇದು ಕೇವಲ ಈ ಸಮುದಾಯಕ್ಕೆ ಮಾತ್ರವಲ್ಲ, ಪರಿಶಿಷ್ಟ ಜಾತಿಯ ಎಲ್ಲಾ ಸಮುದಾಯಗಳ ಮೀಸಲಾತಿಯನ್ನು ವಂಚಿಸುತ್ತಿರುವುದು ಕಾಣಬಹುದು. ಇದರ ಬಗ್ಗೆ ಸರ್ಕಾರಗಳು ಹಾಗೂ ಸಂಘ ಸಂಸ್ಥೆಗಳು ಕೂಲಂಕುಷವಾಗಿ ಅಧ್ಯಯನ ಮಾಡಿ ಯಾರು ಬಡವರಿದ್ದಾರೆ, ಯಾರು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಹಿಂದುಳಿದ್ದಾರೆ, ಯಾರು ಅಸ್ಪೃಶ್ಯರು, ಯಾರು ಶೋಷಿತರು ಎಂದು ತಿಳಿಯಲು ಅವರ ಸಾಂಸ್ಕೃತಿಕ ಚಹರೆಗಳನ್ನು ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ತಿಳಿದು ಸಾಮಾಜಿಕ ನ್ಯಾಯವನ್ನು ಕಲ್ಪಿಸಬೇಕಿದೆ. ಇಲ್ಲವಾದರೆ ಬುಡ್ಗ ಜಂಗಮರಂತ ಅಲೆಮಾರಿ ಸಮುದಾಯಗಳು ಆಧುನೀಕರಣ ಜಗತ್ತಿನಲ್ಲಿ ಇದ್ದು ಜೀವಂತವಾಗಿ ದಹನವಾಗಿಬಿಡುತ್ತಾರೆ.

**ಆಧಾರಗಳು**


೧. Mishra P K, 1970, Study of Nomads, Page-೧೫೧–೧೫೨

೨. ಮೇತ್ರಿ ಕೆ ಎಂ, ಗುರುಲಿಂಗಯ್ಯ ಎಂ, ೨೦೧೭, ಅಲಕ್ಷಿತ ಸಮಾಜಶಾಸ್ತ್ರ, ಪು. ೧೯

೩. ಅದೇ, ಪು. ೨೦

೪. ಹಿರೇಮಠ ಎಸ್ ಎಸ್, ೨೦೦೫, ಸಮಾಜ ಸಂಸ್ಕೃತಿ ಸಂಘರ್ಷ, ಪು. ೧೮

೫. ಪಾಣ್ಯಂ ರಾಮಶೇಷ ಶಾಸ್ತ್ರಿ, ೨೦೦೫, ತೆಲುಗು–ಕನ್ನಡ ನಿಘಂಟು ಶಬ್ದಕೋಶ, ಪು. ೨೨೨

೬. ರಾಧಕೃಷ್ಣಮೂರ್ತಿ ಮಿಕ್ಕಿಲಿನಿ, ೧೯೯೨, 'ತೆಲುಗುವಾರಿ ಜಾನಪದ ಕಲಾರೂಪಾಲು' ಪು. ೩೨೩

೭. Edgar Thurston, 1909, Castes and Tribes of Southern India, Vol- V, Page–೪೫೪

೮. Syed Siraj ul Hassan, 1920, The Cast and Tribes of H E H the Nizam's Dominions, Vol-1, Vol-1, Page–೫೦೭

೯. I bid. .. Page–೫೦೮

೧೦. Shing K S, 1993, People of India, The Scheduled Castes (Revised Edition), Page-೨೦೨–೨೦೭

೧೧. ವೆಂಕಟೇಶಂ ಎನ್ ಆರ್, ೧೯೯೫, ಬುಡಿಗೆ ಜಂಗಾಲು ಭಾಷಾ ಸಾಹಿತ್ಯ ಸಾಂಸ್ಕೃತಿಕಾಂಶಾಲ ಪರಿಶೀಲನ, ಪು.೫

೧೨. ಅ:ಭಾ:೧.

೧೩. ಅಂಬೇಡ್ಕರ್ ಸಂಪುಟ ೪, ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ೨೦೧೫, ಪು. ೪೨೮

೧೪. ರಾಧಾಕೃಷ್ಣಮೂರ್ತಿ ಮಿಕ್ಕಿಲೇನಿ,೧೯೯೨, ತೆಲುಗುವಾರಿ ಜಾನಪದ ಕಲಾರೂಪಾಲು, ಪು. ೩೨೩

೧೫. ಮೈತ್ರಿ ಕೆ ಎಂ, ಎಂ ಗುರುಲಿಂಗಯ್ಯ, ೨೦೧೭, ಪು. ೧೬೯

೧೬. ವಿರುಪಾಕ್ಷಿ ಪೂಜಾರಳ್ಳಿ, ಬೇಟೆ ಮತ್ತು ಬೇಡರು, ೨೦೦೭, ಪು. ೧೨

೧೭. ಅದೇ, ಪು. ೧೦೯

೧೮. ಅದೇ, ಪು. ೧೨

೧೯. ಅದೇ, ಪು. ೧೨೭

೨೦. ದಾಸನೂರು ಕೂಸಣ್ಣ, ೧೯೯೯, ಶೋಷಿತ ಜಂಗಮರ ಮೀಸಲಾತಿ, ಪು. ೧೦೯

೨೧. ವಿರುಪಾಕ್ಷಪ್ಪ ಸುಡುಗಾಡು ಸಿದ್ಧರು, ಕ್ಷೇತ್ರಕಾರ್ಯ ಸಂದರ್ಶನ, ೦೨.೦೮.೨೦೧೯

೨೨. Shingh K S, 1996, People of India,Volume VIII, Communities, Segments, Synonyms, Surnames and Titles, Page-೧೬೮

೨೩. I bid, Page- ೧೦೮೫

೨೪. ಬಸವರಾಜ ಮಲಶೆಟ್ಟಿ, ೨೦೦೮, ಉತ್ತರ ಕರ್ನಾಟಕದ ಬಯಲಾಟಗಳು, ಪು. ೨೬

೨೫. ರಂಗನಾಥ್ ಎಚ್ ಕೆ, ದಿ ಕರ್ನಾಟಕ ಥೀಯೇಟರ್–ಪು. ೩೮

೨೬. ವೆಂಕಟರಾಮ್‌ಗೊ ಕಟ್ಟಿ, ಗ್ಯಾಝೆಟೀಯರು ಮುಂಬಾಯಿ ಇಲಾಖೆಗೆ ಸೇರಿದ್ದ ಕರ್ನಾಟಕ ಭಾಗದ್ದು, ೧೮೯೩, ಪು. ೨೧೪

೨೭. Shingh K S, 1996, People of India, Volume VIII, Communities, Segments, Synonyms, Surnames and Titles, Page–೧೦೮೮

೨೮. ಕಲಬುರ್ಗಿ ಎಂ ಎಂ, ೨೦೦೯, ಮಾರ್ಗ ಸಂಪುಟ ಎರಡು, ಪು. ೨೩೨

೨೯. ಅದೇ, ಪು. ೨೩೩

೩೦. ಅದೇ, ಪು. ೨೩೪

೩೧. ಅದೇ, ಪು. ೨೩೪

೩೨. ಅದೇ, ಪು. ೨೩೫

೩೩. ಅದೇ, ಪು. ೨೩೫-೨೩೮

೩೪. ಶಂಕರಪ್ಪ ಎಸ್ ವಿ, ೨೦೧೦, ಜಂಗಮ, ಪು.೩

೩೫. ವೆಂಕಟೇಶಂ ಎನ್ ಆರ್, ೧೯೯೫, ಬುಡಿಗೆ ಜಂಗಾಲು ಭಾಷಾ ಸಾಹಿತ್ಯ ಸಾಂಸ್ಕೃತಿಕಾಂಶಾಲ ಪರಿಶಿಲನ, ಪು.೨೦

೩೬. ದಾಸನೂರು ಕೂಸಣ್ಣ, ೧೯೯೯, ಶೋಷಿತ ಜಂಗಮರ ಮೀಸಲಾತಿ, ಪು.೨೫

೩೭. ಅದೇ, ಪು.೯೬

೩೮. ಚಿದಾನಂದಮೂರ್ತಿ ಎಂ, ೨೦೧೪, ಹಿಂದೂ: ವೀರಶೈವ(ಲಿಂಗಾಯತ), ಪು.೨೮೩-೨೮೪

೩೯. ಬೇಡ ಜಂಗಮ ಹೆಸರಿನಲ್ಲಿ ವೀರಶೈವರಿಗೆ ಬೇಡ(ಲೇ), ಪ್ರಜಾವಾಣಿ ದಿನಪತ್ರಿಕೆ, ಧಾರವಾಡ, ಮೀಸಲಾತಿ, ೨೯-೦೮-೧೯೯೫

೪೦. ಬೇಡರ ಮೀಸಲಾತಿ, ಜಂಗಮರಿಗೆ ಸಲ್ಲ (ಲೇ), ಪ್ರಜಾವಾಣಿ ದಿನಪತ್ರಿಕೆ, ಬೆಂಗಳೂರು, ೯.೧೦.೧೯೯೫.

೪೧. ಮೀಸಲಾತಿ ಕಬಳಿಕೆ ಅನ್ಯಾಯದ ಪರಮಾವಧಿ (ಲೇ), ಪ್ರಜಾವಾಣಿ ದಿನಪತ್ರಿಕೆ, ಧಾರವಾಡ, ೧೬.೧೧.೧೯೯೫.

೪೨. ಮೀಸಲಾತಿ ಕಳ್ಳತನ; ಸರ್ಕಾರವೇ ಅಪರಾಧಿ(ಲೇ), ಪ್ರಜಾವಾಣಿ ದಿನಪತ್ರಿಕೆ, ಬೆಂಗಳೂರು. ೦೨.೦೨.೨೦೦೯

೪೩. ವೀರಶೈವ ಜಂಗಮರು ಬೇಡ ಜಂಗಮರಲ್ಲ(ಲೇ), ಹೊಸದಿಗಂತ ಪತ್ರಿಕೆ, ಧಾರವಾಡ, ೨೬.೧೦.೨೦೧೧, ಪು.೦೨

೪೪. ಜಾತಿ ಜಂಗಮರಿಗೆ ಸದ್ಬುದ್ಧಿ ಬರಲಿ(ಲೇ), ಪ್ರಜಾವಾಣಿ ದಿನಪತ್ರಿಕೆ, ೦೪.೧೦.೨೦೧೧

೪೫. ದಲಿತರ ಹಕ್ಕು ಕಸಿದಿರುವ ಲಿಂಗಾಯತ ಜಂಗಮರು ಎಂದು ತೋಂಟದ ಶ್ರೀ(ಲೇ), ಕನ್ನಡ ದಿನಪತ್ರಿಕೆ, ಹುಬ್ಬಳ್ಳಿ, ೩೦.೧೦.೨೦೧೧

# ಅಧ್ಯಾಯ ನಾಲ್ಕು

## ಬುಡ್ಗ ಜಂಗಮ್ ಸಮುದಾಯದ ಸಾಮಾಜಿಕ ಜೀವನ

ಪೀಠಿಕೆ

ಕುಟುಂಬ

ಬಂಧುತ್ವ

ಇಂಟಿಪೇರ್ಲು (ಬೆಡಗು, ಕುಲ, ಬಳಿಗಳು)

ವಿವಾಹ

ಲಿಂಗಸಂಬಂಧಿ ವೃತ್ತಿಗಳು

ಸಂಸ್ಕಾರದ ಆಚರಣಾ ವ್ಯವಸ್ಥೆ

ನಾಮಕರಣ ಪದ್ಧತಿ

ಅಲೆಮಾರಿತನ

ಕಾವಡಿ ಜೀವನ

ಮ್ಯಾಳಂ(ಮೇಳ), ಷಂಡ್ರಾ, ಚಿಲ್ಲರ ಭಿಕ್ಷಂ

ವಸತಿ ವ್ಯವಸ್ಥೆ

ವಾಸದ ನೆಲೆ

ಆಹಾರ ಪದ್ಧತಿ

ಉಡುಗೆ – ತೊಡುಗೆ

ಜನಪದ ವೈದ್ಯ ಪದ್ಧತಿ

# ಅಧ್ಯಾಯ ನಾಲ್ಕು

# ಬುಡ್ಗ ಜಂಗಮ್ ಸಮುದಾಯದ ಸಾಮಾಜಿಕ ಜೀವನ

**ಪೀಠಿಕೆ**

ಮಾನವ ಸಂಘ ಜೀವಿ. ಮಾನವನು ಸಮಾಜದಲ್ಲಿ ಬದುಕುವಾಗ ಸಮಾಜದ ರೀತಿ-ನೀತಿಗಳನ್ನು ಅನುಸರಿಸಿಕೊಂಡು ಬದುಕುತ್ತಾನೆ. ಆದಿಮಾನವನು ಪ್ರಾರಂಭದಲ್ಲಿ ಯಾವುದೇ ನೀತಿ ನಿಯಮಗಳಿಲ್ಲದೆ ಅಲೆಮಾರಿಯಾಗಿ ಆಹಾರಕ್ಕಾಗಿ ಹುಡುಕುತ್ತಾ ಬೆಂಕಿಯನ್ನು ಕಂಡುಕೊಂಡು ಬೇಟೆಯಾಡಿದ ಮಾಂಸವನ್ನು ಸುಟ್ಟುತಿನ್ನುವುದನ್ನು ಕಲಿತನು. ಕೆಲವು ಪ್ರಾಣಿಗಳನ್ನು ಪಳಗಿಸಿ ಕೃಷಿಗೆ ಉಪಯೋಗಿಸುವುದನ್ನು ಕಂಡುಕೊಂಡನು. ನಂತರ ಮಾನವ ಸಣ್ಣ ಸಣ್ಣ ಗಣಗಳನ್ನು ಕಟ್ಟಿಕೊಂಡು ಜೀವನ ಸಾಗಿಸುತ್ತಿದ್ದನು. ಈ ಗಣಗಳು ಮುಂದೆ ಒಬ್ಬ ಮುಖಂಡನ ಮುಂದಾಳತ್ವದಲ್ಲಿ ಮತ್ತು ಮಾರ್ಗದರ್ಶನದಲ್ಲಿ ಮುಂದುವರೆದವು. ನಿರ್ದೇಶನಗಳು, ವಿಧಿ-ವಿಧಾನಗಳು, ಆಚರಣೆಗಳು ಒಂದು ಸಮುದಾಯದ ನೀತಿ ನಿಯಮಗಳಾಗಿ, ನಂಬಿಕೆ ಆಚರಣೆಗಳಾಗಿ ವಿಧಿ-ನಿಷೇಧಗಳಾಗಿ ಮಾರ್ಪಟ್ಟವು. ಇವುಗಳನ್ನೆ ಮುಂದೆ ಸಾಮಾಜಿಕವಾಗಿ ಸಮಾಜದ ನಿಬಂಧನೆಗಳ ಅಧೀನದಲ್ಲಿ ಜೀವನ ಮಾಡಬೇಕಾಯಿತು. ಈ ರೀತಿಯ ಸಾಮಾಜಿಕ ಸಂಬಂಧಗಳು, ನೀತಿನಿಯಮಗಳು, ಆಚರಣೆಗಳನ್ನೇ ಸಾಮಾಜಿಕ ವ್ಯವಸ್ಥೆ ಎಂದು ಹೇಳಬಹುದು. ಸಾಮಾಜಿಕ ವ್ಯವಸ್ಥೆಯು ಎಲ್ಲಾ ಸಮುದಾಯಗಳಲ್ಲೂ ನಾವು ಕಾಣಬಹುದಾಗಿದೆ. ಆದರೆ ಎಲ್ಲ ಸಮುದಾಯಗಳಲ್ಲೂ ಒಂದೇ ರೀತಿಯಾದ ಸಾಮಾಜಿಕ ವ್ಯವಸ್ಥೆ ರಚಿತವಾಗಿರುತ್ತದೆ ಎಂದು ನಿಖರವಾಗಿ ಹೇಳುವುದು ಅಸಮಂಜಸವಾಗುತ್ತದೆ. ಏಕೆಂದರೆ ಈ ಸಾಮಾಜಿಕ ವ್ಯವಸ್ಥೆಯು ಆರ್ಥಿಕ ರಚನೆ, ಸಮುದಾಯ ಸಂಬಂಧಗಳ ಸಮಷ್ಠಿತನದ ಭಾಗವಹಿಸುವಿಕೆ, ನಡೆದುಕೊಳ್ಳುವಿಕೆ, ಅಲ್ಲಿನ ಪರಿಸರ, ಕಾಲ, ಸ್ಥಳ ಮತ್ತು ಸಂದರ್ಭಕ್ಕನುಸಾರವಾಗಿ ರಚನೆಗೊಂಡಿರುತ್ತದೆ. ಉದಾಹರಣೆಗೆ ನೆಲೆ ನಿಂತವರ ಸಾಮಾಜಿಕ ವ್ಯವಸ್ಥೆಗೂ, ಅಲೆಮಾರಿ ಸಮುದಾಯಗಳ ಸಾಮಾಜಿಕ ವ್ಯವಸ್ಥೆಗೂ ಭಿನ್ನವಾಗಿರುತ್ತದೆ. ನೆಲೆನಿಂತ ಸಮುದಾಯಗಳ ರಚನೆಯು ಗುರಿ, ಉದ್ದೇಶಗಳು, ಸಂಬಂಧಗಳ ವ್ಯವಸ್ಥೆ, ಸಮುದಾಯದ ಗಾತ್ರ, ಸೀಮಿತ ಪ್ರದೇಶ ಇವುಗಳು ಒಂದು ರೀತಿಯಾದಾದರೆ, ಅಲೆಮಾರಿಗಳದ್ದು ಇದಕ್ಕೆ ತೀರ ಭಿನ್ನವಾಗಿ ಇರುವುದನ್ನು ಕಾಣಬಹುದು. ಪ್ರಸ್ತುತ ಕಾಲಘಟ್ಟದಲ್ಲಿ

ಅಲೆಮಾರಿ ಬುಡ್ಗ ಜಂಗಮರ ಸಾಮಾಜಿಕ ಸ್ಥಾನಮಾನವನ್ನು ನೋಡಿದಾಗ ಅವರು ಇಂದಿಗೂ ಸಮಾಜದಿಂದ ದೂರ ಉಳಿದಿರುವುದು ಕಾಣಬಹುದಾಗಿದೆ. ಆದರೂ ಆಧುನಿಕ ಸಮಾಜದಲ್ಲಿ ತನ್ನದೇಯಾದ ಆಹಾರಕ್ರಮ, ಕೌಟಂಬಿಕ ವ್ಯವಸ್ಥೆ, ಬಂಧುತ್ವ, ವೃತ್ತಿ, ಕುಲ ಪಂಚಾಯಿತಿ, ದೈವಗಳು, ಸಾಹಿತ್ಯ, ಕಲಾಪ್ರದರ್ಶನ ಇತ್ಯಾದಿ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದಾರೆ. ಈ ಸಾಮಾಜಿಕ ವ್ಯವಸ್ಥೆಯು ಸಮುದಾಯದ ಪಾರಂಪರಿಕವೂ ಆಗಿರಬಹುದು ಮತ್ತೆ ಕೆಲವು ಅನ್ಯರ ಪ್ರಭಾವದಿಂದ ಅನುಕರಿಸಲ್ಪಟ್ಟ ಮತ್ತು ಹೇರಲ್ಪಟ್ಟವುಗಳು ಆಗಿರುವ ಸಾಧ್ಯತೆಗಳು ಇವೆ. ಪ್ರತಿ ಸಮುದಾಯಗಳಂತೆ ಬುಡ್ಗ ಜಂಗಮರು ತನ್ನ ಸಂಸ್ಕೃತಿ ಅನನ್ಯತೆಯನ್ನು ಉಳಿಸಿಕೊಳ್ಳಲು ಕಟ್ಟುನಿಟ್ಟಾದ ನೀತಿ ನಿಯಮಗಳನ್ನು ಅನುಸರಿಸುತ್ತಲೇ ಬಂದಿರುವುದು ಕಾಣಬಹುದು.

**ಕುಟುಂಬ**

ಮಾನವರಲ್ಲಿ ಕುಟುಂಬವು ರಕ್ತಸಂಬಂಧ, ಹೊಂದಾಣಿಕೆಯಿಂದ ಕೂಡಿರುವ ಒಂದು ಸಾಮಾಜಿಕ ಸಂಸ್ಥೆ ಎಂದು ಹೇಳಬಹುದು. ಮಗುವಿನ ಪ್ರಾಥಮಿಕ ಶಿಕ್ಷಣ ಪ್ರಾರಂಭವಾಗುವುದು ಕುಟುಂಬದ ಮೂಲಕ ಹಾಗಾಗಿ ಕುಟುಂಬವು ಮಾನವನ ಸಾಮಾಜಿಕ ಜೀವನದ ಬುನಾದಿಯಾಗಿದೆ. ಅನೇಕ ಸಮಾಜಶಾಸ್ತ್ರಜ್ಞರು ಕುಟುಂಬವನ್ನು ಕುರಿತು ಹಲವು ವ್ಯಾಖ್ಯಾನಗಳನ್ನು ನೀಡಿದ್ದಾರೆ. ಸಮ್ನರ್ ಮತ್ತು ಕೆಲ್ಲರ್ ಪ್ರಕಾರ "ರಕ್ತ ಸಂಬಂಧಗಳಿಂದ ಕೂಡಿದ ಮತ್ತು ಕನಿಷ್ಠ ಎರಡು ತಲೆಮಾರುಗಳನ್ನು ಒಳಗೊಂಡಿರುವ ಅತಿಸೂಕ್ಷ್ಮ ಸಾಮಾಜಿಕ ಸಂಘಟನೆಯೇ ಕುಟುಂಬ" ಎಂದು ಕರೆದಿದ್ದಾರೆ. ಈಲಿಯಟ್ ಮತ್ತು ಮೆರಿಲ್ ರವರು "ಕುಟುಂಬವು ಜೈವಿಕ ಘಟಕವಾಗಿದ್ದು ಗಂಡ-ಹೆಂಡತಿ ಮತ್ತು ಮಕ್ಕಳನ್ನು ಒಳಗೊಂಡಿರುತ್ತದೆ" ಎಂದಿದ್ದಾರೆ. ಕುಟುಂಬವು ಒಂದು ಸಾರ್ವತ್ರಿಕ ಸಾಮಾಜಿಕ ಸಂಸ್ಥೆ ಹಾಗೂ ಸಮಾಜದ ಮೂಲಭೂತ ಘಟಕವೆಂದು ಸಮಾಜಶಾಸ್ತ್ರಜ್ಞರು ಉಲ್ಲೇಖಿಸುತ್ತಾರೆ. ಲೈಂಗಿಕತೆಯ ಬಯಕೆಯ ಈಡೇರಿಕೆ, ಸಂತಾನೋತ್ಪತ್ತಿ, ಮಕ್ಕಳ ಲಾಲನೆ-ಪೋಷಣೆ, ಮಕ್ಕಳಿಗೆ ಸಾಮಾಜೀಕರಣ ನೀಡುವುದು, ಶಿಕ್ಷಣ, ಹಾಗೂ ಸಮಾಜದ ಸದಸ್ಯನನ್ನಾಗಿ ಮಾಡುವುದು ಕುಟುಂಬ ಎಂಬ ಸಂಸ್ಥೆಯಿಂದ ಮಾತ್ರ ಸಾಧ್ಯ. ಮಾನವನ ಸಾಮಾಜಿಕ ಜೀವನಕ್ಕೆ ನೆಲೆ ಮತ್ತು ಸ್ಥಿರತೆಯನ್ನು ಕಂಡುಕೊಳ್ಳುವುದೇ ಕುಟುಂಬದಿಂದಲೇ ಸಾಧ್ಯವಾಗುತ್ತದೆ.

ಭಾರತೀಯ ಸಮಾಜದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯನ್ನು ಹೊಂದಿರುವಂತೆ ಬುಡ್ಗ ಜಂಗಮರಲ್ಲಿ ಪಿತೃಪ್ರಧಾನ ವ್ಯವಸ್ಥೆಯನ್ನು ಕಾಣಬಹುದು. ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಕ್ಷೇತ್ರಗಳಲ್ಲಿಯ ಬೇಡಿಕೆಗಳನ್ನು ಕುಟುಂಬದ ಮುಖ್ಯಸ್ಥರು ಜವಾಬ್ದಾರಿಯಿಂದ ನಿರ್ವಹಿಸುತ್ತಾರೆ. ಮೊದಲು ತಂದೆಯು ಕುಟುಂಬದ ಸಂಚಾಲಕನಾಗಿ ಕಾರ್ಯನಿರ್ವಹಿಸುತ್ತಾನೆ. ಆತನ ಮರಣದ ನಂತರ ಆ ಸ್ಥಾನಕ್ಕೆ ಆ ಕುಟುಂಬದ ಹಿರಿಯ ಮಗನು ಯಜಮಾನನ ಸ್ಥಾನವನ್ನು ನಿರ್ವಹಿಸುತ್ತಾನೆ. ಈ ರೀತಿಯ ತಂದೆಯ ನಂತರ ಮಗನು, ಮಗನಿಂದ ಮೊಮ್ಮಗ ಆ ಕುಟುಂಬದ ಜವಾಬ್ದಾರಿಯನ್ನು ಸಾಂಪ್ರದಾಯಿಕವಾಗಿ ತೆಗೆದುಕೊಳ್ಳುವುದನ್ನು ಕಾಣಬಹುದಾಗಿದೆ.

ಒಂದೇ ಮನೆಯಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ತಲೆಮಾರಿನವರು ವಾಸಿಸುವ ಕುಟುಂಬಗಳಿಗೆ ಅವಿಭಕ್ತ ಕುಟುಂಬ ಎನ್ನಲಾಗುತ್ತದೆ. ಹೀಗೆ ಬುಡ್ಗ ಜಂಗಮರಲ್ಲಿ ಅವಿಭಕ್ತ ಕುಟುಂಬ ಹಾಗೂ ವಿಭಕ್ತ ಕುಟುಂಬ ಪದ್ಧತಿಗಳು ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ.

ಪ್ರತಿಯೊಂದು ಕುಟುಂಬದಲ್ಲಿ ಸಾಮಾನ್ಯವಾಗಿ ತಂದೆ, ತಾಯಿ, ಮಕ್ಕಳು ಮತ್ತು ಮೊಮ್ಮಕ್ಕಳು, ಚಿಕ್ಕಮ್ಮ-ಚಿಕ್ಕಪ್ಪ, ದೊಡ್ಡಮ್ಮ-ದೊಡ್ಡಪ್ಪ ಇರುವುದು ಸಾಮಾನ್ಯವಾಗಿರುತ್ತದೆ. ಆದರೆ ಬುಡ್ಗ ಜಂಗಮರಲ್ಲಿ ಕುಟುಂಬದ ಸದಸ್ಯರ ಜೊತೆಯಲ್ಲಿ ಅಳಿಯನೂ ಕೂಡ ಅದೇ ಕುಟುಂಬದ ಒಬ್ಬ ಸದಸ್ಯನಾಗಿರುತ್ತಾನೆ. ಮದುವೆ ಮಾಡಿಕೊಳ್ಳುವ ತನಕ ಆ ಕುಟುಂಬದ ಸದಸ್ಯನಾಗಿದ್ದುಕೊಂಡು ಅವರಂತೆ ಕೆಲಸಕಾರ್ಯಗಳಲ್ಲಿ ನಿರತನಾಗಿರುತ್ತಾನೆ, ಸಂಪತ್ತಿನಲ್ಲಿ ಈತನಿಗೆ ಅಧಿಕಾರವಿರುವುದಿಲ್ಲ. ಕೇವಲ ವಿವಾಹವಾಗಲು ಮತ್ತು ಮುಂದೆ ಸಾಂಸಾರಿಕ ಜೀವನ ನಿರ್ವಹಿಸುವ ತರಬೇತಿಯನ್ನು ಪಡೆಯಲು ಮಾತ್ರ ಬಂದವನಾಗಿರುತ್ತಾನೆ. ಇದನ್ನು ಬುಡ್ಗ ಜಂಗಮರು ಮ್ಯಾರಪೂಟ ಎಂದು ಕರೆಯುತ್ತಾರೆ. ವಿವಾಹದ ನಂತರ ಕೆಲವು ವರ್ಷಗಳ ನಂತರ ಎಂದಿನಂತೆ ತನ್ನ ಹೆಂಡತಿಯ ಜೊತೆಗೂಡಿ ತನ್ನ ಕುಟುಂಬಕ್ಕೆ ಮರುಳುವುದನ್ನು ನೋಡಬಹುದಾಗಿದೆ. ಮಹಿಳೆಗೆ ಕುಟುಂಬದಲ್ಲಿ ನಿರ್ಧಾರ ತೆಗೆದುಕೊಳ್ಳುವ, ತನ್ನ ಜೀವನ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿರುವುದಿಲ್ಲ. ಒಂದು ವೇಳೆ ಕುಟುಂಬದ ನಿರ್ಧಾರಗಳನ್ನು ಗಾಳಿಗೆ ತೂರಿ ಪ್ರೀತಿಸಿ ಅಂತರ್ ಜಾತಿಯ ವಿವಾಹವಾದರೆ ಕುಲದಿಂದ ಬಹಿಷ್ಕರಿಸುವುದಕ್ಕೆ 'ಕುಲಂಪಂಚಾಯಿತಿ' ಅಸ್ತಿತ್ವದಲ್ಲಿರುವುದು ಕಾಣಬಹುದು. ಒಂದುವೇಳೆ ಗಂಡು ಈ ರೀತಿಯ ತಪ್ಪುಗಳನ್ನು ಮಾಡಿದರೆ ಅನ್ಯಜಾತಿಯ ಸ್ತ್ರೀಯನ್ನು ತ್ಯಜಿಸಿ, ಸಮುದಾಯದ ಮುಖ್ಯಸ್ಥರ ಮೂಲಕ ಕುಲವನ್ನು ಶುದ್ಧೀಕರಿಸಿ ತಮ್ಮದೇಯಾದ ಕ್ರಿಯಾವಿಧಿಗಳ ಮೂಲಕ ಸ್ವೀಕಾರಗೊಳ್ಳಲಾಗುತ್ತಿದೆ. ಬುಡ್ಗ ಜಂಗಮರು ಎಲ್ಲಿಯೇ ಹೋಗಲಿ ಸಾಮಾನ್ಯವಾಗಿ ಒಂದೇ ಕಡೆ ನೆಲೆಸುವುದನ್ನು ಕಾಣಬಹುದಾಗಿದೆ. ವನ ಇದ್ದಲ್ಲಿ ಕೋತಿಗಳು ಇರಬೇಕು, ಕುಲ ಇದ್ದಲ್ಲಿ ಜನ ಇರಬೇಕು ಎನ್ನುವಂತೆ (ಅಡವಿ ಉನ್ನಕಾಡ ಕೋತಿ, ಕುಲಂ ಉನ್ನಕಾಡ ಮಾನವಡು ಉಂಡಾಲ) ಎಂದು ಒಂದೇ ಕಡೆ ನೆಲೆಸಿರುತ್ತಾರೆ.

**ಕೋಷ್ಟಕ ೪.೧: ಅಧ್ಯಯನದ ಸಮೀಕ್ಷೆಯ ಪ್ರಕಾರ ಬಳ್ಳಾರಿ ಜಿಲ್ಲೆಯ ತಾಲೂಕುವಾರು ಬುಡ್ಗ ಜಂಗಮರ ನೆಲೆಗಳು, ಕುಟುಂಬ ಮತ್ತು ಲಿಂಗವಾರು ಜನಸಂಖ್ಯೆ ವಿವರ**

| ಕ್ರಸ | ತಾಲೂಕು | ಗ್ರಾಮ ಪಂಚಾಯತಿ ಗಂಡು | ಗ್ರಾಮ ಹೆಣ್ಣು | ಕಾಲೋನಿ/ ನೆಲೆಗಳು ಒಟ್ಟು | ಕುಟುಂಬ | ಜನಸಂಖ್ಯೆ | | |
|---|---|---|---|---|---|---|---|---|
| ೧ | ಬಳ್ಳಾರಿ | ಬಳ್ಳಾರಿ ಮ.ನ.ಪಾ. | | ರಾಜೇಶ್ವರಿ ನಗರ ವಾರ್ಡ್, ಪಾತರ ಬೂದಾಳು, ಹನುಮಾನ್ ನಗರ. | ೧ | ೪ | ೧ | ೫ |
| ೨ | | ಬಳ್ಳಾರಿ ಮ.ನ.ಪಾ. | | ಕಾಕರ್ಲತೋಟ, ೫ನೇ | ೬೨ | ೧೩೫ | ೧೨೩ | ೨೫೮ |
| ೩ | | ಬಳ್ಳಾರಿ ಮ.ನ.ಪಾ. | | ಗುಗ್ಗರ ಹಟ್ಟಿ | ೧೨ | ೨೩ | ೨೪ | ೪೭ |
| ೪ | | ಬಳ್ಳಾರಿ ಮ.ನ.ಪಾ. | ಶ್ರೀಧರಗಡ್ಡೆ | ಗುಡಾರ ನಗರ | ೮೮ | ೧೮೩ | ೧೭೦ | ೩೫೩ |
| ೫ | | ಕುಡುತಿನಿ ಪಪಂ | ಕುಡುತಿನಿ | ಬುಡ್ಗಜಂಗಮರ ಕಾಲೋನಿ | ೬೬ | ೧೬೯ | ೧೪೪ | ೩೧೩ |
| ೬ | | ಮೋಕ ಗ್ರಾಪಂ | ಹೊಸಮೋಕ | ಹೊಸಮೋಕ, ೩ನೇ ವಾರ್ಡ್ | ೧೫ | ೪೪ | ೩೩ | ೭೭ |
| ೭ | ಸಿರಗುಪ್ಪ | ಹಳೇಕೋಟೆ-೬೪ | | ಬುಡ್ಗಜಂಗಮರ ಕಾಲೋನಿ, ೪ನೇ ವಾರ್ಡ್, | ೫೦ | ೧೧೭ | ೧೦೯ | ೨೨೬ |
| ೮ | | ಹಳೇಕೋಟೆ-೬೪ | ಹಳೇಕೋಟೆ-೬೪ | ಸಿದ್ದಪ್ಪನಗರ, ಬುಡ್ಗಜಂಗಮರ ಕಾಲೋನಿ, ೬ನೇ ವಾರ್ಡ್, | ೧೬೦ | ೨೫೬ | ೨೨೭ | ೪೮೩ |
| ೯ | | ಬಲಕುಂದಿ | ಬಲಕುಂದಿ | ಬಲಕುಂದಿ | ೩೮ | ೭೩ | ೬೮ | ೧೪೧ |
| ೧೦ | ಕುರುಗೋಡು | ಕುರುಗೋಡು ಪಪಂ | ಕುರುಗೋಡು | ಹರಿಕೃಪ ಕಾಲೋನಿ ಮತ್ತು ಸದಾಶಿವ ಕಾಲೋನಿ | ೩೩ | ೧೦೦ | ೭೯ | ೧೭೯ |

| | | | | | | | | |
|---|---|---|---|---|---|---|---|---|
| ೧೧ | ಸಂಡೂರು | ಸಂಡೂರು ಪಪಂ | | ಹಳೇ ಬಸ್ ನಿಲ್ದಾಣದ ಹತ್ತೀರ, ಬುಡ್ಗಜಂಗಮರ ಕಾಲೋನಿ | ೧೪ | ೩೫ | ೨೮ | ೬೩ |
| ೧೨ | | ದರೋಜಿ | ಹಳೇದರೋಜಿ | ಬುಡ್ಗಜಂಗಮರ ಕಲಾಗ್ರಾಮ | ೩೪ | ೬೮ | ೭೦ | ೧೩೮ |
| ೧೩ | ಕಂಪ್ಲಿ | ಕಂಪ್ಲಿ | | ಎಂಡಿ ಕ್ಯಾಂಪ್, ೨೨ನೇ ವಾರ್ಡ್ | ೧೨ | ೨೪ | ೩೨ | ೫೬ |
| ೧೪ | | ದೇವಲಾಪುರ ಗ್ರಾಪಂ | ಸೋಮಲಾಪುರ | ಬುಡ್ಗಜಂಗಮರ ಕಾಲೋನಿ | ೨೮ | ೫೯ | ೫೫ | ೧೧೪ |
| ೧೫ | ಹೊಸಪೇಟೆ | ಹೊಸಪೇಟೆ ನಗರಸಭೆ | | ಅರವಿಂದ ನಗರ, ಬುಡ್ಗಜಂಗಮರ ಕಾಲೋನಿ | ೪೧ | ೯೪ | ೮೬ | ೧೮೦ |
| ೧೬ | | ಬುಕ್ಕಸಾಗರ ಗ್ರಾಪಂ | ೭೬ ವೆಂಕಟಾಪುರ ಕ್ಯಾಂಪ್, | ಬುಡ್ಗಜಂಗಮರ ಕಾಲೋನಿ, ೨ನೇ ವಾರ್ಡ್ | ೩೧ | ೫೨ | ೫೨ | ೧೦೪ |
| ೧೭ | | ಕಮಲಾಪುರ | ಕಡ್ಡಿರಾಂಪುರ | | ೨ | ೪ | ೨ | ೦೬ |
| ೧೮ | | ಮರಿಯಮ್ಮನಹಳ್ಳಿ ಪ.ಪಂ | | ಕಟ್ಟಿಗೆ ಶಾಮೀಲು, ದರ್ಗಾಕಟ್ಟೆ ಹತ್ತಿರ | ೦೫ | ೬ | ೧೧ | ೧೭ |
| ೧೯ | ಹಗರಿಬೊಮ್ಮನಹಳ್ಳಿ | ಹಗರಿಬೊಮ್ಮನಹಳ್ಳಿ ಪಪಂ | | ಸಿದ್ದೇಶ್ವರ ನಗರ, ಬುಡ್ಗಜಂಗಮರ ಕಾಲೋನಿ | ೧೦೨ | ೨೩೫ | ೨೪೫ | ೪೮೦ |
| ೨೦ | | ಹಗರಿ ಬೊಮ್ಮನಹಳ್ಳಿ ಪಪಂ | ಹಂಪಾ ಪಟ್ಟಣ | ಶ್ರೀಪಾಂಡುರಂಗ ದೇವಸ್ಥಾನದ ಹತ್ತಿರ, ೩ನೇ ವಾರ್ಡ್, | ೦೪ | ೧೦ | ೯ | ೧೯ |
| ೨೧ | ಹೂವಿನ ಹಡಗಲಿ | ಹೂವಿನ ಹಡಗಲಿ ಪಪಂ | | ರಾಜೀವ್ ನಗರ, ೧೮ನೇ ವಾರ್ಡ್, | ೫ | ೧೪ | ೧೦ | ೨೪ |
| ೨೨ | ಕೂಡ್ಲಿಗಿ | ಕೂಡ್ಲಿಗಿ ಪಪಂ | | ಗುಡೇಕೋಟೆ ರಸ್ತೆ, ೨ನೇ ವಾರ್ಡ್, | ೨೫ | ೩೧ | ೨೯ | ೬೦ |
| ೨೩ | ಹರಪನಹಳ್ಳಿ | ಹರಪನಹಳ್ಳಿ | | ಆಶ್ರಯ ಕ್ಯಾಂಪ್ | ೨೬ | ೬೧ | ೬೬ | ೧೨೭ |
| | ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಒಟ್ಟು ಜನಸಂಖ್ಯೆ | | | | ೮೫೪ | ೧೭೯೭ | ೧೬೭೩ | ೩೪೭೦ |

ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ, ಕುರುಗೋಡು, ಸಿರುಗುಪ್ಪ, ಸಂಡೂರು, ಕಂಪ್ಲಿ, ಹೊಸಪೇಟೆ, ಹಗರಿಬೊಮ್ಮನಹಳ್ಳಿ, ಹೂವಿನ ಹಡಗಲಿ, ಕೂಡ್ಲಿಗಿ, ಕೊಟ್ಟೂರು, ಹರಪನಹಳ್ಳಿ ಒಟ್ಟು ೧೧ ತಾಲೂಕುಗಳು ಇದ್ದು, ಕೊಟ್ಟೂರು ತಾಲೂಕಿನಲ್ಲಿ ಬುಡ್ಗಜಂಗಮರು ನೆಲೆಸಿರುವುದು ಕಂಡುಬರುವುದಿಲ್ಲ, ಉಳಿದ ೧೦ ತಾಲೂಕುಗಳಲ್ಲಿ ಬುಡ್ಗ ಜಂಗಮರು ನೆಲೆಸಿರುವುದು ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯ ೧೦ ತಾಲೂಕುಗಳಲ್ಲಿ ಬುಡ್ಗಜಂಗಮ ಸಮುದಾಯದ ನೆಲೆಗಳಿಗೆ ಭೇಟಿನೀಡಿ ಸಮಗ್ರವಾಗಿ ಸಮೀಕ್ಷೆ ಮಾಡಲಾಯಿತು. ಬಳ್ಳಾರಿ ತಾಲೂಕಿನ ಅಗ್ನಿಶಾಮಕದಳದ ಹತ್ತಿರ ರಾಜೇಶ್ವರಿ ನಗರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬುಡ್ಗ ಜಂಗಮರು ನೆಲೆಸಿದ್ದರು, ಶ್ರೀಧರಗಡ್ಡೆ ಗ್ರಾಮಪಂಚಾಯಿತಿ ಹತ್ತೀರ ಅಲೆಮಾರಿಗಳಿಗಾಗಿ ಪ್ರತ್ಯೇಕವಾಗಿ ಸರ್ಕಾರದಿಂದ ನವಗ್ರಾಮ ಯೋಜನೆಯಲ್ಲಿ ಮನೆಗಳು ನಿರ್ಮಿಸಿದರಿಂದ ಕೆಲವು ಜನರು ರಾಜೇಶ್ವರಿ ನಗರದಿಂದ ಗುಡಾರನಗರದಲ್ಲಿ ನೆಲೆಸಿರುವುದು ಕಾಣಬಹುದು. ಇನ್ನೂ ಕೆಲವರು ಕಾಕರ್ಲತೋಟದ ೫ನೇ ವಾರ್ಡ್‌ನಲ್ಲಿ ನೆಲೆಸಿದ್ದಾರೆ. ಪ್ರಸ್ತುತ ರಾಜೇಶ್ವರಿ ನಗರದಲ್ಲಿ ಒಂದೇ ಕುಟುಂಬ ವಾಸವಾಗಿದೆ. ಬಳ್ಳಾರಿಯ ಕೊಳಚೆ ಪ್ರದೇಶದ ಕಾಕರ್ಲತೋಟದ ೫ನೇ ವಾರ್ಡ್‌ನಲ್ಲಿ ೬೨ ಕುಟುಂಬಗಳು, ಗುಗ್ಗರಹಟ್ಟಿಯಲ್ಲಿ ೧೨ ಕುಟುಂಬಗಳು, ಗುಡಾರ ನಗರದಲ್ಲಿ ೮೮ ಕುಟುಂಬಗಳು, ಕುಡತಿನಿ ಪಟ್ಟಣ ಪಂಚಾಯಿತಿ ಬುಡ್ಗ ಜಂಗಮ್ ಕಾಲೋನಿಯಲ್ಲಿ ೬೬ ಕುಟುಂಬಗಳು, ಹೊಸಮೋಕ ಗ್ರಾಮದ ೩ನೇ ವಾರ್ಡ್‌ನಲ್ಲಿ ೧೩ ಕುಟುಂಬಗಳು ಕಂಡುಬರುತ್ತವೆ. ಸಿರುಗುಪ್ಪ ತಾಲೂಕಿನ ಹಳೇಕೋಟೆ-೬೪ ಗ್ರಾಮ ಪಂಚಾಯಿತಿಯಲ್ಲಿ ಬುಡ್ಗ ಜಂಗಮರ ಕಾಲೋನಿ, ೪ನೇ ವಾರ್ಡ್‌ನಲ್ಲಿ ೫೦ ಕುಟುಂಬಗಳು, ಸಿದ್ದಪ್ಪನಗರದ ಬುಡ್ಗ ಜಂಗಮರ ಕಾಲೋನಿ, ೬ನೇ ವಾರ್ಡ್‌ನಲ್ಲಿ ೧೬೦ ಕುಟುಂಬಗಳು, ಬಲುಕುಂದಿ ಗ್ರಾಮದಲ್ಲಿ ೩೮ ಕುಟುಂಬಗಳು ಕಂಡುಬರುತ್ತವೆ. ಸಿರುಗುಪ್ಪ ತಾಲೂಕಿನಲ್ಲಿ ಹಿಂದೆ ಎಚ್ ಹೊಸಳ್ಳಿ ಗ್ರಾಮದಲ್ಲಿ ನೆಲೆಸಿದ್ದರು. ನಂತರ ಅಲ್ಲಿಂದ ಬಳ್ಳಾರಿ ನಗರ ಪ್ರದೇಶದ ಹತ್ತಿರದಲ್ಲಿ ನೆಲೆಸಿರುವುದು ಕಾಣಬಹುದು. ಕುರುಗೋಡು ತಾಲೂಕಿನ ಹರಿಕೃಪ ಕಾಲೋನಿ ಮತ್ತು ಸದಾಶಿವ ಕಾಲೋನಿಯಲ್ಲಿ ೩೩ ಕುಟುಂಬಗಳು ನೆಲೆಸಿದ್ದಾರೆ. ಇಲ್ಲಿ ನೆಲೆಸಿರುವ ಕೆಲವು ಜನರು ಹಿಂದೆ ಶಿರಿಗೇರಿ ಕ್ರಾಸ್‌ನ ಮಾಳಾಪುರ ಗ್ರಾಮದಲ್ಲಿ ನೆಲಸಿದ್ದರು. ಇತ್ತೀಚಿನ ಕೆಲವು ವರ್ಷಗಳಲ್ಲಿ ತಮ್ಮ ವ್ಯಾಪಾರದ ಅನೂಕೂಲಕ್ಕಾಗಿ ಕುರುಗೋಡು ತಾಲೂಕು ಪ್ರದೇಶದಲ್ಲಿ ನೆಲೆಸಿರುವುದು ಕಂಡುಬಂದಿದೆ. ಸಂಡೂರು ತಾಲೂಕಿನಲ್ಲಿ ಸಂಡೂರು ಹಳೇ ಬಸ್ ನಿಲ್ದಾಣದ ಹತ್ತಿರ, ಬುಡ್ಗ ಜಂಗಮರ ಕಾಲೋನಿಯಲ್ಲಿ ೧೪ ಕುಟುಂಬಗಳು, ದರೋಜಿ ಗ್ರಾಮಪಂಚಾಯಿತಿಯ ಹಳೇ ದರೋಜಿ ಬುಡ್ಗ ಜಂಗಮ ಕಲಾಗ್ರಾಮದಲ್ಲಿ ೩೪ ಕುಟುಂಬಗಳು ನೆಲೆಸಿರುವುದು ಕಂಡುಬರುತ್ತದೆ. ಕಂಪ್ಲಿ ತಾಲೂಕಿನಲ್ಲಿ ಎಂಡಿ ಕ್ಯಾಂಪ್‌ನ ೨೨ನೇ ವಾರ್ಡ್‌ನಲ್ಲಿ ೧೩ ಕಟುಂಬಗಳು, ದೇವಲಾಪುರ ಪಂಚಾಯಿತಿಯ ಸೋಮಲಾಪುರ ಗ್ರಾಮದಲ್ಲಿ ೨೮ ಕುಟುಂಬಗಳು ನೆಲೆಸಿರುವುದು ಕಂಡುಬರುತ್ತದೆ. ಹೊಸಪೇಟೆ ತಾಲೂಕಿನಲ್ಲಿ ಅರವಿಂದ ನಗರದ ಬುಡ್ಗ ಜಂಗಮ್ ಕಾಲೋನಿಯಲ್ಲಿ ೪೧ ಕುಟುಂಬಗಳು, ಬುಕ್ಕಸಾಗರ ಗ್ರಾಮ ಪಂಚಾಯಿತಿಯ ೭೬ ವೆಂಕಟಾಪುರ ಕ್ಯಾಂಪ್‌ನಲ್ಲಿ ೩೧ ಕುಟುಂಬಗಳು, ಕಡ್ಡಿರಾಂಪುರದಲ್ಲಿ ೨ ಕುಟುಂಬಗಳು, ಮರಿಯಮ್ಮನಹಳ್ಳಿಯಲ್ಲಿ ೫ ಕುಟುಂಬಗಳು ನೆಲೆಸಿರುವುದು

ಕಾಣಬಹುದು. ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಸಿದ್ದೇಶ್ವರ ನಗರದ ಬುಡ್ಗಜಂಗಮ್ ಕಾಲೋನಿಯಲ್ಲಿ ೧೦೧ ಕುಟುಂಬಗಳು, ಹಂಪಾಪಟ್ಟಣ ಗ್ರಾಮದ ಶ್ರೀಪಾಂಡುರಂಗ ದೇವಸ್ಥಾನದ ಹತ್ತಿರ, ೩ನೇ ವಾರ್ಡ್‌ನಲ್ಲಿ ೪ ಕುಟುಂಬಗಳು, ಹೂವಿನ ಹಡಗಲಿ ತಾಲೂಕಿನಲ್ಲಿ ರಾಜೀವ್ ನಗರ ೧೮ನೇ ವಾರ್ಡ್‌ನಲ್ಲಿ ೫ ಕುಟುಂಬಗಳು, ಕೂಡ್ಲಿಗಿ ತಾಲೂಕಿನಲ್ಲಿ ಗುಡೇಕೋಟೆ ರಸ್ತೆ ೨ನೇ ವಾರ್ಡ್‌ನಲ್ಲಿ ೨೫ ಕುಟುಂಬಗಳು, ಹರಪನಹಳ್ಳಿ ತಾಲೂಕಿನಲ್ಲಿ ಆಶ್ರಯಕ್ಯಾಂಪ್ ನಲ್ಲಿ ೨೬ ಕುಟುಂಬಗಳು ನೆಲೆರುವುದು ಕಂಡುಬರುತ್ತದೆ. ಸಿರುಗುಪ್ಪ ತಾಲೂಕಿನ ಸಿದ್ಧಪ್ಪನಗರದಲ್ಲಿ ೧೬೦ ಕುಟುಂಬಗಳು ಹೊಂದಿ ಅಧಿಕಸ್ಥಾನದಲ್ಲಿ ಕಂಡುಬರುತ್ತಾರೆ. ನಂತರ ಬಳ್ಳಾರಿ ಜಿಲ್ಲೆಯ ಗುಡಾರನಗರ ೮೮ ಕುಟುಂಬಗಳು, ಕಾಕರ್ಲತೋಟದಲ್ಲಿ ೬೨ ಕುಟುಂಬಗಳು, ಕುಡತಿನಿಯಲ್ಲಿ ೬೬ ಕುಟುಂಬಗಳು, ಹಗರಿಬೊಮ್ಮನಹಳ್ಳಿಯಲ್ಲಿ ೧೦೨ ಕುಟುಂಬಗಳು ಹೊಂದಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಅಧ್ಯಯನದ ಸಮೀಕ್ಷೆಯ ಪ್ರಕಾರ ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಒಟ್ಟು ಕುಟುಂಬಗಳು ೮೫೪ ಮತ್ತು ಒಟ್ಟು ೩೪೭೦ ಜನಸಂಖ್ಯೆ ಹೊಂದಿದೆ. ಈ ಹಿಂದೆ ಮೊದಲು ಚೋರನೂರು ಬೊಮ್ಮಗಟ್ಟ, ಉಪ್ಪಾರಳ್ಳಿ, ಮಾಳಾಪುರ, ಎಚ್ ಹೊಸ್ಸಳ್ಳಿಯಲ್ಲಿ ಕೆಲವು ವರ್ಷಗಳ ಕಾಲ ನೆಲೆಸಿದರು ಎಂದು ಹೇಳುತ್ತಾರೆ. ಆನಂತರ ಇವರು ಇಂದಿನ ಆಧುನಿಕ ಕಸುಬುಗಳನ್ನು ಅವಲಂಬಿಸಿದರಿಂದ ತಮ್ಮ ಅನುಕೂಲಕ್ಕಾಗಿ ವ್ಯಾಪಾರ ವಹಿವಾಟು ನಡೆಸಲು ಗ್ರಾಮೀಣ ಪ್ರದೇಶದಿಂದ ನಗರಪ್ರದೇಶಗಳಿಗೆ ಸ್ಥಳಾಂತರವಾಗಿದ್ದಾರೆ.

**ಕೋಷ್ಟಕ ೪.೨: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಒಟ್ಟು ಕುಟುಂಬಗಳು ಮತ್ತು ಲಿಂಗವಾರು ಜನಸಂಖ್ಯೆ ವಿವರ**

| ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಒಟ್ಟು ಜನಸಂಖ್ಯೆ | | |
|---|---|---|
| ಒಟ್ಟು ಕುಟುಂಬಗಳು-೮೫೪ | | |
| **ಲಿಂಗ** | **ಜನಸಂಖ್ಯೆ** | **ಶೇಕಡಾ** |
| ಪುರುಷರು | ೧೭೯೭ | ೫೧.೭ |
| ಮಹಿಳೆಯರು | ೧೬೭೩ | ೪೮.೩ |
| **ಒಟ್ಟು ಜನಸಂಖ್ಯೆ** | ೩೪೭೦ | ೧೦೦ |

ಅಧ್ಯಾಯ ಒಂದರಲ್ಲಿ ಉಲ್ಲೇಖಿಸಿದಂತೆ ಬುಡ್ಗ ಜಂಗಮ್ ಸಮುದಾಯ ಕುರಿತು ಬಳ್ಳಾರಿ ಜಿಲ್ಲೆಯನ್ನು ವ್ಯಾಪ್ತಿಯನ್ನಾಗಿ ಮಾಡಿಕೊಂಡು ಸಮೀಕ್ಷೆ ಮಾಡಲಾಗಿದೆ. ಒಟ್ಟು ಸಮೀಕ್ಷೆಯಲ್ಲಿ ಬಳ್ಳಾರಿ ಜಿಲ್ಲೆಯ ಒಟ್ಟು ೮೫೪ ಕುಟುಂಬಗಳು ಕಂಡು ಬಂದಿದ್ದಾರೆ. ಇದರಲ್ಲಿ ೧೭೯೨ ಪುರುಷರು ಹಾಗೂ ೧೬೭೩ ಮಹಿಳೆಯರು ಒಟ್ಟು ೩೪೭೦ ಜನಸಂಖ್ಯೆ ಇರುವುದು ಕಂಡು ಬರುತ್ತದೆ.

## ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಯೋಮಾನದ ಪ್ರಮಾಣ

**ಕೋಷ್ಟಕ ೪.೩: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಯೋಮಾನದ ಪ್ರಮಾಣ.**

| ವಯಸ್ಸು | ಪುರುಷರ ಸಂಖ್ಯೆ | ಶೇಕಡಾ | ಮಹಿಳೆಯರ ಸಂಖ್ಯೆ | ಶೇಕಡಾ | ಒಟ್ಟು ಶೇಕಡಾ |
|---|---|---|---|---|---|
| ೦-೫ | ೩೭೩ | ೧೦.೭ | ೩೩೫ | ೯.೬ | ೨೦.೩ |
| ೬-೧೭ | ೫೨೩ | ೧೫.೧ | ೩೯೫ | ೧೧.೪ | ೨೬.೫ |
| ೧೮-೪೦ | ೬೬೭ | ೧೯.೨ | ೬೧೪ | ೧೭.೭ | ೩೬.೯ |
| ೪೧-೬೦ | ೧೬೦ | ೪.೬ | ೧೬೨ | ೪.೭ | ೯.೩ |
| ೬೦+ | ೧೦೩ | ೩.೦ | ೧೩೮ | ೩.೯ | ೬.೯ |
| **ಒಟ್ಟು** | **೧,೮೨೬** | **೫೨.೬** | **೧,೬೪೪** | **೪೭.೪** | **೧೦೦** |

ಈ ಮೇಲಿನ ಕೋಷ್ಟಕವು ಬುಡ್ಗ ಜಂಗಮ್ ಸಮುದಾಯದ ವಯೋಮಾನದ ಕುರಿತು ವಿವರಿಸಲಾಗಿದೆ. ಬುಡ್ಗ ಜಂಗಮ್ ಸಮುದಾಯದ ಅಧ್ಯಯನದ ಸಮೀಕ್ಷೆಯಲ್ಲಿ ಒಟ್ಟು ೮೫೪ ಕುಟುಂಬಗಳು ಮತ್ತು ೩೪೭೦ ಜನಸಂಖ್ಯೆಯಲ್ಲಿ ಇವರ ಜನಸಂಖ್ಯೆಯನ್ನು ವರ್ಗೀಕರಿಸಿದಾಗ ೦-೫ ವಯಸ್ಸಿನವರು ಶೇಕಡಾ ೨೦.೩ ಜನರು, ೬-೧೭ ವಯಸ್ಸಿನಲ್ಲಿ ಶೇಕಡಾ ೨೬.೫ ಜನರು, ೧೮-೪೦ ವಯಸ್ಸಿನಲ್ಲಿ ೩೬.೯ ಜನರು, ೪೧-೬೦ ವಯಸ್ಸಿನಲ್ಲಿ ಶೆಕಡಾ ೯.೩ ಜನರು, ೬೦ಕ್ಕಿಂತ ಹೆಚ್ಚಿನ ವಯಸ್ಸಿನವರು ಶೇಕಡಾ ೬.೯ ಜನರಿರುವುದು ಈ ಸಮೀಕ್ಷೆಯ ಅನ್ವಯ ತಿಳಿಯಲಾಗಿದೆ. ಒಟ್ಟು ಜನಸಂಖ್ಯೆಯಲ್ಲಿ ೧೮-೪೦ರ ವಯಸ್ಸಿನವರು ಅಧಿಕವಾಗಿದ್ದು, ಅಧಿಕ ಸಂಖ್ಯೆಯಲ್ಲಿ ದುಡಿಯುವ ವಯಸ್ಸಿನವರಿರುವುದು ಕಾಣಬಹುದು. ಯಾವುದೇ ಮೂಲ ಆಸ್ತಿ ಅಂತಸ್ತು ಹೊಂದಿರದ ಇವರು ಆ ದಿನವೇ ದುಡಿದು ಅಂದೇ ತಿನ್ನು ಬದುಕುವವರಾಗಿದ್ದಾರೆ. ೬೦ ವರ್ಷಕ್ಕೂ ಮೇಲ್ಪಟ್ಟವರ ಜನಸಂಖ್ಯೆ ಶೇಕಡಾ ೬.೯ ಇದ್ದು ಕಡಿಮೆ ಸಂಖ್ಯೆಯಲ್ಲಿದ್ದಾರೆ. ಇದಗಿಂದ ಇವರ ಆಯುಷ್ಯ ಪ್ರವಾಣ ೬೦-೬೫ ಎಂದು ಹೇಳಬಹುದು. ಈ ಸವುದಾಯುವು ವುುಖ್ಯವಾಗಿ ಮಾಂಸಹಾರಿಗಳಾಗಿದ್ದು ಬೇಟೆಯನ್ನು ಅವಲಂಬಿಸಿ ಜೀವನ ಸಾಗಿಸುತ್ತಿದ್ದರು. ಇವರ ಪೂವರ್ಜರು ದಿನನಿತ್ಯ ಕಾಡು ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ದಿನನಿತ್ಯದ ಆಹಾರವನ್ನಾಗಿಸಿಕೊಂಡಿದ್ದರು. ಇದರಿಂದ ಸದೃಢ ದೈಹಿಕ ಮತ್ತು ಮಾನಸಿಕ ಆರೋಗ್ಯ ಕಾಪಾಡಿಕೊಳ್ಳುತ್ತಿದ್ದರು. ಸ್ತ್ರೀಯರು ಶ್ರಮಜೀವಿಗಳಾಗಿ ಪುರುಷನಷ್ಟೇ ಸಮನಾದ ಶ್ರಮವನ್ನು ಮಾಡುತ್ತಿದ್ದರು. ಇದರಿಂದಾಗಿ ಪಾರಂಪರಿಕ ಕೌಶಲ್ಯಗಳೊಂದಿಗೆ ಹೆರಿಗೆ ಬಾಣಂತಿತನ ಇತ್ಯಾದಿ ಸಂದರ್ಭದಲ್ಲಿ ತಮಗಾದ ಅನಾರೋಗ್ಯವನ್ನು ಬಗೆಹರಿಸಿಕೊಳ್ಳುತ್ತಿದ್ದರು. ಆದರೆ ಇಂದಿನ ಈ ಸಮುದಾಯದ ತಲೆಮಾರುಗಳು, ಬೇಟೆಗಾರಿಕೆ

ನಿಷೇಧದಿಂದ ಒಂದೇ ಬಗೆಯ ಮಂಸಾಹಾರ ಅಪೌಷ್ಟಿಕತೆಯಿಂದ ಕೂಡಿದ ಆಹಾರಗಳಿಂದ ಮತ್ತು ಆಧುನಿಕ ಸಾರಾಯಿಗಳ ಅತಿಯಾದ ಬಳಕೆ, ಎಲೆ ಅಡಿಕೆ, ಗುಟುಕಾ, ಧೂಮಪಾನ ಚಟಗಳಿಂದ ಶ್ವಾಸಕೋಶ ಸಂಬಂಧಿ ರೋಗಗಳಿಗೆ ಹೀಡಾಗಿ ಸಾವನ್ನಪುತ್ತಿರುವುದು ಕಂಡುಬರುತ್ತಿದೆ. ಉದಾ: ಯಡವಲಿ ಅಂಜಿನಪ್ಪ ಸೋಮಲಾಪುರ, ಕುಲ ನ್ಯಾಯಧೀಶ ಅಶ್ವ ಜಮನ್ನ ಗಂಗಾವತಿ, ಮಹಾಂತುಗಾರ ಹೊಸಳ್ಳಿ ಯಡವಲಿ ಚಿನ್ನಪ್ಪ, ಹಗಲುವೇಷ ಕಲಾವಿದ ರುದ್ರಾಕ್ಷಲ ರಾಮಣ್ಣ ವೆಂಕಟಾಪುರ ಇವರೆಲ್ಲರು ಸುಮಾರು ೬೦ ರಿಂದ ೬೫ ವರ್ಷದೊಳಗೆ ಸಾವನ್ನಪ್ಪಿದ್ದಾರೆ.

**ಬಂಧುತ್ವ**

ಆದಿಮಾನವ ಸಮುದಾಯದ ಬಗೆಗೆ ಹೊಂದಿದ ಮನೋಧರ್ಮವನ್ನು ಸಂಸ್ಕೃತಿಯ ಇತಿಹಾಸ ಪೂರ್ವ ಘಟ್ಟದಲ್ಲಿ ಮಾನವ "ಕಿರಾತವ್ಯಸ್ಥೆ, ಅನಾಗಾರಿಕಾವಸ್ಥೆ ಹಾಗೂ ನಾಗರಿಕಾವ್ಯಸ್ಥೆ ಎಂಬ ಮೂರು ಪ್ರಧಾನ ಕಾಲಘಟ್ಟದಲ್ಲಿ ಮೊದಲ ಎರಡು ಕಾಲಘಟ್ಟದಲ್ಲಿ ಕೆಳ, ಮಧ್ಯಮ ಹಾಗೂ ಮೇಲಿನ ಮಜಲುಗಳೆಂದು ವಿಭಜಿಸುತ್ತಾರೆ. ಏಕೆಂದರೆ ಈ ಭೂಮಿಯ ಮೇಲೆ ಮಾನವ ತನ್ನ ಅಸ್ಥಿತ್ವವನ್ನು ನಿಸರ್ಗದ ಮೇಲೆ ಅಧಿಪತ್ಯವನ್ನು ಸಾಧಿಸುತ್ತಾನೆ. ಮಾನವ, ಪ್ರಾಣಿಗಳಷ್ಟೇ ಆಹಾರಕ್ಕಾಗಿ ನಿಸರ್ಗವನ್ನು ಅವಲಂಬಿಸಿಕೊಂಡು ಜೀವಿಸಿದ ಕಾಲಘಟ್ಟವೆಂದು ಮಾರ್ಗನ್ ವಿವರಿಸುತ್ತಾರೆ."[೧]

ಲೈಂಗಿಕತೆಯ ಪ್ರಾರಂಭದ ಕಾಲಘಟ್ಟದಲ್ಲಿ ತಂದೆ ತಾಯಿಯರು ಮಕ್ಕಳು ಪರಸ್ಪರ ಲೈಂಗಿಕತೆ ಸಂಬಂಧ ಹೊಂದಿದ್ದರು, ನಂತರ ಸೋದರ ಸೋದರಿಯರು ಲೈಂಗಿಕ ಸಂಬಂಧ ಹೊಂದಿದ್ದರು, ನಂತರ ಸ್ವಂತ ಸೋದರ ಸೋದರಿಯನ್ನು ಲೈಂಗಿಕ ಸಂಬಂಧಗಳಿಗೆ ನಿರ್ಬಂಧ ನಿಯಮ ಮಾಡಲಾಯಿತು. ಅಲ್ಲಿಂದ ಕ್ರಮೇಣವಾಗಿ ಸರ್ವೆ ಸಾಮಾನ್ಯವಾಗಿ ನಿಯಮವಾಯಿತು. ಈ ನಿರ್ಬಂಧಕ್ಕೆ ಪ್ರಮುಖ ಕಾರಣವಾಗಿದ್ದು ಕುಲ, ಬಳಿ, ಬೆಡಗುಗಳು. ಪ್ರತಿಯೊಂದು ಸಮುದಾಯವು ತನ್ನ ಸದಸ್ಯರ ನಡುವಿನ ಸಂಬಂಧಗಳನ್ನು ಬೆಸೆಯುವಾಗ ಕೆಲವೊಂದು ಚಿಹ್ನೆ ಅಥವಾ ಸಂಕೇತಗಳನ್ನು ನೀಡುತ್ತದೆ. ಆ ರೀತಿಯ ಚಿಹ್ನೆಗಳಲ್ಲಿ ಕುಲ/ ಬಳಿ/ ಬೆಡಗುಗಳು ಪ್ರಮುಖವಾಗಿರುತ್ತವೆ. ಬಂಧುತ್ವ ಎಂದರೆ ಸಮುದಾಯದ ಸದಸ್ಯರ ನಡುವಿನ ಬೆಸುಗೆ ಬೆಸೆಯುವ ಒಟ್ಟು ಅಂಶಗಳ ಮೊತ್ತವೆಂದು ಹೇಳಬಹುದು. ಸಮುದಾಯದಲ್ಲಿ ಬಂಧುತ್ವ ಬೆಳೆಯಲು ಪೂರ್ವಜರಿಂದ ಬಂದ ಸ್ತರವಿನ್ಯಾಸ ಮಾದರಿಯ ವರ್ಗೀಕರಣದಿಂದ ಕುಲ, ಬಳಿ, ಬೆಡಗು, ಗೋತ್ರಗಳ ರೂಪದಲ್ಲಿ ಸೃಷ್ಟಿಯಾಗಿದೆ. ಇವುಗಳನ್ನು ಬುಡ್ಗ ಜಂಗಮರು 'ಇಂಟಿಪೇರ್ಲು' ಎಂದು ಕರೆಯುತ್ತಾರೆ. ಬುಡ್ಗ ಜಂಗಮರು ಕುಲ, ಬೆಡಗುಗಳನ್ನು ಅವರ ಮಾತೃಭಾಷೆ ತೆಲುಗು ಭಾಷೆಯಲ್ಲಿ ಕುಲಂ, ಇಂಟಿಪೇರ್ಲು ಎಂದು ಕರೆಯುತ್ತಾರೆ. ಸಮುದಾಯದ ಚಾರಿತ್ರಿಕ ಅಂಶಗಳೇ ಈ ಬೆಡಗುಗಳು. ಪುರಾತನ ಕಾಲದಿಂದಲೂ ಮನುಷ್ಯ ಅನೇಕ ವೃತ್ತಿ ಸಂಪ್ರದಾಯಗಳನ್ನು ನಂಬಿಕೆ ನಿಷೇಧಗಳನ್ನು ಅನುಸರಿಸುತ್ತಾ ಬಂದಿರುವುದು ಕಾಣಬಹುದು. ಪ್ರತಿ ಕುಟುಂಬದ ಚರಿತ್ರೆಯನ್ನು ಬೆಡಗುಗಳ ಮೂಲಕ ಕಂಡುಕೊಳ್ಳಬಹುದು. ಬುಡ್ಗ ಜಂಗಮರು ರಕ್ತಸಂಬಂಧವನ್ನು ಬೆಸೆಯಬೇಕಾದರೆ 'ಇಂಟಿಪೇರ್ಲು' ಅಥವಾ ಬೆಡಗುಗಳು ಅನಿವಾರ್ಯವಾಗುತ್ತವೆ

ಮತ್ತು ಸಮುದಾಯದಲ್ಲಿ ಕೊಡುಕೊಳ್ಳುವಿಕೆ, ಜನನ, ಮರಣದಂತಹ ಕ್ರಿಯಾವಿಧಾನಗಳಲ್ಲಿ ನಡೆಯುವ ಜವಾಬ್ದಾರಿಯನ್ನು ನೀಡಲು ನೆರವಾಗುತ್ತವೆ. ಈ 'ಇಂಟಿಪೇರ್ಲು'ಗಳು ಮೂಲವಾಗಿ ವೃತ್ತಿ, ಸ್ಥಳನಾಮಗಳು ಹಾಗೂ ಸಾಕುಪ್ರಾಣಿ ಪಕ್ಷಿಗಳು, ಅವರ ವಲಸೆ ಬಂದಿರುವ ಪ್ರದೇಶಗಳು, ಅವರು ಆಚರಿಸುವ ಆಚರಣೆಗಳು, ಆರಾಧಿಸುವ ದೇವರುಗಳನ್ನೆ ತಮ್ಮ ಬೆಡಗುಗಳಾಗಿ ಅಥವಾ ಕುಲಗಳಾಗಿ ಕಂಡುಬರುತ್ತವೆ. ಬುಡ್ಗ ಜಂಗಮರಲ್ಲಿ ಎಲ್ಲಾ ಬೆಡಗುಗಳು ತೆಲುಗು ಭಾಷೆಯಲ್ಲಿ ಕಂಡು ಬರುತ್ತವೆ. ಈ ಬೆಡಗುಗಳಿಗೆ ತೆಲುಗಿನ 'ಲು' ಅಥವಾ 'ಲೋಳು' ಎಂದು ಪ್ರತ್ಯಯವನ್ನು ಸೇರಿಸುತ್ತಾರೆ. ಅಂದರೆ ಬಹುವಚನ ರೂಪದಲ್ಲಿ ಅವರು ಎಂದು ಅರ್ಥ ನೀಡುತ್ತದೆ. ಉದಾ: ಯಡವಲೋಳು (ಯಡವಲಿಯವರು), ವಿಬೂತಿಯೊಳು (ವಿಭೂತಿಯವರು), ಧೂಪಂಮೋಳು (ಧೂಪದವರು), ಸಿರಿವಾಟೋಳು (ಸಿರಿವಾಟಿಯವರು) ಎಂದು ಹೀಗೆ ಗುರುತಿಸಿಕೊಳ್ಳುತ್ತಾರೆ. ಇವರು ಸಮ ಬೆಡಗುಗಳನ್ನು ಹೊರತುಪಡಿಸಿ ಬೆಸ ಬೆಡುಗುಳೊಂದಿಗೆ ಸಂಬಂಧ ಮತ್ತು ಬಂಧುತ್ವವನ್ನು ಬೆಳೆಸುತ್ತಾರೆ. ಈ ಬುಡ್ಗ ಜಂಗಮರಲ್ಲಿ ಎರಡು ರೀತಿಯ ಬೆಡಗು ಅಥವಾ ಕುಲಗಳನ್ನು ನೋಡಬಹುದಾಗಿದೆ. ಅದರಲ್ಲಿ

೧. ತಂದೆಯ ಇಂಟಿಪೇರು(ಕುಲ, ಬೆಡಗು)

೨. ತಾಯಿಯ ಇಂಟಿಪೇರು(ಕುಲ, ಬೆಡಗು)

**೧. ತಂದೆಯ ಇಂಟಿಪೇರು(ಕುಲ, ಬೆಡಗು):** ಇದರಲ್ಲಿ ಪುರಷ ಕುಲದ ಮುಖಂಡ ಮೂಲನಾಗಿರುತ್ತಾನೆ. ಇಲ್ಲಿ ಮಕ್ಕಳು, ಸಹೋದರ–ಸಹೋದರಿಯರು ಮತ್ತು ಸಹೋದರರ ಮಕ್ಕಳು ಬರುತ್ತಾರೆ. ಆದರೆ ಸಹೋದರಿಯರ ಮಕ್ಕಳು ಬರುವುದಿಲ್ಲ.

**೨. ತಾಯಿಯ ಇಂಟಿಪೇರು(ಕುಲ, ಬೆಡಗು):** ಇದರಲ್ಲಿ ಸ್ತ್ರೀಯು ಕುಲದ ಮೂಲವಾಗಿದ್ದಾಳೆ. ಇಲ್ಲಿ ಆಕೆಯ ಮಕ್ಕಳು, ಸಹೋದರಿಯರು– ಸಹೋದರರು ಮತ್ತು ಸಹೋದರಿಯರ ಮಕ್ಕಳು ಬರುತ್ತಾರೆ. ಆದರೆ ಸಹೋದರರ ಮಕ್ಕಳು ಬರಲಾರರು. ಒಂದೇ ರಕ್ತ ಸಂಬಂಧಗಳಿಂದ ಬಂದವರೆಲ್ಲ ಸಂಬಂಧಿಕರು. ಇವರ ಸಂಬಂಧವು ಸಹೋದರರ ಸಂಬಂಧವಾಗುತ್ತದೆ. ಆದ್ದರಿಂದ ಪರಸ್ಪರ ಕೊಡುಕೊಳ್ಳುವಿಕೆಗಳು ಇವರ ಮಧ್ಯೆ ನಡೆಯಲಾರವು. ಆದರೆ ಬೇರೆ ಬೆಡಗಿನವರ ಜೊತೆ ಮದುವೆ ಸಂಬಂಧಗಳು ನಡೆಯುತ್ತವೆ.

ಉದಾ: ಅಶ್ವ+ಅಶ್ವ , ಅಶ್ವ+ವಿಭೂತಿ, ವಿಭೂತಿ+ಕೊಂಡಪಲ್ಲಿ=ಸಹೋದರ ಬೆಡಗುಗಳು ಅಥವಾ ಸಮ ಬೆಡಗು ಅಶ್ವ+ಯಡವಲಿ=ಬೆಸ ಬೆಡಗು ಹೀಗೆ ಅನ್ಯ ಬೆಡಗಿನ ಜೊತೆ ವಿವಾಹವನ್ನು ನೆರವೇರಿಸುವರು. ಹೀಗೆ ಸಮ ಮತ್ತು ಬೆಸ ಬೆಡಗುಗಳನ್ನು ಕಾಣಬಹುದು. ಪ್ರತಿಯೊಂದು ಮನೆತನಕ್ಕೂ ಒಂದು ನಿರ್ದಿಷ್ಟ ಹೆಸರಿರುತ್ತದೆ. ಇಂತಹ ಕುಲದ ವ್ಯವಸ್ಥೆಯಲ್ಲಿ ಸಹೋದರರ ಬೆಡಗು ಮಾತ್ರ ಶಾಶ್ವತವಾಗಿರುತ್ತದೆ. ಸಹೋದರಿಯರ ಬೆಡಗುಗಳಲ್ಲಿ ಬದಲಾಗುತ್ತಾರೆ. ಉದಾ: ನೀ ಇಂಟಿ ಪೇರು ಮಾರ್ಚುತಾ, ಅಂದರೆ ನೀ ನಾನು ಮದುವೆ ಯಾಗುತ್ತಿನಿ ಎಂದರ್ಥ, ಅಂದರೆ ನಿನ್ನ ಮದುವೆಯಾದರೆ ನಿನ್ನ ಬೆಡಗು ಬದಲಾಗುತ್ತದೆ ಎಂಬ ಅರ್ಥವನ್ನು ನೀಡುತ್ತದೆ. ಆದ್ದರಿಂದ ಬುಡ್ಗ ಜಂಗಮರು

ಸಾಮಾಜಿಕ ವ್ಯವಸ್ಥೆಯಲ್ಲಿ ಮದುವೆಕಾರ್ಯ ನೆರವೇರಿಸುವ ಸಂದರ್ಭದಲ್ಲಿ ಕುಲ ಅಥವಾ ಬೆಡಗು(ಇಂಟಪೇರು) ತುಂಬಾ ಮಹತ್ವದ ಪಾತ್ರ ನಿರ್ವಹಿಸುತ್ತದೆ. ಉದಾಹರಣೆಗೆ ಈ ಕೆಳಕಂಡಂತೆ ನೀಡಲಾಗಿದೆ. ಇಲ್ಲಿ ಸೋದರ ಬೆಡುಗುಗಳೊಂದಿಗೆ ರಕ್ತಸಂಬಂಧ ಏರ್ಪಡುವುದಿಲ್ಲ.

**ಕೋಷ್ಟಕ ೪.೪: ಸಂಬಂಧ ಬೆಳೆಸುವ ಕುಲ, ಬೆಡಗುಗಳ ಪಟ್ಟಿ**

| ಅ ಪಟ್ಟಿ–ಸಹೋದರ ಕುಲ, ಬೆಡಗುಗಳು | ಬ ಪಟ್ಟಿ–ಸಂಬಂಧ ಬೆಳೆಸುವ ಕುಲ, ಬೆಡಗುಗಳು |
|---|---|
| ಅಶ್ವ, ವಿಭೂತಿ, ಮೀರಾಲಿ, ಕಲ್ಯಾಣಂ, ಮುಗ್ಗೊಳು, ಮಾದನಂ, ಕೋಟೊಳು, ಸಂಕಲೊಳು, ಕೊಂಡಪಲ್ಲಿ, ರೇವಲ್ಲಿ ಇತರೆ ಬೆಡಗುಗಳು | ಯಡವಲಿ, ರುದ್ರಾಕ್ಷಿ, ಮೋತಿ, ಕೊಂಡಪಲ್ಲಿ, ಧೂಪಂ, ಬಲಗೊಲ್ಲ ಶಿರಿಷಾಲು, ಶಿರಿಗಿರಿ, ಬಾದಿಗಿ, ಡೊಕ್ಕೋಳು, ಕೊಂಡ್ರೊಳು, ಹಿಪ್ಪೋಳು, ಸಿರಿವಾಟಿ, ಭಾರ್ತಿಕಿ, ಪೋಣಪೋಳು, ಇರ್ನಾಲು, ಇತರೆ ಬೆಡಗುಗಳು |

ಹೀಗೆ ಅ ಪಟ್ಟಿಯಲ್ಲಿರುವ ಬೆಡಗುಗಳು ಬ ಪಟ್ಟಿಯಲ್ಲಿರುವ ಯಾವುದೇ ಕುಲ, ಬೆಡಗುಗಳೊಂದಿಗೆ ವಿವಾಹವಾಗಬಹುದು. ಸಹೋದರ ಬೆಡಗುಗಳು ಬಿಟ್ಟು ಬೆಸ ಬೆಡಗುಗಳೊಂದಿಗೆ ಬುಡ್ಗ ಜಂಗಮರು ವಿವಾಹವಾಗುವ ಪದ್ಧತಿ ಇದೆ. ಈ ರೀತಿಯ ವಿವಾಹದ ಪದ್ಧತಿಯನ್ನು ಬುಡಕಟ್ಟು ಸಮುದಾಯಗಳು ಅನುಸರಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಅಕ್ಕನ ಮಗಳೆಂದು ಮತ್ತು ತವರಮನೆಗೆ ಕೊಡಬೇಕೆಂದು ಅತ್ತೆ ಮಾವ ಅಥವಾ ಅಕ್ಕ ಮಾವನ ವರಸೆ ನೋಡಿ ಸಮ ಬೆಡಗು ಬಿಟ್ಟು ಬೇರೆ ಯಾವುದೇ ಬೆಡಗುಗಳೊಂದಿಗೆ ಮಾಡಿಕೊಳ್ಳುತ್ತಿದ್ದಾರೆ. ಉದಾ: ಕಡೆ ಮೋತಿ+ಯಡವಲಿ, ಪೋಣಪೋಲು+ಮೋತಿ, ಬಲಗೊಲ್ಲ+ಮೋತಿ, ಕೊಂಡಪಲ್ಲಿ+ಅಶ್ವ ಇತ್ಯಾದಿ ಬೆಡಗುಗಳಲ್ಲಿ ಮದುವೆಯಾಗಿದ್ದಾರೆ.

ಬುಡ್ಗ ಜಂಗಮರಲ್ಲಿ ಸುಮಾರು ೧೫೩ಕ್ಕೂ ಹೆಚ್ಚು ಕುಲ, ಬೆಡಗುಗಳನ್ನು ಕಾಣಬಹುದಾಗಿದೆ. ಇವರ ಪೂರ್ವಿಕರು ಶೈವ ಸಂಸ್ಕೃತಿಯ ಆರಾಧಕರು ಮತ್ತು ಮಾಂಸಹಾರಿಗಳು. ಆದ್ದರಿಂದ ಇವರು ಇಂಟಿಪೇರ್ಲು(ಬೆಡುಗು)ಗಳಲ್ಲಿ ತಮ್ಮ ನಿರ್ದಿಷ್ಟ ಕುಲನೆಲೆಗಳನ್ನು ಸೂಚಿಸುವ ಸಲುವಾಗಿ ಬಳಸುತ್ತಾರೆ. ಬುಡ್ಗ ಜಂಗಮರು ತಮ್ಮದೇ ಸಂಸ್ಕೃತಿ ನಿಷ್ಠವಾದ ಲಾಂಛನಗಳನ್ನು ಹೊಂದಿದ್ದಾರೆ. ತಮ್ಮ ಸಾಂಸ್ಕೃತಿಕ ಲೋಕದಲ್ಲಿ ವಿಶಿಷ್ಠವೆನ್ನಿಸುವ ಪ್ರಾಣಿ, ಪಕ್ಷಿ, ಗಿಡಮರ, ವಸ್ತುಗಳನ್ನು ಲಾಂಛನಗಳನ್ನಾಗಿ ಹಾಗೂ ಇಂಟಿಪೇರ್ಲುಗಳಾಗಿ ಅಳವಡಿಸಿಕೊಂಡಿದ್ದಾರೆ. ಜಂಗಂ ಕಥೆಗಳು, ಬುಡ್ಗಭಾಷೆ, ಈಚಲು ಚಾಪೆ ಹೆಣೆಯುವುದು, ಬೇಟೆಯಾಡುವುದು, ಮಾಂಸಹಾರ, ಮಧ್ಯಪಾನ, ಓಲಿ(ಕನ್ಯಾಶುಲ್ಕ), ಷಂಡ್ರಾ, ವೇಷಗಾರಿಕೆ, ಕುಲ ಪಂಚಾಯಿತಿ, ಕುಲ ಪೆದ್ದಲು, ವಂಕರ ಗುಡಿಸಿ(ಗುಡಿಸಲು)ಗಳಲ್ಲಿ ವಾಸ ಮುಂತಾದ ಹಲವಾರು ವಿಶಿಷ್ಠ ಕುಲ ಲಕ್ಷಣಗಳಿಂದ ಗುರುತಿಸಲಾಗುವ ಬುಡ್ಗ ಜಂಗಮರು, ತಮ್ಮದೇ ವಿಶಿಷ್ಠವಾದ 'ಇಂಟಿಪೇರ್ಲು' ಅಥವಾ ಬೆಡಗುಗಳಿಂದಲೂ ಈ ಕೆಳಕಂಡಂತೆ ಗುರುತಿಸಲ್ಪಡುತ್ತಾರೆ. ಇವು ಆಯಾಯ ಮನೆತನದ ಅಡ್ಡ ಹೆಸರುಗಳಾಗಿಯೂ ಕರೆಯುತ್ತಾರೆ.

## ಬುಡ್ಗ ಜಂಗಮರ ಕುಲಗಳು (ಇಂಟಿಪೇರ್ಲು)

**ಕೋಷ್ಟಕ ೪.೫: ಬುಡ್ಗ ಜಂಗಮರ ಇಂಟಿಪೇರ್ಲು (ಬೆಡಗು, ಕುಲ, ಬಳಿಗಳು)**

| | |
|---|---|
| ೧. ಅಲ್ಲಂ(ಅಲ್ಲ) | ೨. ಅಶ್ವ(ಕುದುರೆ) |
| ೩. ಅವಧೂತ | ೪. ಆಲೇಟಿ |
| ೫. ಇಮುಕೊಂಡ | ೬. ಇರ್ಲಾ |
| ೭. ಇಂಗುವ | ೮. ಇಪ್ಪ |
| ೯. ಈರ್ನಾಲು | ೧೦. ಈರ್ಲ |
| ೧೧. ಊಬಿದಿ,ಈಭೂತಿ(ವಿಭೂತಿ) | ೧೨. ಊರಾ |
| ೧೩. ಒಂಟೆದ್ದು | ೧೪. ಕಡೆಂ(ಕಡಗ) |
| ೧೫. ಕಡಮಂಚಿ | ೧೬. ಕಳಾಮಸ್ತಿ |
| ೧೭. ಕಲ್ಯಾಣಂ, ಕಲ್ಯಂ(ವಿವಾಹ) | ೧೮. ಕಾಮಂಡ್ಲ ಪಲ್ಲಿ |
| ೧೯. ಕಂಕನಾಳ(ಕಂಕಣ) | ೨೦. ಕನುಗುರಿ |
| ೨೧. ಕನ್ನಾಟಿ | ೨೨. ಕಪ್ಪೇರಾ, ಕಪ್ಪೇರಿ |
| ೨೩. ಕರಿಟಾಂ | ೨೪. ಕರ್ರೆ, ಕರ್ರಿ |
| ೨೫. ಕರ್ನಕೋಟಾ | ೨೬. ಕಿನ್ನಾರ, ಕಿನ್ನರಿ, ಕಿಂದರ |
| ೨೭. ಕಾಟುಮುರಿ | ೨೮. ಕೋಡಿಗಂಟಿ |
| ೨೯. ಕೊದಂಡಂ | ೩೦. ಕೋಮಾರಿ |
| ೩೧. ಕೊಳ್ಳಾ | ೩೨. ಕೊಂಡ್ರ |
| ೩೩. ಕೊಂಡಪಲ್ಲಿ | ೩೪. ಕೊಂಡುರಿ, ಕೊಂಡ್ರೊಳು |
| ೩೫. ಗಂಟಾ | ೩೬. ಗಾನುಗ |
| ೩೭. ಗಿಟ್ಟಾ | ೩೮. ಗಂದೋಟಿ |
| ೩೯. ಗುರಾನ | ೪೦. ಗಂಧಂ |
| ೪೧. ಗುರಾನಿ | ೪೨. ಗಡ್ಡಂ |
| ೪೩. ಗಗನ, ಗಗನಂ | ೪೪. ಗುಪ್ಪ(ಗುಫ) |
| ೪೫. ಗುಂಡುಪಲ್ಲಿ | ೪೬. ಗೋನಿಗಂಟ್ಲಾ |
| ೪೭. ಚೆರ್ಲ, ಶೆರ್ಲ (ಕೆರೆ) | ೪೮. ಚರ್ಲಪಲ್ಲಿ, ಬೋಡ್‌ಮರ್ರಿ |
| ೪೯. ಚೆಲಿಮಂಡ್ಲ, ಸನಮಂಡ್ಲ | ೫೦. ಚೆನ್ನಪಲ್ಲಿ |

| | |
|---|---|
| ೫೧. ಚೆನ್ನೂರಿ | ೫೨. ಚಿರಪಾಟಿ |
| ೫೩. ಜೇಡಿಮೆಟ್ಲ | ೫೪. ಜಂಪೂಳು |
| ೫೫. ಜಂಪೆಲ್ಲಿ, ಜಂಪಿಲ್ಲಿ, ಜಂಪಲ್ಲಿ | ೫೬. ತಿರುಪತೋಳ್ಳು |
| ೫೭. ತೊಟ | ೫೮. ತಲಮಂಚಿ |
| ೫೯. ತಾಟಿಕೊಂಡ, ಪಾಲ್ಯ | ೬೦. ತೂರ್ಲಪಾಟಿ |
| ೬೧. ತೂರಪಾಟಿ, ತುರಪತಿ | ೬೧. ದುದ್ದುಕೂರಿ, ದುರ್ದುರ್ಕಿ |
| ೬೨. ದೂಬ್ಬೆ | ೬೩. ದೂಪಂ |
| ೬೪. ದೇವರಪಲ್ಲಿ | ೬೫. ನಂದಪೂರಿ, ನಂದಪುರಿ |
| ೬೬. ನರ್ಲಗಂಟಿ, ನೆರಗಂಟಿ | ೬೭. ನರಕೂಟಿ, ನರ್ರೂಕಟಿ, ನರಕುತ್ತಿ |
| ೬೮. ನಾಗೂಲಾ | ೬೯. ನಾಮಾಲ |
| ೭೦. ನಿಧಾನಕವಿ | ೭೧. ನಿಡುಗೊಂಡ, ನಿರುಕೊಂಡ |
| ೭೨. ನೂನೆ(ಎಣ್ಣೆ) | ೭೩. ನ್ಯಾರಕಂಟ್ಯೊಲು |
| ೭೪. ಪಚ್ಚಗಂಟಲು | ೭೫. ಪಚ್ಚಗಂಟ್ಲಿ |
| ೭೬. ಪಲಪಾಟಿ | ೭೭. ಪನಪು |
| ೭೮. ಪಲಗಡ | ೭೯. ಪನುಗಂಟ |
| ೮೦. ಪಂಚಡಿ | ೮೧. ಪರ್ತಂ |
| ೮೨. ಪರದಾಕ್ಷನ, ಪ್ರದಕ್ಷಣ | ೮೩. ಪರ್ರೆ |
| ೮೪. ಪಸುವುಲೇಟಿ | ೮೫. ಪಸ್ತಂವಾವಿ |
| ೮೬. ಪಸ್ತಂ | ೮೭. ಪಾಟಿಮಿದಿ, |
| ೮೮. ಪತ್ತಿ | ೮೯. ಪತ್ರಿ |
| ೯೦. ಪ್ರಸಾದಂ | ೯೧. ಪರ್ವತಂ, ಪರ್ಯ್ಯಾರ್ |
| ೯೨. ಪೊನ್ನಕಂಟಿ | ೯೩. ಪಾಕ |
| ೯೪. ಪುರೋತ್ರಂ | ೯೫. ಪುಟ್ಟಿ |
| ೯೬. ಪೆರ್ಲ, ಪ್ಯಾರ್ಲೆ | ೯೭. ಪೆಲ್ಲೂರಿ |
| ೯೮. ಪಾನೇಟಿ | ೯೯. ಪೊಲಪೋರಿ |
| ೧೦೦. ಪೊವ್ವನಂ | ೧೦೧. ಬಲಗೊಲ್ಲ |
| ೧೦೨. ಬಂಡಾರಿ | ೧೦೩. ಭಾರತ್‌ಕವಿ, ಬಾರ್ತಕಯಿ |

| | |
|---|---|
| ೧೦೪. ಭೂತಂ, ಬೋತಂ | ೧೦೫. ಬೆಂತಲ |
| ೧೦೬. ಬೆತ್ತಾರಿ | ೧೦೭. ಬೋಡಪರ್ತಿ |
| ೧೦೮. ಬೈಲುಪಾಟಿ | ೧೦೯. ಬೈಲು ಪಾಡೋಲ |
| ೧೧೦. ಮದರಿಯೋಳು | ೧೧೧. ಮಾದೇನ್, ಮಾದನಮ್, ಮಾದನ್ನ |
| ೧೧೨. ಮಾಕಿರೆಡ್ಡಿ | ೧೧೩. ಮಾಮಿಡಿ |
| ೧೧೪. ಮೆಕಲ, ಮ್ಯಾಕಲ | ೧೧೫. ಮಿರಿಯಾಲ |
| ೧೧೬. ಮೊಡೆಮ | ೧೧೭. ಮೂವಲ, ಮೂಲ |
| ೧೧೮. ಮೋಟಂ, ಮೊಗಟಮ್ | ೧೧೯. ಮೋತಿ, ಮಾತಿ |
| ೧೨೦. ಮೇಟ್ಲೂರಿ | ೧೨೧. ಮೋಟು |
| ೧೨೨. ಮುಗ್ಗೋಳು | ೧೨೩. ರಾಸೂರಿ, ರಾಸುವಾರಿ, ರಾಚೂಟಿ |
| ೧೨೪. ಯಡಪಲ್ಲಿ, ಯಡವಲ್ಲಿ | ೧೨೫. ಯಲಪರ್ತಿ |
| ೧೨೬. ಯಲವರ್ತಿ, ಯಲಮರ್ತಿ | ೧೨೭. ರಾಮಲೊಬ |
| ೧೨೮. ರಾಸುಸೂರಿ | ೧೨೯. ರೆವೆಲ್ಲ, ರೆವಲೊಲು |
| ೧೩೦. ರುದ್ರಾಕ್ಷಲ | ೧೩೧. ವಡ್ಡಿ, ಒಡ್ಡಿ |
| ೧೩೨. ವಕಡಂದಮ್ | ೧೩೩. ವನಂ |
| ೧೩೪. ವಾಂಡ್ರಾಸಿ, ಆಂಡ್ರಾಸಿ ಆನರಾಸಿ | ೧೩೫. ವಾನರಾಶಿ |
| ೧೩೬. ವೆಮುಲ, ಯೇಮುಲ | ೧೩೭. ವಿರನಪಲ್ಲಿ, ಇರ್ಪಲ್ಲಿ |
| ೧೩೮. ವೀರ್ನಪಲ್ಲಿ | ೧೩೯. ವಿಭೂತಿ, ಉಭೂತಿ ಇಪ್ತಿ |
| ೧೪೦. ವೀನಕೊಂಡ, ವಿನುಕೊಂಡ | ೧೪೧. ಶೆಜೆರ್ಲ |
| ೧೪೨. ಶಿವದೇವುನಿ | ೧೪೩. ಶಿವರಾತ್ರಿ |
| ೧೪೪. ಶಿರವಾಟ, ಸಿರುವಾಟ | ೧೪೫. ಸಲ್ಲಾ, ಸಾಲ, ಚಾಲ |
| ೧೪೬. ಸದುಲ | ೧೪೭. ಸಂಕು, ಸಂಕುಲ |
| ೧೪೮. ಶ್ರೀಗಿರಿ | ೧೪೯. ಸಿರಿಗಿರಿ |
| ೧೫೦. ಸಿರಿಶ್ಯಾಲ, ಸಿರಿಸಾಲ, ಶ್ರಿಶೈಲ, | ೧೫೧. ಸೊಮದನಿ |
| ೧೫೨. ಹಿಪ್ಪೊಳು | ೧೫೩. ಅಂದಿ, ಅಂದ್ಯೋಮೊಳು |
| ೧೫೪. ಹಂದಿ, ಹಂದ್ಯೋಳು | |

**ಕುಲ, ಬೆಡಗುಗಳ ಹಿನ್ನೆಲೆ:** ಬುಡ್ಗ ಜಂಗಮ್ ಸಮುದಾಯದಲ್ಲಿ ಪ್ರಕೃತಿ ಮತ್ತು ಪ್ರಾಣಿ ಪಕ್ಷಿಗಳ ಮತ್ತು ಗಿಡಮರಗಳ ಆದಿಮ ಬುಡಕಟ್ಟು ಲಕ್ಷಣಗಳುಳ್ಳ ಬೆಡಗುಗಳನ್ನು ಹೊಂದಿವೆ. ಇವರು ಕುದುರೆ,

ಒಂಟೆ, ಕೋತಿ, ಹಸು, ಕುರಿ, ಕೋಳಿ ಮುಂತಾದ ಪ್ರಾಣಿಗಳನ್ನು ಸಾಕುತ್ತಿದ್ದರಿಂದ ಅವುಗಳನ್ನೇ ಕುಲ ಚಿಹ್ನೆಗಳಾಗಿ, ಅಶ್ವ, ಒಂಟೆದ್ದು ಎಂದು ಬೆಡಗುಗಳಾಗಿ ಕರೆದ್ದಾರೆ. ಬುಡ್ಗ ಜಂಗಮರು ಮೂಲತಃ ಶೈವಾರಾಧಕರು ಹಾಗಾಗಿ ಶೈವಾರಾಧನೆಯಲ್ಲಿ ಬಳಸುವ ಶಿವುದೇನಿ, ಅವಧೂತ, ಗಂಟೆ, ವಿಭೂತಿ, ಕಲ್ಯಾಣಂ, ನಾಮಾಲ, ಪಸ್ತಂ, ಪ್ರಸಾದಂ, ಗಡ್ಡಂ, ಪತ್ರಿ, ಪ್ರದಕ್ಷಿಣ, ಪರ್ವತಂ, ಭೂತಂ, ಶಿವರಾತ್ರಿ, ರುದ್ರಾಕ್ಷಿ, ಮುಂತಾದವು ಸಂಕೇತಗಳನ್ನು ಬೆಡಗುಗಳಾಗಿ ಕರೆದ್ದಾರೆ. ಧೂಪಂ, ಗಂಧಂ, ಚಿಂತಲ, ಪತ್ರೆ, ಮೊಗ್ಗು ಮುಂತಾದವು ಮರಗಿಡಗಳ ಸಂಕೇತಗಳನ್ನೂ, ಸಿರಿಗಿರಿ, ಶ್ರೀಗಿರಿ, ತಾಟಿಕೊಂಡ, ತಿರುಪತಿ, ನೀರುಕೊಂಡ, ದೇವುನಿಪಲ್ಲಿ, ಕೊಂಡಪಲ್ಲಿ ಯಡವಲಿ, ಮಿರಿಯಾಲ ಮುಂತಾದವು ಊರುಗಳ ಹೆಸರುಗಳನ್ನೂ ಸಂಕೇತಿಸುತ್ತವೆ.

(ಯಡವಲಿ ಎನ್ನುವುದು ಒಂದು ಗ್ರಾಮನಾಮವಾಗಿದ್ದು, ಆಂಧ್ರಪ್ರದೇಶದ ಪ್ರಕಾಶಂ ಜಿಲ್ಲೆಯ, ರಚೆರ್ಲ ಮಂಡಲದಲ್ಲಿ ಯಡವಲಿ ಗ್ರಾಮ ಇದೆ. ಅಲ್ಲಿ ಶ್ರೀ ಪೋಲೇರಮ್ಮ ದೇವಸ್ಥಾನ ಹೊಂದಿದೆ. ಕೊಂಡಪಲ್ಲಿ ಎನ್ನುವುದು ಕೂಡ ಒಂದು ಗ್ರಾಮನಾಮವಾಗಿದ್ದು, (ಕೊಂಡ ಎಂದರೆ ಗುಡ್ಡ, ಪಲ್ಲಿ ಎಂದರೆ ಹಳ್ಳಿ ಎಂದರ್ಥ), ಈ ಗ್ರಾಮವು ಆಂಧ್ರಪ್ರದೇಶದ ಕೃಷ್ಣ ಜಿಲ್ಲೆಯ ಇಬ್ರಹಿಂಪಟ್ಟಂ ಎಂಬಲ್ಲಿ ಗ್ರಾಮ ಇದೆ. ಅಲ್ಲಿಂದ ಬುಡ್ಗ ಜಂಗಮರು ಅಲೆಮಾರಿಯಾಗಿ ಬಂದಿರುವುದು ಕಾಣಬಹುದು. ತಾಟಿಕೊಂಡ ಎನ್ನುವುದು ಕೂಡ ಒಂದು ಗ್ರಾಮನಾಮವಾಗಿದ್ದು, (ತಾಟಿ ಎಂದರೆ ತಾಳೆ ಗಿಡ, ಕೊಂಡ ಎಂದರೆ ಹಳ್ಳಿ,) ತೆಲಂಗಾಣದ ವರಂಗಲ್ ಜಿಲ್ಲೆಯ ಘಾಣ್ ಪುರ್ ತೆಹಿಸಿಲ್ ಎಂಬಲ್ಲಿ ತಾಟಿಕೊಂಡ ಗ್ರಾಮ ಇದೆ. ಇನ್ನೊಂದು ತೆಲಂಗಾಣದ ಮೆಹಬೂಬ್ ನಗರದ ಭೂತ್ ಪುರಂ ಮಂಡಲದಲ್ಲಿ ತಾಟಿಕೊಂಡ ಗ್ರಾಮ ಇದೆ. ಅಲ್ಲಿಂದ ಬುಡ್ಗ ಜಂಗಮರು ವಲಸೆ ಬಂದಿರುವುದು ಕಾಣಬಹುದು. ಮೀರಾಲಿ ಎನ್ನುವುದು ತೆಲಂಗಾಣದ ನಲಗೊಂಡ ಜಿಲ್ಲೆಯಲ್ಲಿ ಮೀರಾಲಿಗೂಡ ಎಂಬ ಸ್ಥಳ ಇದೆ. ಅಲ್ಲಿಂದ ಬುಡ್ಗ ಜಂಗಮರು ವಲಸೆ ಬಂದಿರುವುದು ಕಾಣಬಹುದು). ನಿಧಾನ ಕವಿ, ಭಾರತಕವಿ ಮೊದಲಾದವು ಸಂಸ್ಕೃತಿ ಮತ್ತು ಕಲೆಗೆ ಸಂಬಂಧಿಸಿದ ಬೆಡುಗಗಳು ಕಾಣುತ್ತವೆ. ಒಟ್ಟಿನಲ್ಲಿ ಈ ಬುಡ್ಗ ಜಂಗಮರು ಈ ದೇಶದ ಮೂಲನಿವಾಸಿಗಳಾಗಿ, ಕಾಡುಮೇಡುಗಳಲ್ಲಿ ವಾಸಿಸುತ್ತಾ, ತಾಳೆಗಿಡ, ಈಚಲು ಮರದ ಕಲ್ಲು(ಹೆಂಡ) ಕುಡಿಯುತ್ತಾ ಪ್ರಕೃತಿಯನ್ನೇ ನಂಬಿ ಪ್ರಕೃತಿಯ ಆರಾಧಕರಾಗಿದ್ದು, ಬುಡಕಟ್ಟು ನೆಲೆಯಿಂದ ಬಂದಿರುವುದರಿಂದ ಇದು ಭಾರತದ ಅತ್ಯಂತ ಪ್ರಾಚೀನವಾದ ಒಂದು ದ್ರಾವಿಡ ಬುಡಕಟ್ಟು ಸಮುದಾಯ ಎಂಬುದು ಸ್ಪಷ್ಟವಾಗುತ್ತದೆ. ಇವರ ಬೆಡಗುಗಳು ಮೂಲ ತೆಲುಗು ಭಾಷೆಯಲ್ಲಿದ್ದು, ಕರ್ನಾಟಕದಲ್ಲಿ ಕೆಲವು ಕುಟುಂಬಗಳು ತಮ್ಮ ಬೆಡಗುಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಉದಾ: ನೂನ್ಯಂ ಬೆಡಗಿನವರು ಎಣ್ಣೆಯವರು ಎಂದು, ಅಶ್ವ ಬೆಡಗಿನವರು ಕುದುರೆಯವರು, ಕೊಂಡಪಲ್ಲಿಯವರು ಗುಂಡುಪಲ್ಲಿ, ರೇವಲ್ಲಿ ಯವರು ರೇವಲ್ ಎಂದು ಮಾಡಿಕೊಂಡಿದ್ದಾರೆ.

## ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ್ ಸಮುದಾಯದ ಕುಲಗಳು

**ಕೋಷ್ಟಕ ೪.೬: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಬೆಡಗುಗಳವಾರು ಕುಟುಂಬಗಳ ಪ್ರಮಾಣ**

| ಕ್ರಸ | ಇಂಟಿಪೇರ್ಲು | ಬೆಡಗುವಾರು ಕುಟುಂಬಗಳ ಸಂಖ್ಯೆ | ಶೇಕಡಾ |
|---|---|---|---|
| ೧ | ಅಶ್ವ | ೪೬ | ೫.೩ |
| ೨ | ಇಪ್ಪೋಳು | ೧೨ | ೧.೪ |
| ೩ | ಈರ್ನಾಲು | ೪ | ೦.೪ |
| ೪ | ಎಲಮರ್ತಿ | ೨ | ೦.೨ |
| ೫ | ಒಂಟೆದ್ದು | ೫ | ೦.೫ |
| ೬ | ಕಲ್ಯಾಣಂ | ೨೫ | ೩ |
| ೭ | ಕೊಂಡಪಲ್ಲಿ | ೭೨ | ೮.೫ |
| ೮ | ಕೊಮಾರೋಳು | ೨೦ | ೨.೪ |
| ೯ | ಕೋಂಡ್ರು | ೬೦ | ೭ |
| ೧೦ | ಡೊಕ್ಕೋಳು | ೩೭ | ೪.೪ |
| ೧೧ | ತಾಟಿಕೊಂಡ | ೪ | ೦.೪ |
| ೧೨ | ತಿರುಪಾತಮೋಳು | ೩೫ | ೪.೯ |
| ೧೩ | ಧೂಪಂ | ೩೩ | ೩.೮ |
| ೧೪ | ಪೆಲ್ಲೂರೊಳು | ೧ | ೦.೧ |
| ೧೫ | ಪೋನೊಪೋಳು | ೧೨ | ೧.೫ |
| ೧೬ | ಬಲಗೊಲ್ಲ | ೪೯ | ೫.೬ |
| ೧೭ | ಬಾದಿಗಿ | ೨೦ | ೨.೨ |
| ೧೮ | ಭಾರತ್ಕಿ | ೮ | ೦.೮ |
| ೧೯ | ಮಾದನಂ | ೬ | ೦.೫ |
| ೨೦ | ಮೀರಾಲಿ | ೫೪ | ೬.೪ |
| ೨೧ | ಮುಗ್ಗು | ೧೩ | ೧.೪ |
| ೨೨ | ಮೋತಿ | ೬೧ | ೭ |
| ೨೩ | ಯಡವಲಿ | ೧೪೫ | ೧೭ |

| | | |
|---|---|---|
| ೨೪ ರುದ್ರಾಕ್ಷಿ | ೫೨ | ೬ |
| ೨೫ ರೇವಲ್ಲಿ | ೧೪ | ೧.೫ |
| ೨೬ ವಿಭೂತಿ | ೩೫ | ೫ |
| ೨೭ ಶಿರಿಸ್ಯಾಲ | ೫ | ೦.೪ |
| ೨೮ ಸಂಕುಲೋಳು | ೬ | ೦.೫ |
| ೨೯ ಸಿರಿಗಿರಿ | ೪ | ೦.೩ |
| ೩೦ ಸಿರಿವಾಟಿ | ೧೪ | ೧.೬ |
| **ಒಟ್ಟು** | **೮೫೪** | **೧೦೦** |

ಮೇಲಿನ ಕೋಷ್ಟಕವು ಬಳ್ಳಾರಿ ಜಿಲ್ಲೆಯ ಜಿಲ್ಲೆಯ ಬುಡ್ಗ ಜಂಗಮರ ಬೆಡಗುಗಳವಾರು ಕುಟುಂಬ ಪ್ರಮಾಣವನ್ನು ತಿಳಿಯಲು ಸಹಾಯಕವಾಗುವುದು. ಬೆಡಗುಗಳು ಸಮುದಾಯದ ಚಹರೆಗಳಾಗಿ ಪುರಾತನ ಕಾಲದಿಂದಲೂ ಬಂದಿರುವುದು ಕಂಡುಬರುತ್ತದೆ. ದೈವಗಳು ಕಾಲದಿಂದ ಕಾಲಕ್ಕೆ ಬದಲಾದರೂ ಇವರ ಬೆಡಗುಗಳು ಮಾತ್ರ ಬದಲಾಗಲು ಸಾಧ್ಯವಿಲ್ಲ. ಯಾವುದೇ ಸಮುದಾಯ ಬೆಡಗುಗಳನ್ನು ಕಳೆದುಕೊಳ್ಳಲು ಸಾಧ್ಯವಿಲ್ಲ. ಒಂದು ವೇಳೆ ಕಳೆದುಕೊಂಡರೆ ಆ ಸಮುದಾಯದ ಅಸ್ತಿತ್ವವೇ ಇಲ್ಲವೆಂದು ಹೇಳಬಹುದು. ಬೆಡಗುಗಳು ಅಥವಾ ಇಂಟಿಪೇರ್ಲುಗಳು ಸಮುದಾಯದ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳಲ್ಲಿ ಪ್ರಮುಖಪಾತ್ರ ನಿರ್ವಹಿಸುತ್ತವೆ.

**ಲಂಬ ಚಿತ್ರ ೪.೧: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಕುಲ, ಬೆಡಗುಗಳವಾರು ಕುಟುಂಬ ಪ್ರಮಾಣದ ಲಂಬ ಚಿತ್ರ**



ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ ಸಮುದಾಯದ ಒಟ್ಟು ೩೪೭೦ ಜನಸಂಖ್ಯೆಯಲ್ಲಿ ೮೫೪ ಕುಟುಂಬಗಳು, ೩೦ ಬೆಡಗುಗಳು ಕಂಡುಬಂದಿವೆ. ಬುಡ್ಗ ಜಂಗಮರ ಬೆಡಗುಗಳ ವಿಂಗಡನೆಯನ್ನು ಮಾಡಿದಾಗ ಶೇಕಡಾ ೧೭% ಯಡವಲಿ ಬೆಡಗಿನವರು ಅತಿ ಹೆಚ್ಚಾಗಿ ಕಂಡು ಬರುತ್ತಾರೆ. ಇವರು ಬಳ್ಳಾರಿ ಜಿಲ್ಲೆಯ ಗುಡಾರ ನಗರ, ಸಿರುಗುಪ್ಪ ತಾಲೂಕಿನ ಹಳೇಕೋಟೆ, ಸಿದ್ದಪ್ಪನಗರ, ಬಲುಕುಂದಿ, ಕುಡತಿನಿ. ಸಂಡೂರು ತಾಲೂಕಿನ ಹಳೆದರೋಜಿ, ಕಂಪ್ಲಿ ತಾಲೂಕಿನ ಸೋಮಲಾಪುರ ಗ್ರಾಮದಲ್ಲಿ ಯಡವಲಿ ಬೆಡಗಿನವರು ಹೆಚ್ಚಾಗಿ ನೆಲೆಸಿರುವುದು ಅಧ್ಯಯನದ ಸಮೀಕ್ಷೆ ಮೂಲಕ ಕಾಣಬಹುದು. ನಂತರ ಕೊಂಡಪಲ್ಲಿ ಬೆಡಗು ಶೇಕಡಾ ೮.೫%, ಕೊಂಡ್ರು ಬೆಡಗು ೭%, ಮೀರಾಲಿ ಬೆಡಗಿನವರು ಶೇಕಡಾ ೬.೪%, ಬಲಗೊಲ್ಲನವರು ಶೇಕಡಾ ೫.೬, ಅಶ್ವ ಬೆಡಗಿನವರು ಶೇಕಡಾ ೫.೩% ಹೀಗೆ ಒಟ್ಟು ೩೦ ಬೆಡಗುಗಳು ಬಳ್ಳಾರಿ ಜಿಲ್ಲೆಯಲ್ಲಿ ನೆಲೆಸಿರುವುದು ಕಾಣಬಹುದು. ಭಾರತದ ಬುಡ್ಗ ಜಂಗಮರ ಒಟ್ಟು ಬೆಡಗುಗಳು ೧೫೩ಕ್ಕೂ ಹೆಚ್ಚೂ ಬೆಡಗುಗಳಿವೆ ಎಂದು ದಾಖಲಿಸಿರುವುದು ಕಾಣಬಹುದು. ನನ್ನ ಅಧ್ಯಯನದ ಕಾರ್ಯಕ್ಷೇತ್ರದಲ್ಲಿ ಒಟ್ಟು ೩೦ ಬೆಡಗುಗಳು ಕಂಡುಬಂದಿವೆ. ಈ ಬೆಡಗುಗಳು ಪಾಶುಪಾಲನೆ, ಗ್ರಾಮನಾಮಗಳು, ಧಾರ್ಮಿಕ ಆಚರಣೆ ಹಿನ್ನೆಲೆಯಿಂದ ರೂಪಗೊಂಡಿರುವುದು ಕಾಣಬಹುದು.

**ಬುಡ್ಗ ಜಂಗಮರ ವಿವಾಹ**

ವಿವಾಹವು ಒಂದು ಸಾರ್ವತ್ರಿಕವಾದ ಸಾಮಾಜಿಕ ಸಂಸ್ಥೆ ಮತ್ತು ಸಂಘವುಯಾಗಿದೆ. ವಿವಾಹವು ಮನುಷ್ಯನ ಲೈಂಗಿಕ ಬಯಕೆಗಳನ್ನು ಪೂರೈಸುವ ಮತ್ತು ಆ ಮೂಲಕವಾಗಿ ಸಮಾಜದ ವಿಕಾಸಕ್ಕೆ ಮತ್ತು ಉಳಿವಿಗೆ ಕಾರಣೀಭೂತವಾಗಿದೆ. ಸಮಾಜದ ಮುಂದುವರಿಕೆಗೆ ವಿವಾಹವು ವಧು-ವರರಿಗೆ ಜವಾಬ್ದಾರಿ, ಸಂತಾನೋತ್ಪತ್ತಿಯನ್ನು ಬೆಳೆಸುತ್ತಾ ಕುಲ, ಜಾತಿ, ಸಾಮಾಜಿಕ ಸ್ಥಾನಮಾನಗಳನ್ನು ಮುಂದಿನ ತಲೆಮಾರಿಗೆ ಕೊಂಡೋಯ್ಯುವ ಕಾರ್ಯವನ್ನು ನಿರ್ವಹಿಸುತ್ತದೆ. ಪ್ರಪಂಚದ ಎಲ್ಲ ಸಮುದಾಯಗಳು ವಿವಾಹ ಎಂಬ ಸಂಸ್ಥೆಯಿಂದ ಏಕಪತ್ನಿತ್ವ, ಬಹುಪತ್ನಿತ್ವ ಎಂಬ ವಿವಾಹದ ರೂಪಗಳು ಎಲ್ಲಾ ಸಮುದಾಯಗಳಲ್ಲಿ ಮುಕ್ತವಾಗಿ ಆಚರಿಸಲ್ಪಡುತ್ತವೆ. ಇದೊಂದು ಧಾರ್ಮಿಕ ಕಾರ್ಯದ ಒಂದು ಸಂಸ್ಕಾರವೆಂದು ಹೇಳಬಹುದು. ಪ್ರತಿಯೊಂದು ಸಮುದಾಯದಲ್ಲಿ ವಿವಾಹದ ಆಚರಣೆಗಳು ತನ್ನದೇಯಾದ ಸಂಪ್ರದಾಯ, ಆಚರಣೆಗಳನ್ನು ಹೊಂದಿರುವುದು ಕಾಣಬಹುದು. ವಿವಾಹದ ಆಚರಣೆಗಳು ಮೂಲ ಸ್ವರೂಪದಲ್ಲಿ ಮರೆಯಾಗುತ್ತಾ ಕೆಲವೊಂದು ಬದಲಾವಣೆ ಹೊಂದುತ್ತಿವೆ. ಇಂತಹ ಸ್ಥಿತ್ಯಂತರಗಳಿಗೆ ಬುಡ್ಗ ಜಂಗಮ ಸಮುದಾಯವು ಹೊರತಾಗಿಲ್ಲ. ಬುಡ್ಗ ಜಂಗಮರಲ್ಲಿ ಹೆಚ್ಚಾಗಿ ಒಳಬಾಂಧವ್ಯ ವಿವಾಹಗಳು ನಡೆಯುತ್ತವೆ. ಸೋದರಮಾವ, ಅತ್ತೆ ಅಕ್ಕನ ಮಗಳನ್ನು ವಿವಾಹವಾಗಲೇಬೇಕು ಎಂಬ ವಿಧಿಗಳಿವೆ. ಇವರ ವಿವಾಹ ಕಾರ್ಯಗಳು ಹಲವು ಹಂತಗಳಲ್ಲಿ ನಡೆಯುವುದನ್ನು ಈ ಕೆಳಗೆ ನೋಡಬಹುದಾಗಿದೆ.

**ಪೆತ್ತಾನಂ(ಕನ್ಯಾ ನಿಶ್ಚಯ):** ಬುಡ್ಗ ಜಂಗಮರ ಭಾಷೆಯಲ್ಲಿ ನಿಶ್ಚಯ ಎಂಬ ಕನ್ನಡ ಪದಕ್ಕೆ "ಪೆತ್ತಾನಂ" ಎಂದು ಹೇಳುತ್ತಾರೆ. ಈ ಜನಾಂಗದಲ್ಲಿ ನಿಶ್ಚಯ ಕಾರ್ಯವು ಹೆಣ್ಣು ಗಂಡಿನ ನಡುವೆ

ಸಂಬಂಧವೇರ್ಪಡಿಸಲು ಮದುವೆಯ ಪೂರ್ವದಲ್ಲಿ ಮಾಡುವ ಕಾರ್ಯವಾಗಿದೆ. ಇವರಲ್ಲಿ ಹುಡುಗಿಯನ್ನು ತಮ್ಮದಾಗಿಸಿಕೊಳ್ಳುವುದು ಇವರಲ್ಲಿ ವಿಚಿತ್ರವಾಗಿದೆ. ಇವರು ಮೇಳಕ್ಕೆ ಹೋದಾಗ, ಬೇಟೆಗೆ ಹೋದಾಗ ಒಬ್ಬರಿಗೊಬ್ಬರು ಪ್ರೀತಿವಿಶ್ವಾಸ ಸ್ನೇಹ ಬೆಳೆದು ಬೆಡಗುಗಳ ಅನುಸಾರವಾಗಿ ಒಬ್ಬರ ಮಗನಿಗೆ ಇನ್ನೊಬ್ಬರ ಮಗಳನ್ನು ಕೊಡಬೇಕೆಂದು ನಿರ್ಣಯ ತೆಗೆದುಕೊಳ್ಳುತ್ತಾರೆ. ಇದು ನಿಶ್ಚಿತಾರ್ಥಕ್ಕೆ ಮೊದಲು ತೆಗೆದುಕೊಂಡ ನಿರ್ಣಯವಾಗಿರುತ್ತದೆ. ವರನ ಕಡೆಯವರು ವಧುವಿನ ಮನೆಗೆ ಬಂದು ವಧುವನ್ನು ನೋಡಿ ನಿಶ್ಚಯಿಸಿ ತಾಂಬೂಲ ಬದಲಾಯಿಸಿಕೊಳ್ಳುವರು. ಹುಡುಗಿಯ ತಂದೆ ತಾಯಿಗಳನ್ನು ಹೆಂಡದ ಅಂಗಡಿಗೆ ಕರೆದುಕೊಂಡು ಹೋಗಿ, ಅವರಿಗೆ ಹೆಂಡ ಕುಡಿಸಿ ನಿಮ್ಮ ಮಗಳನ್ನು ನಮ್ಮ ಮಗನಿಗೆ ಮದುವೆ ಮಾಡಿಕೊಳ್ಳತ್ತೇವೆಂದು ಹೇಳುತ್ತಾರೆ. ಆ ಹುಡುಗಿಯ ತಂದೆ ತಾಯಿಗಳನ್ನು ಇಷ್ಟಪಟ್ಟರೆ ಹೆಂಡ ಕುಡಿಯುತ್ತಾರೆ. ಇದಕ್ಕೆ ವರನ ತಂದೆ-ತಾಯಿಗಳು ಒಬ್ಬ ಕುಲಸ್ಥನನ್ನು ಕರೆದುಕೊಂಡು ಹೋಗಿ ಹೆಂಡ ಕುಡಿಸಿ ತಮ್ಮ ಸಂಬಂಧವನ್ನು ಖಾಯಂ ಮಾಡಿಕೊಳ್ಳುತ್ತಾರೆ. ಈ ವಿಧಾನವು ಬುಡ್ಗ ಜಂಗಮರಲ್ಲಿ ಇತರ ಸಮುದಾಯದವರಂತೆ ಕಂಡುಬಂದರೂ ಕೂಡ ತಮ್ಮದೇಯಾದ ವಿಶಿಷ್ಟತೆಯನ್ನು ಅಳವಡಿಸಿಕೊಂಡಿರುವುದನ್ನು ನೋಡಬಹುದಾಗಿದೆ. ಈ ಸಮುದಾಯದಲ್ಲಿ ಹೆಣ್ಣು ಮಗಳು ಋತುಮತಿಯಾದ ಒಂದೆರೆಡು ತಿಂಗಳು ಇಲ್ಲವೆ ಒಂದೆರೆಡು ವರ್ಷದೊಳಗೆ ತಮ್ಮ ಬೆಡಗು ಅಲ್ಲದ, ಹೆಣ್ಣಿನ ರಕ್ತ ಸಂಬಂಧಿಯಾಗಿರಬಹುದು ಅಥವಾ ಅದೇ ಸಮುದಾಯದ ಅನ್ಯ ಬೆಡಗಿನವರಾಗಿರಬಹುದು ತಮ್ಮ ಸಮುದಾಯದ ಸಂಪ್ರದಾಯದಂತೆ ಅನುಸರಿಸಿ ಕುಲ ಗೋತ್ರಗಳು ಅಥವಾ ಬೆಡಗಿಗೆ ಅನುಸಾರವಾಗಿ ಮೊದಲು ಒಂದು ಕುಟುಂಬದಲ್ಲಿ ಹೆಣ್ಣು ಮೈನೆರೆತಿರುವುದನ್ನು ಅವರಿಂದ ಕೇಳಿ ಅಥವಾ ನೋಡಿ ಮದುವೆ ಆಗಲಿರುವ ಗಂಡಿನ ಮನೆಯವರು ಹೆಣ್ಣಿನ ಕುಟುಂಬದವರ ಗುಣಸ್ವಭಾವಗಳನ್ನು ತಿಳಿದುಕೊಂಡು, ಅವರಲ್ಲಿ ಯರಾದರೂ ಮದುವೆಯಾದ ಮಕ್ಕಳಿದ್ದರೆ ಯಾವ ರೀತಿ ಜೀವನ ನಡೆಸುತ್ತಿದ್ದಾರೆಂದು ಮನೆತನವನ್ನು ವಿಚಾರಿಸಿ ಎಲ್ಲಾ ವಿಧದಲ್ಲಿ ಮೆಚ್ಚುಗೆಯಾದ ಮೇಲೆ ಸಂಬಂಧ ಬೆಳೆಸಲು ನಿರ್ಧರಿಸುತ್ತಾರೆ.

ನಿಶ್ಚಿತಾರ್ಥ ಮಾಡುವ ದಿನದಂದು ಮುಂಜಾನೆ ವರನ ತಂದೆ-ತಾಯಿ ಕುಲದ ಹಿರಿಯರನ್ನು ಕರೆದುಕೊಂಡು ಹುಡುಗಿಯ ಮನೆಯ ಮುಂದೆ ಕುಳಿತ ಮೇಲೆ, ಕುಲದ ಹಿರಿಯ ಗಂಡನ ತಂದೆಯನ್ನು ಕುರಿತು ಮನೆಯ ಹೆಸರು ಸಂಭೋದಿಸಿ ಉದಾ. ಅಶ್ವಿ, ತೂರ್ಪಾಟೆ, ವಿಭೂತಿ, ಪಸ್ತಂ, ಯಡವಲಿ ಮುಂತಾದವು. ಏನಪ್ಪ ಅಶ್ವಿಯಾನ ಇಷ್ಟು ಮಂದಿ ಕುಲಸ್ಥರನ್ನು ಯಡವಲಿವರ ಮನೆ ಮುಂದೆ ಕಲೆ ಹಾಕಿದ್ದಿಯಾ ಏನು ಸಂಗತಿ? ಎಂದು ಕೇಳುತ್ತಾನೆ. ಆಗ ಹುಡುಗನ ತಂದೆ ಕುಲಕ್ಕೆ ಶರಣಾರ್ತಿ ಎಂದು ಹೇಳಿ, ನಾನು ನಮ್ಮ ತಾತ ಮುತ್ತಾತಂದಿರ ಕಾಲದಿಂದ ಬಾಳುವೆ ಮಾಡುತ್ತಾ ಈ ಗಡ್ಡೆಗೆ (ಪ್ರದೇಶ) ಬಂದಿದ್ದೇನೆ. ನಮ್ಮ ತಾತ, ತಂದೆ ನಾವು ಬದುಕಿದ್ದು ನಿಮಗೆ ಎಲ್ಲಾ ಗೊತ್ತಿದೆ. ನಾವು ಒಳ್ಳೆಯವರೋ ಇಲ್ಲವೋ ನಿಮಗೆ ತಿಳಿದಿದ್ದೆ ಇದೆ. ನಾವು ಹೊಡೆದಾಡಿದ್ದು, ಎಲ್ಲಿಯಾದರೂ ದಂಡ ಕಟ್ಟಿದ್ದು, ದ್ರೋಹ ಬಗೆದದ್ದು, ಒಬ್ಬನನ್ನು ಕೈಎತ್ತಿ ಹೊಡೆದಿದ್ದು, ಹತ್ತು ಮಂದಿಗೆ ಸಹಾಯ ಮಾಡಿದ್ದು, ನಾವು ಎಂಥವರು ಎಂದು ನಿಮಗೆ ಗೊತ್ತಿದೆ. ನಮ್ಮ ಹೊಟ್ಟೆಯಲ್ಲಿ ಬುಡುಮೆ ಕಾಯಿಯಂತಹ

ಮಗ ಹುಟ್ಟಿದ್ದಾನೆ. ಅವನಿಗೆ ಅಂಬಲಿಯಂತ ಹುಡುಗಿಯನ್ನು ನೋಡಿ, ಹೆಂಡ ಹಾಕಿಸೋಣ ಅಂತ, ಈ ವಿಭೂತಿಯಾತನ ಮನೆಯಲ್ಲಿ ಅಂಬಲಿ ಇದೆ ಎಂದು ಬಂದಿದ್ದೇನೆ ಎಂದು ಹೇಳುತ್ತಾನೆ. ಆಗ ಕುಲದ ಹಿರಿಯ ವಧುವಿನ ತಂದೆಯನ್ನು ಉದ್ದೇಶಿಸಿ ಏನಯ್ಯಾ ಯಡವಲಿಯಾನ, ಅಶ್ವಿಯಾನ ಬಂದಿದ್ದಾನೆ. ಇದಕ್ಕೆ ನೀವು ಏನು ಹೇಳುತ್ತೀರಿ? ನಿಮ್ಮ ಮನೆಯಲ್ಲಿ ಅಂಬಲಿ ಇದೆಯಂತ ಬಂದಿದ್ದಾನೆ ಎಂದು ಕುಲಸ್ಥರು ವಿಚಾರಿಸಿದಾಗ ವಧುವಿನ ತಂದೆ; ಕುಲಕ್ಕೆ ನಮಸ್ಕಾರ ಶರಣು ಶರಣಾರ್ತಿ, ಕುಲವಿಲ್ಲದೆ ಮನುಷ್ಯವಿಲ್ಲ. ವನವನ್ನು ಬಿಟ್ಟು ಕೋತಿ ಇಲ್ಲವೆಂದು ದೊಡ್ಡವರು ಹೇಳುತ್ತಾರೆ. ಅಶ್ವಿಯಾನ ನಮ್ಮ ಮನೆಗೆ ಬಂದಿದ್ದಾನೆ. ಒಳ್ಳೆಯದೇ ಆಯ್ತು. ನನಗೊಂದು ಬುಡಿಮೆಕಾಯಿಯಂತ ಮಗಳು ಇದ್ದಾಳೆ. ಹೆಣ್ಣು ಇದ್ದ ಮನೆಗೆ ನಾಲ್ಕು ಜನ ಬರುವುದು, ಹೋಗುವುದು ಸಹಜ. ಎಷ್ಟಿದ್ದರೂ ಹೆಣ್ಣು ಬೇರೆ ಮನೆಯವರ ಆಸ್ತಿ. ನಮ್ಮ ಹುಡುಗಿಯನ್ನು ಕುಲಕ್ಕೆ ಕೊಡದಿದ್ದರೆ ಮನೆಯಲ್ಲಿ ಇಟ್ಟುಕೊಳ್ಳುತ್ತೇನೆಯೇ? ಕೊಟ್ಟ ಹುಡುಗಿಯ ತಲೆಗೆ ಎಣ್ಣೆ, ಮೈಗೆ ಬಟ್ಟೆ, ಹೊಟ್ಟೆ ತುಂಬ ಊಟ ಕೊಟ್ಟರೆ ಸಾಕು ಎಂದು ಕುಲಸ್ಥರಿಗೆ ಹೇಳುತ್ತಾನೆ. ಒಂದು ವೇಳೆ ತಂದೆ ಒಪ್ಪಿದರೆ, ತಾಯಿಯನ್ನು ಕೇಳುತ್ತಾರೆ. ನನ್ನ ಮಗಳಿಗೆ ಜಿದ್ದು ಇಲ್ಲ, ಕೆಟ್ಟ ಬುದ್ದಿಇಲ್ಲ, ಸುಳ್ಳು ತಾರತಿಗಿಡಿ ತಿಳಿಯದು ಮತ್ತೆ ಅವರು ನನ್ನ ಮಗಳನ್ನು ಹೇಗೆ ನೋಡಿಕೊಳ್ಳುತ್ತಾರೆ ಎಂದು ಕುಲಸ್ಥರನ್ನು ಕೇಳುತ್ತಾಳೆ. ನಮ್ಮ ಹುಡುಗಿ ಈಗ ಕುಲದ ಸಮುದಾಯದ ಹುಡುಗಿ ಅವಳನ್ನು ಕುಲದ ಕೈಯಲ್ಲಿ ಕೊಡುತ್ತಿದ್ದೇನೆ ಎಂದು ಕುಲಸ್ಥರಿಗೆ ಹೇಳುತ್ತಾಳೆ. ನಂತರ ಕುಲಸ್ಥರು ಹುಡುಗಿಯ ಚಿಕ್ಕಪ್ಪ ಮತ್ತು ದೊಡ್ಡಪ್ಪ ಅವರನ್ನು ಕೇಳುತ್ತಾರೆ. ಅಯ್ಯಾ ಕೇಳುವುದೇನಿದೆ, ಹೇಳುವುದೇನಿದೆ ಅವರಾಡಿದ ಮಾತಿಗೆ ನಾವಿರುತ್ತೇವೆ ಎಂದು ಹೇಳುತ್ತಾರೆ. ಅವರಿಗೆ ಇಷ್ಟ ಆದರೆ ಸಾಕು ನಾವೆಲ್ಲ ಅವರ ಜೊತೆಗೆ ಇರುತ್ತೀವಿ ಎಂದು ಹೇಳಿ ನಿಶ್ಚಿತಾರ್ಥ ಮಾಡಿಕೊಳ್ಳುತ್ತಾರೆ.

**ಬುದ್ದಿ ಮಾತುಗಳು:** ಬುಡ್ಗ ಜಂಗಮರ ನಿಶ್ಚಿತಾರ್ಥ ಸಂದರ್ಭದಲ್ಲಿ ಕುಲಸ್ಥರು ಹುಡುಗ ಹುಡಿಗಿಯ ಎರಡು ಕುಟುಂಬದ ಅತ್ತೆಮಾವಂದಿಯರಿಗೆ ಕುಲಸ್ಥರು ಬುದ್ದಿಮಾತುಗಳನ್ನು ಹೇಳುತ್ತಾರೆ. ಕೊಟ್ಟ ಹುಡುಗಿಗೆ ತಲೆಗೆ ಎಣ್ಣೆ, ಮೈಗೆ ಬಟ್ಟೆ, ಹೊಟ್ಟೆಗೆ ತಿಂಡಿ ಕಡಿಮೆ ಮಾಡಬಾರದು. ಹುಡುಗಿ ಸಣ್ಣಪುಟ್ಟ ತಪ್ಪು ಮಾಡಿದರೆ, ಹೊಟ್ಟೆಯಲ್ಲಿ ಹಾಕಿಕೊಂಡು, ಮಗ ತಪ್ಪು ಮಾಡಿದರೆ ಮಗನಿಗೆ ಬುದ್ಧಿ ಹೇಳಬೇಕು. ಹುಡುಗಿಯ ಅತ್ತೆಯನ್ನು ಉದ್ದೇಶಿಸಿ ಹಾಲಿನ ಸೋರೆ ಹೊಡೆಯದಂತೆ ನೋಡಿ ಕೊಳ್ಳಬೇಕು. ಬುದ್ದಿಹೇಳಿ ಸರಿಪಡಿಸಿಕೊಳ್ಳಬೇಕು. ಹುಡುಗಿ ಎಷ್ಟು ಹೇಳಿದರೂ ಕೇಳದಿದ್ದರೆ ಕುಲಕ್ಕೆ ಹೇಳಿ ಮುಖಕ್ಕೆ ಹೊಡೆಸಬೇಕು. ಆಮೇಲೆ ಮದುವೆಯ ಗಂಡು ಮಾವನಿಗೆ ಕೆಲಸದಲ್ಲಿ ಯಾವ ರೀತಿ ಸಹಾಯ ಮಾಡಬೇಕು ಎಂದು ಕುಲಸ್ಥರು ಹೇಳುತ್ತಾರೆ. ಆಗ ಎಲ್ಲರೂ ಒಪ್ಪಿಕೊಂಡು ನೆರೆದಿರುವ ಎಲ್ಲರಿಗೆ ಎಲೆಅಡಿಕೆ, ಸಕ್ಕರೆ ಹಾಕಿ ತಾಂಬೂಲವನ್ನು ಮೊದಲಿಗೆ ಕುಲದೇವರಿಗೆ, ನಂತರ ಹುಡಿಗಿಯ ತಾಯಿಗೆ, ಹುಡಿಗಿಯ ತಂದೆಗೆ, ನಂತರ ಎಲ್ಲಾ ಬೆಡಗಿನವರಿಗೆ ಹಾಗೂ ಗುರು ಹಿರಿಯರಿಗೆ ತಾಂಬೂಲವನ್ನು ಕೊಡುತ್ತಾರೆ. ನಂತರ ಅವರವರ ಮನೆಯಿಂದ ತಂದ ತಾಂಬೂಲವನ್ನು ಬದಲಾಯಿಸಿಕೊಳ್ಳುತ್ತಾರೆ.

**ಕುಲದ ಕಟ್ಟಾಚಾರ:** ಬುಡ್ಗ ಜಂಗಮರಲ್ಲಿ ಕುಲದ ಕಟ್ಟಾಚಾರದಂತೆ ಹೆಣ್ಣು ತಮ್ಮದಾಗಿಸಿಕೊಳ್ಳಲು ನಿಶ್ಚಯ ಕಾರ್ಯಕ್ರಮಕ್ಕೆ ಗಂಡಿನವರು ೧,೦೦೧, ಹೆಣ್ಣಿನಕಡೆಯವರು ೫೦೧ ರೂಪಾಯಿಗಳನ್ನು

ಕುಲಕ್ಕೆ ಕೊಡುತ್ತಾರೆ, ನಂತರ ಚಹಾ ಅಥವಾ ಸರಾಯಿ ಕುಡಿಸಿ ಊಟ ಮಾಡಿಸುತ್ತಾರೆ. ಈ ಹಿಂದೆ ಕುಲದ ಕಟ್ಟಾಚಾರವು ಹರಿಷಿಣ ಕೊಂಬು, ಎಲೆ ಅಡಿಕೆ, ಹೆಂಡ ಸರಾಯಿ, ಎರಡುರೂಪಾಯಿ, ೧೧ ರೂಪಾಯಿ, ೨೧, ೨೫, ೫೦, ೧೦೧ ರೂಪಾಯಿ ಹೀಗೆ ಹಂತ ಹಂತವಾಗಿ ಕುಲಾ ಕಟ್ಟಾಚಾರ ಕೊಡಲಾಗುತಿತ್ತು. ಈ ಕುಲಕಟ್ಟಡವನ್ನು ಊರಲ್ಲಿ ದೇವಸ್ಥಾನಕ್ಕೆ ಅಥವಾ ಬಿಡಾರು ಆಚರಣೆಗೆ ಬಳಸುವುದನ್ನು ಕಾಣಬಹುದು.

**ಮುಂತಕಲ್ಲು(ಹೆಂಡ ಅಥವಾ ಸರಾಯಿ ಕುಡಿಸುವುದು)**: ಬುಡ್ಗ ಜಂಗಮರಲ್ಲಿ ಮುಖ್ಯವಾಗಿ ಕುಲಪದ್ಧತಿಯಂತೆ "ಮುಂತಕಲ್ಲು"ನ್ನು ಹಂಚುತ್ತಾರೆ. ಅಂದರೆ ಒಂದು ಗ್ಲಾಸ್ ಹೆಂಡ ಎಂದರ್ಥ, (ಹೆಂಡ ಅಥವಾ ಸರಾಯಿ ಕುಡಿಸುವುದು) ನೆರೆದ ಹಿರಿಯರಿಗೆ ಹಾಗೂ ಆ ಸಮುದಾಯದ ಗ್ರಾಮದಲ್ಲಿ ಎಷ್ಟು ಮನೆಗಳು ಇರುತ್ತವೇಯೋ ಅಷ್ಟು ಕುಟುಂಬಗಳಿಗೆ (ಗಂಡ+ಹೆಂಡತಿ ಜೊಡಿಗೆ) ಒಂದರಂತೆ ಹೆಂಡ ಅಥವಾ ಸರಾಯಿಯನ್ನು ಹಂಚುತ್ತಾರೆ. ಹಿಂದಿನ ಕಾಲದಲ್ಲಿ ಕುಡಿಯಲು ಈಚಲು ಮರದ ಹೆಂಡವನ್ನು ಹಂಚುತ್ತಿದ್ದರು. ಇಂದು ಸರಾಯಿ ಅಥವಾ ಬ್ರಾಂದಿ, ವಿಸ್ಕಿಯನ್ನು ಹಂಚುವರು. ಮದ್ಯಪಾನ ಮಾಡದವರಿಗೆ ಹಾಗೂ ಹೆಣ್ಣು ಮಕ್ಕಳಿಗೆ, ಚಿಕ್ಕ ಮಕ್ಕಳಿಗೆ ಕೂಲ್‌ಡ್ರಿಂಕ್ಸ್ ಹಂಚುವರು. ಈಗಲೂ ಈ ಪರಂಪರೆಯನ್ನು ಬುಡ್ಗ ಜಂಗಮರು ಮುಂದುವರಿಸಿಕೊಂಡು ಬರುತ್ತಿದ್ದಾರೆ. ನೆಲೆನಿಂತ ಸಮುದಾಯಗಳಂತೆ ಸೋದರಮಾವನಿಗೆ (ಸೋದರಮಾವನ ಸೊಲ್ಲು) "ಶುಲ್ಕ" ಕೊಡುವ ಪದ್ಧತಿ ಇವರಲ್ಲಿ ಇಲ್ಲ. ಆದರೆ ಸೋದರಮಾವನು ನಿಶ್ಚಯ ಮತ್ತು ಮದುವೆ ಕಾರ್ಯದಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಾನೆ. ಒಟ್ಟಾರೆಯಾಗಿ ಈ ಎಲ್ಲಾ ಕಾರ್ಯಗಳ ನಂತರ ನಿಶ್ಚಿತಾರ್ಥ ಮುಗಿಯುತ್ತದೆ. ನಂತರದ ಹಂತವೇ ಮದುವೆ. ನಿಶ್ಚಯದ ನಂತರ ಈ ಎರಡು ಕುಟುಂಬಗಳ ಸಂಬಂಧ ಕ್ಷೇಮಾವಾಗಿ ಮುಂದುವರೆದರೆ ಕೆಲವೇ ತಿಂಗಳುಗಳಲ್ಲಿ ಅಥವಾ ಒಂದೆರೆಡು ವರ್ಷಗಳೊಳಗೆ ಮದುವೆ ನಡೆಯುತ್ತದೆ. ಹಾಗೆಯೇ ಪ್ರಸ್ತುತ ಸಂದರ್ಭದಲ್ಲಿ ಬುಡ್ಗ ಜಂಗಮರಲ್ಲಿಯೂ ಸಹ ನಿಶ್ಚಿತಾರ್ಥ ನಂತರವೂ ಸಂಬಂಧಗಳಲ್ಲಿ ವೈಮನಸ್ಸುಗಳುಂಟಾಗಿ ಮಾಡಿದ ನಿಶ್ಚಿತಾರ್ಥವು ಮುರಿದು ಬೀಳುತ್ತಿರುವುದು ಕಂಡುಬರುತ್ತದೆ. ಆದರೆ ಹಿಂದಿನ ಕಾಲದಲ್ಲಿ ಬುಡ್ಗ ಜಂಗಮರಲ್ಲಿ ಇಂತಹ ಸಂಬಂಧಗಳು ಕೇವಲ ಮಾತಿನ ಮೂಲಕ ಏರ್ಪಡುತ್ತಿತ್ತಾದರು ಮುರಿದುಬೀಳುವ ಪ್ರಸಂಗಗಳು ಕಂಡುಬರುತ್ತಿರಲಿಲ್ಲ. ಇಂದಿನ ನೆಲೆನಿಂತ ಸಮುದಾಯಗಳಂತೆ ಮೊದಲು ಹುಡುಗ ಹುಡುಗಿ ಏನೂ ಓದಿದ್ದಾಳೆ. ಎಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರಿಗೆ ದೇಹದ ಅಂಗಾಂಗಳು ಸರಿ ಇದಾವೆಯೇ ಎಂದು ಎಲ್ಲವನ್ನೂ ನೋಡಿ ಮದುವೆ ಮಾಡಿಕೊಳ್ಳುವ ಪದ್ಧತಿ ಇವರಲ್ಲಿ ಇಲ್ಲ. ಹುಡುಗ ಹುಡಿಗಿ ಕುರುಡಾರಾಗಲಿ, ಕುಂಟನಾಗಿರಲಿ ಕಣ್ಣುಮುಚ್ಚಿಕೊಂಡು ಹಿರಿಯರು ಗುರುತಿಸಿದ ಗಂಡು ಹೆಣ್ಣನ್ನು ಒಪ್ಪಿ ಮದುವೆಯಾಗುವ ಪದ್ಧತಿ ಬುಡ್ಗ ಜಂಗಮರಲ್ಲಿದೆ. ಹುಡುಗ, ಹುಡಿಗಿ ನಿಶ್ಚಯ ಮಾಡುವ ದಿನದಂದು ಇರಬೇಕೆಂದೇನು ಇಲ್ಲ. ತಮ್ಮ ಮನೆಯ ಹಿರಿಯರು ಹುಡಿಗಿಯ ಮನೆಗೆ ಹೋಗಿ ಈ ಕಾರ್ಯವನ್ನು ಮಾಡಿಕೊಳ್ಳುತ್ತಾರೆ. ಇತ್ತೀಚಿನ ದಿನಗಳಲ್ಲಿ ಅನ್ಯ ಸಮುದಾಯಗಳ ಪ್ರಭಾವದಿಂದ ಗಂಡು ಹೆಣ್ಣು ಒಪ್ಪಿಗೆ ಮೇರೆಗೆ ನಿಶ್ಚಯ ಮಾಡಿಕೊಳ್ಳುವ ಪದ್ಧತಿಯನ್ನು ಕಾಣಬಹುದು.

**ಪುಲ್ಲವಿರುಪು (ಕಡ್ಡಿಯನ್ನು ಮುರಿವುದು):** ಒಂದು ವೇಳೆ ಆ ಹುಡುಗಿಯನ್ನು ಮದುವೆ ಮಾಡಿಕೊಳ್ಳುವುದು ಇಷ್ಟವಿಲ್ಲದಿದ್ದರೆ, ಈ ಹುಡುಗಿಯನ್ನು ಇಂತಹ ಸಮಸ್ಯೆಯಿಂದ ಮಾಡಿಕೊಳ್ಳುವುದಿಲ್ಲ ಎಂದು ಹೇಳಿ ಕುಲಾಚಾರದ ಪ್ರಕಾರ ಒಂದು ಕಡ್ಡಿಯನ್ನು ಮುರಿದು ಹಾಕಬೇಕು. ಇದನ್ನು ಸಂಬಂಧ ಕಡಿದು ಕೊಳ್ಳುವುದು (ಪುಲ್ಲವಿರುಪು) ಎಂದು ಕರೆಯುತ್ತಾರೆ. ಹೋಟೆಲ್‌ಗೆ ಹೋಗಿ ಪಾವಲ ನಾಣ್ಯ ಇಟ್ಟು ಟೀ ಅಥವಾ ಚಹಾ ಕೊಟ್ಟು ಸಂಬಂಧವನ್ನು ಕಳೆದುಕೊಳ್ಳುತ್ತಾರೆ. ವರನ ಕಡೆಯವರು ವಧುವಿನ ಸಂಬಂಧ ಕಳೆದುಕೊಂಡರೆ, ವಧುವಿನ ಕಡೆಯವರು ನಿಶ್ಚಯ ಮಾಡಿದ ಖರ್ಚು ಕೊಡಬೇಕು. ವಧುವಿನ ನಡತೆಗಳು ಮೆಚ್ಚದಿದ್ದರೆ ವರನ ಕಡೆಯವರು ಏನು ಕೊಡುವ ಹಾಗಿಲ್ಲ. ಹೀಗೆ ಸಂಬಂಧ ಮುರಿದುಕೊಳ್ಳುತ್ತಾರೆ. ಹೀಗೆ ಬುಡ್ಗ ಜಂಗಮರಲ್ಲಿ ಅಂದು ವಿವಾಹಕ್ಕೆ ವ್ಯಕ್ತಿಗತವಾದ ಸ್ವಾತಂತ್ರವನ್ನು ಇಲ್ಲದಾಗಿತ್ತು. ಆದರೆ ಇಂದು ಆಧುನಿಕ ನಾಗರೀಕತೆಯ ಪ್ರಭಾವದಿಂದ ಕೆಲವು ಆಚರಣೆಗಳಲ್ಲಿ ಬದಲಾವಣೆಗಳನ್ನು ಕಾಣಬಹುದಾಗಿದೆ. ವ್ಯಕ್ತಿಗತ ಸ್ವಾತಂತ್ರ್ಯವನ್ನರಿತು ಮದುವೆಗೆ ಸಂಬಂಧಿಸಿದಂತೆ ಸ್ವತಂತ್ರ ನಿರ್ಧಾರಕ್ಕೆ ಮುಂದಾಗಿರುವುದು ಕಂಡುಬರುತ್ತದೆ.

ಬುಡ್ಗ ಜಂಗಮರಲ್ಲಿ ಕನ್ಯಾಶುಲ್ಕ ವಿವಾಹ, ಸೇವಾವಿವಾಹ, ಬಾಲ್ಯವಿವಾಹ, ಭಿಕ್ಷಾವಿವಾಹ, ಒಳಬಾಂಧವ್ಯ ವಿವಾಹ, ಉಡಿಕೆ(ವಿಧವಾ) ವಿವಾಹ, ವಿವಾಹ ವಿಚ್ಛೇದನ ವಿವಾಹಗಳನ್ನು ಆಗುವುದನ್ನು ಕಾಣಬಹುದು.

**ಕನ್ಯಾಶುಲ್ಕ ವಿವಾಹ:** ವರನ ಕಡೆಯವರು ವಧುವಿನ ತಂದೆ ತಾಯಿಗಳಿಗೆ ಹೆಂಡ, ಸರಾಯಿ, ವಸ್ತುಗಳು ಅಥವಾ ಎರಡಾಣೆ(ಬೇಡ)ಹಣದ ರೂಪದಲ್ಲಿ ಕನ್ಯಾಶುಲ್ಕ ಕೊಟ್ಟು ಮದುವೆಯಾಗುವ ಪದ್ಧತಿ ಇದಾಗಿದೆ. ಈ ಪದ್ಧತಿಯು ಬುಡ್ಗ ಜಂಗಮರಲ್ಲಿ ಇಂದಿಗೂ ಕಾಣಬಹುದಾಗಿದೆ.

**ಸೇವಾ ವಿವಾಹ:** ಬುಡ್ಗ ಜಂಗಮರಲ್ಲಿ ಮದುವೆ ಆಗಬಯಸುವ ಹುಡುಗನು ಕನ್ಯೆಯ ಮನೆಯಲ್ಲಿ ಅತ್ತೆ ಮಾವಂದಿರಿಗೆ ವಿಧೇಯರಾಗಿ ತಮ್ಮ ಅಲೆದಾಟದಲ್ಲಿ ತೊಡಗಿಸಿಕೊಂಡು ಅವರ ಕುಟುಂಬದಲ್ಲಿ ಚಾಕರಿ ಮಾಡುತ್ತಾ ಸೇವೆ ಸಲ್ಲಿಸುತ್ತಾನೆ. ಈ ಸೇವೆಯು ಅತ್ತೆಮಾವ ತೃಪ್ತಿಯಾಗುವತನಕ ಮತ್ತು ಕನ್ಯೆಯ ವರನನ್ನು ಒಪ್ಪುವತನಕ, ಹುಡುಗನ ಗುಣಾವಗುಣಗಳನ್ನು ಪರೀಕ್ಷಿಸಿ ಸಂಪ್ರದಾಯದ ಪ್ರಕಾರ ಮದುವೆ ನೆರವೇರಿಸುತ್ತಾರೆ. ಒಮ್ಮೊಮ್ಮೆ ಸೇವೆ ಮಾಡುತ್ತಿರುವ ಅಳಿಯನ ಮೇಲೆ ನಂಬಿಕೆ ಬಾರದಿದ್ದರೆ ಹುಡುಗಿಯನ್ನು ಕೊಡುವುದಿಲ್ಲ.

**ಬಾಲ್ಯವಿವಾಹ:** ಬುಡ್ಗ ಜಂಗಮರಲ್ಲಿ ಬಾಲ್ಯವಿವಾಹಗಳು ಸಾಮಾನ್ಯವಾಗಿವೆ. ಮೊದಲು ಹುಟ್ಟಿದ ಕೂಸಿಗೆ ಎರಡು ತೊಟ್ಟಿಲು ಹಾಕಿ, ತೊಟ್ಟಿಲೋಳಗೆ ಇದ್ದ ಎಳೇ ಮಕ್ಕಳ ಹೊಕ್ಕುಳಕ್ಕೆ ದಾರಗಂಟು ಹಾಕಿ ಮದುವೆ ಮಾಡುತ್ತಿದ್ದರು ಎಂದು ಹೇಳುತ್ತಾರೆ. ಇವರಲ್ಲಿ ಬಾಲ್ಯವಿವಾಹವಾಗಲು ಅನೇಕ ಕಾರಣಗಳನ್ನು ನೋಡಬಹುದು, ಅಕ್ಕನ ಮದುವೆಯ ಜೊತೆಗೆ ತಂಗಿಯ ಮದುವೆಯನ್ನು ಮಾಡಿದರೆ ಖರ್ಚು ಉಳಿತಾಯವಾಗುವುದು. ಚಿಕ್ಕವರಾಗಿ ಇರುವಾಗ ಮದುವೆ ಮಾಡಿ ನಮ್ಮ ಜವಬ್ದಾರಿಯನ್ನು ಕಳೆದುಕೊಳ್ಳಬೇಕು ಎಂಬ ಕಾರಣದಿಂದ ಬಾಲ್ಯವಿವಾಹವನ್ನು ಅನುಸರಿಸಿಕೊಂಡು ಬರುತ್ತಾರೆ. ಇದರ ಜೊತೆಗೆ ಕುಟುಂಬದಲ್ಲಿರುವ ವೃದ್ಧರು ತಾವು ಸಾಯುವುದಕ್ಕಿಂತ ಮೊದಲು ಮೊಮ್ಮಗನ ಅಥವಾ

ಮೊಮ್ಮಗಳ ಮದುವೆ ನೋಡಬೇಕೆಂಬ ಬಯಕೆ ಮತ್ತು ಆಸೆಗಳು ಈ ಬಾಲ್ಯವಿವಾಹ ನಡೆಸಲು ಕಾರಣರಾಗುತ್ತಾರೆ. ಇನ್ನೊಂದು ಕಾರಣವೆನೆಂದರೆ ವಯಸ್ಸಾದ ಮೇಲೆ ಮದುವೆ ಮಾಡಲು ಹೋದರೆ ಮದುವೆಯಾಗಲು ಯಾರು ಬರದೇ ಹೋದಾಗ ಅಥವಾ ಇತ್ತೀಚಿನ ದಿನಗಳಲ್ಲಿ ಅತ್ಯಾಚಾರ, ಲೈಂಗಿಕ ಕಿರುಕುಳಾದರೆ ಯಾರು ಜವಾಬ್ದಾರಿ ಎಂದು ಬೇಗ ಮದುವೆಯನ್ನು ಮಾಡಿ ತಮ್ಮ ಜವಬ್ದಾರಿಯನ್ನು ಕಳೆದುಕೊಳ್ಳಲು ಬಯಸುತ್ತಾರೆ. ಬಾಲ್ಯವಿವಾಹವನ್ನು ಇವರು ಸುಮಾರು ೧೨ ರಿಂದ ೧೭ ವಯಸ್ಸು ನವರೆಗೆ ಇರುವ ಮಕ್ಕಳನ್ನು ಬಾಲ್ಯವಿವಾಹವನ್ನು ಮಾಡುತ್ತಾರೆ. ಅಂದರೆ ಹುಡುಗಿ ಋತುಮತಿಯಾದರೆ ಸಾಕು ಇವಳು ಕೈಗೆ ಬಂದಿದ್ದಾಳೆ, ವಯಸ್ಸಿಗೆ ಬಂದಿದ್ದಾಳೆ, ಮದುವೆಗೆ ಸಿದ್ಧಳು ಎಂದು ಗುರುತಿಸುತ್ತಾರೆ. ಈ ರೀತಿಯ ವಿವಾಹದ ರಚನೆಯನ್ನು ಅನಾದಿಕಲಾದಿಂದಲೂ ಈ ಸಮುದಾಯವು ಒಪ್ಪಿತಗೊಂಡಿದೆ.

**ಭಿಕ್ಷಾ ವಿವಾಹ:** ಬುಡ್ಗ ಜಂಗಮರಲ್ಲಿ ಒಂದು ಕಾಲದಲ್ಲಿ ಮಗಳನ್ನು ಮದುವೆ ಮಾಡಿ ಕೊಡಬೇಕಾದರೆ ಅವನು ಎಷ್ಟು ವೇಷಗಳನ್ನು ಹಾಕುತ್ತಾನೆ, ಬೇಟೆಗೆ ಹೋಗಿ ಎಷ್ಟು ಕೌಜುಗ, ಪುಲ್ಲಕೋಡಿ(ನೀರುಕೋಳಿ) ಮೊಲ, ನರಿ, ಕಾಡುಬೆಕ್ಕುಗಳನ್ನು ತರುತ್ತಾನೆ ಎಂದು ನೋಡಿ ಅವನ ಬುದ್ಧಿಶಕ್ತಿ, ಸಾಮರ್ಥ್ಯ ನೋಡಿ ಕನ್ಯೆಯನ್ನು ಕೊಡುತ್ತಿದ್ದರು.

**ಒಳಬಾಂಧವ್ಯ ವಿವಾಹ:** ತಮ್ಮ ಸಮುದಾಯದಲ್ಲೆ ಹೆಣ್ಣು-ಗಂಡುಗಳನ್ನು ಕೊಡುವ ಮತ್ತು ತರುವ ವೈವಾಹಿಕ ಪದ್ಧತಿಗೆ 'ಒಳಬಾಂಧವ್ಯ' ವಿವಾಹ ಅಥವಾ ರಕ್ತ ಸಂಬಂಧಿ ವಿವಾಹ ಎನ್ನಲಾಗಿದೆ. ಪುರಾತನ ಕಾಲದಿಂದಲೂ ಈ ವಿವಾಹ ಪದ್ಧತಿ ಅನೇಕ ಸಮುದಾಯಗಳಲ್ಲಿ ಕಂಡುಬರುತ್ತದೆ. ಅದೇರೀತಿಯಾಗಿ ಬುಡ್ಗ ಜಂಗಮರಲ್ಲಿ ಈ ವಿವಾಹ ಪದ್ಧತಿ ಜೀವಂತವಾಗಿದೆ. ನಮ್ಮ ಮಕ್ಕಳು ತಮ್ಮ ಎದುರಿನಲ್ಲಿ ಇರಬೇಕು, ತವರು ಮನೆಗೆ ಕೊಡಬೇಕೆಂಬ ಆಸೆಯಿಂದ, ರಕ್ತ ಪರಿಶುದ್ಧತೆಗಾಗಿಯೂ, ಭಾವನಾತ್ಮಕ ಸಂಬಂಧಗಳಿಗಾಗಿಯೂ ತಮ್ಮ ಸಮುದಾಯಗಳಲ್ಲಿಯೇ ವಿವಾಹ ಮಾಡುವರು. ಈ ವಿವಾಹ ಪದ್ಧತಿ ಎಲ್ಲ ಅಲೆಮಾರಿ ಸಮುದಾಯಗಳಲ್ಲಿ ಕಂಡುಬರುತ್ತದೆ.

**ಉಡಿಕೆ(ವಿಧವಾ) ವಿವಾಹ:** ಮದುವೆಯಾದ ಗಂಡನು ಸತ್ತರೆ ಅಥವಾ ವಿಚ್ಛೇಧನ ನೀಡಿದರೆ ಹೆಣ್ಣು ಒಪ್ಪಿದ ಬೇರೊಬ್ಬರೊಡನೆ ಸಂಸಾರ ಜೀವನ ಮಾಡಿಕೊಳ್ಳುವ ಒಂದು ಪದ್ಧತಿಯಾಗಿದೆ. ಇದನ್ನು ಉಡುಲಿ, ಉಡಕಿ, ಕೂಡಾವಳಿ, ಕುಡಿಕೆ, ಉಡಿಕೆ ಎಂತಲೂ ಕರೆಯುತ್ತಾರೆ. ವಧುವರರಿಬ್ಬರಿಗೂ ಇದು ಮೊದಲ ಮದುವೆಯಾಗಿರುವುದಿಲ್ಲ. ಹೆಣ್ಣಿಗೆ ಮೊದಲ ಪತಿಯು ಮರಣಹೊಂದಿದ್ದಲ್ಲಿ ಅಥವಾ ವಿವಾಹ ವಿಚ್ಛೇಧನವಾಗಿದ್ದಲ್ಲಿ ಅಥವಾ ಹೆಣ್ಣು ಗಂಡನನ್ನು ಬಿಟ್ಟಿರುವುದಾಗಲಿ ಇರಬೇಕು. ಗಂಡು ಕೂಡ ವಿಧುರ, ವಿಚ್ಛೇಧಿತನಾಗಿದ್ದಲ್ಲಿ ಮರುವಿವಾಹವಾಗಬಹುದು, ವಿಧುರ ವಿಚ್ಛೇಧಿತ ಬಯಸಿದರೆ ಇನ್ನೊಂದು ಕನ್ಯೆಯೊಂದಿಗೆ ಮರುವಿವಾಹವಾಗಬಹುದು. ಇಲ್ಲಿ ವಯಸ್ಸಿನ ಮಿತಿ ಇರುವುದಿಲ್ಲ. ಇಲ್ಲಿ ಗಂಡು ಹೆಣ್ಣು ಇಬ್ಬರಿಗೂ ಮಕ್ಕಳಿರಬಹುದು ಇಲ್ಲದಿರಬಹುದು. ಹೆಣ್ಣು ಮಾತ್ರ ಮೊದಲಿನ ಪತಿಯ ಆಸ್ತಿಗೆ ಹಕ್ಕುದಾರಳಾಗಿರದೆ ಎರಡನೆಯ ಪತಿಯ ಆಸ್ತಿಗೆ ಒಡತಿಯಾಗುತ್ತಾಳೆ. ಗುರುಹಿರಿಯರ

ಮತ್ತು ಕೂಡಿಕೆ ಮಾಡಿಕೊಳ್ಳುವ ಇಬ್ಬರ ಮನಸ್ಸು ಒಪ್ಪಿಗೆ ಇದ್ದರಾಯಿತು ಈ ಮದುವೆ ನೆರವೇರುತ್ತದೆ. ಮದುವೆಯಲ್ಲಿ ಎಲ್ಲಾ ಶಾಸ್ತ್ರಗಳನ್ನು ಮಾಡುವುದಿಲ್ಲ. ಮಕ್ಕಳು ಇದರಲ್ಲಿ ಭಾಗವಹಿಸುವಂತಿಲ್ಲ. ಕೇವಲ ನಾಲ್ಕಾರು ಜನ ಹಿರಿಯರ ಸಮ್ಮುಖದಲ್ಲಿ ರಾತ್ರಿಹೊತ್ತು, ಹೆಣ್ಣು ಗಂಡಿಗೆ ಹೊಸಬಟ್ಟೆ ತೊಡಿಸಿ ಮಾಂಗಲ್ಯ ಕಟ್ಟಿಸುತ್ತಾರೆ. ಇದನ್ನು 'ಉಡಿಕೆ' ವಿವಾಹ ಎಂದು ಕರೆಯುತ್ತಾರೆ. ಒಂದು ವೇಳೆ ಮಕ್ಕಳಿದ್ದರೆ ಅತ್ತೆಮಾವನ ಜೊತೆಯಲ್ಲಿಯೇ ಇದ್ದು, ಮಕ್ಕಳನ್ನು ಜೋಪಾನ ಮಾಡುತ್ತಾ ಜೀವನ ಸಾಗಿಸಬೇಕಾಗುತ್ತದೆ. ಶಿಷ್ಟ ಮೇಲ್ವರ್ಗದ ಸಮಾಜದಲ್ಲಿ ಮಹಿಳೆಯರ ಮೇಲೆ ಹೇರಿದ ಶೀಲ, ಪಾವಿತ್ರ್ಯಾ ಎಂಬ ಶೋಷಣೆಯ ಪರಿಕಲ್ಪನೆಗಳು, ಈ ಅಲೆಮಾರಿ ಜನಾಂಗದಲ್ಲಿಲ್ಲ. ಗಂಡ ಬಿಟ್ಟರೆ, ಇಲ್ಲ ಸತ್ತರೆ, ಹೆಂಡತಿ ಸಾಯುವವರೆಗೂ ಆತನ ನೆನಪಿನಲ್ಲಿ ಪರಿಶುದ್ಧವಾಗಿರುವುದನ್ನೇ ಪತಿವೃತಾಧರ್ಮ ಎಂದು ಹೇಳಿ ಮಹಿಳೆಯರನ್ನು ಮನುವಾದಿ ಸಿದ್ಧಾಂತಗಳು ಕಟ್ಟಿಹಾಕಿವೆ. ಆದರೆ ಬುಡ್ಗ ಜಂಗಮರ ಮತ್ತು ಅಲೆಮಾರಿ ಬುಡಕಟ್ಟು ಜನಾಂಗಗಳಲ್ಲಿ ಗಂಡು ಹೆಣ್ಣಿನ ಸಂಬಂಧಗಳ ನಡುವೆ ಇಂತಹ ಯಾವುದೇ ಕಟ್ಟುಪಾಡುಗಳು ಇರುವುದಿಲ್ಲ. ಗಂಡ ಹೆಂಡತಿಯರ ನಡುವೆ ಹೊಂದಾಣಿಕೆಯಾಗದಿದ್ದರೆ ಆ ಸಂಬಂಧವನ್ನು ಮುರಿದು ಸರಿಹೊಂದುವ ಬೇರೆ ಸಂಗಾತಿಯೊಂದಿಗೆ 'ಉಡಿಕೆ' ಮಾಡಿಕೊಳ್ಳುವ ಜೀವಪರ ಪದ್ಧತಿ ಬುಡ್ಗ ಜಂಗಮರಲ್ಲಿ ಕಾಣಬಹುದಾಗಿದೆ.

**ವಿವಾಹ ವಿಚ್ಛೇದನ:** ಯಾವುದೇ ಸಮುದಾಯದ ಕುಟುಂಬ ಆರೋಗ್ಯಕರವಾಗಿರಬೇಕಾದರೆ ಪತಿ ಪತ್ನಿಯರಿಬ್ಬರೂ ಅನೋನ್ಯದಿಂದ ಕೂಡಿರಬೇಕು. ಇವರಿಬ್ಬರಲ್ಲಿಯೂ ಸಹಕಾರ ಮನೋಭಾವನೆ ಇರಬೇಕು. ಇವರಲ್ಲಿ ಅಸೂಯೆ, ಅನುಮಾನ, ಬೇಸರ ಉಂಟಾದರೆ ವಿವಾಹ ಸಂಬಂಧದ ಜೊತೆಗೆ ಭಾವನಾತ್ಮಕ ಸಂಬಂಧಗಳು ಮುರಿದುಬೀಳುತ್ತವೆ. ಇವು ಕುಟುಂಬ ಮತ್ತು ಮಕ್ಕಳ ಮೇಲೆ ಕೆಟ್ಟ ಪರಿಣಾಮಕ್ಕೆ ಕಾರಣವಾಗುತ್ತದೆ. ಇಂತಹ ಸಮಸ್ಯೆಗಳು ಬಂದಾಗ ಅನಿವಾರ್ಯವಿದ್ದಲ್ಲಿ ವಿಚ್ಛೇದನ ಪಡೆಯಲೇಬೇಕಾಗುತ್ತದೆ. ಹೀಗೆ ವಿಚ್ಛೇದನ ಪಡೆಯಬೇಕಾದರೆ ಅಲೆಮಾರಿ ಜನರು ಇತರೆ ಸಮುದಾಯಗಳಂತೆ ಹಣ ಖರ್ಚು ಮಾಡಬೇಕಾಗಿಲ್ಲ. ಕಾನೂನು, ಪೊಲೀಸ್, ಕೋರ್ಟ್ ಕಛೇರಿಗಳಿಗೆ ಹೋಗಬೇಕಾಗಿಲ್ಲ. ಕುಲದ ಮುಖಂಡರಿಗೆ ತಮ್ಮ ನಿರ್ಧಾರವನ್ನು ಸ್ಪಷ್ಟಪಡಿಸಿದರೆ; ಅವರಿಬ್ಬರ ಅಭಿಪ್ರಾಯಗಳನ್ನು ಪಡೆದು ಒಂದುಗೂಡಲು ಅವರಿಗೆ ಬುದ್ಧಿಮಾತುಗಳನ್ನು ಹೇಳಲು ಪ್ರಯತ್ನ ಮಾಡುತ್ತಾರೆ. ಅದು ಆಗದಿದ್ದಾಗ ಅನಿವಾರ್ಯವಾಗಿ ವಿವಾಹ ವಿಚ್ಛೇದನಕ್ಕೆ ಸಮ್ಮತಿ ಸೂಚಿಸುವರು. ಇಬ್ಬರ ಸಮ್ಮುಖದಲ್ಲಿ ಸರಳವಿಧಾನದಲ್ಲಿ ಕಡ್ಡಿ ಮುರಿಯುವುದರ ಮೂಲಕ, ಹೆಣ್ಣಿಗೆ ಪಾವಲ ನಾಣ್ಯವನ್ನು ಇಟ್ಟು ತನ್ನ ಸಂಬಂಧವನ್ನು ಕಳಚಿಕೊಳ್ಳುತ್ತಾನೆ.*(ಭಾ:೪.೧)* ಹೀಗೆ ತನ್ನ ದಾಂಪತ್ಯ ಜೀವನದ ಸಂಬಂಧವನ್ನು ಕೊನೆಗಾಣಿಸುತ್ತಾರೆ. ಆ ಸಂದರ್ಭದಲ್ಲಿ ಮದುವೆಯಲ್ಲಿ ಕಟ್ಟಿದ ಕನ್ಯಾಶುಲ್ಕ ಮತ್ತು ತಾಳಿಯನ್ನು ಹಿಂತಿರುಗಿಸುತ್ತಾರೆ. ನಂತರ ಇಬ್ಬರು ಬೇರೊಬ್ಬರನ್ನು ಪುನಃ ಮದುವೆಯಾಗುವ ಅವಕಾಶವಿದೆ. ಈ ಆಧುನಿಕ ಯುಗದಲ್ಲಿ ವಿಚ್ಛೇದನ ನೀಡುವ ಪದ್ಧತಿಯಲ್ಲಿ ತುಂಬಾ ಬದಲಾವಣೆಗಳಾಗಿರುವುದನ್ನು ಕಾಣಬಹುದಾಗಿದೆ.

ಬುಡ್ಗ ಜಂಗಮರಲ್ಲಿ ಆಡಂಬರದ ಮದುವೆಗಿಂತ ಸರಳವಾದ ಮದುವೆ ಶ್ರೇಷ್ಠ ಎನ್ನುತ್ತಾರೆ. ವೈವಾಹಿಕ ಆಯ್ಕೆಗಳಲ್ಲಿ ತೊಂದರೆಗಳು ಇಲ್ಲ. ಕಾರಣ ತಮ್ಮ ಸಮುದಾಯಗಳ ಪ್ರವೃತ್ತಿಯಲ್ಲಿ ಒಬ್ಬರಿಗೊಬ್ಬರಿಗೂ ಒಡನಾಡಿಗಳಾಗಿರುವುದರಿಂದ ಮತ್ತು ಹತ್ತಿರದ ಸಂಬಂಧಿಗಳೊಂದಿಗೆ ಮದುವೆ ಬೆಸೆದಿರುವುದರಿಂದ ಸಲುಗೆಯಿಂದ ವಿವಾಹಕ್ಕೆ ಸಮ್ಮತಿಸುತ್ತಾರೆ. ಬುಡ್ಗ ಜಂಗಮರು ದೇವಸ್ಥಾನ ಇಲ್ಲವೆ ಬಿಡಾರಗಳಲ್ಲಿ ಕುಲಪೆದ್ದಲು(ಮುಖಂಡ)ರ ನೇತೃತ್ವದಲ್ಲಿ ಸೋದರಮಾವನ ಮುಂದಾಳತ್ವದಲ್ಲಿ ಮದುವೆಗಳು ನಡೆಯುತ್ತವೆ. ಇವರಲ್ಲಿ ಮದುವೆಗಳಲ್ಲಿ ಸಂಪತ್ತಿಗಿಂತ ಸಂಬಂಧವೇ ಪ್ರಧಾನವಾಗಿ ಕಂಡುಬರುತ್ತದೆ. ನೆಲೆ ನಿಂತ ಸಮುದಾಯಗಳಲ್ಲಿ ಹಣ ಹಿಡಿದುಕೊಂಡು ಹುಡುಗಿಯ ತಂದೆಯ ವರನನ್ನು ಶೋಧಿಸಿದರೆ, ಬುಡ್ಗ ಜಂಗಮರಲ್ಲಿ ಹುಡುಗನ ತಂದೆಯು ತೆರ ಹಿಡಿದುಕೊಂಡು ಹುಡುಗಿಯನ್ನು ಹುಡುಕುವುದಾಗಿದೆ. ಕನ್ಯಾಶುಲ್ಕವನ್ನು ಹುಡುಗಿಯ ತಾಯಿಗೆ ವಧುದಕ್ಷಿಣೆಯಾಗಿ ನೀಡಿ ವಿವಾಹ ಮಾಡಿಕೊಂಡು ಬರುವ ಪದ್ಧತಿ ಇವರಲ್ಲಿದೆ. ಇತ್ತೀಚಿನ ದಿನಗಳಲ್ಲಿ ಕೆಲವರು ಅನ್ಯ ಸಮುದಾಯದ ಪ್ರಭಾವದಿಂದ ವರದಕ್ಷಿಣೆ ಪಡೆದುಕೊಂಡು ಮದುವೆಯಾಗುವುದನ್ನು ಕಾಣಬಹುದಾಗಿದೆ.

**ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವೈವಾಹಿಕ ಸ್ಥಾನಮಾನ**

**ಕೋಷ್ಟಕ ೪.೭: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವೈವಾಹಿಕ ಸ್ಥಾನಮಾನ**

| | **ಪುರುಷರು** | **ಮಹಿಳೆಯರು** | **ಒಟ್ಟು** | **ಶೇಕಡಾ** |
|---|---|---|---|---|
| ವಿವಾಹಿತರು | ೭೭೩ | ೭೭೩ | ೧,೫೪೬ | ೪೪.೫ |
| ಬಹುಪತ್ನಿಯರು | | ೩೬ | ೩೬ | ೧.೧ |
| ವಿದುರ/ ವಿಧವೆಯರು | ೧೧ | ೮೧ | ೯೨ | ೨.೬ |
| ಅವಿವಾಹಿತರು | ೧,೦೧೩ | ೭೮೩ | ೧,೭೯೬ | ೫೧.೮ |
| **ಒಟ್ಟು** | **೧,೭೯೭** | **೧,೬೭೩** | **೩,೪೭೦** | **೧೦೦** |

ಈ ಮೇಲಿನ ಕೋಷ್ಟಕವು ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವೈವಾಹಿಕ ಸ್ಥಾನಮಾನ ಕುರಿತು ವಿವರಿಸಲಾಗಿದೆ. ಒಟ್ಟು ೩೪೭೦ ಜನಸಂಖ್ಯೆಯಲ್ಲಿ ವಿವಾಹಿತರು ಶೇಕಡಾ ೪೪.೫ ರಲ್ಲಿ ೭೭೩ ಜನ ಪುರುಷರು, ೭೭೩ ಜನ ಮಹಿಳೆಯರು, ೩೬ ಜನ ಬಹುಪತ್ನಿಯರ ವಿವಾಹ ಶೇಕಡಾ ೧.೧ ವಿವಾಹವಾಗಿರುವರು. ಅವಿವಾಹಿತರು ೧೦೧೩ ಜನ ಪುರುಷರು, ೭೮೩ಜನ ಮಹಿಳೆಯರು, ಶೇಕಡಾ ೫೧.೮ ರಷ್ಟು ಅವಿವಾಹಿತರು, ವಿದುರರು ೧೧ ಜನ, ವಿಧವೆಯರು ೮೧ ಜನ, ಶೇಕಡಾ ೨.೬ ವಿಧವ ವಿಧವೆಯರು ಕಂಡುಬರುತ್ತಾರೆ. ವಿವಾಹಿತರು ಅವಿವಾಹಿತರಿಗಿಂತ ಕಡಿಮೆ ಇರುವುದು ಕಂಡುಬರುತ್ತದೆ. ಬಹುಪತ್ನಿಯರು ೩೬ ಜನ ಅಂದರೆ ಶೇಕಡಾ ೧.೧ ರಷ್ಟು ಜನ ಒಂದಕ್ಕಿಂತ ಹೆಚ್ಚು ವಿವಾಹವಾಗಿರುವ ಬಹುಪತ್ನಿತ್ವ ವಿವಾಹವು ಇವರಲ್ಲಿ ಕಾಣಬಹುದು. ವಿದುರರಿಗಿಂತ ವಿಧವೆಯರು ಅಧಿಕ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಈ ಬಹುಪತ್ನಿತ್ವ ವಿವಾಹವು ಆಂಧ್ರ

ಪ್ರದೇಶದ ನಿಜಾಂ ಮತ್ತು ಮುಸ್ಲಿಂ ಆಡಳಿತ ಪ್ರದೇಶದಲ್ಲಿ ಬಹುಪತ್ನಿತ್ವ ಪದ್ಧತಿ ಹೆಚ್ಚು ಇರುವುದರಿಂದ ಅದರ ಪ್ರಭಾವ ಈ ಸಮುದಾಯಕ್ಕೆ ಜೀರಿದೆ ಎನ್ನಬಹುದು.

**ಕೋಷ್ಟಕ ೪.೮: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಬಹುಪತ್ನಿತ್ವ ವಿವಾಹವಾಗಿರುವ ಕುಟುಂಬಗಳ ವಿವರ**

| ಕ್ರಸಂ | ಕಾಲೋನಿ/ನೆಲೆಗಳು | ಬಹುಪತ್ನಿತ್ವ ವಿವಾಹವಾಗಿರುವ ಕುಟುಂಬಗಳ ಸಂಖ್ಯೆ |
|---|---|---|
| ೧. | ರಾಜೇಶ್ವರಿ ನಗರ | ೦ |
| ೨. | ಕಾಕರ್ಲತೋಟ, ೫ನೇ ವಾರ್ಡ್, ಪಾತರ ಬೂದಾಳು, ಹನುಮಾನ್ ನಗರ | ೪ |
| ೩. | ಗುಗ್ಗರ ಹಟ್ಟಿ | ೦ |
| ೪. | ಗುಡಾರ ನಗರ | ೫ |
| ೫. | ಕುಡತಿನಿ ಬುಡ್ಗ ಜಂಗಮರ ಕಾಲೋನಿ | ೩ |
| ೬. | ಹೊಸಮೋಕ, ೩ನೇ ವಾರ್ಡ್ | ೦ |
| ೭. | ಹಳೇಕೋಟೆ ಬುಡ್ಗ ಜಂಗಮರ ಕಾಲೋನಿ, ೪ನೇ ವಾರ್ಡ್, | ೧ |
| ೮. | ಸಿದ್ದಪ್ಪ ನಗರ ಬುಡ್ಗ ಜಂಗಮರ ಕಾಲೋನಿ, ೬ನೇ ವಾರ್ಡ್, | ೧ |
| ೯. | ಬಲಕುಂದಿ | ೩ |
| ೧೦. | ಕುರುಗೋಡು ಹರಿಕೃಪ ಕಾಲೋನಿ ಮತ್ತು ಸದಾಶಿವ ಕಾಲೋನಿ | ೩ |
| ೧೧. | ಸಂಡೂರು ಹಳೇ ಬಸ್‌ನಿಲ್ದಾಣದ ಹತ್ತೀರ, ಬುಡ್ಗ ಜಂಗಮರ ಕಾಲೋನಿ | ೨ |
| ೧೨. | ಹಳೇದರೋಜಿ ಬುಡ್ಗ ಜಂಗಮರ ಕಲಾಗ್ರಾಮ | ೨ |
| ೧೩. | ಕಂಪ್ಲಿ, ಎಂಡಿ ಕ್ಯಾಂಪ್, ೨೨ನೇ ವಾರ್ಡ್ | ೦ |
| ೧೪. | ಸೋಮಲಾಪುರ ಬುಡ್ಗ ಜಂಗಮರ ಕಾಲೋನಿ | ೦ |
| ೧೫. | ಹೊಸಪೇಟೆ ರವಿಂದ ನಗರ, ಬುಡ್ಗ ಜಂಗಮರ ಕಾಲೋನಿ | ೧ |
| ೧೬. | ವೆಂಕಟಾಪುರ ಬುಡ್ಗ ಜಂಗಮರ ಕಾಲೋನಿ, ೨ನೇ ವಾರ್ಡ್ | ೨ |
| ೧೭. | ಕಡ್ಡಿರಾಂಪುರ | ೦ |
| ೧೮. | ಮರಿಯಮ್ಮನಹಳ್ಳಿ ಕಟ್ಟಿಗೆ ಶಾಮೀಲು, ದರ್ಗಾಕಟ್ಟೆ ಹತ್ತಿರ | ೧ |
| ೧೯. | ಹಗರಿಬೊಮ್ಮನ ಹಳ್ಳಿ ಸಿದ್ದೇಶ್ವರ ನಗರ, ಬುಡ್ಗ ಜಂಗಮರ ಕಾಲೋನಿ | ೫ |

| | | |
|---|---|---|
| ೨೦. | ಹಂಪಾಪಟ್ಟಣ ಶ್ರೀಪಾಂಡುರಂಗ ದೇವಸ್ಥಾನದ ಹತ್ತಿರ, ೩ನೇ ವಾರ್ಡ್, | ೦ |
| ೨೧. | ಹೂವಿನ ಹಡಗಲಿ ರಾಜೀವ್ ನಗರ, ೧೮ನೇ ವಾರ್ಡ್, | ೧ |
| ೨೨. | ಕೂಡ್ಲಿಗಿ ಗುಡೇಕೋಟೆ ರಸ್ತೆ, ೨ನೇ ವಾರ್ಡ್, | ೧ |
| ೨೩. | ಹರಪನಹಳ್ಳಿ ಆಶ್ರಯ ಕ್ಯಾಂಪ್ | ೧ |
| | **ಒಟ್ಟು ಬಹುಪತ್ನಿತ್ವ ವಿವಾಹವಾಗಿರುವ ಕುಟುಂಬಗಳ ಸಂಖ್ಯೆ** | **೩೬** |

ಮೇಲಿನ ಕೋಷ್ಟಕವು ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರು ಒಂದಕ್ಕಿಂತ ಹೆಚ್ಚು ವಿವಾಹವಾಗಿರುವ ಕುಟುಂಬಗಳ ಬಗ್ಗೆ ವಿವರಿಸಲಾಗಿದೆ. ಒಟ್ಟು ೮೫೪ ಕುಟುಂಬಗಳಲ್ಲಿ ಪ್ರಸ್ತುತ ಕಂಡುಬರುವ ೩೬ ಕುಟುಂಬಗಳು ಶೇಕಡಾ ೧.೧ ರಷ್ಟು ಜನ ಮರುವಿವಾಹವಾಗಿರುವುದನ್ನು ಕಾಣಬಹುದು. ಇವರಲ್ಲಿ ಹೆಚ್ಚು ಮಕ್ಕಳಿದ್ದರೆ ಶ್ರೀಮಂತ ಎಂಬ ಭಾವನೆ ಮತ್ತು ವಂಶಾವಳಿ ಬೆಳೆಸುವ ಕಾರಣಕ್ಕಾಗಿ ಹೆಚ್ಚು ಮದುವೆಯಾಗುವುದನ್ನು ಕಾಣಬಹುದು. ಕುಟುಂಬವನ್ನು ನಿಭಾಯಿಸಲು ಆರ್ಥಿಕವಾಗಿ ನೆರವಾಗುತ್ತಾಳೆ ಎಂಬ ಕಾರಣದಿಂದ ಮತ್ತು ಮೊದಲ ಹೆಂಡತಿಗೆ ಮಕ್ಕಳಾಗದಿದ್ದರೆ ಅಥವಾ ಬರೀ ಹೆಣ್ಣು ಮಕ್ಕಳಾದರೆ ಗಂಡು ಸಂತಾನಕ್ಕಾಗಿ ಎರಡನೆ ಮದುವೆಯಾಗುವ ಪದ್ಧತಿ ಬುಡ್ಗ ಜಂಗಮ್ ಸಮುದಾಯದಲ್ಲಿದೆ.

**ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಿವಾಹಿತರ ವಯೋಪ್ರಮಾಣ**

**ಕೋಷ್ಟಕ ೪.೯: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಿವಾಹಿತರ ವಯೋಪ್ರಮಾಣ**

| ವಯಸ್ಸು | ಪುರುಷರು | ಶೇಕಡಾ | ಮಹಿಳೆಯರು | ಶೇಕಡಾ | ಒಟ್ಟು | ಒಟ್ಟು ಶೇಕಡಾ |
|---|---|---|---|---|---|---|
| ೧೦-೧೩ | ೨೬೩ | ೧೬.೭ | ೩೫೦ | ೨೨.೧ | ೬೧೩ | ೩೮.೮ |
| ೧೪-೧೭ | ೪೪೩ | ೨೮.೧ | ೪೧೭ | ೨೬.೩ | ೮೬೦ | ೫೪.೪ |
| ೧೮-೨೧ | ೪೦ | ೨.೫ | ೩೦ | ೧.೮ | ೭೦ | ೪.೪ |
| ೨೨-೨೫ | ೨೧ | ೧.೪ | ೧೨ | ೦.೮ | ೩೩ | ೨.೧ |
| ೨೬-೩೦ | ೬ | ೦.೩ | ೦ | ೦ | ೬ | ೦.೩ |
| ಒಟ್ಟು | ೭೭೩ | ೪೯ | ೮೦೯ | ೫೧ | ೧,೫೮೨ | ೧೦೦ |

ಲಂಬ ಚಿತ್ರ ೪.೨: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಯೋಪ್ರಮಾಣದ ವೈವಾಹಿಕ ಸ್ಥಾನಮಾನದ ಲಂಬ ಚಿತ್ರ




ಈ ಮೇಲಿನ ಕೋಷ್ಟಕವು ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಯೋಪ್ರಮಾಣದ ವೈವಾಹಿಕ ಸ್ಥಾನಮಾನದ ಬಗ್ಗೆ ವಿವರಿಸಲಾಗಿದೆ. ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಸಮುದಾಯದಲ್ಲಿ ಒಟ್ಟು ೧೫೮೨ ಜನರು ವಿವಾಹವಾಗಿದ್ದಾರೆ. ವಯೋಪ್ರಮಾಣದಲ್ಲಿ ವರ್ಗೀಕರಿಸಿದಾಗ ೧೦ ರಿಂದ ೧೩ ವಯಸ್ಸಿನಲ್ಲಿ ಶೇ ೩೮.೮, ೧೪ ರಿಂದ ೧೭ ವಯಸ್ಸಿನಲ್ಲಿ ಶೇ ೫೪.೪, ೧೮ ರಿಂದ ೨೧ರ ವಯಸ್ಸಿನಲ್ಲಿ ಶೇ ೪.೪, ೨೨ ರಿಂದ ೨೫ರ ವಯಸ್ಸಿನಲ್ಲಿ ಶೇ ೨.೧, ೨೬–೩೦ ವಯಸ್ಸಿನಲ್ಲಿ ಶೇ ೦.೩ ಜನ ವಿವಾಹವಾಗಿದ್ದಾರೆ. ಇವರಲ್ಲಿ ಹೆಚ್ಚಾಗಿ ೧೦ರಿಂದ ೧೭ ವಯಸ್ಸಿನೊಳಗೆ ಶೇಕಡಾ ೯೩.೨ ಜನ ಬಾಲ್ಯದಲ್ಲಿಯೇ ವಿವಾಹವಾಗಿರುವುದು ಕಂಡುಬಂದು ಈ ಸಮುದಾಯ ಪಾರಂಪರಿಕವಾಗಿ ಚಿಕ್ಕ ವಯಸ್ಸಿನೊಳಗೆ ವಿವಾಹ ಮಾಡುವ ಸಾಮಾಜಿಕ ರಚನೆಯನ್ನು ಈ ಸಮುದಾಯ ಒಪ್ಪಿತಗೊಂಡು ಅನುಸರಿಸುತ್ತಿದೆ. ಆದರೆ ಕಾನೂನಿನ ಪ್ರಕಾರ ಪುರುಷರಿಗೆ ವಿವಾಹವಾಗುವ ವಯಸ್ಸು ೨೧ ವರ್ಷ ಹಾಗೂ ಹೆಣ್ಣುಮಕ್ಕಳಿಗೆ ೧೮ ವರ್ಷಗಳು ಪೂರೈಸಿದ ನಂತರ ವಿವಾಹವಾಗಬಹುದು ಎಂದು ಸರ್ಕಾರದ ಕಾನೂನು ಇದೆ. ಅದರೊಳಗೆ ಮಾಡಿಕೊಂಡ ವಿವಾಹಗಳು ಬಾಲ್ಯವಿವಾಹ ಎಂದು ಪರಿಗಣಿಸಲಾಗಿದೆ. ಭಾರತೀಯ ಸಮಾಜದಲ್ಲಿ ಬಾಲ್ಯವಿವಾಹ ಪದ್ಧತಿಯು ಸಾಮಾಜಿಕ ಸಂಗತಿಯಾಗಿದೆ. ಬಾಲ್ಯವಿವಾಹ ಎಂದರೆ ಚಿಕ್ಕ ವಯಸ್ಸಿನಲ್ಲಿ ಹುಡುಗ–ಹುಡುಗಿಯನ್ನು ಎರಡು ಕುಟುಂಬಗಳಿ ಒಪ್ಪಿ ಮದುವೆ ಮಾಡುವುದು. ದೇಶದಲ್ಲಿ ಬಾಲ್ಯವಿವಾಹವನ್ನು ನಿಷೇಧಿಸಿದ್ದರೂ ಸಂಪೂರ್ಣವಾಗಿ ನಿಯಂತ್ರಣಕ್ಕೆ ತರಲು ಸಾಧ್ಯವಾಗಿಲ್ಲ. ಬುಡ್ಗ ಜಂಗಮ ಸಮುದಾಯದಲ್ಲಿ ಬಾಲ್ಯದಲ್ಲಿಯೇ ಹೆಣ್ಣುಮಕ್ಕಳಿಗೆ ವಯಸ್ಸಾದ ಪುರುಷನೊಂದಿಗೆ ಮದುವೆ ಮಾಡುತ್ತಾರೆ. ಋತುಮತಿಯಾಗುವ ಮುಂಚೆಯೇ ಹೆಣ್ಣುಮಕ್ಕಳಿಗೆ ವಿವಾಹ ಮಾಡಿ ಋತುಮತಿಯಾದ ನಂತರ ಗಂಡನ ಮನೆಗೆ ಕಳಿಸುವ ಪದ್ಧತಿಯನ್ನು ಹೊಂದಿದೆ. ಅಲೆಮಾರಿ ಬುಡ್ಗ ಜಂಗಮರಲ್ಲಿ ವಿವಾಹ ವ್ಯವಸ್ಥೆಯಲ್ಲಿ ಪುರುಷ ವಧುದಕ್ಷಿಣೆ(ಓಲಿ)ಯನ್ನು ಹೆಣ್ಣಿನ ಮನೆಯವರಿಗೆ ಕೊಟ್ಟು ಮದುವೆಯಾಗುವ ಸಂಪ್ರದಾಯವಿದೆ. ಇದನ್ನು ನಗದಿನರೂಪದಲ್ಲಿ

ಹೆಂಡ ಸರಾಯಿ ಬಾಟ್ಲಿಗಳ ಮೂಲಕ ಅಥವಾ ವಸ್ತುಗಳನ್ನು ಕೊಡುವುದರ ಮೂಲಕ ನಡೆಯುತ್ತದೆ. ಬುಡ್ಗ ಜಂಗಮರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬಾಲ್ಯದಲ್ಲಿಯೇ ವಿವಾಹಗಳು ಆಗುವುದನ್ನು ಕಾಣಬಹುದು. ಬಡತನ ಮತ್ತು ಕುಟುಂಬ ನಿರ್ವಹಣೆಗಾಗಿ ಈ ರೀತಿಯ ವಿವಾಹಗಳಾಗುವುದು ಬಹುಮುಖ್ಯ ಕಾರಣವಾಗಿದೆ. ಬುಡ್ಗ ಜಂಗಮರಲ್ಲಿ ಅಂದಿನ ಕಾಲಮಾನಕ್ಕೆ ತಕ್ಕಂತೆ ಸೇವಿಸುವಂತಹ ಆಹಾರ ಪದ್ಧತಿಯು ಚೆನ್ನಾಗಿದ್ದರಿಂದ ಯಾವುದೇ ರೀತಿಯ ತೊಂದರೆಗಳು ಕಾಣಿಸಿಕೊಳ್ಳದೆ ಆರೋಗ್ಯವಾಗಿರುತ್ತಿದ್ದರು, ಆದರೆ ಇಂದಿನ ಕಾಲಮಾನದಲ್ಲಿ ಆಹಾರ ಪದ್ಧತಿಯಲ್ಲಿ ತುಂಬಾ ಬದಲಾವಣೆ, ಅಪೌಷ್ಟಿಕತೆ ಹೀಗೆ ಹಲವಾರು ಆರೋಗ್ಯದ ಸಮಸ್ಯೆಗಳಿಗೆ ತುತ್ತಾಗುವ ಸಂಭವವಿದೆ. ಬಾಲ್ಯದಲ್ಲಿಯೇ ಮದುವೆಯಾಗುವುದರಿಂದ ಶಿಕ್ಷಣದಿಂದ ವಂಚಿತರಾಗಿ, ಉದ್ಯೋಗ ಸಿಗದೇ ಬಡತನಕ್ಕೆ ತುತ್ತಾಗುತ್ತಾರೆ. ಕೇಂದ್ರ ಸರ್ಕಾರದ ೨೦೦೬ರ ಬಾಲ್ಯವಿವಾಹ ತಡೆ ಕಾಯ್ದೆ ಜಾರಿಗೆ ಇದ್ದರೂ ಈ ಪದ್ಧತಿಯು ಬುಡ್ಗ ಜಂಗಮರಗೆ ಅಷ್ಟೂ ಪರಿಣಾಮವಾಗಿಲ್ಲ. ಮತ್ತು ಈ ಸಮುದಾಯಕ್ಕೆ ಕಾನೂನಿನ ಅರಿವು ಇಲ್ಲದಿರವುದು ಕಾಣಬಹುದಾಗಿದೆ.

**ಲಿಂಗಸಂಬಂಧಿ ವೃತ್ತಿಗಳು**

ಬುಡ್ಗ ಜಂಗಮರದು ಅಲೆಮಾರಿ ಜೀವನವೇಯಾದರೂ, ಅವರು ಕುಟುಂಬ ವ್ಯವಸ್ಥೆಯನ್ನು ದೂರೀಕರಿಸುವುದಿಲ್ಲ. ಇವರಲ್ಲಿ ಮಾತೃ ಮತ್ತು ಪಿತೃ ಪ್ರಧಾನ ಕುಟುಂಬಗಳನ್ನು ಕಾಣಬಹುದು. ಕೆಲವು ಸಮುದಾಯಗಳು ಅವಿಭಕ್ತ ಕುಟುಂಬದಲ್ಲಿಯೂ ಬದುಕುತ್ತಿದ್ದಾರೆ. ಆದರೆ ಇತ್ತೀಚಿನ ದಿನಮಾನಗಳಲ್ಲಿ ಈ ಬುಡ್ಗ ಜಂಗಮರು ತಮಗೆ ಜೀವನ ಸಾಗಿಸಲು ಸೂಕ್ತವಾದ ಪ್ರದೇಶವನ್ನು ಆಯ್ಕೆ ಮಾಡಿಕೊಂಡು ವಿಭಕ್ತ ಕುಟುಂಬ ವ್ಯವಸ್ಥೆಯನ್ನು ಮುಂದುವರಿಸುತ್ತಿದ್ದಾರೆ.

ಬುಡ್ಗ ಜಂಗಮರ ಸಾಮಾಜಿಕ ಜೀವನದಲ್ಲಿ ಸ್ತ್ರೀ-ಪುರುಷರಿಬ್ಬರೂ ಕುಟುಂಬದಲ್ಲಿ ತಮಗೆ ಬೇಕಾದ ಮತ್ತು ವಹಿಸಿಕೊಂಡ ಕೆಲಸಗಳನ್ನು ಅಚ್ಚುಕಟ್ಟಾಗಿ ಮಾಡುತ್ತಾರೆ. ಸ್ತ್ರೀಯರಿಗೆ ಸಂಬಂಧಪಟ್ಟ ಕೆಲಸಗಳಾದ ಸ್ವಚ್ಛತೆ, ದುಡಿಮೆ, ಮನೆಕೆಲಸ, ಧಾನ್ಯಗಳ ಸಂಗ್ರಹಣೆ. ಕಟ್ಟಿಗೆ ತರುವುದು, ಚಾಪೆ ಹೆಣೆಯುವುದು, ಕೌದಿ ಹೊಲಿಯುವುದು, ವ್ಯಾಪಾರ ಮಾಡುವುದು, ಬುರ್ರಕಥೆ, ಗಂಗಿಗೌರಿ ಕಾವ್ಯಗಳನ್ನು ಹಾಡುತ್ತಾ ಭಿಕ್ಷಾಟನೆ ಹೋಗುವುದು, ಗಂಡಸರು ಹಗಲುವೇಷ ಹಾಕಿಕೊಂಡು ಊರಾಡಿ ಬಂದ ಮೇಲೆ ಅವರ ವೇಷಭೂಷಣಗಳನ್ನು ಬಿಚ್ಚುವುದು, ನೀರು ಕಾಯಿಸಿಡುವುದು, ಮೈತೊಳಿಸುವುದು, ಊಟ ಬಡಿಸುವದು ಮುಂತಾದವುಗಳನ್ನು ಮಾಡುತ್ತಾರೆ. ಒಟ್ಟಾರೆಯಾಗಿ ಸದಸ್ಯರೊಂದಿಗೆ ಸಹಬಾಳ್ವೆಯಿಂದ ತಮ್ಮ ಪಾತ್ರಕ್ಕೆ ತಕ್ಕಂತೆ ಕೆಲಸ ನಿರ್ವಹಿಸುವರು. ಸ್ತ್ರೀ- ಪುರುಷರಿಬ್ಬರೂ ಹೆಂಡತಿಗೆ ಗಂಡನಾಗಿ, ಮಗುವಿಗೆ ತಂದೆಯಾಗಿ, ತಂದೆತಾಯಿಗೆ ಮಗನಾಗಿ, ತಂಗಿ ತಮ್ಮನಿಗೆ ಅಣ್ಣನಾಗಿ ವಿವಿಧ ಪಾತ್ರಗಳನ್ನು ಮಾಡುತ್ತಾ ಕುಟುಂಬ ಜೀವನವನ್ನು ನಿರ್ವಹಿಸುತ್ತಾರೆ.

**ಕೋಷ್ಟಕ ೪.೧೦: ಬುಡ್ಗ ಜಂಗಮ್ ಸಮುದಾಯದ ಲಿಂಗಸಂಬಂಧಿ ವೃತ್ತಿಗಳು**

| ಪುರುಷರು | ಸ್ತ್ರೀಯರು |
|---|---|
| ಗುಡಿಸಲು ನಿರ್ಮಾಣ ಮಾಡುವರು. | ಗುಡಿಸಲು ನಿರ್ಮಾಣ ಮಾಡುವ ಸ್ಥಳವನ್ನು ಸ್ವಚ್ಛ ಮಾಡುವುದು. ಮತ್ತು ಸಹಾಯ ಮಾಡುವುದು. |
| ಹೊಟ್ಟೆ ಹೊರೆಯಲು ಬೇಟೆಗೆ ಹೋಗುವುದು. | ಇವರು ಮನೆಗೆ ದೂರದ ಸ್ಥಳದಿಂದ ನೀರು ತರುವುದು, ಅಡುಗೆ ಮಾಡಲು ಮುಳ್ಳಿನ ಕಟ್ಟಿಗೆ ತರುವುದು. ಮನೆಯನ್ನು ಸ್ವಚ್ಛ ಮಾಡುವುದು. |
| ಬೇಟೆಯಿಂದ ತಂದ ಮಾಂಸವನ್ನು ಸುಟ್ಟು ಶುಚಿ ಮಾಡಿ, ಭಾಗ ಹಂಚಿಕೊಳ್ಳುವುದು.<br>ಹಗಲುವೇಷಕ್ಕೆ ಬಣ್ಣ ಹಾಕಿಕೊಳ್ಳುತ್ತಾರೆ. | ಬೇಟೆಯಿಂದ ತಂದ ಮಾಂಸವನ್ನು ಅಡುಗೆ ಮಾಡುವುದು.<br>ಹಗಲುವೇಷಕ್ಕೆ ವೇಷಭೂಷಣಗಳನ್ನು ಸಿದ್ಧಪಡಿಸುವುದು, ಪಾತ್ರಧಾರಿಗಳಿಗೆ ವೇಷಭೂಷಣಗಳನ್ನು ಕಟ್ಟುವುದು, ಸಹಕಾರ ಮಾಡುವುದು. |
| ಹಗಲುವೇಷ ಹಾಕಿಕೊಂಡು ಪ್ರದರ್ಶನ ನೀಡಿ ಸಾಯಂಕಾಲ ಅಥವಾ ರಾತ್ರಿ ಬರುತ್ತಾರೆ. | ಹಗಲುವೇಷ ಪ್ರದರ್ಶನ ಮಾಡಿ ಬಂದವರಿಗೆ ಸ್ನಾನ ಮಾಡಲು ನೀರು ಕಾಯಿಸುವುದು, ಅವರ ವೇಷಭೂಷಣಗಳನ್ನು ಕಳಚುವುದು, ವೇಷಭೂಷಣದ ಸಾಮಾನುಗಳನ್ನು ಕಟ್ಟಿ ಇಡುವುದರಲ್ಲಿ ಸಹಾಯ ಮಾಡುವುದು ಇವರ ಜವಾಬ್ದಾರಿಯಾಗಿರುತ್ತದೆ. ರಾತ್ರಿ ಅಡುಗೆ ಮಾಡುವುದು. ಮಾಡಿದ ಅಡುಗೆಯನ್ನು ಬಡಿಸುವುದು. |
| ಇವರು ಹಗಲುವೇಷ, ಬುರ್ರಕಥೆ, ಕಲೆಯನ್ನು ಹಾಕಿಕೊಂಡು ಪ್ರದರ್ಶನ ನೀಡುತ್ತಾರೆ.<br>ಇವರು ವಾರದ ಕೊನೆಯಲ್ಲಿ ದವಸ ಧಾನ್ಯ, ಹಣವನ್ನು ಬೇಡಿ ಸಂಪಾದಿಸುತ್ತಾರೆ. | ಇವರು ಬುರ್ರಕಥೆ, ಗಂಗಿಗೌರಿ ಗೊಂಬೆಗಳನ್ನು ಇಟ್ಟುಕೊಂಡು ಪ್ರದರ್ಶನ ನೀಡಿ ಭಿಕ್ಷೆ ಬೇಡುತ್ತಾರೆ.<br>ಇವರು ದಿನಾಲು ಬೆಳಿಗ್ಗೆ ಎದ್ದು ಮನೆಗೆ ಮನೆಗೆ ಭಿಕ್ಷೆ ಬೇಡಿ, ತಂಗಳು ಅನ್ನ, ತಂಗಳು ರೊಟ್ಟಿ, ದವಸ ಧಾನ್ಯಗಳನ್ನು ಬೇಡಿಕೊಂಡು ಬರುತ್ತಾಳೆ. ಒಂದು ದಿನದ ಊಟವನ್ನು ನೀಗಿಸುತ್ತಾಳೆ. |
| ವೃತ್ತಿಯಿಂದ ಧಾನ್ಯಗಳ ಸಂಗ್ರಹಣೆ ಮಾಡುವುದು. | ಊರಾಡಿ ತಂದಿರುವ ಧಾನ್ಯಗಳನ್ನು ಸ್ವಚ್ಛ (ಹಸನು) ಮಾಡುವುದು. |

| | |
|---|---|
| ಚಾಪೆಹೆಣೆಯಲು ಈಚಲುಮರದ ಗರಿಗಳನ್ನು ತರುವುದು.<br>ರಾತ್ರಿ ಬೇಗ ಮಲಗುವುರು. | ತಂದ ಗರಿಗಳನ್ನು ಕತ್ತರಿಸಿ ನೀರು ಹಾಕಿ ಒಣಗಿಸುವುದು.<br>ರಾತ್ರಿ ಸ್ವಲ್ಪ ಹೊತ್ತು ಸಂಗ್ರಹಿಸಿದ ಈಚಲುಗರೆಗಳಿಂದ ಚಾಪೆ ಹೆಣೆದು ಮಲಗುವುದು. |
| ಭಿಕ್ಷೆಯ ಪರಿಕರ, ವೇಷಭೂಷಣ, ವಾದ್ಯ ಮತ್ತು ಕರಕುಶಲ ವಸ್ತುಗಳ ತಯಾರಿಕೆಯಲ್ಲಿ ತೊಡಗುವುದು. ಬೇಟೆಯ ಉಪಕರಣಗಳನ್ನು ತಯಾರಿಸುವುದು. | ಜೋಳಿಗೆ ಚೀಲವನ್ನು ತಯಾರಿಸುವುದು. ಕೌದಿ ಹೊಲಿಯುವುದು, ಧಾನ್ಯಗಳನ್ನು ಹಸನು ಮಾಡುವುದು. ಪುರುಷರ ಕರಕುಶಲ ಕಲೆಯಲ್ಲಿ ಭಾಗಿಯಾಗುವುದು. |
| ಮಕ್ಕಳನ್ನು ಮತ್ತು ವೃದ್ಧರನ್ನು ಸಾಕುವ ಜವಾಬ್ದಾರಿ ಇರುತ್ತದೆ. | ಇವರ ಯೋಗ ಕ್ಷೇಮ ನೋಡಿಕೊಳ್ಳುವ ಜವಾಬ್ದಾರಿ ಇರುತ್ತದೆ. |
| ಪರಸ್ಪರ ಸುಖದುಃಖಗಳಲ್ಲಿ ಭಾಗಿಯಾಗಿವುದು.<br>ಮಕ್ಕಳಿಗೆ ವೃತ್ತಿ ತರಬೇತಿ ನೀಡುವುದು. | ಪರಸ್ಪರ ಸುಖದುಃಖಗಳಲ್ಲಿ ಭಾಗಿಯಾಗಿವುದು.<br>ವೃತ್ತಿ ಪ್ರೋತ್ಸಾಹ ಮಾಡುವುದು, ತಪ್ಪನ್ನು ತಿದ್ದುವುದು. |
| ಸ್ಟೇಷನರಿ, ಬಟ್ಟೆ, ಸಾಬೂನು, ಸ್ಟೀಲ್, ಸಿಲ್ವರ್, ಪ್ಲಾಸ್ಟಿಕ್ ಪಾತ್ರೆ ಸಾಮಾನುಗಳನ್ನು ಕಾವಡಿ ಮೇಲೆ, ವಾಹನ ಮೇಲೆ ಹೊತ್ತುಕೊಂಡು ವ್ಯಾಪಾರ ಮಾಡುವುದು | ಸ್ಟೇಷನರಿ, ಬಟ್ಟೆ, ಸಾಬೂನು, ಸ್ಟೀಲ್, ಸಿಲ್ವರ್, ಪ್ಲಾಸ್ಟಿಕ್ ಪಾತ್ರೆ ಸಾಮಾನುಗಳನ್ನು ತಲೆಮೇಲೆ ಹೊತ್ತುಕೊಂಡು ವ್ಯಾಪಾರ ಮಾಡುವುದು. |

ಬುಡ್ಗ ಜಂಗಮರ ಕುಟುಂಬದ ಸದಸ್ಯರೆಲ್ಲರೂ ಪ್ರೀತಿ, ವಿಶ್ವಾಸ ಮತ್ತು ಸಹಕಾರದಿಂದ ಇರುತ್ತಾರೆ. ಸ್ತ್ರೀಯರಿಗೆ ಕುಟುಂಬದ ಜವಾಬ್ದಾರಿಯು ಹೆಚ್ಚಾಗಿ ಇರುವುದರೊಂದಿಗೆ ಅವಳು ಪುರುಷನಂತೆ ಹೊರಗಡೆ ಹೋಗಿ ದುಡಿಯುತ್ತಾಳೆ. ಉದಾಹರಣೆಗೆ ಪ್ಲಾಸ್ಟಿಕ್ ಸಿಲ್ವರ್ ಸಾಮಾನುಗಳನ್ನು ಮಾರಾಟ ಮಾಡುವುದು, ಬಟ್ಟೆಗಳನ್ನು ಮಾರುವುದು, ಕೂಲಿಗೆ ಹೋಗಿ ದುಡಿದು ಬರುವುದು, ಭಿಕ್ಷಾಟನೆಗೆ ಹೋಗಿ ಕಾಳು ಕಡ್ಡಿ ತರುವುದು ಹೀಗೆ ಮುಂತಾದವು. ಕುಟುಂಬ ನಿರ್ವಹಣೆಯಲ್ಲಿ ಸ್ತ್ರೀ-ಪುರುಷರ ಪಾತ್ರ ಮತ್ತು ಶ್ರಮ ಪ್ರಮುಖವಾಗಿದೆ ಮತ್ತು ಸಮಾನವಾಗಿರುತ್ತದೆ. ಮನೆಯಲ್ಲಿ ಮಕ್ಕಳ ಪೋಷಣೆ ಜೊತೆಯಲ್ಲಿ ಕುಟುಂಬದ ನಿರ್ವಹಣೆಗೆ ವಿವಿಧ ಕೆಲಸಗಳನ್ನು ಮಾಡುತ್ತ ಭಿಕ್ಷೆ ಬೇಡುತ್ತ ಕುಟುಂಬದ ಹೊಣೆಗಾರಿಕೆಯನ್ನು ಸಮಾನವಾಗಿ ಹಂಚಿಕೊಂಡು ನಿರ್ವಹಿಸುವುದನ್ನು ನೋಡಬಹುದಾಗಿದೆ.

### ಸಂಸ್ಕಾರದ ಆಚರಣಾ ವ್ಯವಸ್ಥೆ

ಹುಟ್ಟಿನಿಂದ ಸಾಯುವತನಕ ವ್ಯಕ್ತಿಯು ಒಂದಲ್ಲ ಒಂದು ವಿವಿಧ ಸಂಸ್ಕಾರಗಳನ್ನು ದಾಟಿ ನೆಮ್ಮದಿಯನ್ನು ಕಾಣಲು ಬಯಸುತ್ತಾನೆ. ನೆಲೆನಿಂತವರು ಸಂಸ್ಕಾರಗಳನ್ನು ಪೂರೈಸಲು ಪುರೋಹಿತರು ಅಥವಾ ಪೂಜಾರಿಗಳನ್ನು ಅವಲಂಬಿಸಿರುತ್ತಾರೆ, ಅವರಿಲ್ಲದಿದ್ದರೆ ಸಂಸ್ಕಾರಗಳು ನಡೆಯುವುದಿಲ್ಲ. ಆದರೆ

ಅಲೆಮಾರಿ ಬುಡ್ಗ ಜಂಗಮರಿಗೆ ಈ ಬ್ರಾಹ್ಮಣ, ಜಂಗಮ, ಪೂಜಾರಿ, ಪುರೋಹಿತರ ಅವಶ್ಯಕತೆ ಇರುವುದಿಲ್ಲ. ತಮ್ಮ ಜಾತಿಯ ಕುಲಪೆದ್ದಲು ಅಥವಾ ಸೋದರಮಾವ, ಸೋದರ ಅತ್ತೆ, ಹಿರಿಯ ಅಜ್ಜ, ಅಜ್ಜಿಯಿಂದ ಆಚರಣೆಗಳನ್ನು ನೆರವೇರಿಸುತ್ತಾರೆ. ಬುಡ್ಗ ಜಂಗಮರಲ್ಲಿ ಸೋದರಮಾವ ಮತ್ತು ಸೋದರತ್ತೆ ಎರಡನೆ ತಂದೆತಾಯಿಗಳಿದ್ದಂತೆ ಭಾವಿಸುತ್ತಾರೆ. ಹಾಗಾಗಿ ಕೆಲವು ಕಾರ್ಯಗಳನ್ನು ಸೋದರಮಾವನಿಂದ ನೆರವೇರಿಸಿಕೊಳ್ಳುತ್ತಾರೆ. ಉದಾಹರಣೆಗೆ.

೧. ಮಕ್ಕಳ ಜವಳ(ಹುಟ್ಟು ಕೂದಲು) ತೆಗೆಯುವ ಸಂದರ್ಭದಲ್ಲಿ ಸೋದರಮಾವ ಪ್ರಮುಖ ಪಾತ್ರ ನಿರ್ವಹಿಸುವುದು.

೨. ಋತುಮತಿಯಾದಾಗ ಸೋದರತ್ತೆಯಿಂದ ಅಥವಾ ಅಜ್ಜಿಯಿಂದ ನೀರು ಹಾಕಿಸಿಕೊಳ್ಳುವುದು.

೩. ಸೋದರಮಾವ ಮೈನೆರೆದ ಹುಡುಗಿಗೆ ಪ್ರತ್ಯೇಕವಾದ ಗುಡ್ಲು(ಗುಡಿಸಲು) ನಿರ್ಮಿಸುವುದು.

೪. ಸೋದರಮಾವನಿಂದ ಅಥವಾ ಅಜ್ಜ ಅಥವಾ ಅಜ್ಜಿಯಿಂದ ಮೈನೆರೆದ ಹುಡುಗಿಗೆ ಕೊಬ್ಬರಿಬಟ್ಲ ಒತ್ತುವುದು.

೫. ಮದುವೆಯ ಸಂದರ್ಭದಲ್ಲಿ ಸೋದರಮಾವನಿಂದ ಅಳಿಯನನ್ನು ಅಥವಾ ಸೊಸೆಯನ್ನು ಹೆಗಲಮೇಲೆ ಹೊತ್ತುಕೊಂಡು ಹಸೆಮಣೆಗೆ ಕರೆದುಕೊಂಡು ಬರುವುದು.

೬. ಕುಲದ ಮುಖಂಡ ವೈವಾಹಿಕ ಸಂದರ್ಭದ ಆಚರಣೆಯಲ್ಲಿ ಪ್ರಮುಖ ಪಾತ್ರವಹಿಸುವುದು.

೭. ಮರಣ ಸಂಭವಿಸಿದಾಗ ಕುಲದ ಹಿರಿಯರಿಂದ ವಿಧಿವಿಧಾನಗಳನ್ನು ನೆರವೇರಿಸುವರು. ಹೀಗೆ ಬುಡ್ಗ ಜಂಗಮರು ಪ್ರತಿ ಕಾರ್ಯದಲ್ಲಿ ತಮ್ಮವರಿಂದಲೇ ಕಾರ್ಯ ಆಚರಣೆಗಳನ್ನು ನಿರ್ವಹಿಸಿಕೊಳ್ಳುತ್ತಾರೆ.

**ನಾಮಕರಣ ಪದ್ಧತಿ:** ಬುಡ್ಗ ಜಂಗಮ್ ಸಮುದಾಯದಲ್ಲಿ ತಮ್ಮದೇಯಾದ ಜಾತಿಯ ಹೆಸರುಗಳನ್ನು ನಾಮಕರಣ ಮಾಡುವುದನ್ನು ನೋಡಬಹುದು. ಬಹುಮುಖ್ಯವಾಗಿ ಇವರು ತಮ್ಮ ಕುಲದೇವರುಗಳ ಹೆಸರುಗಳನ್ನೆ ಇಡುತ್ತಾರೆ. ಉದಾಹರಣೆಗೆ ಹೆಣ್ಣು ಮಕ್ಕಳಿಗೆ ಯಡವಲಿ ಸುಂಕಮ್ಮ, ಅಶ್ವಿ ಮಾರೆಮ್ಮ, ಮಿರಾಲಿ ದುರ್ಗಮ್ಮ, ಅಶ್ವ ಸಾಲಮ್ಮ, ಯಡವಲಿ ಜಂಭಲಮ್ಮ, ತಾಟಿಕೊಂಡಿ ತಾಯಮ್ಮ, ಕೊಂಡಪಲ್ಲಿ ಮಾರೆಕ್ಕ, ಅಶ್ವಿ ಈರಮ್ಮ, ರುದ್ರಾಕ್ಷಲ ಗಾಳೆಮ್ಮ, ಸಿರಿಗಿರಿ ಮುತ್ಯಾಲಮ್ಮ, ಮೋತಿ ಮೈಸಮ್ಮ, ಮಸ್ತಾನಮ್ಮ ಇತ್ಯಾದಿ. ಗಂಡು ಮಕ್ಕಳಿಗೆ ಯಡವಲಿ ಮಾರೆಪ್ಪ, ಮಿರಾಲಿ ಅಂಜಿನಪ್ಪ, ಕೊಂಡ್ರು ದುರ್ಗಪ್ಪ, ಅಶ್ವಿ ಜಂಭಣ್ಣ, ಮೋತಿ ಸುಂಕನ್ನ, ಬಲಗೊಲ್ಲ ಮಾರೆಣ್ಣ, ಅಶ್ವ ರಾಮಣ್ಣ, ಮೋತಿ ಲಾಲಪ್ಪ, ಯಡವಲಿ ಹನುಮಂತಪ್ಪ, ಮೋತಿ ಲಿಂಗನ್ನ, ಮೋತಿ ಈರಣ್ಣ ಇತ್ಯಾದಿ. ಇವರ ವ್ಯಕ್ತಿನಾಮಗಳಿಂದ ಸಮುದಾಯ ಜಾತಿಯನ್ನು ಗುರುತಿಸಬಹುದಾಗಿದೆ. ಬುಡ್ಗ ಜಂಗಮ್ ಸಮುದಾಯಗಳಲ್ಲಿ ತಮ್ಮ ಮಕ್ಕಳಿಗೆ ಮರಣಹೊಂದಿರುವ ಹಿರಿಯರ ಹೆಸರುಗಳನ್ನು ಇಡುವುದು ಕೂಡ ಕಂಡುಬರುತ್ತದೆ. ಈ ಪದ್ಧತಿ ನೆಲೆನಿಂತ ಸಮುದಾಯಗಳಲ್ಲಿ ಮತ್ತು ಅಲೆಮಾರಿಗಳಲ್ಲಿ ಕಾಣಬಹುದಾಗಿದೆ. ಪ್ರಾಚೀನ ಕಾಲದಲ್ಲಿ

ಬೆಟ್ಟಗುಡ್ಡ, ಗಿಡಮರ ಪ್ರಾಣಿಪಕ್ಷಿಗಳ ಹೆಸರುಗಳನ್ನು ಇಡುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಆಧುನಿಕ ಪ್ರಭಾವದಿಂದ ಬುಡ್ಗ ಜಂಗಮರು ಚಲನಚಿತ್ರದ ನಾಯಕ, ನಾಯಕಿಯರ ಹೆಸರುಗಳನ್ನು ಇಡುತ್ತಿದ್ದಾರೆ. ಉದಾಹರಣೆಗೆ ಸುದೀಪ್, ಅಂಬರೀಷ್, ಚಿರಂಜೀವಿ, ಪ್ರಭಾಸ್, ನಾಯಕಿಯರಾದ ರಮ್ಯ, ಅಮೃತಾ, ಸಮಂತಾ, ಪ್ರಿಯಾಂಕ, ರಾಧ, ಶ್ವೇತಾ, ಸೌಂದರ್ಯ, ದೀಪಿಕಾ, ಸರಿತಾ, ಅನುಶ್ರೀ ಇತ್ಯಾದಿ.

**ಜನಸಾಮಾನ್ಯರು ಕರೆಯುವ ಹೆಸರುಗಳು:** ಇವರನ್ನು ಹಗಲುವೇಷದ ಅಶ್ವರಾಮಣ್ಣ, ವೇಷಗಾರ ರಾಮಣ್ಣ, ಬಹುರೂಪಿ ಪ್ರತಾಪ್, ವೇಷಗಾರ ಶಂಕ್ರಪ್ಪ, ಪೋತರಾಜ ಮಾರೆಪ್ಪ, ಶಿಕಾರಿ ರಾಮು, ಊರಾಡೋ ರಾಮಣ್ಣ, ಬುರ್ರಕಥೆ ಈರಮ್ಮ, ಕಥೆಹೇಳೊ ಜಂಭಕ್ಕ, ಸುಡುಗಾಡು ಸಿದ್ಧರ ವಿರುಪಾಕ್ಷಪ್ಪ, ಬಾಲಸಂತ ಬಾಲಸ್ವಾಮಿ, ಕೊಂಡಮಾಮದ ಜಂಭನ್ನ ಎಂದು ಜನರು ಹೀಗೆ ವೃತ್ತಿಯಧಾರಿತವಾಗಿ ಇವರನ್ನು ಗುರುತಿಸುತ್ತಾರೆ.

ಅನ್ಯ ಸಮಾಜ ಮತ್ತು ಭಿನ್ನ ಸಂಸ್ಕೃತಿಗಳ ಪ್ರಭಾವಕ್ಕೆ ಸಿಲುಕಿ ಜೀವನ ವಿಧಾನದಲ್ಲಿ ವಿವಿಧ ವ್ಯತ್ಯಾಸಗಳು ಉಂಟಾಗಿ ಮೂಲಸ್ವರೂಪ ಮತ್ತು ಲಕ್ಷಣಗಳು ಕೆಲಮಟ್ಟಿಗೆ ಮಾರ್ಪಟ್ಟಿದ್ದರೂ ಸಾಮಾಜಿಕ ರಚನೆಯಲ್ಲಿ ಮೂಲ ಸ್ವರೂಪದ ಲಕ್ಷಣಗಳು ಇನ್ನೂ ಉಳಿಸಿಕೊಂಡು ಬೆಳೆಸಿಕೊಂಡು ಬಂದಿರುವುದು ಕಾಣಬಹುದು.

**ಬುಡ್ಗ ಜಂಗಮರ ಅಲೆಮಾರಿತನ:** ಅಲೆಮಾರಿತನವು ಒಂದು ಸಾಮಾಜಿಕ ಪ್ರಕ್ರಿಯೆಯಾಗಿದೆ. ಅಲೆಮಾರಿ ಎಂದರೆ ಒಬ್ಬ ವ್ಯಕ್ತಿ ಇಲ್ಲವೆ ಒಂದು ಸಮುದಾಯ, ಒಂದು ಸಾಮಾಜಿಕ ಪರಿಸರದಿಂದ ಇನ್ನೊಂದು ಸಾಮಾಜಿಕ ಪರಿಸರದಲ್ಲಿ ನೆಲೆಸುವುದು ಎಂದರ್ಥ. ಸಾಮಾನ್ಯವಾಗಿ ಅಲೆಮಾರಿತನಕ್ಕೆ (ವಲಸೆಗೆ) ಬಡತನ, ಬರಗಾಲ, ಉದ್ಯೋಗ, ವ್ಯಾಪಾರ, ಶಿಕ್ಷಣ, ಅತಿವೃಷ್ಠಿ, ಅನಾವೃಷ್ಟಿ, ಭೂಕಂಪ, ಚಂಡಮಾರುತ, ಬಿರುಗಾಳಿ ಇತ್ಯಾದಿ ಕಾರಣಗಳಿಂದಾಗಿ ವಲಸೆ ಹೋಗುವುದು ಸಹಜ. ಆದರೆ ಬುಡ್ಗ ಜಂಗಮರು ಆಂಧ್ರದ ಗುಡ್ಡಗಾಡು ಪ್ರದೇಶದಿಂದ ವಲಸೆ ಹೋಗಲು ಕಾರಣವೇನೆಂದರೆ ಆಂಧ್ರ ಪ್ರದೇಶದಲ್ಲಿ ಸಾಮ್ರಾಜ್ಯಶಾಹಿ ಪ್ರಭುತ್ವ ಮತ್ತು ಜಮೀನ್ದಾರಿ ಶಕ್ತಿಗಳು ಜನರನ್ನು ಪೀಡಿಸುತ್ತಿದ್ದರು. ಒಂದು ಕಡೆ ಬ್ರಿಟೀಷರು ತಮ್ಮ ದಬ್ಬಾಳಿಕೆಯನ್ನು ಜನರ ಮೇಲೆ ಹೇರಿದರೆ, ನಿಜಾಮ ಮತ್ತೊಂದೆಡೆ ಜನರನ್ನು ಶೋಷಿಸತೊಡಗಿದನು. ಹೀಗಾಗಿ ಬುಡ್ಗ ಜಂಗಮರಿಗೆ ಜೀವನದ ಭದ್ರತೆ ಇಲ್ಲದಿರುವುದು, ಜೀವನ ಮಾಡಲು ಭೂಮಿ ಇಲ್ಲದಿರುವುದು ಇವರ ಕೌಶಲ್ಯಕ್ಕೆ ತಕ್ಕ ಉದ್ಯೋಗ ಇಲ್ಲದಿರುವುದರಿಂದ ಆಹಾರದ ಹುಡುಕಾಟಕ್ಕಾಗಿ, ಪಶುಪಾಲನೆ, ಕಲಾರಾಧನೆ ಮಾಡುತ್ತಾ ವಲಸೆ ಹೋಗಿರುವುದನ್ನು ಕಾಣಬಹುದು.

ಬುಡ್ಗ ಜಂಗಮರು ಮೂಲತಃ ಕರ್ನಾಟಕ ಆಂಧ್ರದ ಗಡಿಭಾಗದ ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತಾ ಪಶುಪಾಲನೆ, ಬೇಟೆಗಾರಿಕೆ, ಕಲಾರಾಧನೆ ಮಾಡುತ್ತಾ ಆಂಧ್ರದ ಗದ್ವಾಲ್, ಗೋಲ್ಕಂಡ, ಕರ್ನೂಲ್, ಧನ್ನಾವಾಡ, ಕನಕಪುರಂ, ವೆಂಕಯ್ಯಪಲ್ಲಿ, ಕೆ ನಾಗಲಾಪುರ, ಗದ್ದರಾಳ, ಕಂದನಾತಿ, ಆಧೋನಿ, ಆಲೂರು, ಗುಂತಕಲ್ಲು, ಉರವಕೊಂಡ, ಕಡವಲಕುಂಡ ನಂತರ ಕರ್ನಾಟಕದ ಗೌರಸಮುದ್ರ, ನಾಗಸಮುದ್ರ ಮತ್ತು ಬಳ್ಳಾರಿಯಿಂದ ಇತರೆ ಜಿಲ್ಲೆಗಳಿಗೆ ವಲಸೆ ಹೋಗಿರುವುದು ಕಂಡುಬರುತ್ತದೆ.

**ಕಾವಡಿ ಜೀವನ**

ಬುಡ್ಗ ಜಂಗಮರು ವಲಸೆಯ ಸಂದರ್ಭದಲ್ಲಿ ದೂರದ ಪ್ರದೇಶಗಳಲ್ಲಿ ಅಲೆಯುವಾಗ ತಮ್ಮ ಸರಕು ಸಾಮಾನುಗಳನ್ನು ಈ ಕಾವಡಿಯಲ್ಲಿ ಇಟ್ಟುಕೊಂಡು ಸಂಚರಿಸುತ್ತಾರೆ. ಬುಡಕಟ್ಟು ಮತ್ತು ಅಲೆಮಾರಿ ಜನರು ಒಂದು ಕಡೆಯಿಂದ ಮತ್ತೊಂದು ಕಡೆಗೆ ಅವರ ಇಡೀ ಸಂಸಾರ ಸಾಮಾಗ್ರಿಗಳನ್ನೆಲ್ಲಾ ಕಾವಡಿಗಳ ಮುಖಾಂತರವೇ ಸಾಗುಸುತ್ತಿದ್ದರು*(ಛಾ:೪.೨)*. ಪ್ರಾಚೀನ ಕಾಲದ ಜನಜೀವನದಿಂದ ಬೆಳೆದು ಬಂದಿರುವ ಕಾವಡಿಯು ಜನರ ಬದುಕಿನಲ್ಲಿ ಬಹಳ ಮಹತ್ವದ ಸಾಗಾಣಿಕೆಯ ಸಾಧನವಾಗಿತ್ತು. ಆಧುನಿಕ ನಾಗರಿಕತೆಯು ಬೆಳೆದು ಬಂದಿರದ ಪ್ರಾಚೀನ ಸಮೂಹಗಳಲ್ಲಿ ಕಾವಡಿಯು ಬಳಕೆಯಲ್ಲಿತ್ತು. ಆನಂತರದ ಕೃಷಿಯೇತರ ಮತ್ತು ಕೃಷಿಯುಗದ ಬೆಳವಣಿಗೆಯಲ್ಲಿ ಸಾಗಾಣಿಕಾ ವ್ಯವಸ್ಥೆಯಲ್ಲಿ ಅನೇಕ ಬದಲಾವಣೆಗಳು ಕಂಡುಬಂದು, ಎತ್ತಿನ ಗಾಡಿ, ಕುದರೆ, ಎಮ್ಮೆ, ಒಂಟೆ, ಕತ್ತೆಗಳು ಮೊದಲಾದ ಸಾಕು ಪ್ರಾಣಿಗಳ ಸಹಾಯದಿಂದ ಸಾಗಾಣಿಕೆ ವ್ಯವಸ್ಥೆಯು ವಿಸ್ತಾರಗೊಂಡಿತು. ಆಧುನಿಕ ನಾಗರಿಕತೆಯ ಸಾಧನಗಳಿಂದ ಸಿದ್ದಪಡಿಸಲಾದ ಯಂತ್ರವಾಹನಗಳು ಸಾಗಾಣಿಕೆಯಲ್ಲಿ ಮಹತ್ತರ ಬದಲಾವಣೆಗಳನ್ನು ಉಂಟುಮಾಡಿದೆ.

ಕಾವಡಿ ಪದವು ನಿಘಂಟುಗಳಲ್ಲಿ ಅರ್ಥೈಸಿರುವಂತೆ ಹೆಗಲಮೇಲೆ ಹೊತ್ತು ತರುವ ಬಿದಿರಿನ ದಬ್ಬೆ, ಹೆಗಲು ಅಥವಾ ಕೊರಳ ಮೇಲೆ ಹೋರುವದಕ್ಕಾಗಿ ಮಾಡಿರುವ ಬಿದಿರು ದಬ್ಬೆಯ ಸಾಧನ ಕಾವಡಿ ಎಂದು ವಿವರವಿದೆ. ತೆಲುಗು ತಮಿಳುನಲ್ಲಿ ಕಾವಡಿ, ಕಾಮ್, ಕಾವಳ್ ಎಂಬುದಾಗಿ ಬಳಕೆಯಲ್ಲಿದೆ. ಕಾವಡಿ ಎಂಬ ಪದವು ಇಂಗ್ಲೀಷ್‌ನಲ್ಲಿ "A Split bamboo with ropes suspended from each end placed on the shoulders for carriying a burden"[೨] ಕಾವಡಿ ಎನ್ನುವಂತಹ ಪದವು ಬಿದಿರಿನ ದಬ್ಬೆಯನ್ನು ಪ್ರತಿನಿಧಿಸುವ ಒಂದು ಸಾಧನವಾಗಿದೆ. ಸಾಮಾನ್ಯವಾಗಿ ಭಾರವನ್ನು ತಡೆಯುವ ಶಕ್ತಿದಾಯಕ ಮರಗಳಲ್ಲಿ ಬಿದಿರು ಮೊದಲನೆಯದು, ಕಾವಡಿಯನ್ನು ಬಿದಿರಿನಿಂದಲೇ ಮಾಡಿರುತ್ತಾರೆ. ಸುಮಾರು ಹತ್ತು ಅಡಿಯವರೆಗೂ ಉದ್ದವಿರುವ ಬಿದಿರು ದಬ್ಬೆಯು ಎರಡು ಕೋನೆಗಳಲ್ಲಿ ತೆಂಗಿನ, ಕತ್ತಾಳೆ ನಾರಿನಿಂದ ಹೆಣೆದ ಹಗ್ಗ, ಬಟ್ಟೆಯ ಹಗ್ಗದಿಂದ ಅಥವಾ ಇತ್ತೀಚಿಗೆ ಗಟ್ಟಿಯಾದ ನೂಲುಗಳಲ್ಲಿ ಬುಟ್ಟಿಯ ತಳಪಾಯದಂತೆ ಹೆಣೆದು ವೃತ್ತಾಕಾರದ ಅಡಿಯನ್ನು ಸಿದ್ದಪಡಿಸಿ ಮೂರು ಗಟ್ಟಿಯಾದ ಹಗ್ಗಗಳನ್ನು ಅದರಿಂದ ಎಳೆದು ಬಿದಿರು ದಬ್ಬೆಯ ಎರಡುಕಡೆ ಕಟ್ಟಿರುತ್ತಾರೆ. ಇದು ಸ್ಪ್ರಿಂಗ್‌ನಂತೆ ಭಾರವನ್ನು ಸಮತೂಕದಲ್ಲಿ ತಂದು ಅದನ್ನು ಹೋರುವ ವ್ಯಕ್ತಿಗೆ ಸುಲಭ ಮತ್ತು ಅನುಕೂಲಕರವಾಗಿರುತ್ತದೆ. ಹೀಗೆ ಅಲೆಮಾರಿ ಬುಡ್ಗ ಜಂಗಮ್ ಸಮುದಾಯವು ಕಾಡಲ್ಲಿ ಕಂಡುಕೊಂಡ ಬಿದಿರಿನ ಕಾವಡಿಯಿಂದ ತಮ್ಮ ಎಲ್ಲಾ ಸರಕು ಸರಂಜಾಮುಗಳನ್ನು ಸಾಗಿಸುತ್ತಾ ಕಲೆ ಸಂಸ್ಕೃತಿಯನ್ನು ಕಂಡುಕೊಂಡವರು. ಕಾಡು ಇವರ ಜ್ಞಾನಪರಂಪರೆಯ ಮೂಲವಾಗಿದೆ.

**ಮ್ಯಾಳಂ(ಮೇಳ):** ಇದು ಒಪ್ಪಿತವಾದ ಮೇಳ, ಬುಡ್ಗ ಜಂಗಮರಲ್ಲಿ ತಮ್ಮ ಬದುಕಿಗಾಗಿ ಹಗಲುವೇಷ, ಬುರ್ರಕಥೆ ಪ್ರದರ್ಶನಕ್ಕಾಗಿ ಕೆಲವು ಹಳ್ಳಿಗಳನ್ನು ಭಾಗ ಹಂಚಿಕೊಂಡಿರುತ್ತಾರೆ. ಆ ಹಳ್ಳಿಗಳಿಗೆ ಕೆಲವು

ಐದಾರು ಕುಟುಂಬಗಳು ಕೂಡಿ ಪೂರ್ವಯೋಜಿತವಾಗಿ ಎರಡು ವರ್ಷಗಳವರೆಗೆ ಒಬ್ಬರ ಮುಖ್ಯಸ್ಥರ ಮೇರೆಗೆ ಒಬ್ಬರಿಗೆ ಇಂತಿಷ್ಟು ಪಾಲುಗಳು ಎಂದು ಒಪ್ಪಂದ ಮಾಡಿಕೊಂಡು ಹಳ್ಳಿಗಳಿಗೆ ಊರಾಡಲು ಹೋಗುವುದಕ್ಕೆ ಮ್ಯಾಳಂ ಎಂದು ಕರೆಯುತ್ತಾರೆ. ಪಾಲು ಹಂಚುವುದರಲ್ಲಿ ಮದುವೆಯಾದವರಿಗೆ ಹಾಗೂ ಹಿರಿಯರಿಗೆ ೩ ಪಾಲು, ಮದುವೆಯಾಗದವರಿಗೆ ೨ ಪಾಲು, ಸಣ್ಣ ಹುಡಗರಿಗೆ ಅರ್ಧಪಾಲು, ಗಿರ ಪಾಲು ಹೀಗೆ ಅವರವರ ಶಕ್ತಿಸಾಮರ್ಥ್ಯದ ಕಲೆಗೆ ಅನುಗುಣವಾಗಿ ಪಾಲು ಹಂಚಿಕೊಳ್ಳುತ್ತಾರೆ. ಹೀಗೆ ಕಲಾಪ್ರದರ್ಶನ ಮಾಡಲು ಎರಡು ವರ್ಷಗಳ ವರೆಗೆ ಒಬ್ಬ ಹಿರಿಯ ಮುಖ್ಯಸ್ಥನ ಮೇರೆಗೆ ಹಳ್ಳಿಗಳಿಗೆ ಹೋಗಿ ವಿವಿಧ ಕಲಾ ಪ್ರಸಂಗಗಳನ್ನು ಪ್ರದರ್ಶಿಸಿ ಅವರು ಕೊಡುವ ದಾನಧರ್ಮ, ಕಾಳುಕಡ್ಡಿಗಳನ್ನು ಸ್ವೀಕರಿಸಿ ಜೀವನ ಮಾಡುತ್ತಾರೆ.

**ಷಂಡ್ರಾ:** ಇದು ಸ್ವತಂತ್ರವಾದ ಮೇಳ, ಇಲ್ಲಿ ಯಾವುದೇ ಮುಖ್ಯಸ್ಥನ ಅಧೀನ ಇಲ್ಲದೆ ಸ್ವತಂತ್ರವಾಗಿ ನಗರ ಪಟ್ಟಣಗಳಿಗೆ ಹೋಗಿ ಭಿಕ್ಷಾಟನೆ ಮಾಡವುದನ್ನು ಷಂಡ್ರಾ ಎಂದು ಕರೆಯುತ್ತಾರೆ. ತಮ್ಮ ಮೂಲಸ್ಥಳದಿಂದ ಬದುಕಿಗಾಗಿ ವರ್ಷಾನುಗಟ್ಟಲೇ ವಲಸೆ ಹೋಗಿ ಅಲ್ಲೆ ಟೆಂಟ್ ಹಾಕಿ ಮತ್ತೆ ಅಲ್ಲಿಂದಲೇ ತಿಂಗಳಾನುಗಟ್ಟಲೇ ತಿರುವಲಸೆಹೋಗಿ ಭಿಕ್ಷಾಟನೆ, ಕಲಾಪ್ರದರ್ಶನ ಮಾಡಿ ತಮ್ಮ ಮೂಲಸ್ಥಳಕ್ಕೆ ಹಿಂತಿರುಗುತ್ತಾರೆ. ಇದನ್ನೇ ಬುಡ್ಗ ಜಂಗಮರು ಷಂಡ್ರಾ ಎಂದು ಕರೆಯುತ್ತಾರೆ.

**ಚಿಲ್ಲರ ಭಿಕ್ಷಂ:** ಬುಡ್ಗ ಜಂಗಮರು ಮೇಳ ಮತ್ತು ಷಂಡ್ರಾಗೆ ಹೋಗದೇ ಇದ್ದಾಗ ಒಬ್ಬಂಟಿಯಾಗಿ ಹಾರ್ಮೋನಿಯಂ ಅಥವಾ ಡಿಕ್ಕಿ ಬಾರಿಸುತ್ತಾ ಅಥವಾ ಹಾಡುಗಳನ್ನು ಹಾಡುತ್ತಾ ಭಿಕ್ಷೆ ಬೇಡುವುದನ್ನು ಚಿಲ್ಲರ ಭಿಕ್ಷಂ ಎಂದು ಕರೆಯುತ್ತಾರೆ.

**ವಸತಿ ವ್ಯವಸ್ಥೆ**

ಮಾನವನು ಪ್ರಾಚೀನ ಕಾಲದಲ್ಲಿ ಅಲೆಮಾರಿ ಜೀವನವನ್ನು ಸಾಗಿಸುತ್ತಿದ್ದನು. ಆಹಾರಕ್ಕಾಗಿ ಬೇಟೆಯನ್ನು ಹುಡುಕುತ್ತಾ ಅಲೆಮಾರಿಯಾಗುತ್ತಿದ್ದನು. ಪ್ರಾರಂಭಿಕ ಹಂತದಲ್ಲಿ ಇಡೀ ಭೂ ಪ್ರದೇಶವೇ ಅವನ ನೆಲೆಯಾಗಿತ್ತು. ಬೆಟ್ಟಗುಡ್ಡ ಕಣಿವೆ ಹಾಗು ಕಾಡು ಪ್ರದೇಶಗಳಲ್ಲಿ ಜೀವಿಸುತ್ತಿದ್ದನು. ಬೌದ್ಧಿಕವಾಗಿ ವಿಕಾಸವಾಗುತ್ತ ಹೋದಂತೆ ಮಾನವ ತನ್ನ ಪೋಷಣೆಗಾಗಿ ಪ್ರಕೃತಿ ಹಾಗೂ ವನ್ಯ ಮೃಗಗಳಿಂದ ರಕ್ಷಿಸಿಕೊಳ್ಳಲು ವಾಸದ ನೆಲೆಯನ್ನು ಕಂಡುಕೊಂಡು ತನಗೆ ಹಾಗೂ ತನ್ನ ರಕ್ತಸಂಬಂಧಿಕರಿಗಾಗಿ ನಿರ್ಮಿಸಿಕೊಂಡ ಪೋಷಕ ವ್ಯವಸ್ಥೆಯೇ ವಸತಿಯಾಗಿದೆ. ವಸತಿಯ ರಚನಾಕ್ರಮವು ಪ್ರಾರಂಭದಲ್ಲಿ ನಿಸರ್ಗದಲ್ಲಿ ದೊರೆಯುತ್ತಿದ್ದ ಕಟ್ಟಿಗೆ, ಹುಲ್ಲು, ತೊಗಟೆ, ಪ್ರಾಣಿಗಳ ಚರ್ಮ ಇತ್ಯಾದಿ ವಸ್ತುಗಳಿಂದ ಅಸ್ತಿತ್ವಕ್ಕೆ ಬಂದಿತು. ಕಾಲಾಂತರದಲ್ಲಿ ಇದು ಬದಲಾವಣೆಯನ್ನು ಕಂಡುಕೊಂಡಿತು. ಬುಡ್ಗ ಜಂಗಮರು ಊರ ಹೊರ ವಲಯದ ಗುಡ್ಡಗಾಡು ಪ್ರದೇಶದಲ್ಲಿ, ನೀರಿನ ಮೂಲ ಇರುವ ಹತ್ತಿರದ ಪ್ರದೇಶದಲ್ಲಿ, ಗ್ರಾಮದ ಕೊಳಚೆ ಪ್ರದೇಶದಲ್ಲಿ, ರಸ್ತೆ ಬದಿಯಲ್ಲಿ, ರೈಲ್ವೇಹಳಿ ಹತ್ತಿರ, ಖಾಲಿ ಬಯಲು ಜಾಗದಲ್ಲಿ ತಾತ್ಕಾಲಿಕವಾಗಿ ಗುಡಿಸಲುಗಳನ್ನು ಅಥವಾ ಡೇರೆಗಳನ್ನು ಹಾಕಿಕೊಂಡಿರುವರು. ಹಳ್ಳಿಯ ಹೊರಭಾಗದಲ್ಲಿ ಇರಲು ತಮ್ಮ ಜೊತೆಯಲ್ಲಿ ಇದ್ದ ಮೇಕೆ, ನಾಯಿ, ಕುರಿ, ಕೋಳಿಮರಿಗಳು ಮತ್ತು

ಜಾನುವಾರುಗಳು ಕಾರಣವಾಗಬಹುದು. ದಿನಾಲು ಮಾಂಸದ ಊಟ ಮಾಡುವುದರಿಂದ ನೀಚು ವಾಸನೆ ಬರುವುದರಿಂದ ಇವರನ್ನು ಊರಿನವರು ಒಳಗೆ ಸೇರಿಸದೇ ಅಸ್ಪೃಶ್ಯತೆಯಿಂದ ಕಾಣುತ್ತಿದ್ದರು.

**ಡೇರೆ(ಟೆಂಟ್) ಅಥವಾ ಗುಡಾರ** : ಡೇರೆ ಎಂದರೆ ಹಳೇ ಸೀರೆಗಳು ಅಥವಾ ಬಟ್ಟೆಗಳಿಂದ ತಯಾರಿಸಿದ ಒಂದು ದೊಡ್ಡ ಕೌದಿಯನ್ನು ಡೇರೆ, ಡ್ಯಾರಾ ಎಂದು ಬುಡ್ಗ ಜಂಗಮರು ಕರೆಯುತ್ತಾರೆ(ಛಾ:೪.೩). ಇದೀಗ ಪ್ಲಾಸಿಕ್‌ಚೀಲ ಅಥವಾ ತಾಡಪಾಲುಗಳಿಂದ ತಯಾರಿಸಿಕೊಳ್ಳುತ್ತಾರೆ. ಇವರ ಡೇರೆ ಅಥವಾ ಗುಡಿಸಲು(ಗುಡಾರಗಳು) ಅರ್ಧ ವೃತ್ತಾಕಾರದಲ್ಲಿರುತ್ತವೆ. ಆರು ಅಡಿ ಅಂತರದಲ್ಲಿ ಸುಮಾರು ನಾಲ್ಕು ಅಡಿ ಎತ್ತರವಿರುವ ಹಿಡಿ ಗಾತ್ರದ ಎರಡು ಬಿದಿರು ಗೂಟಗಳನ್ನು ನಿಲ್ಲಿಸಿ ಅವುಗಳ ತುದಿಗಳಿಗೆ ಎರಡನ್ನೂ ಸೇರಿಸುವಂತೆ ಒಂದು ಬಿದಿರುಬೊಂಬುನ್ನು ಅಡ್ಡಲಾಗಿ ನಿಲ್ಲಿಸಿರುತ್ತಾರೆ. ಇವುಗಳನ್ನು 'ಶಿವಲು' ಎಂದು ಕರೆಯುತ್ತಾರೆ ನಂತರ ಮೇಲಿನಿಂದ ಹರಿದ ಹಳೇಬಟ್ಟೆಗಳಿಂದ ತಯಾರಿಸಿದ ಅಗಲವಾದ ಕೌದಿಯನ್ನು ಹಾಕಿ ಕಟ್ಟುತ್ತಾರೆ ಇದನ್ನು 'ಡ್ಯಾರಬಂತ' (ಗುಡಿಸಲು ಕೌದಿ)ಎಂದು ಕರೆಯುತ್ತಾರೆ.(ಛಾ:೪.೪) ಇದಕ್ಕೆ ನಾಲ್ಕು ಮೂಲೆಗಳಿಗೆ ನಾಲ್ಕು ಗೂಟಂ(ಗೂಟಗಳನ್ನು) ಬಿಗಿಯಾಗಿ ಹೊಡೆಯುತ್ತಾರೆ. ನಂತರ ತೆಂಗಿನ ಅಥವಾ ಬಟ್ಟೆಯಿಂದ ಹುರಿಮಾಡಿದ ಹಗ್ಗದಿಂದ ಬಿಗಿಯಾಗಿ ಕಟ್ಟುತ್ತಾರೆ. ಹಿಂದೆ ಮತ್ತು ಮುಂದೆ ಎರಡನ್ನು ತೆರೆಯುವ ಮತ್ತು ಮುಚ್ಚುವ ಹಾಗೆ ಎರಡು ಕೌದಿಗಳನ್ನು ಮುಚ್ಚಲು ಮಾಡಿರುತ್ತಾರೆ. ಇದಕ್ಕೆ ಇವರ ಭಾಷೆಯಲ್ಲಿ 'ಎನಕಮಾಡು ಬಂತ', 'ಮುಂದಲಮಾಡು ಬಂತ' ಎಂದು ಕರೆಯುತ್ತಾರೆ. ಇತ್ತೀಚಿನ ದಿನಗಳಲ್ಲಿ ಊರಾಡಲು ಹೋದಾಗ ಬಟ್ಟೆ ಬರೆಗಳನ್ನು ಕೊಡುವುದು ಕಡಿಮೆಯಾಗಿರುವುದರಿಂದ ಇಂದು ರಾಸಾಯನಿಕ ಗೊಬ್ಬರ ಚೀಲಗಳಿಂದ ಹೊಲಿದ ತಾಡಪಾಲ್ ಮತ್ತು ಪ್ಲಾಸ್ಟಿಕ್ ತಾಡಪಾಲ್‌ಗಳನ್ನು ಬಳಸುತ್ತಿದ್ದಾರೆ. ಇವು ಹಗುರವಾಗಿ ಮತ್ತು ಸುಲಭವಾಗಿ ಸಾಗಿಸಲು ಕಾರಣವಾಗಿದೆ. ಗುಡಾರದ ಸುತ್ತಾ ಮಣ್ಣನ್ನು ಒತ್ತರಿಸಿ ಸಣ್ಣ ಕಾಲುವೆ ಮಾಡಿರುತ್ತಾರೆ. ಮಳೆಗಾಲದಲ್ಲಿ ಬಿದ್ದ ನೀರು ಗುಡಾರದ ಒಳಗೆ ಹರಿಯದಂತೆ ಸುತ್ತಾ ವಡ್ಡು ಕಟ್ಟಿರುತ್ತಾರೆ ಇದನ್ನು 'ವರಸಂತ' ಎಂದು ಕರೆಯುತ್ತಾರೆ. ಯಾವಗಲೂ ಇವರ ಗುಡಿಸಲುಗಳು ಪೂರ್ವ ಪಶ್ಚಿಮ ಅಭಿಮುಖವಾಗಿ ಮತ್ತು ಗಂಗೆಯ ದಿಕ್ಕು ಅಥವಾ ಉತ್ತರ ದಿಕ್ಕಿಗೆ ಮುಖಮಾಡಿ ಡೇರೆಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಇವರು ಹಾಸಿಗೆಗೆ ಇವರ ಹೆಣ್ಣುಮಕ್ಕಳು ತಯಾರಿಸಿದ ಈಚಲು ಚಾಪೆಯನ್ನು ಬಳಸುತ್ತಿದ್ದರು. ಆದರೆ ಇಂದು ಪ್ಲಾಸ್ಟಿಕ್ ಚಾಪೆಗಳು ಮುಂತಾದ ಆಧುನಿಕ ವಸ್ತುಗಳನ್ನು ಬಳಸುತ್ತಿದ್ದಾರೆ. ಇವರ ಗುಡಿಸಲಲ್ಲಿ ಬೆಳಕಿಗಾಗಿ ಸೀಮೆಎಣ್ಣೆಯ ಸಣ್ಣ ಬುಡ್ಡಿಯನ್ನು ಬಳಸುತ್ತಿದ್ದರು. ಈಗ ಲಾಟಿನ್‌ಗಳನ್ನು ಬಳಸುತ್ತಿದ್ದಾರೆ.

ಬುಡ್ಗ ಜಂಗಮರ ಗುಡಿಸಲಿನ ಒಳಗೆ ಬಿದಿರಿನ ಬೊಂಬೆಗೆ ದೇವರ ಪೋಟಗಳನ್ನು, ಮೇಕಪ್ ಬಣ್ಣದ ಚೀಲವನ್ನು ಮುಂತಾದ ಮುಖ್ಯವಾದ ವಸ್ತುಗಳನ್ನು ಕಟ್ಟಿ ಇಳಿ ಬಿಟ್ಟಿರುತ್ತಾರೆ. ಗುಡಿಸಿಲಿನೊಳಗೆ ಹಿಂದಿನ ಭಾಗದಲ್ಲಿ ಅರ್ಧಮಂಚವನ್ನು ನಿರ್ಮಿಸಿಕೊಂಡು ಅದರ ಮೇಲೆ ಊರಾಡಿ ಬಂದ ದವಸ ಧಾನ್ಯಗಳು, ಬಟ್ಟೆ ಬರೆಗಳನ್ನು ಮತ್ತು ವೇಷಭೂಷಣಗಳನ್ನು ಕಟ್ಟಿಇಟ್ಟಿರುತ್ತಾರೆ. ಇದನ್ನು 'ಕಂಟ್ಲಂ'

ಎಂದು ಕರೆಯುತ್ತಾರೆ. ಗುಡಿಸಲಿನ ಒಳಗೆ ಬಲಭಾಗದಲ್ಲಿ ಊಟದ ಸಾಮಾನುಗಳನ್ನು, ಎಡಭಾಗಕ್ಕೆ ಕುರಿ, ಮೇಕೆ, ಅಥವಾ ಕೋಳಿ ಮರಿಗಳನ್ನು ಕಟ್ಟಿರುತ್ತಾರೆ. ಹೊರಗೆ ದೊಡ್ಡದೊಡ್ಡ ಹಸು, ಕುರಿ, ಮೇಕೆಗಳನ್ನು ಸಾಕಿಕೊಂಡಿರುತ್ತಾರೆ. ಹೆಣ್ಣುಮಕ್ಕಳಿಗೆ ಸ್ನಾನ ಮಾಡಲು ಸಣ್ಣದಾಗಿ ಬಟ್ಟೆಯಿಂದ ಅಥವಾ ಸೀರೆಯಿಂದ ಸುತ್ತಿದ ಬಚ್ಚಲನ್ನು ಮಾಡಿಕೊಂಡಿರುತ್ತಾರೆ. ಇವರು ವಾರಕ್ಕೆ ಅಥವಾ ಹತ್ತು ದಿನಕೋ ಒಮ್ಮೇ ಸ್ನಾನ ಮಾಡುತ್ತಿದ್ದರು. ಮೈಗೆ ಈಗಿನ ರೀತಿಯಂತೆ ಸೋಪುಗಳನ್ನು ಬಳಸುತ್ತಿದ್ದಿಲ್ಲ, ಮರುಭೂಮಿಯ ಸೌಡು, ಹುಂಚೆಣ್ಣು ಬಟ್ಟೆ ಸಬ್ಬುನ್ನು ಬಳಸಿ ಕಲ್ಲಿನಿಂದ ಮೈಯನ್ನು ಉಜ್ಜಿ ತೊಳೆದುಕೊಳ್ಳುತ್ತಿದ್ದರು. ಇವರು ಹೆಚ್ಚಾಗಿ ಬಿಸಿನೀರನ್ನು ಬಳಸುತ್ತಿದ್ದರು. ಪುರುಷರು ಬಯಲು ಪ್ರದೇಶದಲ್ಲಿಯೇ ಸ್ನಾನ ಮಾಡುತ್ತಿದ್ದರು. ಮಲಮೂತ್ರ ವಿಸರ್ಜನೆ ಮಾಡಲು ಬಹಿರ್ದೆಸೆಗೆ ಹೋಗುತ್ತಾರೆ. ಹೀಗೆ ಇಡೀ ಸಂಸಾರದ ಜೊತೆ ಕುರಿ, ಕೋಳಿ, ನಾಯಿಮರಿಗಳನ್ನು ಸಾಕಿಕೊಂಡಿರುತ್ತಾರೆ. ಮಳೆಗಾಲವೇ ಇರಲಿ, ಚಳಿಗಾಲವೇ ಇರಲಿ, ಅಥವಾ ಬೇಸಿಗೆ ಕಾಲವೇ ಇರಲಿ ಅದೇ ಗುಡಾರಗಳಲ್ಲಿಯೇ ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ.

ಇತ್ತೀಚೆಗೆ ಸರಕಾರದ ಯೋಜನೆಗಳ ಅನುಷ್ಠಾನದಿಂದ ಸಮುದಾಯಗಳಿಗೆ ಸ್ವಲ್ಪ ಮಟ್ಟಿಗೆ ಅಲ್ಲಲ್ಲಿ ನೆಲೆ ದೊರೆಯುತ್ತಿದ್ದರಿಂದ ನೆಲೆನಿಂತ ಬದುಕನ್ನು ರೂಢಿಸಿಕೊಂಡಿದ್ದಾರೆ. ಇವರ ಅಲೆಮಾರಿತನದ ಬದುಕು ನಗರಹಂಚಿನಲ್ಲಿ, ಕೊಳಚೆಪ್ರದೇಶಗಳಲ್ಲಿ ನೆಲೆಸಿರುವುದನ್ನು ಕಾಣಬಹುದು. ಅಲಲ್ಲಿ ಕೆಲವರು ಆರ್ ಸಿ ಸಿ, ಜನತಾ, ಆಶ್ರಯ, ಸೀಟ್ ಮತ್ತು ತಗಡಿನಿಂದ ಸ್ವತಂ ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ. ಹಳ್ಳಿಗಳಲ್ಲಿ ಪಾರಂಪರಿಕ ವೃತ್ತಿ ಜೀವನ ನಡೆಸಲು ಆರ್ಥಿಕವಾಗಿ ಕಷ್ಟವಾಗುತ್ತಿದ್ದರಿಂದ ಪರ್ಯಾಯ ವೃತ್ತಿಗಳನ್ನು ಅರಸಿಕೊಂಡು ನಗರಗಳಿಗೆ ವಲಸೆ ಹೋಗಿ, ತಿಂಗಳು ವರ್ಷಗಟ್ಟಲೇ ಸಹಸ್ರಾರು ಕಿಲೋಮೀಟರ್ ಅಂತರದ ಅಲೆಮಾರಿತನ ಮುಂದುವರಿಸುತ್ತಿರುವುದು ಕಂಡುಬರುತ್ತದೆ.

**ಲ್ಯಾಟಿನ್(ಚಿಮಣಿ):** ಲ್ಯಾಟಿನ್ ಎಂದರೆ ಗ್ರಾಮೀಣ ಭಾಗದ ಜನರು ಬೆಳಕಿಗಾಗಿ ಉಪಯೋಗಿಸುತ್ತಿದ್ದ ಒಂದು ದೀಪ. ಜನರು ವಿದ್ಯುತ್ ಸಂಪರ್ಕವಿಲ್ಲದೆ, ಚಿಮಣಿ ಬತ್ತಿಯನ್ನು ಉರಿಸಿ ಕಾಲ ಕಳೆಯುತ್ತಿದ್ದರು. ಅದೇರೀತಿಯಾಗಿ ಬುಡ್ಗ ಜಂಗಮರು ತಮ್ಮ ಗುಡಿಸಲು ಗುಡಾರಗಳಲ್ಲಿ ವಾಸಿಸುವಾಗ ಚಿಮಣಿಯಂತೆ ಇರುವ ಲ್ಯಾಟಿನ್‌ಗಳನ್ನು ಬಳಸುತ್ತಿದ್ದರು. ತಗಡಿನಿಂದ ತಯಾರಾದ ಸಣ್ಣ ಆಕಾರದಲ್ಲಿದ್ದು, ಅದರ ಮೇಲೆ ಗ್ಲಾಸ್ ಹೊಂದಿಸಿರುತ್ತಾರೆ. ಸೀಮೆಎಣ್ಣೆ ಹಾಕಿ ಬತ್ತಿ ಏರಿಸಿ ಉರಿಸುತ್ತಾರೆ.

ಮಾನವ ಪ್ರಾರಂಭದಲ್ಲಿ ಗುಹೆ ಮತ್ತು ಮರದ ಪೊಟರೆಗಳಲ್ಲಿ ಕಾಡುಪ್ರಾಣಿಗಳ ಜೊತೆ ನಿಸರ್ಗದಲ್ಲಿ ಅಲೆಮಾರಿಯಾಗಿ ಸಂಚರಿಸುತ್ತಾ ಜೀವಿಸುತ್ತಿದ್ದನು. ಆನಂತರ ಮಾನವನ ಬದುಕಿನ ಸ್ಥಿತ್ಯಂತರಗಳಿಂದ ಹಳ್ಳಿ, ಪಟ್ಟಣ, ನಗರ, ರಾಜ್ಯಗಳ ಪರಿಕಲ್ಪನೆಗಳು ಹುಟ್ಟುಕೊಂಡವು. ಇಂತಹ ಸ್ಥಿತ್ಯಂತರಗಳು ಅಲೆಮಾರಿಗಳ ಜೀವನ ವಿಧಾನದಲ್ಲಿ ಬದಲಾವಣೆ ತಂದಿರುವುದು ಸಹಜವಾಗಿ ಕಂಡುಬರುತ್ತದೆ. ಕಾಡಿನಿಂದ ನಾಡಿಗೆ ಪಯಣ ಬೆಳೆಸಿದ ಬುಡಕಟ್ಟುಗಳು ಕಾಡನ್ನು ಬಿಟ್ಟು ನಾಡಿನ ಜನರನ್ನು ಅವಲಂಬಿಸಿ ಬದುಕಲು ಪ್ರಾರಂಭಿಸಿ ನೆಲೆನಿಂತಾಗ, ಸಹಜವಾಗಿ ಹಲವಾರು ಸಮಸ್ಯೆಗಳಿಗೆ ಒಳಗಾಗಬೇಕಾಯಿತು. ಆರೋಗ್ಯ, ಉಡುಗೆ-ತೊಡುಗೆ, ಆಹಾರ-ವಸತಿ, ಕಸುಬು ಇತ್ಯಾದಿ ಸಮಸ್ಯೆಗಳು ಇವರನ್ನು ಕಾಡುತ್ತಿರುವುದು ಕಾಣಬಹುದು.

## ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಾಸದ ನೆಲೆ

**ಕೋಷ್ಟಕ ೪.೧೧: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಾಸದ ನೆಲೆ**

| ಮನೆಯ ಸ್ವರೂಪ | ಸಂಖ್ಯೆ | ಶೇಕಡಾ |
|---|---|---|
| ಗುಡಾರ ಮನೆ | ೩೯೨ | ೪೫.೮ |
| ಗುಡಿಸಲು ಮನೆ | ೩೮ | ೪.೫ |
| ಟಿನ್ ಮನೆ | ೭೮ | ೯.೧ |
| ಮಾಳಿಗೆ ಮನೆ | ೯ | ೧.೨ |
| ಆರ್‌ಸಿಸಿ ಮನೆ | ೧೩೫ | ೧೫.೮ |
| ಹೆಂಚಿನ ಮನೆ | ೩ | ೦.೩ |
| ಜನತಾ ಮನೆ | ೧೫೪ | ೧೮.೨ |
| ಬಾಡಿಗೆ ಮನೆ | ೪೫ | ೫.೧ |
| **ಒಟ್ಟು** | **೮೫೪** | **೧೦೦** |

**ಲಂಬಚಿತ್ರ ೪.೩: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಾಸದ ನೆಲೆಯ ಲಂಬಚಿತ್ರ**




ಕೋಷ್ಟಕ ೪.೧೧ ರ ಅನ್ವಯ ವಾಸದ ನೆಲೆ ೮೫೪ ಕುಟುಂಬಗಳಲ್ಲಿ ಗುಡಾರದಲ್ಲಿ ೩೯೨ ಕುಟುಂಬಗಳು, ಗುಡಿಸಲಿನಲ್ಲಿ ೩೮, ಟಿನ್ ಮನೆಗಳಲ್ಲಿ ೭೮, ಮಾಳಿಗೆ ಮನೆಯಲ್ಲಿ ೯, ಆರ್ ಸಿ ಸಿ ಮನೆಗಳಲ್ಲಿ ೧೩೫, ಹೆಂಚಿನ ಮನೆಗಳಲ್ಲಿ ೩, ಜನತಾ ಮನೆಗಳಲ್ಲಿ ೧೫೪, ಬಾಡಿಗೆ ಮನೆಗಳಲ್ಲಿ ೪೫ ಕುಟುಂಬಗಳು ಜಿಲ್ಲೆಯಾದ್ಯಂತ ನೆಲೆಸಿರುವುದನ್ನು ಕಾಣಬಹುದು. ಗುಡಾರಗಳು ೩೯೨ ಇದ್ದು,

ಸಿರುಗುಪ್ಪ ತಾಲೂಕಿನ ಸಿದ್ದಪ್ಪನಗರ, ಬಳ್ಳಾರಿ ತಾಲೂಕಿನ ಗುಡಾರ ನಗರ, ಕಾಕರ್ಲತೋಟ, ಕುಡಿತಿನಿ, ಕೂಡ್ಲಿಗಿ ತಾಲೂಕಿನಲ್ಲಿ ಅಧಿಕವಾಗಿ ಕಂಡುಬರುತ್ತವೆ. ಗುಡಿಸಲುಗಳು ೩೮ ಇದ್ದು, ಸಿರುಗುಪ್ಪ ತಾಲೂಕಿನ ಸಿದ್ದಪ್ಪನಗರದಲ್ಲಿ ಅಧಿಕವಾಗಿ ಕಂಡುಬರುತ್ತವೆ. ಆರ್ ಸಿಸಿ ಮನೆಗಳು ೧೩೫ ಇದ್ದು, ಹೊಸಪೇಟೆ ತಾಲೂಕಿನ ಅರವಿಂದ ನಗರ, ಸಂಡೂರು ತಾಲೂಕಿನ ಹಳೆದರೋಜಿ ಗ್ರಾಮ, ಬಳ್ಳಾರಿ ತಾಲೂಕಿನ ಕುಡತಿನಿ, ಕಾಕರ್ಲತೋಟ, ಸಿರುಗುಪ್ಪ ತಾಲೂಕಿನ ಸಿದ್ದಪ್ಪನಗರದಲ್ಲಿ ಅಧಿಕವಾಗಿ ಕಂಡುಬರುತ್ತವೆ. ಜನತಾ ಮನೆಗಳು ೧೫೪ ಇದ್ದು, ಸರ್ಕಾರದ ವತಿಯಿಂದ ಪ್ರತ್ಯೇಕವಾಗಿ ಅಲೆಮಾರಿಗಳಿಗಾಗಿ ನವಗ್ರಾಮ ಯೋಜನೆಯಡಿಯಲ್ಲಿ ನಿರ್ಮಿಸಿದ ಜನತಾ ಮನೆಗಳು ಬಳ್ಳಾರಿ ತಾಲೂಕಿನ ಗುಡಾರ ನಗರದಲ್ಲಿ ಮತ್ತು ಸಂಡೂರು ತಾಲೂಕಿನ ಹಳೇ ದರೋಜಿ ಗ್ರಾಮದಲ್ಲಿ, ಹರಪನಹಳ್ಳಿ ತಾಲೂಕಿನ ಆಶ್ರಯ ಕಾಲೋನಿಯಲ್ಲಿ ಬುಡ್ಗ ಜಂಗಮರ ಜನತಾ ಮನೆಗಳು ಅಧಿಕವಾಗಿ ಕಂಡುಬರುತ್ತವೆ. ಉಳಿದ ಕುಟುಂಬಗಳು ಬಾಡಿಗೆ ಮನೆಯಲ್ಲಿ ವಾಸಿಸುತ್ತಾ ನಿವೇಷನ ಮತ್ತು ಕಟ್ಟಡ ಇಲ್ದೇ ಬದುಕುತ್ತಿರುವುದನ್ನು ಕಾಣಬಹುದು. ನೆಲೆನಿಂತ ಬಹುತೇಕ ಅಲೆಮಾರಿಗಳಲ್ಲಿ ಮುಖ್ಯವಾಗಿ ವಸತಿ ಸಮಸ್ಯೆ ಮುಖ್ಯವಾಗಿರುವುದನ್ನು ಕಾಣಬಹುದಾಗಿದೆ.

**ಕೋಷ್ಟಕ ೪.೧೨: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಾಸದ ನೆಲೆಯ ಸ್ವರೂಪ**

| ನೆಲೆಯ ಸ್ವರೂಪ ಕುಟುಂಬಗಳ | ಸಂಖ್ಯೆ | ಶೇಕಡಾ |
|---|---|---|
| ಮನೆ ಸ್ವಂತದ್ದು | ೧೪೪ | ೧೬.೮ |
| ಮನೆ ಸರ್ಕಾರದ್ದು | ೧೫೪ | ೧೮ |
| ಮನೆ ಇಲ್ಲದವರು | ೫೫೬ | ೬೫.೨ |
| **ಒಟ್ಟು** | **೮೫೪** | **೧೦೦** |

**ವೃತ್ತ ಚಿತ್ರ ೪.೧: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಕುಟುಂಬದ ವಾಸದ ನೆಲೆಯ ಸಯ್ವರೂಪದ ವೃತ್ತ ಚಿತ್ರ**



ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಸಮುದಾಯದ ವಸತಿಯ ಸ್ವರೂಪವನ್ನು ಆಧರಸಿ ಸಂಗ್ರಹಿಸಿದ ದತ್ತಾಂಶಗಳನ್ನು ವಸತಿಯ ಪ್ರಕಾರಗಳನ್ನು ಗುರುತಿಸಿ ವಿಂಗಡಿಸಲಾಗಿದೆ. ಜಿಲ್ಲೆಯ ಒಟ್ಟು ಕುಟುಂಬಗಳ ಹಾಗೂ ವಸತಿಯ ಪ್ರಕಾರದ ಶೇಕಡಾವಾರು ಪ್ರಮಾಣವನ್ನು ಈ ಕೋಷ್ಟಕದಲ್ಲಿ ಕಾಣಬಹುದು. ಬಳ್ಳಾರಿ ಜಿಲ್ಲೆಯ ಬುಡ್ಗಜಂಗಮರ ವಾಸದ ನೆಲೆಯ ಒಟ್ಟು ಕುಟುಂಬಗಳು ೮೫೪ರಲ್ಲಿ ಸ್ವಂತಮನೆ ಇದ್ದವರು ಶೇಕಡಾ ೧೬.೮(೧೪೪), ಮನೆ ಸರ್ಕಾರದ್ದು ೧೮ (೧೫೪), ಮನೆ ಇಲ್ಲದವರು ೬೫.೨(೫೫೬) ಕಂಡು ಬರುತ್ತದೆ.

**ಕೋಷ್ಟಕ ೪.೧೩: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಾಸದ ನೆಲೆಯ ಒಡೆತನ**

| **ನೆಲೆಯ ಒಡೆತನ** | **ಸಂಖ್ಯೆ** | **ಶೇಕಡಾ** |
|---|---|---|
| ಮನೆ ಇದ್ದವರು | ೨೯೮ | ೩೪.೮ |
| ನಿವೇಶನ ಇದೆ, ಮನೆ ಇಲ್ಲದವರು | ೨೧೮ | ೨೫.೫ |
| ನಿವೇಶನ ಇಲ್ಲ, ಮನೆ ಇಲ್ಲದವರು | ೨೯೩ | ೩೪.೫ |
| ಬಾಡಿಗೆ ಮನೆಯಲ್ಲಿ ಇದ್ದವರು | ೪೫ | ೫.೨ |
| **ಒಟ್ಟು** | **೮೫೪** | ೧೦೦ |

**ವೃತ್ತ ಚಿತ್ರ೪.೨: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವಾಸದ ನೆಲೆಯ ಒಡೆತನದ ವೃತ್ತ ಚಿತ್ರ**




ಮೇಲಿನ ವೃತ್ತ ಚಿತ್ರವನ್ನು ಅವಲೋಕಿಸಿದಾಗ ಸ್ವಂತ ಹಾಗೂ ಸರ್ಕಾರದ ಜನತಾ ಮನೆಗಳು ಇದ್ದವರು ಶೇ ೩೪.೮, ಬಾಡಿಗೆ ಮನೆಯಲ್ಲಿ ಇದ್ದವರು ಶೇ ೫.೨, ನಿವೇಶನ ಇದೆ ಮನೆಇಲ್ಲದವರು ಶೇ೨೫.೫, ನಿವೇಶನ ಇಲ್ಲ ಮನೆಇಲ್ಲದವರು ಶೇ ೩೪.೫ ಕುಟುಂಬಗಳು ಕಂಡುಬರುತ್ತವೆ. ಮೇಲಿನ

ಕೋಷ್ಟಕವನ್ನು ಅವಲೋಕಿಸಿದಾಗ ಸಮುದಾಯವು ಒಂದುಕಡೆ ನೆಲೆನಿಂತು ಆಧುನಿಕ ಕಸುಬುಗಳನ್ನು ಅವಲಂಬಿಸಿ ದುಡಿದು ಸ್ವಂತಮನೆಗಳನ್ನು ಹೊಂದಿರುವುದು ಕಾಣಬಹುದು. ಇನ್ನೂ ಸಂಘ ಸಂಸ್ಥೆಗಳ ನಿರಂತರ ಹೋರಾಟ ಹಾಗೂ ಸಹಕಾರದ ಹಿನ್ನೆಲೆಯಲ್ಲಿ ಅಲ್ಲಲ್ಲಿ ಸರ್ಕಾರದ ನವಗ್ರಾಮ ಯೋಜನೆಯಡಿಯ ಮನೆಗಳಲ್ಲಿ ವಾಸಿಸುತ್ತಿರುವುದು ಕಂಡುಬರುತ್ತಿದೆ. ಇಂದಿನ ಜಾಗತಿಕ ಪ್ರಪಂಚದಲ್ಲಿಯೂ ಮನೆಇಲ್ಲದೆ ಬುಡ್ಗ ಜಂಗಮರು ಅತಂತ್ರರಾಗಿ ಇನ್ನೂ ಗುಡಾರ ಗುಡಿಸಲುಗಳಲ್ಲಿ ವಾಸಿಸುತ್ತಿರುವುದು ಕಾಣಬಹುದು. ಕಡು ಬಡವರಾದ ಬುಡ್ಗ ಜಂಗಮರು ಇವರ ಆರ್ಥಿಕ ಸ್ಥಿತಿ ತುಂಬಾ ಕೆಳಮಟ್ಟದಲ್ಲಿರುವುದು ಕಂಡು ಬರುತ್ತದೆ.

**ಬುಡ್ಗ ಜಂಗಮ್ ಸಮುದಾಯದ ಆಹಾರ ಪದ್ಧತಿ**

ಭೂಮಿಯ ಮೇಲೆ ವಾಸಿಸುತ್ತಿರುವ ಎಲ್ಲಾ ಜೀವಿಗಳಿಗೂ ಆಹಾರ ಅವಶ್ಯಕವಾಗಿ ಬೇಕೆಬೇಕು. ಆಹಾರ ಇಲ್ಲದೆ ಮಾನವನು ಕೂಡ ಬದುಕಲಾರನು. ಆಹಾರಕ್ಕಾಗಿ ನಿತ್ಯ ಶ್ರಮಿಸುತ್ತಾನೆ. ದುಡಿಯುತ್ತಾನೆ. ಆಹಾರವಿಲ್ಲದೇ ಮಾನವ, ಪ್ರಾಣಿ-ಪಶು-ಪಕ್ಷಿಗಳು ಬದುಕುವುದು ಅಸಾಧ್ಯ. ಆದರೆ ಪಡೆಯುವ ವಿಧಾನಗಳು, ಮಾರ್ಗಗಳು ಬೇರೆ ಬೇರೆಯಾಗಿವೆ. ಆದರೂ ಆಹಾರವನ್ನು ದೊರಕಿಸಕೊಳ್ಳಬೇಕಾಗಿದೆ. ಪ್ರಾಚೀನ ಕಾಲದಲ್ಲಿ ಮಾನವನ ವಿಕಾಸದ ಪರಿಕಲ್ಪನೆಯಲ್ಲಿ ಬುಡಕಟ್ಟುಗಳಿಗೆ ಅರಣ್ಯ ಪ್ರದೇಶಗಳಲ್ಲಿ ದೊರೆಯುವ ಗೆಡ್ಡೆ-ಗೆಣಸು ಹಣ್ಣು-ಹಂಪಲುಗಳೇ ಆಹಾರವಾಗಿದ್ದವು. ಕ್ರಮೇಣವಾಗಿ ಆಹಾರಕ್ಕಾಗಿ ಅಲೆಮಾರಿ ಜೀವನ ಸಾಗಿಸಬೇಕಾಗಿತ್ತು. ಆಹಾರವು ಸಾಮಾಜಿಕ ಜೀವನದಲ್ಲಿ ಎಷ್ಟರಮಟ್ಟಿಗೆ ಪ್ರಭಾವ ಬೀರಿದೆ ಹಾಗೂ ಬದುಕನ್ನು ಸಮೃದ್ಧಿಗೊಳಿಸಿದೆ ಎಂಬುದನ್ನು ಕಾಣಬಹುದು. ಮಾನವ ವಿಕಾಸಗೊಡಂತೆ ಆಹಾರದ ಸ್ಪರ್ಧೆ-ಘರ್ಷಣೆಗಳು ಕಂಡುಬಂದವು. ಆಹಾರಕ್ಕಾಗಿ ಅಲೆದಾಟವನ್ನು ಇಂದಿನ ದಿನಗಳಲ್ಲೂ ನಾವು ಕಾಣಬಹುದಾಗಿದೆ. "ಈ ಹಿಂದೆ ಆಹಾರ ಕ್ರಮದ ಮೇಲೆ ನಿರ್ಬಂಧಗಳು ಇದ್ದವು. ಅಂದರೆ ಆಹಾರ ಪಡೆಯುವ ಬಗೆ, ಆಹಾರದ ಪ್ರಕಾರ, ಆಹಾರ ಸಂಗ್ರಹಣೆ ಇತ್ಯಾದಿಗಳೆಲ್ಲವೂ ಜಾತಿಯ ಹೆಸರಿನಲ್ಲಿ ವರ್ಗೀಕರಿಸಲಾಗಿದೆ. ಈ ಹಿಂದೆ ಯಾವ ಜಾತಿಯ ಜನರು ಯಾವ ರೀತಿಯ ಆಹಾರವನ್ನು ಸೇವಿಸಬಾರದು ಎಂಬುದರ ಕುರಿತು ನಿರ್ದಿಷ್ಟ ನಿಯಮಗಳಿದ್ದವು. ಕೆಳಜಾತಿಯವರ ಆಹಾರವನ್ನು ಮೇಲ್ಜಾತಿಯವರು ಉಪಯೋಗಿಸಬಾರದು ಎಂಬ ಜಾತಿಯ ವಿಷಬೀಜ ಬಿತ್ತಿದ ಪರಿಣಾಮ ಆಹಾರದಿಂದ ಜಾತಿಯನ್ನು ವರ್ಗೀಕರಿಸಲಾಯಿತು"[೩]. ಈ ಹಿನ್ನೆಲೆಯಲ್ಲಿ ಬುಡ್ಗ ಜಂಗಮ ಸಮುದಾಯವು ಜಾತಿಯ ಆರ್ಭಟದಲ್ಲಿ ಬಲಿಯಾಯಿತು. ನೆಲೆಯಿಲ್ಲದೆ ಪಾರಂಪರಿಕ ವೃತ್ತಿಯನ್ನು ನೆಚ್ಚಿಕೊಂಡು ಬೇರೆಯವರ ಸುಖಕ್ಕಾಗಿ ವಿವಿಧ ವೇಷಗಳನ್ನು, ಬುರ್ರಕಥೆಗಳನ್ನು ಹಾಡಿಕೊಂಡು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಅಲೆದಾಡಿದರು. ಆಹಾರಕ್ಕಾಗಿ ಪರದಾಡಿದರು. ಕಲೆಯನ್ನು ನಂಬಿ, ಕಲೆಯನ್ನು ಉಸಿರು ಎಂದು ಕಲಾವೃತ್ತಿಗಳಿಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟಿಕೊಂಡರು. ಹೀಗೆ ಅನೇಕ ಸಮಸ್ಯೆಗಳಿಂದ, ಅಂದಿನಿಂದ ಇಂದಿನವರೆಗೂ ಅಲೆಮಾರಿಗಳಾಗಿಯೇ ಅಲೆದಾಡುತ್ತಿದ್ದಾರೆ. ಅವರಿಗೆ ಒಂದು ಸರಿಯಾದ ಶಾಶ್ವತ ನೆಲೆ ಸಿಕ್ಕಿಲ್ಲ.

ಬುಡ್ಗ ಜಂಗಮರು ತಮಗೆ ಎಲ್ಲಿ ಆಹಾರ ದೊರೆಯುತ್ತದೆಂದು ತಿಳಿದುಕೊಂಡು ಅಂತಹ ಸ್ಥಳಗಳಲ್ಲಿ ಕುಟುಂಬ ಸಮೇತ ಹೋಗಿ ಬಿಡಾರಗಳನ್ನು ಹೂಡಿ, ಬೇಟೆಯಾಡಿ ಆಹಾರವನ್ನು ಪಡೆಯುತ್ತಿದ್ದರು. ಇಂದಿನ ಆಧುನಿಕ ಸ್ಥಿತಿಯಲ್ಲಿಯೂ ಇವರಿಗೆ ನಿರ್ಧಿಷ್ಟ ಆಹಾರ ದಕ್ಕದ ಸ್ಥಿತಿಯೂ ಇವರದ್ದಾಗಿದೆ. ಒಂದೊತ್ತಿನ ಊಟಕ್ಕಾಗಿ ಅಲೆದಾಡುವ ಇವರಿಗೆ ನಿರ್ದಿಷ್ಟ ಆಹಾರವಾದರೂ ಎಲ್ಲಿಂದ ಬರಬೇಕು ಆಹಾರ ಸಂಗ್ರಹಿಸಿಕೊಳ್ಳುವುದೇ ಇವರ ದಿನನಿತ್ಯದ ಜೀವನವಾಗಿದೆ.

ಹಳ್ಳಿಗಳಲ್ಲಿ ಕಲಾಪ್ರದರ್ಶನದ ಸಂದರ್ಭದಲ್ಲಿ ಮುಂಜಾನೆ ಹೋಟಲ್‌ನಲ್ಲಿ ತಿಂಡಿ ಹಾಗೂ ಚಹಾ ಸೇವನೆ, ಸಾಯಂಕಾಲ ಚಹಾ ತಿಂಡಿ ಸ್ವೀಕರಿಸುವರು. ಹಣವಿದ್ದಾಗ ಮಾತ್ರ ಹೋಟಲ್‌ನಲ್ಲಿ ಹೋಗುತ್ತಾರೆ. ಇಲ್ಲದಿದ್ದರೆ ತಮ್ಮ ಗುಡಾರಗಳಲ್ಲಿಯೇ ಇರುತ್ತಾರೆ. ಊಟಕ್ಕಾಗಿ ಭಿಕ್ಷೆಗೆ ಹೋಗಬೇಕಾಗಿರುವುದು ಅನಿವಾರ್ಯವಾಗಿದೆ. ಅವರು 'ಯಮ್ಮಾ.. ಅಕ್ಕಾ...ನಾವು ವೇಷಗಾರರು ಊರಾಡಕ ಬಂದೀವಿ ಮನೆಯಲ್ಲಿ ಏನಾದರೂ ಇದ್ದರೆ ಅನ್ನ ನೀಡಮ್ಮ' ಎಂದು ಊಟಕ್ಕಾಗಿ ಬೇಡಿಕೊಳ್ಳುತ್ತಾರೆ. ಆ ರಾತ್ರಿಯಲ್ಲಿ ಏನಾದರೂ ಉಳಿದ ತಂಗಳನ್ನ, ಸಾರು, ಮುದ್ದೆ, ರೊಟ್ಟಿ ಇತ್ಯಾದಿಗಳಿದ್ದರೆ ನೀಡುತ್ತಾರೆ. ಇಲ್ಲದಿದ್ದರೆ ಮುಂದಕ್ಕೆ ಹೋಗಮ್ಮ ಎಂದು ಬೈದು ಕಳಿಸುತ್ತಾರೆ. ವಾರದ ಸಂತೆಗಳಲ್ಲಿ; ಕೊನೆಯಲ್ಲಿ ಉಳಿದ ತರಕಾರಿಗಳನ್ನು ಬೇಡುವರು ಅಥವಾ ಕೆಳಗೆ ಬಿದ್ದ ತರಕಾರಿಗಳನ್ನು ಸಂಗ್ರಹಿಸಿ, ಕೊಳೆತ ಸೊಪ್ಪುಗಳನ್ನು ಪಡೆಯುವರು. ಮದುವೆ ಮನೆ, ಮಂಟಪಗಳಲ್ಲಿ ಹೋಗಿ ಊಟವನ್ನು ಬೇಡಿಕೊಂಡು ತಿನ್ನುತ್ತಾರೆ.

ಬುಡ್ಗ ಜಂಗಮರು ಸ್ವೀಕರಿಸುವ ಆಹಾರ ಕ್ರಮದಲ್ಲಿ ಅವರು ಉಪಯೋಗಿಸುವ ಪರಿಕರಗಳು, ಸಾಕುವ ಪ್ರಾಣಿಗಳು ಅವರ ಸ್ಥಿತಿಯನ್ನು ಬಿಂಬಿಸುತ್ತದೆ. ಇವರು ಬಹುಪಾಲು ಬೇಟೆ ಹಾಗೂ ಪ್ರಾಣಿಗಳನ್ನು ಸಾಕುವುದರಿಂದ ತಮ್ಮ ಆಹಾರವನ್ನು ತಾವೇ ಸಂಗ್ರಹಿಸಿಕೊಳ್ಳುತ್ತಿದ್ದರು. ಕುರಿ ಹಾಗೂ ಮೇಕೆಗಳನ್ನು ಹಾಲಿಗಾಗಿ ಸಾಕುತ್ತಿದ್ದರು. ಕೋಳಿಯನ್ನು ಮಾಂಸ ಹಾಗೂ ಮೊಟ್ಟೆಗಾಗಿ ಸಾಕುತ್ತಿದ್ದರು. ಇವರು ಊರಿಂದೂರಿಗೆ ಹೋಗುವ ಅಲೆಮಾರಿಗಳಾಗಿದ್ದರಿಂದ ಇವರ ಆಹಾರ ತಯಾರಿಸುವ ಪಾತ್ರೆಗಳು ಸಾಮಾನ್ಯವಾಗಿ ಕಡಿಮೆ ಬೆಲೆಯುಳ್ಳವು ಮತ್ತು ಹಗುರವಾಗಿರುತ್ತಿದ್ದವು ಹಾಗೂ ಸುಲಭವಾಗಿ ಸಾಗಿಸಬಹುದಾಗಿತ್ತು. ಮುದ್ದೆ, ಅನ್ನ, ಸಾರು ಮಾಡಲು ಮಣ್ಣಿನ ಮಡಿಕೆಗಳು ಮತ್ತು ಸಿಲ್ವರ್ ಪಾತ್ರೆಗಳನ್ನು; ನೀರು ತರಲು ಗಡಿಗೆ, ಕುಡಿಯಲು 'ಮುಂತ'(ಮಗಿ) ಸಾರು ತುಂಬಲು 'ಕ್ವಾರಸಿಪ್ಪ(ಕ್ವಾರಬಟ್ಟಲು)' ಬಳಸುತ್ತಿದ್ದರು. ಖಾರ ಅಥವಾ ಚಟ್ನಿ ಅರೆಯಲು ಗುಂಡು ಬಂಡೆಯನ್ನಾಗಲಿ, ಅಥವಾ ಓಳಕಲ್ಲಾಗಲಿ ಬಳಸುತ್ತಿದ್ದಿಲ್ಲ, ಅದರ ಬದಲು 'ರಾಳಸಿಪ್ಪ' ಅಥವಾ 'ಗುಣಸಿಪ್ಪ' ಎಂದು ಕರೆಯುವ ಮಣ್ಣಿನ ಪಾತ್ರೆಯನ್ನು ಬಳಸುತ್ತಿದ್ದರು.

**ರಾಳುಸಿಪ್ಪ ಅಥವಾ ಗುಣಸಿಪ್ಪ:** ಗುಣಸಿಪ್ಪ ಎಂದರೆ ಮಣ್ಣಿನಿಂದ ವಿಶೇಷವಾಗಿ ತಯಾರಿಸಿದ ಕ್ವಾರಬಟ್ಟ್ಲು; ಆದರೆ ಕ್ವಾರಬಟ್ಲು ಮತ್ತು ಇದಕ್ಕೂ ಸ್ವಲ್ಪ ವ್ಯತ್ಯಾಸವಿರುತ್ತದೆ. ಹಸಿ ಜೇಡಿಮಣ್ಣಿನಿಂದ ಕ್ವಾರಬಟ್ಲನ್ನು ಮಾಡಿ ಅದರ ಒಳಗಡೆ ಬೆಣಚುಕಲ್ಲಿನಿಂದ ದುಂಡಾಗಿ ಸಣ್ಣಸಣ್ಣ ಚೂರುಗಳನ್ನು ಅಂಟಿಸಿರುತ್ತಾರೆ.

(ಛಾ:೪.೫) ‘ಇಂಗ್ಗಾರ’ ಅಥವಾ ‘ತುಗ್ಗಲಿ’ ಕೊಂಬೆಯಿಂದ ಮಾಡಿದ(ಗೂಟ) ಉಪಯೋಗಿಸಿ ಖಾರಮಸಾಲೆ ಚಟ್ನಿಯನ್ನು ಗುಣಿಸಿಪ್ಪದಲ್ಲಿ ಹಾಕಿ ಅರೆಯುತ್ತಾರೆ. ಈ ಕಟ್ಟಿಗೆಯನ್ನು ‘ಖಾರಂಕಟ್ಟಿ’ ಎಂದು ಕರೆಯುತ್ತಾರೆ. ಊಟ ಮಾಡಲು ಮಣ್ಣಿನ ಮಡಕೆಯ ಮುಚ್ಚಳಗಳನ್ನು ಅಥವಾ ಸಿಲ್ವರ್ ಪಾತ್ರೆಗಳನ್ನು ಬಳಸುತ್ತಿದ್ದರು. ಈಗೀಗ ಆಧುನಿಕತೆಯ ಪ್ರಭಾವದಿಂದ ಮಣ್ಣಿನ ಪಾತ್ರೆಗಳ ಬದಲಾಗಿ ಸಿಲ್ವರ್, ಪ್ಲಾಸ್ಟಿಕ್ ಪಾತ್ರೆಯ ಉಪಕರಣಗಳನ್ನು ಬಳಸುತ್ತಿದ್ದಾರೆ.

ಬುಡ್ಗ ಜಂಗಮರು ಹೆಚ್ಚಾಗಿ ಮಾಂಸಹಾರವನ್ನು ಸೇವಿಸುತ್ತಾರೆ. ಅನ್ನದಲ್ಲಿ ಏನಿಲ್ಲದಿದ್ದರೂ ನಂಜಿಕೊಳ್ಳಲು ಮೀನನ್ನಾದರೂ ಹಿಡಿದು ಸುಟ್ಟು ತಿನ್ನುತ್ತಾರೆ. ಇವರು ದಿನನಿತ್ಯ ತರಕಾರಿ ಬೇಳೆ ಪದಾರ್ಥಗಳ ಜೊತೆಗೆ ಕುರಿ, ಕೋಳಿ, ಕೌಜುಗ, ಮೊಲ, ನರಿ, ಮುಂಗುಲಿ, ಉಡ, ತೊಳ, ಕಾಡು ಹಂದಿ, ಮುಳ್ಳುಹಂದಿ, ಮೀನು, ಏಡಿ, ಆಮೆ ಇನ್ನಿತರ ಸಣ್ಣ ಪುಟ್ಟ ಕಾಡುಪ್ರಾಣಿಗಳನ್ನು ಬೇಟೆಯಾಡಿ ತಿನ್ನುತ್ತಾರೆ. ಉಳಿದ ಮಾಂಸವನ್ನು ಬಿಸಲಿಗೆ ಒಣಗಿಸಿ ಮತ್ತೊಂದು ದಿನ ಸೇವಿಸುತ್ತಾರೆ. ಮುಖ್ಯವಾಗಿ ಈ ಸಮುದಾಯದಲ್ಲಿ ಸ್ತ್ರೀಯರು ಮತ್ತು ಪುರುಷರು ಮಾಂಸಹಾರ ಜೊತೆಗೆ ಹೆಂಡ, ಸರಾಯಿಯನ್ನು ಸೇವಿಸುತ್ತಾರೆ ಮತ್ತು ಎಲೆಅಡಿಕೆ ತಂಬಾಕನ್ನು ಅತಿಹೆಚ್ಚಾಗಿ ಬಳಸುತ್ತಾರೆ ಮತ್ತು ಪುರುಷರು ಧೂಮಪಾನ ಮಾಡುತ್ತಾರೆ.

**ವಿಶೇಷ ಆಹಾರ:** ಬುಡ್ಗ ಜಂಗಮರಿಗೆ ನಲ್ಲವಂಟ, ಚಿಂತಪುಲ್ಪು ಸಾರು, ಪುಂಡುಕೂರ(ಪುಂಡೆಪಲ್ಲೆ), ಗಂಡಕಾರಂ ವಿಶೇಷ ಆಹಾರಗಳಾಗಿವೆ. ಬುಡ್ಗ ಜಂಗಮರು ಬೇಟೆಗೆ ಹೋದಾಗ ಬೇಟೆಯಾಡಿದ ಅನೇಕ ಪ್ರಾಣಿಗಳ ಮಾಂಸದ ಅಡುಗೆ ‘ನಲ್ಲವಂಟ’ ಎಂದು ಕರೆಯುತ್ತಾರೆ. ವಲಿಂಗಾಣಿ ಗುಡ್ಲು (ಉಡದ ಮೊಟ್ಟೆ), ಮುರುಗುಂಜ ಗುಂಡಕಾಯಿ(ತಾಬೇಲು ಲಿವರ್) ಕುರುಂಗಾಡು ಕವ್ವು(ಆಮೆ ಸತ್ವ), ಎಂಟ್ಟುವ ತ್ವಾಕ (ಮುಂಗಿಸಿ ಬಾಲ) ತೋಡಿಸಿಗ್ಯಾಡು ತೊಡ (ಅಳಿಲಿನ ತೊಡೆ), ನರಿಸಿಗಾಡು ರಕ್ತಮು (ನರಿಯ ರಕ್ತ) ಇವುಗಳನೆಲ್ಲ ಕಲಿಸಿ ಅಡುಗೆ ಮಾಡಿಕೊಂಡು ತಿನ್ನುವುದನ್ನು ‘ನಲ್ಲವಂಟ’ ಎಂದು ಕರೆಯುತ್ತಾರೆ. ಇದರ ಜೊತೆಗೆ ಹೆಂಡ ಸರಾಯಿಯನ್ನು ಸೇವಿಸಿದರೆ ಅದೇ ಅವರಿಗೆ ಸ್ವರ್ಗಸುಖ ಎಂದು ಹೇಳುತ್ತಾರೆ. ಒಮ್ಮೊಮ್ಮೆ ಈ ರೀತಿ ಅಡುಗೆ ತಂದು ಕೊಟ್ಟ ವರನಿಗೆ ಹೆಣ್ಣು ಕೊಟ್ಟು ಮದುವೆ ಮಾಡಿದ ಪ್ರಸಂಗವವು ಉಂಟು. ಹಳ್ಳ ಮತ್ತು ನದಿಯಲ್ಲಿ ತುಂಬ ಚಿಕ್ಕಚಿಕ್ಕ ಮರಿಮೀನುಗಳು ಹಿಡಿದು ಸ್ವಚ್ಛಮಾಡಿ ಸ್ವಲ್ಪ ಹಸಿಕಾರ ಜಾಸ್ತಿ ಹಾಕಿಕೊಂಡು ಸಾಂಬರು ಮಾಡಿ ರಸಂ ಕುಡಿದರೆ ನೆಗಡಿ, ತಲೆನೋವು ಕಿತ್ತುಕೊಂಡು ಹೋಗುತ್ತದೆ ಎಂದು ಮೀನಿನ ಸಾರನ್ನು ಕುಡಿಯುತ್ತಾರೆ. ಗಂಡಕಾರಂ(ಕೈಕಾರ) ಚಿಂತಪಂಡುಕಾಯಿ (ಹುಣಸೆಹಣ್ಣು) ಕಾರ, ಉಂಚಿಕಾಯಿ ಹಾಕಿ ಹಿಟ್ಟುಹಾಕಿ ಮಾಂಸಹಾಕಿ ಮಾಡುವ ಹಿಟ್ಟಿನ ಸಾರುನ್ನು ಚಿಂತಪುಲ್ಪು ಸಾರು ಇವರಿಗೆ ವಿಶೇಷವಾದ ಆಹಾರವಾಗಿದೆ. ಹಸಿಮಾಂಸ ಮತ್ತು ಮೀನುಗಳನ್ನು ಅರಿಸಿನಪುಡಿ ಉಪ್ಪುಹಾಕಿ ನೀರು ಒಲೆಯಲ್ಲಿಟ್ಟು ಬಸಿದು ನಂತರ ಒಣಗಿಸಿಕೊಂಡು ಶೇಖರಿಸಿ ತಿನ್ನುತ್ತಾರೆ. ಆದರೆ ಇತ್ತೀಚಿನ ದಿನಮಾನಗಳಲ್ಲಿ ಬೇಟೆಯಾಡುವುದು ಮತ್ತು ಪ್ರಾಣಿಯನ್ನು ಕೊಲ್ಲುವುದು ನಿಷೇಧ ಎಂಬ ಕಾನೂನಿನಿಂದ ಇವರ

ಪಾರಂಪರಿಕ ಆಹಾರದಿಂದ ವಂಚಿತರಾಗಿದ್ದಾರೆ. ಇಂದಿನ ದಿನಗಳಲ್ಲಿ ಕೋಳಿ, ಕುರಿ ಮಾಂಸವನ್ನು ತೆಗೆದುಕೊಂಡು ತಿನ್ನುವಷ್ಟು ಶಕ್ತಿ ಅವರಲಿಲ್ಲ. ಆದರೆ ಮಾಂಸದ ಅಂಗಡಿಯಲ್ಲಿ ಬಿಸಾಡಿದ ಕೋಳಿಕಾಲುಗಳು, ಕುರಿಯ ಕರಳುಗಳನ್ನು ಬೇಡಿಕೊಂಡು ತಂದು ತಿನ್ನುತ್ತಾರೆ. ಇತ್ತೀಚಿನ ದಿನಗಳಲ್ಲಿ ಬೇಟೆಗಾರಿಕೆ, ಭಿಕ್ಷಾಟನೆ ಕಡಿಮೆಯಾಗಿ ಎಲ್ಲಾ ಕುಟುಂಬದವರು ಸ್ವತಃ ಅಡುಗೆ ಮಾಡಿಕೊಂಡು ಸೇವಿಸುತ್ತಿರುವುದನ್ನು ಕಾಣಬಹುದಾಗಿದೆ.

**ಕಷಾಯ:** ಕಷಾಯ ಜನರ ಜೀವನದಲ್ಲಿ ಆರೋಗ್ಯ ಸಂರಕ್ಷಣೆಯ ವಿಧಾನಗಳಲ್ಲಿ ಬಳಕೆಯಾಗುವ ಪಾನೀಯವಾಗಿದೆ. ಜನರು ತಮ್ಮ ಅಭಿರುಚಿಗಳಿಗೆ ತಕ್ಕಂತೆ ಆಹಾರ ಪಾನೀಯಗಳನ್ನು ಶೀತ-ಕೆಮ್ಮು ಕಫಗಳಿಗೆ ತಕ್ಕಂತೆ ಕಷಾಯಗಳನ್ನು ತಯಾರಿಸಿಕೊಳ್ಳುತ್ತಾರೆ. ತಮ್ಮ ರೋಗ-ರುಜಿನಗಳಿಗೆ ತಾವೇ ನಿವಾರಿಸಿಕೊಳ್ಳುವ ಮೇಟಿ ಔಷಧಗಳನ್ನು ಕಂಡುಕೊಂಡಿದ್ದಾರೆ. ಬುಡ್ಗ ಜಂಗಮರು ಕಷಾಯವನ್ನು ಅನಾರೋಗ್ಯಗಳ ಸಂದರ್ಭದಲ್ಲಿ ಮತ್ತು ಕೆಲವರು ಹಾಗೇಯೇ ಸುಮ್ಮನೆ ದಿನನಿತ್ಯ ಸೇವಿಸುವ ವಾಡಿಕೆಯನ್ನು ಕಾಣಬಹುದು. ಕಷಾಯ ಇದು ಬಹುಹಿಂದಿನಿಂದ ಬಂದ ಪದ್ಧತಿ, ಅದರಲ್ಲು ಅಡುಗೆ ಮನೆಯಲ್ಲಿ ದೊರೆಯುವ ಜೀರಿಗೆ, ಮೆಣಸು, ಅರಿಸಿನ, ಶುಂಠಿ, ಉಪ್ಪು, ಕೊತ್ತಂಬರಿ, ಬೆಳ್ಳುಳ್ಳಿ, ಇಂಗು, ವಾಮ, ಮೆಂತ್ಯ ಇತ್ಯಾದಿಗಳನ್ನು ಬಳಸಿ ಕಷಾಯಗಳನ್ನು ತಯಾರಿಸಿಕೊಳ್ಳುತ್ತಾರೆ.

೧. ಶುಂಠಿ, ಕೊತ್ತಂಬರಿ ಕಾಳು, ಮೆಣಸು, ಉಪ್ಪು ಅರಿಸಿನವನ್ನು ನೀರಿನಲ್ಲಿ ಬೆರೆಸಿ ಕುದಿಸಿ ಕುಡಿದರೆ ಕೆಮ್ಮು ನಿಲ್ಲುತ್ತದೆ.

೨. ಬೇವಿನ ಮರದ ತೊಗಟೆ, ಹುಣಸೆ ಮರದ ತೊಗಟೆ, ಇವುಗಳನ್ನು ಸಣ್ಣಿಗೆ ಜಜ್ಜಿ ನೀರಿನಲ್ಲಿ ಕುದಿಸಿಕೊಂಡು ಸ್ವಲ್ಪ ಉಪ್ಪು ಹಾಕಿಕೊಂಡು ಕುಡಿದರೆ ಜ್ವರ, ನೆಗಡಿ, ಕೆಮ್ಮು ದಮ್ಮು, ಆಯಾಸ ಕಡಿಮೆಯಾಗುತ್ತದೆ.

೩. ಬೇವಿನಮರದ ಚಿಗುರು ಎಲೆ, ಸ್ವಲ್ಪ ಉಪ್ಪು ಹಾಕಿ ಸಣ್ಣಿಗೆ ಜಜ್ಜಿ ಗುಳಿಗೆ ರೀತಿಯಲ್ಲಿ ಮಾಡಿಕೊಂಡು ಬರಿಹೊಟ್ಟೆಯಲ್ಲಿ ನುಂಗಿದರೆ ತಲೆನೋವು, ಜ್ವರ, ಕಡಿಮೆಯಾಗುತ್ತದೆ. ಈ ರೀತಿಯ ಕಷಾಯಗಳನ್ನು ಪರಂಪರೆಯಿಂದಲೂ ಬುಡ್ಗ ಜಂಗಮರು ಸೇವಿಸುತ್ತಾ ಬಂದಿದ್ದಾರೆ.

**ಆಹಾರದ ವಿಧಿ-ನಿಷೇಧಗಳು:** ವಿಧಿ-ನಿಷೇಧಗಳು ಮಾನವನ ನಡತೆಯನ್ನು ರೂಪಿಸಲು ನಿಯಂತ್ರಿಸಲು ಸಮಾಜವನ್ನು ಸ್ಥಾಪಿಸಿರುವ ಕಟ್ಟುಪಾಡುಗಳೇ ವಿಧಿ-ನಿಷೇಧಗಳು ಎನ್ನಬಹುದು. ನಿಷೇಧಗಳು ಪ್ರಾಚೀನ ಸಮಾಜದ ಅಲಿಖಿತ ಕಾನೂನುಗಳು ಎಂದು ಕರೆಯಲಾಗಿದೆ. ಪ್ರಪಂಚದ ಎಲ್ಲ ಬುಡಕಟ್ಟುಗಳು ಆಹಾರಕ್ಕೆ ಸಂಬಂಧಿಸಿದಂತೆ ವಿಧಿ-ನಿಷೇಧಗಳನ್ನು ಹೊಂದಿರುವುದು ಕಾಣಬಹುದು. ಕರ್ನಾಟಕದ ಬುಡಕಟ್ಟುಗಳಲ್ಲಿಯೇ ನೋಡುವುದಾದರೆ ಹಟ್ಟಿ ಕುಣಬಿಯರು ಮೊಲವನ್ನು ಕೊಲ್ಲುವುದಿಲ್ಲ, ಕುಂಬ್ರಿಗಳು ಹುಲಿಯನ್ನು ಕೊಲ್ಲುವುದಿಲ್ಲ, ನಾಮಧಾರಿಗಳು ಪಡಚಿ ಹುಳುವನ್ನು ಕೊಲ್ಲುವುದಿಲ್ಲ, ಲಂಬಾಣಿಗಳು ಕೋಳಿಯನ್ನು ಪವಿತ್ರ ಎಂದು ಭಾವಿಸುತ್ತಾರೆ. ಬೆಸ್ತರು ಮಡ್ಲೆ ಮೀನನ್ನು ಹಿಡಿಯುವುದಿಲ್ಲ, ಮ್ಯಾಸ ಬೇಡರು ಕೋಳಿಯನ್ನು ತಿನ್ನುವುದಿಲ್ಲ ಹಾಗೆಯೇ ಬುಡ್ಗ ಜಂಗಮರು ಹಸು ಮತ್ತು ಊರು ಹಂದಿಯನ್ನು

ತಿನ್ನುವುದಿಲ್ಲ. ದನಗಳನ್ನು ಸಾಕುತ್ತಿದ್ದರಿಂದ ಅವುಗಳನ್ನು ಪವಿತ್ರ ಎಂದು ಪರಿಗಣಿಸುತ್ತಿದ್ದರು. ಈಗಾಗಿ ಆಹಾರದಲ್ಲಿ ವಿಧಿ–ನಿಷೇಧಗಳನ್ನು ಹೇರಿಕೊಂಡು ಬಂದಿರುವುದನ್ನು ಕಾಣಬಹುದು.

**ಉಡುಗೆ – ತೊಡುಗೆ**

ಬುಡ್ಗ ಜಂಗಮರಲ್ಲಿ ಬಹಳಷ್ಟು ಜನ ಕಪ್ಪು, ಗೋದಿಬಣ್ಣದವರು ಮತ್ತು ಕೆಂಪುಗಿರುವವರು ಇದ್ದಾರೆ. ಬುಡ್ಗ ಜಂಗಮರನ್ನು ನೋಡಿದಾಗ ಅವರು ಧರಿಸುವ ಉಡುಪುಗಳಿಂದಲೇ ಇವರನ್ನು ಇದೇ ಜಾತಿಗೆ ಸೇರಿದವರು ಎಂಬುದನ್ನು ಗುರುತಿಸಬಹುದು. ಇವರು ಭಿಕ್ಷಾಟನೆ, ಇಲ್ಲವೇ ತಮ್ಮ ಕಲೆ ಪ್ರದರ್ಶನ ಮಾಡುವ ಸಂದರ್ಭದಲ್ಲಿ ಅವರು ತೊಡುವ ಉಡುಪುಗಳಿಂದಲೇ ಬುಡ್ಗ ಜಂಗಮರು ಎಂದು ಗುರುತಿಸಬಹುದಾಗಿದೆ. ಉಳಿದ ಸಮಯದಲ್ಲಿ ಅವರು ಸಾಮಾನ್ಯವಾಗಿ ಹರಿದ, ಹಳೆಯದಾದ ಊರಾಡಿಕೊಂಡು ಬಂದ ಬಟ್ಟೆಗಳನ್ನು ತೊಡುತ್ತಾರೆ. ಸ್ವಂತಃ ಖರೀದಿಸಿಕೊಂಡು ತೊಡಲು ಇವರಲ್ಲಿ ಸಾಮರ್ಥ್ಯ ಇಲ್ಲ. ಇವರು ಆರ್ಥಿಕವಾಗಿ ಬಹಳ ಹಿಂದುಳಿದವರಾಗಿರುವುದರಿಂದ ಇವರು ಇತರರಿಗಿಂತ ಸಾಮಾನ್ಯವಾದ ಬಟ್ಟೆಬರೆಗಳನ್ನು ಧರಿಸುತ್ತಾರೆ. ಹಿರಿಯ ಗಂಡಸರು ಪಂಚೆ(ದೋತ್ರ), ಜುಬ್ಬಾ, ಲುಂಗಿ, ತಲೆಗೆ ಪಟಕ(ಮುಂಡಾಸು) ಅಥವಾ ಶಾಲು, ಕಿವಿಗಳಿಗೆ 'ಪೋಗುಲು' (ನಾಗರ ಹಾವಿನ ಆಕಾರದ ಒಡವೆಯನ್ನು ಪೋಗಲು ಎನ್ನುತ್ತಾರೆ) ಓಲೆ, ಕುತ್ತಿಗೆಗೆ 'ಮೆಡಕಂಠಿ ಅಥವಾ ಗಂಟಮಾಲ' ಕೈಗೆ ಬೆಳ್ಳಿ ಕಡಗ, ಬೆರಳಿಗೆ ಉಂಗುರಗಳು, ಬಲಗಾಲಿಗೆ ಕಡಗ ಮುಂತಾದ ಒಡವೆಗಳನ್ನು ಸಾಮಾನ್ಯವಾಗಿ ಧರಿಸುತ್ತಾರೆ. ಹಣೆಗೆ ವಿಭೂತಿ, ಕುಂಕುಮ, ಗಂಧವನ್ನು ಹಚ್ಚಿಕೊಂಡಿರುತ್ತಾರೆ. ಯುವಕರು ಪ್ಯಾಂಟು ಅಂಗಿಯನ್ನು ತೊಡುತ್ತಾರೆ.

ಪಾತ್ರಗಳಿಗೆ ತಕ್ಕಂತೆ ವೇಷಭೂಷಣಗಳನ್ನು ಹಾಕಿಕೊಳ್ಳುತ್ತಾರೆ. ತಲೆಯಲ್ಲಿ ಉದ್ದವಾದ ಕೂದಲು ಬಿಟ್ಟಿರುತ್ತಾರೆ. ಇವರಲ್ಲಿ ಬಹಳಷ್ಟು ಪುರುಷರು ತಲೆಯ ಕೂದಲನ್ನು ಕುತ್ತಿಗೆಯ ಕೆಳಮಟ್ಟದವರೆಗೆ ಇಳಿ ಬೀಳುವಂತೆ 'ಗಿರ್ದಾ' (ಕತ್ತರಿಸದಂತೆ ಬೆಳೆಸಿದ ತಲೆ ಕೂದಲಿನ ನಾಲ್ಕನೇ ಒಂದು ಭಾಗ ಉದ್ದದ ಕೂದಲನು ಗಿರ್ದಾ ಎನ್ನುತ್ತಾರೆ. ಈ ಕೂದಲು ಒಂದು ಗೇಣು ಉದ್ದವಾಗಿ ಬಿಟ್ಟಿರುತ್ತಾರೆ. ಪೌರಾಣಿಕ ನಾಟಕದ ಸನ್ನಿವೇಷಗಳಿಗೆ ಗಂಡು ಅಥವಾ ಹೆಣ್ಣಿನ ಪಾತ್ರಗಳನ್ನು ಧರಿಸಲು ಇಂತಹಾ ಗಿರ್ದಾ ಕೂದಲು ಸಹಕಾರಿಯಾಗುತ್ತವೆ. ವೇಷ ಧರಿಸುವ ಗಂಡಸರು ಪ್ರತಿ ದಿನವೂ ತಪ್ಪದೆ ತಮ್ಮ ಕೂದಲಿಗೆ ಕೊಬರಿ ಎಣ್ಣೆ ಹಚ್ಚಿ ನೀರಾಕಿ ಹಿಂದಕ್ಕೆ ಬಾಚಿಕೊಳ್ಳುತ್ತಾರೆ. ಗಡ್ಡ ಮೀಸೆಗಳನ್ನು ಬಹಳಷ್ಟು ದಿನ ಬಿಡುವುದಿಲ್ಲ, ದಿನಕ್ಕೆ ಅಥವಾ ಎರಡು ದಿನಕ್ಕೆ ಒಮ್ಮೆ ಸ್ವಂತಃ ತಾವೇ ಕ್ಷೌರ ಮಾಡಿಕೊಳ್ಳುತ್ತಾರೆ.

ಹೆಣ್ಣುಮಕ್ಕಳು ಹೆಚ್ಚಾಗಿ ಸೀರೆ, ರವಿಕೆಗಳನ್ನು ಉಡುತ್ತಾರೆ. ಲಂಗದಾವಣಿ ಬಹಳಷ್ಟು ಕಡಿಮೆಯಲ್ಲಿ ಧರಿಸುತ್ತಾರೆ. ಕಿವಿಗೆ 'ಕಮ್ಮಲು'(ಒಲೆ) ಅಥವಾ 'ಬುಗುಡಿ', ಮೂಗಿಗೆ 'ಮುಕ್ಕುನತ್ತು'(ಮೂಗುತಿ), ಕೊರಳಿಗೆ 'ಕಠಾಣಿ' ಮತ್ತು ತಾಳಿ, ನಡುವುಗೆ ಡಾಬು, ಕಾಲಿಗೆ ಕಡಗ, ಕಾಲ್ಬೆರಳಿಗೆ ಕಾಲುಂಗುರಗಳನ್ನು ಧರಿಸುತ್ತಾರೆ. ತಾಳಿ ಮತ್ತು ಕಠಾಣಿ ಬಿಟ್ಟು ಇನ್ನೂ ಎಲ್ಲಾ ಒಡವೆಗಳು ಬೆಳ್ಳಿಯಾದಾಗಿರುತ್ತವೆ. ಕೈತುಂಬಾ ಬಳೆಗಳನ್ನು ಧರಿಸುತ್ತಾರೆ. ಹಣೆಗೆ ಹಗಲವಾದ ಕುಂಕುಮಬೊಟ್ಟು, ಹಣೆಗೆ ಮತ್ತು ಕೈಗಳಿಗೆ

ಹಚ್ಚೆಗಳನ್ನು ಹಾಕಿಸಿಕೊಂಡಿರುತ್ತಾರೆ. ಇತ್ತೀಚಿನ ದಿನಗಳಲ್ಲಿ ಆಧುನಿಕತೆಗೆ ತಕ್ಕಂತೆ ಹೊಂದಿಕೊಳ್ಳುವಂತೆ ಆಭರಣಗಳು, ಬಟ್ಟೆಬರೆಗಳನ್ನು ಹಾಕಿಕೊಳ್ಳುತ್ತಿದ್ದಾರೆ. ಇತರ ಸಮುದಾಯದವರಿಗಿಂತ ಭಿನ್ನವಾಗಿ ಜೀವಿಸುವುದನ್ನು ಕಾಣಬಹುದಾಗಿದೆ. ಇತ್ತೀಚಿನ ದಿನಗಳಲ್ಲಿ ಆಧುನಿಕ ಪ್ರಭಾವದಿಂದ ಹಾಗೂ ಶಿಕ್ಷಣ ಕ್ಷೇತ್ರಕ್ಕೆ ಹೋಗುತ್ತಿರುವುದರಿಂದ ಇವರ ಉಡುಗೆ ತೊಡುಗೆಗಳು, ಜೀವನ ವಿಧಾನ, ಇವರ ಪಾರಂಪರಿಕ ವೃತ್ತಿಗಳು ಬದಲಾವಣೆಯಾಗುತ್ತಿರುವುದು ಕಾಣಬಹುದಾಗಿದೆ.*(ಛಾ: ೪.೬)*

## ಬುಡ್ಗ ಜಂಗಮ್ ಸಮುದಾಯದ ಜನಪದ ವೈದ್ಯ ಪದ್ಧತಿ

ರೋಗಗಳು ಮನುಷ್ಯನಷ್ಟೇ ಪುರಾತನವಾದವು. ಕಾಯಿಲೆಗಳು ಮನುಷ್ಯನಿಗೆ ಬರದೇ ಮರಕ್ಕೆ ಬರುತ್ತದೆಯೇ ಎಂಬ ಜನಪದರು ಗಾದೆ ಮಾಡಿರುವುದುಂಟು. ಎಲ್ಲಾ ಜೀವಿಗಳಿಗೂ ಖಾಯಿಲೆಗಳು ತಪ್ಪಿದ್ದಲ್ಲ. ಆದರೆ ಪ್ರಾಣಿ, ಪಕ್ಷಿ, ಮರ, ಕೀಟಗಳಿಗಿಂತಲೂ ಮನುಷ್ಯನಿಗೆ ಬರುವ ಕಾಯಿಲೆಗಳೇ ಹೆಚ್ಚು. ನಿಸರ್ಗತತ್ವದ ವಿರುದ್ಧವಾದ ಆಹಾರ ಸೇವನೆ, ಜೀವನ ಕ್ರಮಗಳು ಅತಿಯಾಗಿ ಅವಲಂಬಿಸಿದ್ದು ಇದಕ್ಕೆ ಬಹುಮುಖ್ಯ ಕಾರಣವೆಂದೇ ಹೇಳಬಹುದು. ಹುಟ್ಟಿದ ಪ್ರತಿಯೊಂದು ಜೀವಿಯು, ಬದುಕಿರುವತನಕ ನೆಗಡಿ, ಕೆಮ್ಮು, ಜ್ವರ, ತಲೆನೋವು, ಮೈಕೈನೋವು, ಆಮಶಂಕೆ, ವಾಂತಿಭೇದಿ, ಕಾಮಾಲೆ, ಗಾಯ ಹೀಗೆ ಹತ್ತು ಹಲವು ರೀತಿಯ ಶಾರೀರಿಕ ತೊಂದರೆಗಳು ಸ್ವಾಭಾವಿಕವಾಗಿ ಕಾಡುತ್ತವೆ. ಮಾನವರು ದಿನನಿತ್ಯದ ಜೀವನದಲ್ಲಿ ಇಂತಹ ಹಲವು ಸಮಸ್ಯೆ ಸವಾಲುಗಳನ್ನು ಎದುರಿಸಬೇಕಾಗಿತ್ತು. ಆಸ್ಪತ್ರೆ ಸೌಕರ್ಯಗಳು ದೊರೆಯದಿದ್ದ ಸಂದರ್ಭಗಳಲ್ಲಿ ಕಾಯಿಲೆಗಳಿಗೆ ಪರಿಹಾರಗಳನ್ನು ತಾವೇ ಕಂಡುಕೊಳ್ಳಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ಪ್ರಾಚೀನ ಕಾಲದಲ್ಲಿ ಮಾನವನು ದಟ್ಟವಾದ ಕಾಡು ಪ್ರದೇಶಗಳಲ್ಲಿ ವಾಸಿಸುತ್ತಾ ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತಾ ಬಂದನು. ಕಾಡಿನೊಳಗೆ ಬೆಳೆದ ಮಾನವ ಅವುಗಳಿಗೆ ಸ್ಪಂದಿಸಿ ಅರಿತು ಬೆರೆತು ಜೀವನ ಸಾಗಿಸತೊಡಗಿದನು. ಮರದ ತೊಗಟೆ ಹಾಗು ಎಲೆಗಳಿಂದ ದೇಹವನ್ನು ರಕ್ಷಿಸಿಕೊಂಡು, ಪ್ರಾಣಿಗಳನ್ನು ಬೇಟೆಯಾಡಿ ಹಸಿವನ್ನು ನೀಗಿಸಿಕೊಳ್ಳಲು ಮಾಂಸವನ್ನು ಸೇವಿಸಲು ಪ್ರಾರಂಭಿಸಿದನು. ನಂತರ ಗೆಡ್ಡೆ ಗೆಣಸುಗಳನ್ನು ಬಳಸಿ ಸಸ್ಯಹಾರಿಯಾದನು. ಕ್ರಮೇಣವಾಗಿ ಗುಂಪುಗುಂಪಾಗಿ ಜೀವಿಸುತ್ತಾ ಆಹಾರ ಧಾನ್ಯಗಳನ್ನು ಬೇಯಿಸಿ ತಿನ್ನಲು ಪ್ರಾರಂಭಿಸಿದನು.

ಬುದ್ಧಿಯು ವಿಕಾಸವಾಗುತ್ತಾ ಹೋದಂತೆ ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಸುಲಭವಾಗಿ ದೊರೆಯುವ ಗಿಡಮೂಲಿಕೆಗಳಿಂದ ಸಣ್ಣಪುಟ್ಟ ರೋಗಗಳಿಗೆ ಔಷಧಿಯನ್ನು ಕಂಡುಕೊಂಡನು. ಈ ವೈದ್ಯಪದ್ಧತಿಯನ್ನು ತಲೆಮಾರಿನಿಂದ ತಲೆಮಾರಿಗೆ ಗುರುವಿನಿಂದ ಶಿಷ್ಯನಿಗೆ, ತಂದೆಯಿಂದ ಮಗನಿಗೆ ಈ ವಿದ್ಯೆಯು ಪ್ರಸಾರವಾಯಿತು. ಈ ವಿದ್ಯೆಯಲ್ಲಿ ಪಾಂಡಿತ್ಯ ಪಡೆದವರು ಆಯಾ ಪ್ರದೇಶದಲ್ಲಿ ಇವರನ್ನು ಜನಪದ ವೈದ್ಯರೆಂದು ಅಥವಾ ತಜ್ಞರೆಂದು ಕರೆದರು. ಅವರು ಕೊಟ್ಟ ಔಷಧಗಳಿಗೆ ಯಾವ ಪ್ರತಿಫಲವನ್ನು ಬಯಸುತ್ತಿರಲಿಲ್ಲ. ಜೊತೆಗೆ ಪ್ರತಿಫಲ ಬಯಸಿದರೆ ಔಷಧಿ ಹಿಡಿಸುವುದಿಲ್ಲವೆಂಬ ನಂಬಿಕೆ ಅವರಲ್ಲಿತ್ತು. ಎಲ್ಲರಿಗೂ ಹೇಳಿದರೆ ಅದರ ಮಹತ್ವ ಕಡಿಮೆಯಾಗಬಹುದು ಎಂಬ ಹಿನ್ನೆಲೆಯಿಂದ ಔಷಧದ ಗಿಡಮೂಲಿಕೆಗಳ ಹೆಸರುಗಳನ್ನು ಗುಪ್ತವಾಗಿಡುತ್ತಾರೆ. ಈ ವೈದ್ಯಪದ್ಧತಿಯು ಕೆಲವರಿಗೆ

ಜೀವನವನ್ನು ರಕ್ಷಿಸುವ ಪ್ರಮುಖ ಸಾಧನವಾಯಿತು. ಈ ಜ್ಞಾನವನ್ನು ಅಲೆಮಾರಿ ಬುಡ್ಗ ಜಂಗಮರಲ್ಲಿ ವಿಶೇಷವಾಗಿ ಕಂಡುಬರುತ್ತದೆ.

ಇವರ ಜನಪದ ವೈದ್ಯಪದ್ಧತಿಯನ್ನು ಅನೇಕ ಹೆಸರುಗಳಿಂದ ಗುರುತಿಸಲಾಗುತ್ತಿದೆ. ಮನೆಮದ್ದು, ಹಸಿರುಮದ್ದು, ಹಳ್ಳಿ ಔಷಧಿ, ನಾಟಿವೈದ್ಯ, ಆರ್ಯವೇದಿಕ್ ಎಂಬ ಮುಂತಾದ ಹೆಸರುಗಳು ಬಳಕೆಯಲ್ಲಿವೆ. ಬುಡ್ಗ ಜಂಗಮರು ಈ ವೈದ್ಯಪದ್ಧತಿಯನ್ನು (ಸೆಟ್ ಪೊಸೆದಿ) ಎಂದು ಕರೆಯುತ್ತಾರೆ. ಅವುಗಳನ್ನು ೧) ರೋಗ ಪ್ರತಿಬಂಧಕ, ೨) ರೋಗ ನಿವಾರಕ, ೩) ಶಕ್ತಿವರ್ಧಕ ಹೀಗೆ ಮೂರು ರೀತಿಯಲ್ಲಿ ಕಾಣಬಹುದು. ಮನುಷ್ಯ ವೈದ್ಯದಲ್ಲಿ ದೈಹಿಕ ಕಾಯಿಲೆಗಳಿಗೆ ಚಿಕಿತ್ಸೆಗಳು ಇರುವಂತೆಯೇ ಮಾನಸಿಕ ಕಾಯಿಲೆಗಳಿಗೂ ಚಿಕಿತ್ಸೆಗಳನ್ನು ಕಂಡುಕೊಂಡಿದ್ದಾರೆ. ದುಷ್ಟ ಶಕ್ತಿಗಳಿಂದ ಉಂಟಾಗುವ ಮಾನಸಿಕ ವ್ಯತ್ಯಾಸಗಳಿಗೆ ಅಕಾರೆಕ ಶಕ್ತಿಗಳೇ ನಿವಾರಕಗಳೂ ಆಗುತ್ತವೆ. ವಿಭೂತಿ ಮಂತ್ರಿಸಿ ಕೊಡುವುದು ತಾಯಿತ ಕಟ್ಟುವುದು ಅಥವಾ ದೃಷ್ಟಶಕ್ತಿಗಳನ್ನು ನಿಯಂತ್ರಿಸುವ ದೈವಗಳಿಗೆ ಮೊರೆ ಹೋಗುವುದು, ದೃಷ್ಟಿ ತೆಗೆಯುವುದು, ಬರೆಹಾಕುವುದು, ಚಿಟಿಕೆ ಹಾಕುವುದು ಮುಂತಾದ ವಿಧಾನಗಳನ್ನು ಕಂಡುಕೊಂಡಿರುವುದನ್ನು ಇಂದಿಗೂ ಬುಡ್ಗ ಜಂಗಮರಲ್ಲಿ ಕಾಣಬಹುದು.

**ಜನಪದ ವೈದ್ಯ:** ಸಾಮಾನ್ಯವಾಗಿ ಗಿಡಮೂಲಿಕೆ ಹಾಗೂ ಸ್ಥಳೀಯವಾಗಿ ಸಿಗುವ ಔಷಧೀಯ ಸಸ್ಯಗಳನ್ನು ರೋಗಪೀಡಿತರಿಗೆ ನೀಡಿ ಸಣ್ಣಪುಟ್ಟ ಖಾಯಿಲೆಗಳಿಂದ ವಾಸಿ ಮಾಡುತ್ತಾರೆ. ಈ ವೈದ್ಯ ಪದ್ಧತಿಯನ್ನು ಹಿರಿಯ ತಲೆಮಾರಿನವರಿಂದ ಕಲಿತು ಪ್ರಾಯೋಗಿಕವಾಗಿ ಮಾಡಿದ ನಂತರ ಬೇರೆಯವರಿಗೆ ವೈದ್ಯ ನೀಡುತ್ತಾರೆ. ಮಕ್ಕಳಿಗೆ ಬಾಲಗ್ರಹ ಹಾಗೂ ಗ್ರಹಗಳನ್ನು ನಿವಾರಿಸಲು ವಿಶೇಷ ಪೂಜೆಗಳೊಂದಿಗೆ ನಿವಾರಣೆ ಮಾಡುತ್ತಾರೆ. ಈ ಜನಪದ ವೈದ್ಯ ಕ್ಷೇತ್ರದಲ್ಲಿ ಅಪಾರವಾದ ತಜ್ಞತೆಯನ್ನು ಹೊಂದಿರುವ ಈ ಸಮುದಾಯದ ಸೋಮಲಾಪುರ ಗ್ರಾಮದ ಬಲಗೊಲ್ಲ ಯಲ್ಲಪ್ಪ(೫೫) ಮತ್ತು ಹಳೇ ದರೋಜಿ ಗ್ರಾಮದ ಅಶ್ವ ಪಾರ್ವತಮ್ಮನವರು(೮೫) ಸುತ್ತಮುತ್ತಲ್ಲಿನ ಗ್ರಾಮದಲ್ಲಿ ಹೆರಿಗೆ ಮಾಡುವುದರಿಂದ ಹಿಡಿದು ಮಕ್ಕಳಿಗೆ ಸಂದು ಕಟ್ಟುವುದು, ಹೆಣ್ಣುಮಕ್ಕಳಿಗೆ ಸೆರಗು ನಿಲ್ಲಿಸುವುದು, ದೃಷಿದೋಷ ನಿವಾರಿಸುವುದು ಹೀಗೆ ಅನೇಕ ಕಾಯಿಲೆಗಳಿಗೆ ನಾಟಿಔಷಧ ನೀಡಿ ತುಂಬಾ ಹೆಸರುವಾಸಿಯಾಗಿದ್ದಾರೆ.

ಬುಡ್ಗ ಜಂಗಮರು ಸಾಮಾನ್ಯ ಕಾಯಿಲೆಗಳಿಗೆ ಈ ಕೆಳಕಂಡಂತೆ ತಮ್ಮ ಔಷಧಿಗಳನ್ನು ಕಂಡುಕೊಂಡಿದ್ದಾರೆ.

**ಜ್ವರ:** ಬೇವಿನಮರದ ಎಳೆಸೊಪ್ಪು ಮತ್ತು ಉಪ್ಪು ಮಿಶ್ರಣ ಮಾಡಿ ಚೆನ್ನಾಗಿ ಅರಿದು ಅದನ್ನು ಸಣ್ಣಗುಳಿಗೆ ಮಾಡಿಕೊಂಡು ಖಾಲಿ ಹೊಟ್ಟೆಯಲ್ಲಿ ಬೆಳಿಗ್ಗೆ ನುಂಗುತ್ತಾರೆ.

**ಕಿವಿನೋವು:** ಅಶ್ವಗಂಧಿ ಎಲೆಯನ್ನು ಎಣ್ಣೆಯಲ್ಲಿ ಹಾಕಿ ಚೆನ್ನಾಗಿ ಕುದಿಸಿದಾಗ ಕೆಂಪು ಬಣ್ಣಕ್ಕೆ ಬರುತ್ತದೆ. ಅದನ್ನು ಕಿವಿಯೊಳಗೆ ಹಾಕಿಕೊಂಡು ವಾಸಿಮಾಡಿಕೊಳ್ಳುತ್ತಾರೆ.

**ಕಣ್ಣುನೋವು:** ನುಗ್ಗೆಗಿಡದ ಎಲೆಗಳನ್ನು ಬೆಚ್ಚನೆ ಮಾಡಿ ಕಣ್ಣಿಗೆ ಕಾವು ಕೊಟ್ಟರೆ ಕಣ್ಣುನೋವು ಕಡಿಮೆಯಾಗುತ್ತದೆ. ಅಥವಾ ರಸದಲ್ಲಿ ಸ್ವಲ್ಪ ಎದೆಹಾಲು ಮಿಶ್ರಣಮಾಡಿ ಕಣ್ಣಿನಲ್ಲಿ ಹಾಕಿದರೆ ಕಣ್ಣು ನೋವು ಕಡಿಮೆಯಾಗುತ್ತದೆ.

**ಕಣ್ಣಿನಪೊರೆ:** ಕಣ್ಣಿಗೆ ಪೊರೆ ಬಂದಾಗ ಆಲದ ಮರದ ಹಾಲನ್ನು ದಿನವು ಸ್ವಲ್ಪ ಹನಿ ಹಾಕಿಕೊಂಡು ವಾಸಿಮಾಡಿಕೊಳ್ಳುತ್ತಾರೆ.

**ಹಲ್ಲು ನೋವು:** ಅಡವಿ ಔಡಲಗಿಡದ ಹಾಲನ್ನು ಹಲ್ಲುನೋವಿನ ಸಂಧಿಯಲ್ಲಿ ಹಾಕಿದರೆ ಹಲ್ಲು ನೋವು ಕಡಿಮೆಯಾಗುತ್ತದೆ. ಎಕ್ಕೆಗಿಡದ ಹಾಲನ್ನು ಹುಳುಕುಬಿದ್ದ ಹಲ್ಲಿನಲ್ಲಿ ಬಿಟ್ಟಾಗ ಹಲ್ಲುನೋವು ಕಡಿಮೆಯಾಗುತ್ತದೆ. ಹಲ್ಲುನೋವು ಬರದೇ ಇರಲು ದಿನಾಲು ಉತ್ರಾಣಿಕಡ್ಡಿ ಮತ್ತು ಬೇವಿನಕಡ್ಡಿಯಿಂದ ಹಲ್ಲುಗಳನ್ನು ತಿಕ್ಕುತ್ತಾರೆ.

**ಪಾರ್ಶ್ವವಾಯು ತಲೆನೋವು ಮತ್ತು ಅರ್ಧತಲೆ ನೋವು:** ಬಿಳಿ ಮೆಣಸು, ಶುಂಠಿ, ಒಂಟಿ ಬೆಳ್ಳುಳ್ಳಿ ಇವುಗಳನ್ನು ಸಮ ಪ್ರಮಾಣದಲ್ಲಿ ರುಬ್ಬಿ ಅದನ್ನು ಕುದಿಸಿ ಕಷಾಯ ಮಾಡಿ ಕುಡಿಯುತ್ತಾರೆ.

**ಕಜ್ಜಿ:** ಸೀತಾಫಲದ ಬೀಜಗಳನ್ನು ಚೆನ್ನಾಗಿ ಅರಿದು ಶರೀರದ ಮೇಲೆ ಕಜ್ಜಿಯಾದ ಭಾಗಕ್ಕೆ ಹಚ್ಚಿಕೊಂಡು ಕಜ್ಜಿ ವಾಸಿಮಾಡಿಕೊಳ್ಳುತ್ತಾರೆ.

**ಮಲಬದ್ಧತೆ:** ಮಲಬದ್ಧತೆ ಮತ್ತು ಅಜೀರ್ಣಕ್ಕೆ ದನಿಯಾ (ಅವಿಜ) ಚೆನ್ನಾಗಿ ಕುದಿಸಿ ಕಷಾಯಮಾಡಿಕೊಂಡು ಕುಡಿಯುತ್ತಾರೆ.

**ಮೂತ್ರ ಉರಿ:** ಬೇಸಿಗೆಯಲ್ಲಿ ಮೂತ್ರಉರಿ ಉಂಟಾಗುವುದು ಸಹಜ. ಅದಕ್ಕೆ ವಾಸಿಯಾಗಲು ಜೀರಿಗೆ ಚೆನ್ನಾಗಿ ಅರೆದು ಕುಡಿಯುತ್ತಾರೆ.

**ಮೂರ್ಛೆರೋಗ:** ಮೂರ್ಛೆರೋಗ ಹೋಗಲು ಕಾಗೆಮಾಂಸ, ಮೆಣಸು, ಒಂಟಿಬೆಳ್ಳುಳ್ಳಿ ಚೆನ್ನಾಗಿ ಅರಿದು ರಸ ಮಾಡಿಕೊಂಡು ಕುಡಿಯುತ್ತಾರೆ.

**ಕೆಮ್ಮು:** ಕೆಮ್ಮಿಗೆ ಅಜವಾನ ಚೆನ್ನಾಗಿ ಅರೆದು ಕುಡಿಯಬೇಕು. ಅಥವಾ ಬಿಳಿ ಎಕ್ಕೆಯ ಹೂವನ್ನು ಚೆನ್ನಾಗಿ ಒಣಗಿಸಿ ಪುಡಿಮಾಡಿ ದಿನಾಲು ಸ್ವಲ್ಪ ಸ್ವಲ್ಪ ಸೇವಿಸುತ್ತಾರೆ.

**ನಾಯಿ ಕೆಮ್ಮು:** ಮಕ್ಕಳಿಗೆ ಬರುವ ನಾಯಿಕೆಮ್ಮು ಕಾಯಿಲೆಗೆ ಮಕ್ಕಳ ಕುತ್ತಿಗೆಗೆ ಹೊಂಗೆ ಮರದ ಕಾಯಿಗಳನ್ನು ಹಾರ ಮಾಡಿ ಹಾಕುತ್ತಾರೆ. ಅದು ಕ್ರಮೇಣವಾಗಿ ಕಡಿಮೆಯಾಗುತ್ತದೆ.

**ಎದೆಹಾಲು ಬರಲು** : ಬಾಣಂತಿಯರಿಗೆ ಎದೆಹಾಲು ಚೆನ್ನಾಗಿ ಬರಲು ಮೊಳಕೆ ಕಾಳು, ಜೇಡಿಮಣ್ಣು, ಮೀನುಸಾಂಬರು, ಏಡಿ ಸಾಂಬರು ಸೇವಿಸುತ್ತಾರೆ.

**ಚೇಳು ಕಡಿತ:** ಚೇಳು ಕಡಿದ ಭಾಗಕ್ಕೆ ನೋವು ಕಡಿಮೆ ಯಾಗಲು ಬಿಳಿ ನೆಲ್ಲಿಕಾಯಿ ತೇದು ಹಚ್ಚುತ್ತಾರೆ. ಇದರಿಂದ ಚೇಳು ಕಡಿದ ವಿಷವು ಕಡಿಮೆಯಾಗುತ್ತದೆ.

**ನಾಯಿ ಕಡಿತ:** ನಾಯಿ ಕಡಿದ ಮನುಷ್ಯನಿಗೆ ಹಿಪ್ಪೆ ಮರದ ಚೆಕ್ಕೆ ಚೆನ್ನಾಗಿ ಕುಟ್ಟಿ ನೀರಿನಲ್ಲಿ ಕಲಿಸಿ ಕುಡಿಸುತ್ತಾರೆ.

**ವಾತ ರೋಗ:** ನಡುನೋವು, ಕಾಲುನೋವು ಮೈಕೈ ನೋವು ನಿವಾರಣೆಯಾಗಲು ಉಡದ ಪ್ರಾಣಿಯ ಕೊಬ್ಬು ಅಥವಾ ಮೊಸಳೆ ಕೊಬ್ಬು ಚೆನ್ನಾಗಿ ಹಚ್ಚಿ ಮಸಾಜು ಮಾಡಿ ಬಿಸಿ ನೀರಿನಿಂದ ಸ್ನಾನಮಾಡಿಸಿದರೆ ಮೈಕೈನೋವು ಮಾಯವಾಗುತ್ತದೆ.

**ಕೇರುಬೀಜ:** ಕಾಲಿಗೆ ಮುಳ್ಳು ಚುಚ್ಚಿದರೆ ಕೇರನ್ನು ಇಟ್ಟು ಬಿಸಿಮಾಡಿದಾಗ ಮುಳ್ಳು ತನ್ನಷ್ಟಕ್ಕೆ ತಾನೇ ಹೊರಗೆ ಬರುತ್ತದೆ. ಕೀಲುನೋವಿಗೆ ಮೊಣಕಾಲು ನೋವಿಗೆ ಕೇರನ್ನು ಕೇರನ್ನು ಹಚ್ಚುತ್ತಾರೆ.

**ಬೆಂಕಿ ಚಿಕಿತ್ಸೆ:** ಹುಟ್ಟಿದ ಮಕ್ಕಳಿಗೆ ಹೊಟ್ಟೆ ಮೇಲೆ ಬರೆ ಎಳೆಯುತ್ತಾರೆ. ಇದರಿಂದ ಮಕ್ಕಳು ರೋಗ ನಿರೋಧಕ ಶಕ್ತಿಯನ್ನು ಪಡೆದು ನಂಜುರೋಗಗಳಿಂದ ಆರೋಗ್ಯವಾಗಿರುತ್ತಾರೆ ಎಂದು ನಂಬಿಕೆ ಇವರಲ್ಲಿದೆ.

**ಬೇವಿನಕಡ್ಡಿ ಚಿಟಿಕೆ:** ದೊಡ್ಡ ವಯಸ್ಸಿನವರು ಆಕಸ್ಮಿಕವಾಗಿ ಮೂರ್ಛೆಬಿದ್ದರೆ ಬೇವಿನ ಕಡ್ಡಿಯಿಂದ ಬೆಂಕಿಗೆ ಕಾಸಿ ತಲೆಯ ಸುಳಿಯಮೇಲೆ, ಕುತ್ತಿಗೆಯ ನರದಮೇಲೆ, ಕೈಕಾಲುಗಳ ನರಗಳಮೇಲೆ ಚಿಟಿಕೆ ಹಾಕುವುದರಿಂದ ದೇಹದಲ್ಲಿ ವಿದ್ಯುತ್‌ಸ್ಪರ್ಷವಾದಂತೆ ತಕ್ಷಣ ಎಚ್ಚರವಾಗುವರು ಎಂಬ ನಂಬಿಕೆ ಇವರಲ್ಲಿದೆ. ಈ ಪದ್ಧತಿಗಳು ಅನೇಕ ಬುಡಕಟ್ಟು ಅಲೆಮಾರಿ ಸಮುದಾಯಗಳಲ್ಲಿ ಕಂಡು ಬರುತ್ತದೆ.

**ಪಿಟ್ಸ್ ಕಾಯಿಲೆ:** ಅಂಗಡಿಯಿಂದ ತರಿಸುವ ಸಾಮಾನುಗಳಾದ ಗೋರುವಜನ, ಸತಾಪಾಕು, ಕುಂಕುಮ ಪೂವ, ವಾಯುಮೆಣಸು, ವಾಯುಲವಂಗ, ಒಂಟಿ ಬೆಳ್ಳುಳ್ಳಿ, ಕಸ್ತೂರಿ, ಕತ್ತೆಹಾಲು ಮತ್ತು ಗಿಡಮೂಲಿಕೆಗಳಾದ ಕಾಕಿಹಣ್ಣು ಗಿಡದ ಸೊಪ್ಪು, ಆಡು ಮುಟ್ಟದ ಗಿಡದ ಸೊಪ್ಪು, ಅಡವಿ ಬೇವಿನ ಮರದ ಸೊಪ್ಪು ಈ ಮೇಲಿನ ಎಲ್ಲವನ್ನೂ ಮಿಶ್ರಣಮಾಡಿ ಚೆನ್ನಾಗಿ ಅರಿದುಕೊಂಡು ಸೋಸಿ ಕುಡಿದರೆ ಪಿಟ್ಸ್ ರೋಗವು ಮಾಯವಾಗುತ್ತದೆ.

**ಹೆಣ್ಣು ಮಕ್ಕಳಿಗೆ ಮುಟ್ಟು ನಿಲ್ಲುವದಕ್ಕೆ:** ಬೆಣ್ಣೆ, ಹಾಲಿನ ತುಪ್ಪ, ಬಿಳಿದಾಸವಾಳಗಿಡ, ಕೆಂಪು ದಾಸವಾಳಗಿಡ, ಬಿಳೆಗಿನ್ನರ್, ಮೂರು ಚೂಟಿಎಲೆ ಈ ಮೇಲಿನವುಗಳನ್ನು ಚೆನ್ನಾಗಿ ರುಬ್ಬಿ ಬೆಣ್ಣೆಯಲ್ಲಿ ಮಿಶ್ರಣ ಮಾಡಿಕೊಂಡು ಕುಡಿಯಬೇಕು. ಅದಕ್ಕೆ ಮೂರು ದಿನ ಪತ್ತೇವು ಇದ್ದು ಜೋಳದ ರೊಟ್ಟಿ, ಬೆಳ್ಳುಳ್ಳಿ ಖಾರಪುಡಿಯನ್ನು ತಿನ್ನಬೇಕು. ಹೀಗೆ ಮಾಡುವುದರಿಂದ ಮುಟ್ಟು ಬೇಗ ನಿಲ್ಲುತ್ತದೆ.

**ಬಿಳಿಸೆರುಗು ನಿಲ್ಲುವುದಕ್ಕೆ:** ಅಂಗಡಿಯಿಂದ ತರಿಸುವ ಸಾಮಾನುಗಳಾದ ರಾತಿನಾರ, ಕೆಂಪುಕಲ್ಲು ಸಕ್ಕರೆ, ತಾಳಿಬೆಲ್ಲ, ಎರಡು ಜಾಜಿಕಾಯಿ, ಜಾಪತ್ರೆ ಇವುಗಳನ್ನು ಮತ್ತು ಗಿಡಮೂಲಿಕೆಗಳಾದ ಪಾಪುಚ ಹಣ್ಣು, ಏನಿಗೆಪಲ್ಯರಕಾಯಿ ಎಲೆ ಈ ಮೇಲಿನವುಗಳನ್ನು ಚೆನ್ನಾಗಿ ರುಬ್ಬಿ ಮಿಶ್ರಣ ಮಾಡಿಕೊಂಡು ಕುಡಿಯಬೇಕು.

**ಗಂಡಸರಿಗೆ ಬಿಳಿಸೆರಗು ಹೋಗುವಾಗ** ಗಿಡಮೂಲಿಕೆಗಳಾದ ಇಪ್ಪೆಗಿಡದ ಚಕ್ಕೆ, ಜಿಡ್ಡಂಪಲ್ಲಿ ಗಿಡ ಈ ಎರಡು ಗಿಡಗಳ ಚಕ್ಕೆಯನ್ನು ಚೆನ್ನಾಗಿ ರುಬ್ಬಿ ಮಿಶ್ರಣ ಮಾಡಿಕೊಂಡು ಬಿಸಿನೀರಿನಲ್ಲಿ ದಿನಕ್ಕೆ ಎರಡು ಬಾರಿ ಕುಡಿದರೆ ಬಿಳಿಸೆರಗು ಹೋಗುವುದು ಕಡಿಮೆಯಾಗುತ್ತದೆ.

**ಹೊಟ್ಟೆ ನೋವುಗೆ** ಗಿಡಮೂಲಿಕೆಗಳಾದ ಈಸಲದಾರ ಎಲೆ, ಬೇವದಾರಿ, ಗಾಂಧಾರಿ, ಕುಂಕುಮ ಮೂವ (ಹೆಣ್ಣುಮಕ್ಕಳಿಗೆ ಹಸಿರು, ಗಂಡು ಮಕ್ಕಳಿಗೆ ಕೆಂಪು) ಇದನ್ನು ಚೆನ್ನಾಗಿ ರುಬ್ಬಿ ರಸಮಾಡಿಕೊಂಡು ಕುಡಿದರೆ ಹೊಟ್ಟೆನೋವು ಮಾಯವಾಗುತ್ತದೆ.

**ಇಪ್ಪಿ(ಬಿಳಿತೊನ್ನು ಇದ್ದವರಿಗೆ)** ಅಂಗಡಿಯಿಂದ ತರಿಸುವ ಸಾಮಾನುಗಳಾದ ಬಿಳೆಗಂಧಕ, ಮೈಲುತುತ್ತಿ, ರಸಕರ್ಪೂರ, ಉಂಡೆಕರ್ಪೂರ ಮತ್ತು ಎಳ್ಳು ಎಣ್ಣೆ ಇವುಗಳನ್ನು ಮತ್ತು ಗಿಡಮೂಲಿಕೆಗಳಾದ ಬದನೆಕಾಯಿ ಸೊಪ್ಪು, ಮಲ್ಲಿಗೆಗಿಡದ ಎಲೆ, ಜಿಡ್ಡಂಪಲ್ಲಿ ಗಿಡ ಮತ್ತು ಚಿತ್ರಮಲಕ ಇವುಗಳನ್ನು ಚೆನ್ನಾಗಿ ರುಬ್ಬಿ ಎಲ್ಲಿ ಬಿಳಿಇಪ್ಪಿ (ತೊನ್ನು)ಇರುತ್ತದೆಯೋ ಅಲ್ಲಿ ಲೇಪಿಸಿದರೆ ಮಾಯವಾಗುತ್ತದೆ.

**ಕಾಮಿನಿ:** ಗಿಡಮೂಲಿಕೆಗಳಾದ ೧. ಅಂಗಾರಪ್ಪ ಗಿಡ, ೨. ಜಿಡ್ಡಂಪಲ್ಲಿ ಗಿಡ ಈ ಎರಡು ಗಿಡದ ಬೇರುಗಳಿಗೆ ಪೂಜೆಮಾಡಿ ತೆಂಗಿನಕಾಯಿ ಹೊಡೆಯಬೇಕು. ನಂತರ ಬೇರು ಅರಿದು ನಾಲಿಗೆಗೆ ಸವರಿದರೆ ಕಾಮಿನಿ ರೋಗ ಮಾಯವಾಗುತ್ತದೆ. ಇದನ್ನು ರವಿವಾರ ಮಾತ್ರ ಮಾಡಬೇಕು. ಇದಕ್ಕೆ ಐದುದಿನ ಜೋಳದ ರೊಟ್ಟಿ, ಬೆಳ್ಳುಳ್ಳಿ ಖಾರಪುಡಿಯನ್ನು ಸೇವಿಸುವ ಪತ್ತೇವು ಇದ್ದರೆ ಕಾಮಿನಿ ರೋಗ ಕಡಿಮೆಯಾಗುತ್ತದೆ.

**ಮೂಲವ್ಯಾದಿ:** ಗಿಡಮೂಲಿಕೆಗಳಾದ ಉತ್ರಾಣಿ ಎಲೆ, ಎರಡು ಬೆಳ್ಳುಳ್ಳಿ ಇವುಗಳನ್ನು ಚೆನ್ನಾಗಿ ರುಬ್ಬಿ ಮೊಸರಿನಲ್ಲಿ ಮಿಶ್ರಣಮಾಡಿ ಕುಡಿದರೆ ಮೂಲವ್ಯಾದಿ ನಿಲ್ಲುತ್ತದೆ. ಇದಕ್ಕೆ ಪತ್ತೇವು ಬದನೆಕಾಯಿ, ಮೀನು, ಮೂಲಂಗಿ, ಟಮಟೋ ಇವುಗಳಿಂದ ತಯಾರಿಸಿದ ಅಡುಗೆಯನ್ನು ತಿನ್ನಬಾರದು.

**ಎಕ್ಕೆಯ ಗಿಡದ ಔಷಧೀಯ ಗುಣಗಳು**

**ಜ್ವರ:** ಎಕ್ಕದ ಬೇರನ್ನು ನಿಂಬೆಹಣ್ಣಿನ-ರಸದಲ್ಲಿ ಅರೆದು ಸೇವಿಸಿದರೆ ಜ್ವರ ಉಪಶಮನವಾಗುತ್ತದೆ.

**ಚೇಳುಕಡಿದರೆ:** ಚೇಳುಕಡಿದಲ್ಲಿ ಎಕ್ಕದ ಬೇರನ್ನು ತಣ್ಣೀರಿನಲ್ಲಿ ಅರೆದು ಕುಡಿದರೆ ನೋವು ಕಡಿಮೆಯಾಗುತ್ತದೆ.

**ಕಫದಿಂದ ಕೂಡಿದ ಕೆಮ್ಮಿದ್ದರೆ:** ಎಕ್ಕದ ಬೇರಿನ ತೊಗಟೆಯನ್ನು ನೆರಳಿನಲ್ಲಿ ಒಣಗಿಸಿ ಪುಡಿಮಾಡಿಟ್ಟುಕೊಂಡು ೫ ಚಿಟಿಕೆಯಷ್ಟು ಜೇನುತುಪ್ಪದೊಂದಿಗೆ ಸೇರಿಸಿ ದಿನಕ್ಕೆ ಎರಡುಬಾರಿ ಸೇವಿಸಿದರೆ ಕೆಮ್ಮು ಶಮನವಾಗುತ್ತದೆ

**ಮುಖದ ಮೇಲೆ ಕಪ್ಪು ಚುಕ್ಕೆಗಳಿದ್ದರೆ(ಬಂಗು) :** ಎಕ್ಕದ ಬೇರನ್ನು ನಿಂಬೆರಸದಲ್ಲಿ ತೇದು ಅದಕ್ಕೆ ಸ್ವಲ್ಪ ಪುನುಗು ಸೇರಿಸಿ ಲೇಪಿಸಿ ಮೃದುವಾಗಿ ಹಚ್ಚಿಕೊಂಡರೆ ಮುಖದ ಮೇಲೆ ಕಪ್ಪು ಚುಕ್ಕೆಗಳು ಮಾಯವಾಗುತ್ತವೆ.

**ಅಂಗಾಲಿನಲ್ಲಿ ಮುಳ್ಳು ಚುಚ್ಚಿಕೊಂಡಿದ್ದರೆ:** ಮುಳ್ಳನ್ನು ನಿಧಾನವಾಗಿ ತೆಗೆದು ನಂತರ ಎಕ್ಕದ ಹಾಲನ್ನು ಆ ಜಾಗಕ್ಕೆ ಹಾಕುವುದರಿಂದ ಮುಳ್ಳಿನ ವಿಷದ ಬಾಧೆ ನಿವಾರಣೆಯಾಗುತ್ತದೆ.

**ಮೂಲವ್ಯಾಧಿ:** ಎಕ್ಕದ ಹಾಲಿಗೆ ಅರಿಶಿನ ಬೆರೆಸಿ ಮೊಳಕೆಗಳಿಗೆ ಲೇಪಿಸುವುದರಿಂದ ಮೂಲವ್ಯಾಧಿ ಬೇಗ ಗುಣವಾಗುತ್ತದೆ.

**ಮಹಿಳೆಯರಿಗೆ ಮುಟ್ಟಿನ ಪ್ರಕ್ರಿಯೆ ಅನಿಯಮಿತವಾಗಿದ್ದಲ್ಲಿ** ಎಕ್ಕದ ಹೂವು, ಬೆಲ್ಲ ಸೇರಿಸಿ, ಅರೆದು ಗುಳಿಗೆಮಾಡಿಕೊಂಡು ದಿನಕ್ಕೆ ೩–೪ ಮಾತ್ರೆಯಂತೆ ಸೇವಿಸಿದರೆ ಮುಟ್ಟು ನಿಯಮಿತವಾಗುತ್ತದೆ.

**ಬಿಳಿ ಸೆರಗಿನಿಂದ ಬಳಲುತ್ತಿರುವ ಮಹಿಳೆಯರಿಗೆ** ಎಕ್ಕದ ಹೂವನ್ನು ಒಣಗಿಸಿ ಪುಡಿಮಾಡಿಕೊಳ್ಳಬೇಕು. ನಂತರ ದಿನಾಲೂ ಒಂದು ಚಿಟಿಕೆ ಪುಡಿಯನ್ನು ಜೇನುತುಪ್ಪದೊಂದಿಗೆ ಸೇರಿಸಿ ೧೫ ದಿನಗಳವರೆಗೆ ಸೇವಿಸಿದರೆ ಬಿಳಿಸೆರಗು ಕಡಿಮೆಯಾಗುವುದು.

**ಮಕ್ಕಳಿಗೆ ದೃಷ್ಟಿದೋಷವನ್ನು ತೆಗೆಯುವುದು:** ಯಾವುದೇ ಮಗುವಿನ ದೃಷ್ಟಿದೋಷವನ್ನು ತೆಗೆಯುವ ಮುನ್ನ ಪ್ರಶಾಂತವಾದ ಸ್ಥಳವನ್ನು ಆಯ್ಕೆ ಮಾಡಬೇಕು. ಈ ಕಾರ್ಯ ರಾತ್ರಿವೇಳೆ ಮಾಡುವಂತಹದ್ದು. ದೃಷ್ಟಿ ತೆಗೆಯುವ ಮಗುವಿನ ತಲೆಯನ್ನು ಪೂರ್ವ ಪಶ್ಚಿಮದ ಅಭಿಮುಖವಾಗಿ ತಾಯಿಮಗುವನ್ನು ಕೂಡಿಸಬೇಕು. ಇದಕ್ಕೆ ಹತ್ತಿಬಟ್ಟೆ ಒಂದು ಮೀಟರ್, ಬಾರೆ ಗಿಡದ ಕೋಲು, ಒಂದು ತಟ್ಟೆಯಲ್ಲಿ ನೀರು, ಎಣ್ಣೆ ಈ ನಾಲ್ಕು ವಸ್ತುಗಳನ್ನು ಬಳಸುತ್ತಾರೆ. ಮೊದಲು ಬಟ್ಟೆಯನ್ನು ಎಣ್ಣೆಯಲ್ಲಿ ನೆನೆಸಿಕೊಂಡು ಬಾರೆಗಿಡದ ಕೋಲುಗೆ ಸುತ್ತಬೇಕು. ನಂತರ ಕೋಲುಗೆ ಬೆಂಕಿ ಹಚ್ಚಿ, ಮಗುವಿನ ತಲೆಯಿಂದ ಹಿಡಿದು ಕಾಲುಗಳವರೆಗೆ ೫ ಬಾರಿ ಇಳೆ ತೆಗೆದುಹಾಕಬೇಕು. ನಂತರ ಕೋಲನ್ನು ತಟ್ಟೆಯಲ್ಲಿರುವ ನೀರಿನ ಮೇಲೆ ಹಿಡಿಯಬೇಕು, ಉರಿಯುತ್ತಿರುವ ಬಟ್ಟೆಯಿಂದ ಬೀಳುವ ಬೆಂಕಿಯ ಹನಿಗಳು ನೀರಿನ ಮೇಲೆ ಬಿದ್ದು ನೀರು ಕೆಂಪಾದರೆ ಮಗುವಿಗೆ ದೃಷ್ಟಿದೋಷವಿದೆ ಎಂದರ್ಥ. ನೀರು ಕೆಂಪಾಗಿ ಪರಿವರ್ತನೆ ಆಗದೆ ಇದ್ದಲ್ಲಿ ಮಗುವಿಗೆ ದೃಷ್ಟಿದೋಷ ಇಲ್ಲವೆಂದು ತಿಳಿಯುತ್ತಾರೆ.

**ವಯಸ್ಕರಿಗೆ ದೃಷ್ಟಿದೋಷವನ್ನು ತೆಗೆಯುವುದು:** ವಯಸ್ಕರಿಗೆ ದೃಷ್ಟಿದೋಷವನ್ನು ತೆಗೆಯುವುದರಲ್ಲಿ ಮೂರು ವಿಧಾನಗಳಲ್ಲಿ ದೋಷವನ್ನು ಬಗೆಹರಿಸುವುದನ್ನು ಬುಡ್ಗ ಜಂಗಮರು ಕಂಡುಕೊಂಡಿದ್ದಾರೆ.

**ಮೊದಲ ವಿಧಾನ: ಪೆಂಡ(ಹೆಂಡೆ) ದೃಷ್ಟಿ ತೆಗೆಯುವುದು** ಒಂದು ಅಗಲವಾದ ತಟ್ಟೆಯಲ್ಲಿ ನೀರು ಹಾಕಿಕೊಂಡು ಸ್ವಲ್ಪ ಆಕಳಿನಸಗಣಿ ತಂದು ಕಲಿಸಿಡುತ್ತಾರೆ. ನಂತರ ದೃಷ್ಟಿಯಾಗಿರುವ ವ್ಯಕ್ತಿಯ ತಲೆಯ ಕೂದಲು, ಕಣ್ಣಿನ ರೆಪ್ಪೆ, ಬೆನ್ನಹಿಂದೆ ತೀಡಿದಂತ ಮಣ್ಣು, ಕಾಲಿನ ಧೂಳು ಈ ಎಲ್ಲಾವನ್ನು ತೆಗೆದು ಒಂದು ಬಟ್ಟಲಿನಲ್ಲಿ ಹಾಕಿ ಅದರಲ್ಲಿ ಸ್ವಲ್ಪ ಬೆಂಕಿಕೆಂಡ ಹಾಕಿ ಮೂರುಬಾರಿ ಮೇಲಿಂದ ಕೆಳಗೆ ಇಳಿಸಿ ದೃಷ್ಟಿ ತೆಗೆಸಿ ಆ ಬಟ್ಟಲನ್ನು 'ಡಬ್' ಎಂದು ಸಗಣಿ ನೀರಿನ ತಟ್ಟೆಗೆ ಹಾಕುತ್ತಾರೆ. ದೃಷ್ಟಿಯಾದವರು ಮೂರು ಬಾರಿ ಆ ಕಡೆಯಿಂದ ಈ ಕಡೆ ಎಡಗಾಲಿನಿಂದ ದಾಟಬೇಕು. ಆಗ ದೃಷ್ಟಿ ಹೋಯಿತೆಂದು ನಂಬುತ್ತಾರೆ. ಬಟ್ಟಲು ತಟ್ಟೆಗೆ ಬಲವಾಗಿ ಅಂಟಿಕೊಂಡರೆ ದೃಷ್ಟಿ ಹೆಚ್ಚಾಗಿದೆ ಎಂದು ತಿಳಿಯುತ್ತಾರೆ.

**ಮೈ ದೃಷ್ಟಿ ದೋಷ ನಿವಾರಣೆಗೆ** ಉಪ್ಪು, ಒಣಮೆಣಸಿನಕಾಯಿ, ಕಸಬಾರಿಗೆ ಕಡ್ಡಿ, ತಲೆಕೂದಲು, ಸಾಸಿವೆ ಕಾಳು ಈ ಎಲ್ಲಾ ವಸ್ತುಗಳನ್ನು ಎಡಗೈಯಲ್ಲಿ ಹಿಡಿದುಕೊಂಡು ತಲೆಯಿಂದ ಕೆಳಗೆ ತುತು ಎಂದು ತೆಗೆದುಹಾಕಿ ಬೆಂಕಿಯಲ್ಲಿ ಹಾಕಿದರೆ ಮೈ ದೃಷ್ಟಿ ದೋಷ ನಿವಾರಣೆಯಾಗುತ್ತದೆ.

**ಎರಡನೇ ವಿಧಾನ: ಕುಂಡ ದೃಷ್ಟಿ (ಗಡಿಗೆ ದೃಷ್ಟಿ)** ಹೊಟ್ಟೆನೋವು, ವಾಂತಿಬೇದಿ, ಆಕಳಿಕೆ ಈ ಎಲ್ಲಾ ಲಕ್ಷಣಗಳು ಕಂಡುಬಂದಲ್ಲಿ ಕುಂಡ ದೃಷ್ಟಿಯನ್ನು ತೆಗೆದುಹಾಕಿ ನಿವಾರಣೆ ಮಾಡಿಕೊಳ್ಳಬಹುದು.

ಮಣ್ಣಿನ ಗಡಿಗೆ, ಗ್ಲಾಸ್‌ನೀರು, ಅರಿಷಿಣ ಪುಡಿ, ಕಟ್ಟಿಗೆ ಮುಳ್ಳುಗಳು ಮತ್ತು ತಟ್ಟೆ ಇವುಗಳನ್ನು ಬಳಸುತ್ತಾರೆ. ಮೊದಲು ದೃಷ್ಟಿಯಾಗಿರುವ ವ್ಯಕ್ತಿಯನ್ನು ಪೂರ್ವದಿಕ್ಕಿಗೆ ಮುಖಮಾಡಿ ಕೂಡಿಸಿ, ಮಣ್ಣಿನ ಗಡಿಗೆಯಲ್ಲಿ ನೀರು ಹಾಕಿ ಒಲೆಯಲ್ಲಿ ಇಟ್ಟು ಕಾಯಿಸಬೇಕು, ನಂತರ ಒಂದು ತಟ್ಟೆಯಲ್ಲಿ ಅರಿಷಿಣಪುಡಿ ಹಾಕಿ ಮನುಷ್ಯನ ಗೊಂಬೆಚಿತ್ರ ಮಾಡಿ, ಚಿತ್ರದಲ್ಲಿ ಕೈ ಕಾಲು ತಲೆಗೆ ಐದು ಮುಳ್ಳುಗಳನ್ನು ಚುಚ್ಚಿ, ಮೂರು ಒಣಮೆಣಸಿನಕಾಯಿ, ಉಪ್ಪು ಇಡಬೇಕು. ಅದನ್ನು ಮೂರು ಸಲ ಹಿಂದೆಮುಂದೆ ಇಳೆ ತೆಗೆದು ಕುದಿಯುತ್ತಿರುವ ಗಡಿಗೆಯಲ್ಲಿ ಹಾಕಬೇಕು. ನಂತರ ಮತ್ತೊಮ್ಮೆ ವ್ಯಕ್ತಿಗೆ ಗಡಿಗೆಯಿಂದ ಇಳೆ ತೆಗೆದು ತಟ್ಟೆಯಲ್ಲಿ ಬಾರ್ಲಹಾಕಿ ನಂತರ ಗಡಿಗೆಮೇಲೆ ನೀರು ಹಾಕಿದರೆ, ಹಾಕಿದ ನೀರೆಲ್ಲಾ ಗಡಿಗೆಯು ಬಿರುಸುಕೊಳ್ಳುತ್ತದೆ. ಆಗ ದೃಷ್ಟಿದೋಷ ನಿವಾರಣೆಯಾಗುತ್ತದೆ. ನಂತರ ಮೂರು ಸಲ ಎಡಗಾಲಿನಿಂದ ಗಡಿಗೆಯನ್ನು ದಾಟಿ ಹೋಗಬೇಕು. ಹೀಗೆ ಮಾಡುವುದರಿಂದ ದೃಷ್ಟಿದೋಷ ನಿವಾರಣೆಯಾಗುತ್ತದೆ.

**ಮೂರನೇ ವಿಧಾನ: ಪೇಪರ್ ದೃಷ್ಟಿ**

ಈ ದೃಷ್ಟಿ ತೆಗೆಯಲು ಮೊದಲು ಒಂದು ಗಡಿಗೆಯಲ್ಲಿ ಸಾಸಿವೆ, ಉಪ್ಪು, ಒಣಮೆಣಸಿನಕಾಯಿ, ಬಿಸಾಡಿದ ಕಾಗದಗಳು ಈ ಎಲ್ಲಾ ವಸ್ತುಗಳನ್ನು ಹಾಕಿ ಇಳೆ ತೆಗೆದು ಬೆಂಕಿ ಹಾಕಿದ ಗಡಿಗೆಯಲ್ಲಿ ಹಾಕಬೇಕು. ನಂತರ ಮತ್ತೊಮ್ಮೆ ವ್ಯಕ್ತಿಗೆ ಗಡಿಗೆಯಿಂದ ಇಳೆ ತೆಗೆದು ತಟ್ಟೆಯಲ್ಲಿ ಬಾರ್ಲಹಾಕಿ ನಂತರ ಗಡಿಗೆಮೇಲೆ ನೀರು ಹಾಕಬೇಕು. ಹಾಕಿದ ನೀರನೆಲ್ಲ ಗಡಿಗೆಯು ಬಿರುಸುಕೊಂಡರೆ ದೃಷ್ಟಿದೋಷ ನಿವಾರಣೆಯಾಗಿದೆ ಎಂದು ತಿಳೀಯುತ್ತಾರೆ.

**ಜ್ವರ ಕೆಮ್ಮು ನೆಗಡಿ ಕಾಯಿಲೆ**

ಇದನ್ನು ಕೂಡ ಮೂರು ವಿಧಾನಗಳಲ್ಲಿ ನಿವಾರಣೆ ಮಾಡಿಕೊಳ್ಳುವುದನ್ನು ಬುಡ್ಗ ಜಂಗಮರು ಕಂಡುಕೊಂಡಿದ್ದಾರೆ.

**೧. ಮೊದಲ ವಿಧಾನ**

ಬಳಸುವ ಗಿಡಮೂಲಿಕೆಗಳು: ಲೆಕ್ಕಿಗಿಡದ ಸೊಪ್ಪು, ಬೇವಿನ ಸೊಪ್ಪು, ಅಮರೇಗಿಡದ ಸೊಪ್ಪು, ನೀಲಿಗಿರಿಗಿಡದ ಸೊಪ್ಪು ಮತ್ತು ಉತ್ತ್ರಾಣಿ ಸೊಪ್ಪು ಈ ಎಲ್ಲಾ ಗಿಡಮೂಲಿಕೆಗಳನ್ನು ತಂದು ಒಂದು ದೊಡ್ಡ ಗಡಿಗೆಯಲ್ಲಿ ಕುದಿಸಬೇಕು. ಹಾಗೆಯೇ ಐದು ಬಿಳಿಕಲ್ಲುಗಳನ್ನು ಒಲೆಯಲ್ಲಿ ಹಾಕಿ ಚೆನ್ನಾಗಿ ಕಾಯಿಸಬೇಕು. ನಂತರ ಕಾಯಿಲೆ ಇರುವ ನಾಲ್ಕೈದು ಜನ ಸೇರಿ ಇದರ ಆಬೆಯನ್ನು ತೆಗೆದುಕೊಳ್ಳಬಹುದು. ಮೊದಲು ಕುದಿಸಿದ ಗಡಿಗೆಯನ್ನು ಒಂದು ಕಡೆ ಇಟ್ಟು ಅದರ ಸುತ್ತ ನಾಲ್ಕೈದು ಜನ ಕುಳಿತು ಮೇಲೆ ಜಮಖಾನ ಅಥವಾ ಕೌದಿ ಹಾಕಿಕೊಳ್ಳಬೇಕು. ಕಾಯಿಸಿದ ಕಲ್ಲುಗಳನ್ನು ಒಂದೊಂದಾಗಿ ೨ ನಿಮಿಷಕ್ಕೊಮ್ಮೆ ಐದು ಕಲ್ಲುಗಳನ್ನು ಗಡಿಗೆಯಲ್ಲಿ ಹಾಕಿಕೊಳ್ಳಬೇಕು. ಹಾಗೆ ಮಾಡುವುದರಿಂದ ಇನ್ನೂ ಹೆಚ್ಚಿನ ಆಬೆಯನ್ನು ತೆಗೆದುಕೊಳ್ಳಬಹುದು. ಹೀಗೆ ಮೂರು ದಿನ ಮಾಡಿದರೆ ಜ್ವರ, ಕೆಮ್ಮು, ನೆಗಡಿ, ವಾತ ಪಿತ್ತ ಎಲ್ಲಾ ಮಾಯವಾಗುತ್ತದೆ ಎಂದು ಹೇಳುತ್ತಾರೆ.

೨. ಎರಡನೇಯ ವಿಧಾನ

ಒಂದು ಮೆಣಸು, ಬೆಳ್ಳುಳ್ಳಿ, ಉಪ್ಪು ಮತ್ತು ತುಳಸಿಎಲೆ ಈ ವಸ್ತುಗಳನ್ನು ಚೆನ್ನಾಗಿ ರುಬ್ಬಿ ಸಣ್ಣ ಗುಳಿಗೆ ಮಾಡಿಕೊಂಡು ಬೆಳಿಗ್ಗೆ ಖಾಲಿ ಹೊಟ್ಟೆಯಲ್ಲಿ ಸೇವಿಸಿದರೆ ಜ್ವರ, ಕೆಮ್ಮು, ನೆಗಡಿ, ವಾತ ಪಿತ್ತ ಎಲ್ಲಾ ಮಾಯವಾಗುತ್ತದೆ.

**ವರ್ಷದ ಜ್ವರಕ್ಕೆ ಸಂಬಂಧಿಸಿದಂತೆ ಬಳಸುವ ವಸ್ತುಗಳು**: ದೊಡ್ಡ ಬೇವಿನಮರದ ಚಕ್ಕೆ, ತುಳಸಿ ಬೇರು ಮತ್ತು ಕಾನಿಗಿಡದ ಬೇರು ಈ ಎಲ್ಲಾ ಗಿಡಮೂಲಿಕೆಗಳನ್ನು ಒಂದು ಪಾತ್ರೆಯಲ್ಲಿ ಚೆನ್ನಾಗಿ ಕುದಿಸಿಕೊಂಡು ಸೋಸಿ ಖಾಲಿ ಹೊಟ್ಟೆಯಲ್ಲಿ ಸೇವಿಸಿದರೆ ಜ್ವರ, ಕೆಮ್ಮು, ನೆಗಡಿ, ವಾತ ಪಿತ್ತ ಎಲ್ಲಾ ಮಾಯವಾಗುತ್ತದೆ.

**ಮಕ್ಕಳಿಗೆ ನಾಯಿಕೆಮ್ಮು ಕಾಯಿಲೆ ಬಂದರೆ** ಇದನ್ನು ಎಪ್ಪತ್ತರಾಯನ ಕೆಮ್ಮು ಎಂತಲೂ ಕರೆಯುತ್ತಾರೆ. ಈ ಕಾಯಿಲೆಗೆ ಒಂದು ಬಿಳಿ ಕಾಗದದಲ್ಲಿ ೭೧ ಊರುಗಳ ಹೆಸರುಗಳನ್ನು (ಅಂದರೆ ಕೊನೆಗೆ ಊರು ಎಂದು ಇರಬೇಕು. ಉದಾ ದರೂರು, ಸೂಗೂರು, ಮೈಸೂರು) ಹೀಗೆ ಊರು ಎಂದು ಬರೆದು, ಕಾಗದವನ್ನು ಸಣ್ಣಗೆ ಮಡಚಿ ದಾರ ಸುತ್ತಿ ಪೂಜಿಸಿ ಮಕ್ಕಳ ಕೊರಳಿಗೆ ಕಟ್ಟಿದರೆ ನಾಯಿಕೆಮ್ಮು ವಾಸಿಯಾಗುತ್ತದೆ ಎಂಬ ನಂಬಿಕೆ ಬುಡ್ಗ ಜಂಗಮರಲ್ಲಿದೆ.

**ದೊಡ್ಡ ಮಕ್ಕಳಿಗೆ ನಾಯಿಕೆಮ್ಮು ಕಾಯಿಲೆ:** ಕಾನಿಗೆಗಿಡದ ಒಂಭತ್ತು ಬೀಜಗಳು ಮತ್ತು ಎರಡು ಬೆಳ್ಳುಳ್ಳಿಗಳನ್ನು ಸೂಜಿಯಿಂದ ಒಂದು ದಾರದಲ್ಲಿ ಪೋಣಿಸಿ ಸರಮಾಡಿ ಅದಕ್ಕೆ ಅರಿಷಿಣಪುಡಿ ಹಚ್ಚಿ ಪೂಜೆ ಮಾಡಿ ಕೊರಳಿಗೆ ಕಟ್ಟಿದರೆ ನಾಯಿಕೆಮ್ಮು ಮಾಯವಾಗುತ್ತದೆ.

**ಹೆಣ್ಣು ಮಕ್ಕಳಿಗೆ ಮುಟ್ಟು ನೋವು ನಿಲಲ್ಲು**

**ಬಳಸುವ ವಸ್ತುಗಳು:** ಬೇವಿನಮರದ ಎಳೆಸೊಪ್ಪು, ತುಳಿಸಿ ಎಲೆ ಈ ಎರಡು ಸೊಪ್ಪುಗಳನ್ನು ಕೈಯಲ್ಲಿ ಚೆನ್ನಾಗಿ ತೀಡಿಕೊಂಡು ಆಕಳತುಪ್ಪದಲ್ಲಿ ಮಿಶ್ರಣ ಮಾಡಿಕೊಂಡು ಮನೆದೇವರನ್ನು ನೆನೆಸಿಕೊಂಡು ಸೇವಿಸಿ ನಂತರ ಬಿಸಿ ನೀರು ಕುಡಿದರೆ ಮುಟ್ಟು ನೋವು ನಿವಾರಣೆಯಾಗಿ ನಿಲ್ಲುತ್ತದೆ. ಈ ರೀತಿ ಬೆಳಿಗ್ಗೆ ಮತ್ತು ಸಾಯಂಕಾಲ ಮೂರು ದಿನಗಳ ಕಾಲ ಹೀಗೆ ಮಾಡಿದರೆ ಮುಟ್ಟು ನಿಲ್ಲುತ್ತದೆ. ಮುಟ್ಟು ಆಗಿದ ಸಂದರ್ಭದಲ್ಲಿ ಮೂರು ದಿನ ಜಳಕ ಮಾಡದೇ ಮುಟ್ಟು ಆದ ಸೀರೆಯಲ್ಲೇಯೇ ಇರಬೇಕು. ನಂತರ ತಲೆಗೆ ನೀರು ಹಾಕಿಕೊಳ್ಳಬಹುದು. ಇದಕ್ಕೆ ಮೂರು ದಿನ ಪತ್ತೇವು ಇರಬೇಕಾಗುತ್ತದೆ.

**ಪತ್ತೇವು:** ಮೂರು ದಿನ ಉಪ್ಪು ಇಲ್ಲದ ಸಪ್ಪಗೆ ಹೆಸರುಬ್ಯಾಳೆಯಿಂದ ಮಾಡಿದ ಅನ್ನವನ್ನು ತುಪ್ಪದೊಂದಿಗೆ ಸೇವಿಸಿ, ಬಿಸಿ ನೀರನ್ನು ಕುಡಿಯಬೇಕು.

**ಹಡೆದ ಹಸಿ ಬಾಣಂತಿಗೆ ಎಚ್ಚ(ಪತ್ತೇವು)**

೧.ಮೋಡಿ, ೨.ಹಿಪ್ಲಿ, ೩. ದುಂಪನಾಷ್ಪ, ೪. ಆಕಲಕರ, ೫. ಕಟುಕರೂಣಿ, ೬. ವಾಯುಲವಂಗ, ೭. ವಾಯು ಮೆಣಸು, ೮. ಬಿಳಿಕಾಚು, ೯. ಇಂಗು, ೧೦. ವಾಮ (ಅಜಿವಾನ), ೧೧. ಬಜೆ ಈ ಎಲ್ಲಾ ವಸ್ತುಗಳನ್ನು ಚೆನ್ನಾಗಿ ಅಸನು ಮಾಡಿಕೊಂಡು ಹಂಚಿನಲ್ಲಿ ಹುರಿದು ಸಣ್ಣ ಪುಡಿ ಮಾಡಿ

ಒಂದು ಚಮಚದಷ್ಟು ತೆಗೆದುಕೊಂಡು, ಬಿಸಿನೀರಿನಲ್ಲಿ ಮಿಶ್ರಣಮಾಡಿ ಸಣ್ಣ ಗುಳಿಗೆ ರೀತಿಯಲ್ಲಿ ಮಾಡಿಕೊಂಡು ಖಾಲಿ ಹೊಟ್ಟೆಯಲ್ಲಿ ಸೇವಿಸಿದರೆ ಬಾಣಂತಿ ದಷ್ಟಪುಷ್ಟವಾಗಲು, ನೋವು ನಿವಾರಣೆಯಾಗಲು, ಶಕ್ತಿನೀಡಲು ಸಹಕಾರಿಯಾಗುತ್ತದೆ. ನಮ್ಮ ಮೆಣಸು, ಒಣಶುಂಠಿ ಈ ಎರಡು ವಸ್ತುಗಳನ್ನು ಸ್ವಲ್ಪ ಹಂಚಿನಲ್ಲಿ ಕಾಯಿಸಿ ಸಣ್ಣಗೆ ಪುಡಿ ಮಾಡಿ ಬಿಸಿ ಅನ್ನದಲ್ಲಿ ಬೆಳ್ಳುಳ್ಳಿ ಜೊತೆ ತುಪ್ಪ ಮಿಶ್ರಣ ಮಾಡಿಕೊಂಡು ಸೇವಿಸಿದರೆ ಬಾಣಂತಿಗೆ ಎದೆಹಾಲು ಮತ್ತು ಆರೋಗ್ಯ ವೃದ್ಧಿಯಾಗುವಲ್ಲಿ ಸಹಾಯವಾಗುತ್ತದೆ. ಈ ರೀತಿ ಹದಿನೈದು ದಿನ ಸೇವಿಸಿದರೆ ಬಾಣಂತಿ ಉತ್ತಮ ಆರೋಗ್ಯವಾಗಿರುತ್ತಾರೆ.

**ಮಕ್ಕಳಿಗೆ ಬಾಲಗ್ರಹ, ಸಂದು ಮತ್ತು ಸಪ್ಪಡಿ ಕಾಯಿಲೆಗಳು**

**ಬಾಲಗ್ರಹಕ್ಕೆ ಲಕ್ಷಣಗಳು:** ಮಗುವಿಗೆ ವಾಂತಿಬೇದಿ, ವಾರ್ಗಣ್ಣು ಹಾಕಿ ಮಲಗಿದರೆ, ಮಗು ಎದೆಹಾಲು ಕುಡಿಯದೇ ಆಳುತ್ತಿದ್ದರೆ ಇದನ್ನು ಬಾಲಗ್ರಹ ಎಂದು ಕಂಡುಕೊಳ್ಳುತ್ತಾರೆ.

**ಬಾಲಗ್ರಹ ನಿವಾರಣೆಗೆ:** ಮಗುವನ್ನು ಪೂರ್ವದಿಕ್ಕಿನಲ್ಲಿ ಮುಖಮಾಡಿ ಕೂಡಿಸಿ, ಬಾಲಗ್ರಹ ಅಂತ್ರ, ಮೂರು ಹಿಡಿ ಅನ್ನ, ಮೂರು ಬಿಲ್ಲೆ ರೊಟ್ಟಿ, ಒಂದು ಕೋಳಿ ಮೊಟ್ಟೆ ಮತ್ತು ಒಂದು ನಿಂಬೆಹಣ್ಣು ತೆಗೆದು ಹಾಕಿದರೆ ಬಾಲಗ್ರಹ ದೋಷ ನಿವಾರಣೆಯಾಗುತ್ತದೆ ಎಂಬ ನಂಬಿಕೆ ಇವರಲ್ಲಿದೆ.

**ಸಂದು ಲಕ್ಷಣಗಳು:** ಮಕ್ಕಳು ಮಬ್ಬು ಇದ್ದರೆ, ಜ್ವರ ಬಂದರೆ ಇದನ್ನು ಸಂದು ಎಂದು ಗುರುತಿಸುತ್ತಾರೆ.

**ಸಂದು ನಿವಾರಣೆಗೆ:** ದಮ್ಮಡಿ ಬಿಲ್ಲೆ (೨೫ಪೈಸೆ ಅಥವಾ ೫ ಪೈಸೆ, ೧೦ ಪೈಸೆ ನಾಣ್ಯ), ಬಟ್ಟೆ, ಅರಿಷಿಣ ಕುಂಕುಮ, ನಾಲ್ಕು ಹಿದ್ದಿಲು, ಐದು ಅಕ್ಕಿಕಾಳು ಇವುಗಳನ್ನು ಒಂದು ಬಟ್ಟೆಯಲ್ಲಿ ಅರಿಷಿಣ ಹಚ್ಚಿ ಅದಕ್ಕೆ ದಮ್ಮಡಿ ಬಿಲ್ಲೆ ಇಟ್ಟು ಕುಂಕುಮ ಹಚ್ಚಿ ಅರಿಷಿಣ, ಹಿದ್ದಿಲು, ಐದು ಅಕ್ಕಿಕಾಳು ಇಟ್ಟು ಐದು ಗಂಟು ಹಾಕಿ ಪೂಜೆಮಾಡಿ ಅವರ ಮನೆದೇವರನ್ನು ನೆನಸಿಕೊಂಡು ಕೊರಳಿಗೆ ಕಟ್ಟಿದರೆ ಸಂದು ನಿವಾರಣೆಯಾಗುತ್ತದೆ. ನಂತರ ಪಂಚಗಜಾಯ (ಐದು ತಿನಿಸುಗಳು–ಕಡ್ಲೆ, ಮಂಡಾಳು, ಬೆಲ್ಲ, ಬಿಸ್ಕಟ್, ಕೊಬ್ಬರಿ), ಎಲೆಅಡಿಕೆ, ದಕ್ಷಿಣ ಇಟ್ಟು ಕಾಯಿ ಹೊಡೆದು ದಮ್ಮಡಿ ಬಿಲ್ಲೆಯನ್ನು ಕಟ್ಟುತ್ತಾರೆ.

**ಸಪ್ಪಡಿ ಲಕ್ಷಣಗಳು:** ಮಗುವಿಗೆ ವಾಂತಿಬೇದಿಯಾಗುವುದು, ಸಪ್ಪಗೆ ಇರುವುದನ್ನು ಸಪ್ಪಡಿ ಕಾಯಿಲೆ ಎಂದು ಗುರುತಿಸುತ್ತಾರೆ. ಗಿಡಮೂಲಿಕೆಗಳಾದ ಕುಂಕುಮ ಪೂವ, ಗೋರುವಜನ, ಸತಾಪಾಕು ಮತ್ತು ಕಸ್ತೂರಿ ಇವುಗಳನ್ನು ಚೆನ್ನಾಗಿ ರುಬ್ಬಿ ಬಿಸಿನೀರಿನಲ್ಲಿ ಕುಡಿಸಿದರೆ ಸಪ್ಪಡಿ ಎಂಬ ಸಮಸ್ಯೆ ನಿವಾರಣೆಯಾಗುತ್ತದೆ. ತಾಯಿ ಮೂರುದಿನ ಪತ್ತೇವು ಇರಬೇಕಾಗುತ್ತದೆ. ಸಪ್ಪನೆಯ ನವಣೆ ಅನ್ನ ಅಥವಾ ಜೋಳದ ರೊಟ್ಟಿಯನ್ನು ಸೇವಿಸಿದರೆ ಮಗುವಿನ ಸಪ್ಪಡಿ ಲಕ್ಷಣಗಳು ನಿವಾರಣೆಯಾಗುತ್ತದೆ.

**ಕಾಲ್ಧೂಳಿ ತೆಗೆಯುವುದು**

ಈ ಒಂದು ನಂಬಿಕೆಯು ಗ್ರಾಮೀಣ ಭಾಗದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಸಣ್ಣವರು ದೊಡ್ಡವರು ಮತ್ತು ಎಲ್ಲವಯಸ್ಸಿನವರಿಗೂ ಕಾಲ್ಧೂಳಿ ತೆಗೆಯುವುದು ಕಾಣಬಹುದು. ಊಟ ಸೇರದಿದ್ದರೆ,

ಹೊಟ್ಟೆ ಉಬ್ಬರಿಸಿಕೊಂಡರೆ, ಹೊಟ್ಟೆನೋವು ಬಂದರೆ, ಕಾಲಧೂಳಿನಾದರೂ ತೆಗೆಯಿರಿ ಎಂದು ಅನುಭವಸ್ಥರು ಹೇಳುತಿರುತ್ತಾರೆ. ಕಾಲ್ಧೂಳಿ ಎಂದರೆ ಧೂಳಿನೊಂದಿಗೆ ಬಂದವರ ದೃಷ್ಟಿ ದೋಷವೂ ತಗುಲಿ 'ದಿಟ್ಟೆ'(ದೃಷ್ಟಿ)ಯಾಯಿತು ಎಂದು ಹೇಳುತ್ತಾರೆ. ಈ ದೃಷ್ಟಿಯನ್ನು ಮೂರು ರಸ್ತೆಗಳು ಕೂಡುವ ಸ್ಥಳದಲ್ಲಿ ಹೋಗಿ ಉತ್ತರಾಭಿಮುಖವಾಗಿ ಎಡಗಾಲಿನಿಂದ ಕಾಲಿನ ಧೂಳು ತೆಗೆದುಕೊಂಡು, ಮೂರು ಬಾರಿ ವ್ಯಕ್ತಿಯ ತಲೆಯಿಂದ ಕಾಲಿನವರೆಗೆ ಮುಂದೆಹಿಂದೆ ಇಳೆ ತೆಗೆದರೆ ಕಾಲ್ಧೂಳಿ ದೃಷ್ಟಿ ಹೋಗುತ್ತದೆ ಎನ್ನುವ ನಂಬಿಕೆ ಬುಡ್ಗ ಜಂಗಮರಲ್ಲಿದೆ. ಹೀಗೆ ಈ ಸಮುದಾಯವು ಹಲವು ಕಾಯಿಲೆಗಳಿಗೆ ವಾಸಿಯಾಗಲು ಹತ್ತು ಹಲವು ಔಷಧಗಳನ್ನು ಕಂಡುಕೊಂಡಿದೆ. ಮಾನವನಿಗೆ ಆಹಾರದಷ್ಟೇ ಆರೋಗ್ಯವು ಪ್ರಮುಖವಾಗಿರುವುದು ಸೂಚಿಸುತ್ತದೆ. ಬುಡ್ಗ ಜಂಗಮರು ಉಪಯೋಗಿಸುವ ಔಷಧಗಳಾಗಲಿ, ರೋಗವನ್ನು ನಿಯಂತ್ರಿಸಲು ನಡೆಸುವ ತಾಂತ್ರಿಕ ಸ್ವರೂಪಗಳಾಗಲಿ ವೈಜ್ಞಾನಿಕತೆಯಿಂದ ಕೂಡಿದೆ ಎಂದು ಹೇಳಬಹುದು. ಇವರ ಪಾರಂಪರಿಕ ಜ್ಞಾನವನ್ನು ಆಧುನಿಕ ಸಮಾಜವು ಬಳಸಿಕೊಳ್ಳಲು ಪೂರಕವಾಗಿದೆ.

ಒಟ್ಟಾರೆಯಾಗಿ ಅಲೆಮಾರಿ ಬುಡ್ಗ ಜಂಗಮರು ತಮ್ಮದೇಯಾದ ಕುಲಬಳಿಗಳೊಂದಿಗೆ ಬಂಧುತ್ವವನ್ನು ಏರ್ಪಡಿಸಿಕೊಂಡು ಕಾವಡಿ ಜೀವನ, ಮ್ಯಾಳಂ(ಮೇಳ), ಷಂಡ್ರಾ, ಚಿಲ್ಲರ ಭಿಕ್ಷಂ, ಆಹಾರ ಪದ್ಧತಿ, ವಿಭಿನ್ನ ಉಡುಗೆ ತೊಡುಗೆ, ಪಾರಂಪರಿಕ ಜನಪದ ವೈದ್ಯಪದ್ಧತಿ ಇತ್ಯಾದಿ ತಮ್ಮದೇಯಾದ ಆಚಾರ-ವಿಚಾರ ಸಂಸ್ಕೃತಿಯೊಂದಿಗೆ ಸಾಮಾಜಿಕ ಜೀವನ ಮಾಡುತ್ತಿರುವುದು ಕಾಣಬಹುದಾಗಿದೆ.

**ಆಧಾರಗಳು**


೧. ಫ್ರೇಡರಿಕ್ ಎಂಗೆಲ್ಸ್(ಮೂಲ), ೧೯೮೦, ಗೋಪಾಲ್ ಕೃಷ್ಣರಾವ್ ಕೆ ಎಲ್(ಅನು), ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ಪು. ೩೩

೨. Rew.w. Reeve, 1980, kannada English Dictionary, Page-೨೮೪

೩. ಶಿವಲಿಂಗಪ್ಪ ಎಸ್, ನಾಯಕ, ೨೦೧೩, ಯಾದಗಿರಿ ಜಿಲ್ಲೆಯ ಅಲೆಮಾರಿಗಳ ಸಾಮಾಜಿಕ ಸ್ಥಿತಿಗತಿಗಳು: ಒಂದು ಅಧ್ಯಯನ, ಪು. ೮೯

# ಅಧ್ಯಾಯ ಐದು
# ಸಂಪ್ರದಾಯ ಮತ್ತು ಆಚರಣೆಗಳು

**ಪೀಠಿಕೆ**

**ಜೀವನಾವರ್ತಕ ಆಚರಣೆಗಳು**

ಹುಟ್ಟು ಮತ್ತು ನಾಮಕರಣ

ಪೆದ್ದಮನಿಷಿ ಲೇಪೆದಿ ಕಾರ್ಯಂ(ಋತುಮತಿ)

ಬುಡ್ಗ ಜಂಗಮರ ವಿವಾಹ ಪದ್ಧತಿಯ ಆಚರಣೆಗಳು

ಪೂಲು ಪುಡಿಸೆದಿ ಅಥವಾ ಕುಸಪೆಟ್ಟೇದಿ(ಸೀಮಂತ ಕಾರ್ಯ)

ಶವ ಸಂಸ್ಕಾರದ ಆಚರಣೆಗಳು

**ವಾರ್ಷಿಕವಾರ್ತನ ಆಚರಣೆಗಳು**

ಬುಡ್ಗ ಜಂಗಮರ ಪಾರಂಪರಿಕ ದೈವಾರಾಧನೆ

ಜಮ್ಮುಲಮ್ಮ ಸುಂಕ್ಲಮ್ಮರ ಪೆಟ್ಟಿಗೆ ದೇವರ ಆಚರಣೆ

ಮಾರೆಮ್ಮ ದೇವರ ಆಚರಣೆ

ಚೂಸುಕುನೇದಿ(ಪ್ರೇತಾರಾಧನೆ)

ಪಾರಂಪರಿಕ 'ಬಿಡಾರು' ಆಚರಣೆ

**ಆಧುನಿಕ ವಾರ್ಷಿಕಾವರ್ತನ ಆಚರಣೆಗಳು**

**ನಂಬಿಕೆಗಳು, ವಿಧಿ-ನಿಷೇಧಗಳು**

**ಮೌಲ್ಯಗಳು ಮತ್ತು ನಿಯಮಗಳು**

# ಅಧ್ಯಾಯ ಐದು
# ಸಂಪ್ರದಾಯ ಮತ್ತು ಆಚರಣೆಗಳು

## ಪೀಠಿಕೆ

ಸಮುದಾಯವನ್ನು ಒಂದುಗೂಡಿಸುವ ಶಕ್ತಿಯನ್ನು ಸಂಪ್ರದಾಯ ಮತ್ತು ಆಚರಣೆಗಳು ನಿರ್ವಹಿಸುತ್ತವೆ. ಇವು ಮನುಷ್ಯನ ಜೀವನದ ಅವಿಭಾಜ್ಯ ಅಂಗಗಳಾಗಿ ಅವರ ಬದುಕನ್ನು ರೂಪಿಸಿ ಸಂಸ್ಕೃತಿಯನ್ನು ಪೋಷಣೆ ಮಾಡುವಲ್ಲಿ ಮತ್ತು ನಾಗರೀಕತೆಯನ್ನು ಬೆಳೆಸುವಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತವೆ. ಇತಿಹಾಸಕಾರ ಡಿ ಡಿ ಕೋಸಾಂಬಿ ಅವರು ಹೇಳುವಾಗೆ "ಗತಕಾಲದಲ್ಲಿ ಆಗಿ ಹೋದ ಎಲ್ಲ ಸಾಮಾಜಿಕ ಬದಲಾವಣೆಗಳೂ ತಮ್ಮ ಮುದ್ರೆಯನ್ನು ನಮ್ಮ ಇಂದಿನ ಸಮಾಜದಲ್ಲೂ ಉಳಿದು ಬರುವಂತೆ ಒತ್ತಿವೆ. ಇವುಗಳನ್ನಾಧರಿಸಿ ನಮ್ಮ ಚರಿತ್ರೆಯನ್ನು ಗ್ರಹಿಸುವ ಸಾಧ್ಯತೆ ಇದೆ."[೧] ಈ ಹಿನ್ನೆಲೆಯಲ್ಲಿ ಬುಡ್ಗ ಜಂಗಮರ ಸಾಮಾಜಿಕ ಜೀವನದಲ್ಲಿ ಇಂದು ಜೀವಂತವಿರುವ ಆಚರಣೆಗಳು ಮತ್ತು ನಂಬಿಕೆಗಳು ಮೊದಲಾದವುಗಳು ಬುಡ್ಗ ಜಂಗಮರು ಕಳೆದುಹೋದ ಇತಿಹಾಸ ಮತ್ತು ಸಂಸ್ಕೃತಿ ಪರಂಪರೆಯನ್ನು ಚಿತ್ರಿಸಿಕೊಳ್ಳುವುದಕ್ಕೆ ನೆರವಾಗುತ್ತವೆ. "ತಲ ತಲಾಂತರಗಳಿಂದ ಪಾರಂಪರಿಕವಾಗಿ ಗ್ರಾಮೀಣ ಸಮುದಾಯದ ಅಂಗೀಕಾರವನ್ನು ಪಡೆದು ಬಳಕೆಯಲ್ಲಿರುವ ಮಾಟ, ಮಂತ್ರ, ಧಾರ್ಮಿಕ ವಿಧಿವಿಧಾನಗಳು ಪ್ರಾಚೀನ ಕಾಲದಿಂದಲೂ ಆಚರಣೆಗಳಾಗಿ ಮುಂದುವರಿಯುತ್ತಾ ಅವುಗಳನ್ನು ಕ್ರಿಯಾರೂಪಗೊಳಿಸುವುದನ್ನು ಆಚರಣೆ ಎನ್ನುತ್ತೇವೆ"[೨]. ಇಂತಹ ಆಚರಣೆಗಳು ಇರುವುದರಿಂದ ಸಂಪ್ರದಾಯಗಳು ಜೀವಂತವಾಗಿವೆ.

ಭೌಗೋಳಿಕ, ಜನಾಂಗಿಕ ಹಾಗೂ ಸಾಂಸ್ಕೃತಿಕ ವಾತಾವರಣದ ಹಿನ್ನೆಲೆಯಲ್ಲಿ ಆಯಾ ಜನರ ಮನೋಧರ್ಮಕ್ಕನುಗುಣವಾಗಿ ಸಂಪ್ರದಾಯಗಳು ಹುಟ್ಟಿಕೊಂಡು ಆಚರಣೆಗಳಾಗಿ ಉಳಿದಿವೆ. ಮನುಷ್ಯನ ಬೌದ್ಧಿಕ, ಮಾನಸಿಕ ಹಾಗೂ ದೈಹಿಕ ಗುಣಧರ್ಮಗಳು ಸಾರ್ವತ್ರಿಕವಾಗಿ ಏಕರೂಪವನ್ನು ಪಡೆದುಕೊಂಡಾಗ ಅವು ಒಂದೇ ವಿಧದ ಸಂಪ್ರದಾಯಗಳಾಗಿ ಕಂಡುಬರುತ್ತವೆ. ಇವು ಬೇರೆ ಬೇರೆ ಪ್ರದೇಶಗಳಲ್ಲಿ ಅದರ ಛಾಯೆಯಂತೆ ಕಂಡುಬರಬಹುದು. ಈ ಕಾರಣದಿಂದಲೇ ಬೇರೆ ಬೇರೆ ಪ್ರದೇಶದಲ್ಲಿ ನಡೆಯುವ ಸಾಂಪ್ರದಾಯಿಕ ವೃತ್ತಿ, ಹುಟ್ಟು, ಮದುವೆ, ಮರಣದಂತಹ ಆಚರಣೆಗಳಲ್ಲಿ

ಸಾದೃಶ್ಯ ಮತ್ತು ವೈದೃಶ್ಯಗಳಿವೆ. ದಿನೇ ದಿನೇ ಅವುಗಳ ಮೌಲ್ಯದಲ್ಲಿ ವ್ಯತ್ಯಾಸವಾದರು ಅವುಗಳು ನಶಿಸಿ ಹೋಗುವುದಿಲ್ಲ. ಕೆಲವು ಆಚರಣೆಗಳು ಆಧುನಿಕತೆಯ ಜೀವನದ ಹೊಡೆತವನ್ನು ಲೆಕ್ಕಿಸದೆ ಇನ್ನು ಜೀವಂತವಾಗಿವೆ. ಇಂತಹ ಸಂಪ್ರದಾಯ ಹಾಗೂ ನಂಬಿಕೆ, ವಿಧಿ ನಿಷೇಧಗಳನ್ನು ಅವಲಂಬಿಸಿ ಬದುಕುತ್ತಿರುವ ಸಮುದಾಯಗಳಲ್ಲಿ ಬುಡ್ಗ ಜಂಗಮರು ಪ್ರಮುಖರಾಗುತ್ತಾರೆ.

**ಆಚರಣೆಗಳು**

ಆಚರಣೆಗಳು ಇಲ್ಲದೆ ಮನುಷ್ಯನಿಲ್ಲ. ಹುಟ್ಟಿದ ಮಗುವಿನಿಂದ ಹಿಡಿದು ಸಾಯುವತನಕ ಆಚರಣೆಗಳೇ ಜೀವನದಲ್ಲಿ ಜೊತೆಯಾಗಿರುತ್ತವೆ. ಆಚರಣೆಗಳು ಮನುಷ್ಯನ ಜೀವನದಲ್ಲಿ ಪ್ರಮುಖ ನಿರ್ವಹಿಸುತ್ತವೆ. ನಾವು ಎಷ್ಟೇ ವಿಚಾರವಂತರಾದರೂ ಆಚರಣೆಗಳು ಇಲ್ಲದೇ ಅನುಸರಿಸಲಾಗುವುದಿಲ್ಲ. ಬುಡ್ಗ ಜಂಗಮರಲ್ಲಿ ಎರಡು ರೀತಿಯಲ್ಲಿ ಆಚರಣೆಗಳನ್ನು ನೋಡಬಹುದು. ಅದರಲ್ಲಿ ಒಂದು ಜೀವನಾವರ್ತಕ ಆಚರಣೆಗಳು ಮತ್ತು ವಾರ್ಷಿಕಾವರ್ತನ ಆಚರಣೆಗಳು ಕಂಡುಬರುತ್ತವೆ. ಮನುಷ್ಯನ ಹುಟ್ಟಿನಿಂದ ಸಾವಿನವರೆಗೆ ನಡೆಯುವ ಆಚರಣೆಗಳನ್ನು ಜೀವನಾರ್ವತಕ ಆಚರಣೆಗಳೆಂದು, ವಾರ್ಷಿಕವಾಗಿ ಬರುವ ಹಬ್ಬ ಹರಿದಿನ, ಜಾತ್ರೆ, ಉತ್ಸವ, ಪೂಜೆಗಳು ಆಚರಣೆಗಳು ಹಾಗೂ ದೈವಸಂಬಂಧಿಯಾದ ಆಚರಣೆಗಳನ್ನು ವಾರ್ಷಿಕಾವರ್ತನ ಆಚರಣೆಗಳೆನ್ನುವರು. ನಂಬಿಕೆಗಳಿಗೆ ದಾಸರಾಗಿರುವ ಇವರು ತಮ್ಮ ಕುಲಪದ್ಧತಿಗಳನ್ನು ಚಾಚು ತಪ್ಪದೇ ಪಾಲಿಸಿಕೊಂಡು ಬರುತ್ತಾರೆ. ಒಂದುವೇಳೆ ಆಚರಿಸದಿದ್ದರೆ ಒಳ್ಳೇಯದಾಗುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ. ಸಾಮಾನ್ಯವಾಗಿ ಬುಡ್ಗ ಜಂಗಮರಲ್ಲಿ ಈ ಕೆಳಗಿನ ಆಚರಣೆಗಳನ್ನು ತಮ್ಮ ಪದ್ಧತಿ ಸಂಪ್ರದಾಯಕ್ಕೆ ಅನುಗುಣವಾಗಿ ಆಚರಿಸಿಕೊಂಡು ಬರುವುದನ್ನು ಕಾಣಬಹುದು.

**ಜೀವನಾವರ್ತಕ ಆಚರಣೆಗಳು:** ಹುಟ್ಟು, ಪುರುಡು(ನಾಮಕರಣ), ಜವಳ ತೆಗೆಸುವುದು, ಮೈನೆರೆದ ಶಾಸ್ತ್ರ, ವಿವಾಹದ ಆಚರಣೆಗಳು, ಶವಸಂಸ್ಕಾರದ ಆಚರಣೆಗಳು.

**ವಾರ್ಷಿಕಾವರ್ತನ ಆಚರಣೆಗಳಲ್ಲಿ** ಪಾರಂಪರಿಕ ದೈವಾರಾಧನೆ, ಪ್ರೇತಾರಾಧನೆ, ಬಿಡಾರು ಆಚರಣೆ.
**ಆಧುನಿಕ ಹಬ್ಬಗಳು:** ಯುಗಾದಿ, ಮೊಹರಂ, ಶಿವರಾತ್ರಿ, ದಸರಾ, ಗೌರಿಗಣೇಶನ ಹಬ್ಬ, ದೀಪಾವಳಿ, ಓಳಿ ಇತ್ಯಾದಿ ಹಬ್ಬಗಳು

**ಜೀವನಾವರ್ತಕ ಆಚರಣೆಗಳು**

**ಹುಟ್ಟು ಅಥವಾ ಜನನ:** ಹುಟ್ಟಿನ ಸಂಸ್ಕಾರಕ್ಕೆ ಸಂಬಂಧಪಟ್ಟಂತೆ ಆಚರಣೆಗಳು ವೈವಿಧ್ಯಮಯವಾಗಿದ್ದು ಕುತೂಹಲಕಾರಿಯಾಗಿವೆ. ಸಾಮಾನ್ಯವಾಗಿ ಬುಡ್ಗ ಜಂಗಮ್ ಸಮುದಾಯದಲ್ಲಿ ಚೊಚ್ಚಲು ಗರ್ಭಿಣಿಯಾದ ಹೆಣ್ಣನ್ನು, ಗಂಡನ ಮನೆಯಲ್ಲಿಯೇ ಹೆರಿಗೆ ನಡೆಯುತ್ತದೆ. ಹೆರಿಗೆಯನ್ನು ಬುಡ್ಗ ಜಂಗಮರು 'ಕಾನುಪು' ಎಂದು ಕರೆಯುತ್ತಾರೆ. ಶಿಷ್ಟ ಸಮುದಾಯದಗಳು ಚೊಚ್ಚಲ ಹೆರಿಗೆಯನ್ನು

ಐದು ಅಥವಾ ಏಳನೇಯ ತಿಂಗಳಲ್ಲಿ ತವರುಮನೆಗೆ ಕರೆತರುವುದು ಸಂಪ್ರದಾಯವಿದೆ. ಆದರೆ ಬುಡ್ಗ ಜಂಗಮರಲ್ಲಿ ಮೊದಲ ಹೆರಿಗೆ ತವರಿನಲ್ಲೆ ಆಗಬೇಕೆಂಬುದು ನಿಯಮ ಇವರಲ್ಲಿಲ್ಲ, ಆದರೆ ಇತ್ತೀಚಿನ ದಿನಗಳಲ್ಲಿ ಬೇರೆ ಸಮುದಾಯಗಳ ಪ್ರಭಾವದಿಂದ ಮತ್ತು ಗರ್ಭಿಣಿಯ ಬಯಕೆಗಳನ್ನು ಈಡೇರಿಸಬೇಕೆಂಬ ಭಾವನೆಯಿಂದ ತವರಮನೆಗೆ ಕಳಿಸುತ್ತಾರೆ. ಒಂದುವೇಳೆ ಆಕೆಯ ಬಯಕೆ ಈಡೇರದಿದ್ದರಲ್ಲಿ ಗರ್ಭಿಣಿಗೆ ಹೆರಿಗೆಯಾಗುವ ಸಂದರ್ಭದಲ್ಲಿ ತೊಂದರೆಯಾಗುತ್ತದೆ ಎಂಬ ನಂಬಿಕೆಯಿಂದ ಮೊದಲ ಹೆರಿಗೆಯನ್ನು ತವರಮನೆಯಲ್ಲಿ ಆಗುತ್ತಿರುವುದನ್ನು ಅಲಲ್ಲಿ ಕಾಣಬಹುದಾಗಿದೆ. ಇವರಲ್ಲಿ ತುಂಬು ಗರ್ಭಿಣಿಯನ್ನು 'ನಿಂಡುಮನಿಷಿ' ಎಂದು ಕರೆಯುತ್ತಾರೆ.

ಹೆರಿಗೆಯಾಗುವ ಮುನ್ಸೂಚನೆ ಕಂಡಾಗ ಪ್ರಸವಕ್ಕೆ ಜಾಗವನ್ನು ನಿರ್ಧರಿಸಿಕೊಳ್ಳುತ್ತಾರೆ. ನವಮಾಸಗಳು ತುಂಬಿ ಆಕೆಗೆ ಹೆರಿಗೆ ನೋವು ಕಾಣಿಸಿಕೊಂಡಾಗ ಅನುಭವಿ ಮಂತ್ರಸಾನಿ(ಸೂಲಗಿತ್ತಿ)ಯೊಬ್ಬಳನ್ನು ಬರಮಾಡಿಕೊಳ್ಳುತ್ತಾರೆ. ಇಲ್ಲದಿದ್ದರೆ ಸೂಲಗಿತ್ತಿಯು ಇರುವಲ್ಲಿ ಇವರು ಬಿಡಾರ ಹೂಡುತ್ತಾರೆ. ಹೆರಿಗೆಯಾದ ಕ್ಷಣದಿಂದ ಸೂತಕವೆಂದು ಪರಿಗಣಿಸಿ ಬಾಣಂತಿ ಮಗುವನ್ನು ಪ್ರತ್ಯೇಕವಾದ ಡೇರೆ(ಗುಡಾರ)ವನ್ನು ಅಥವಾ ಇತ್ತೀಚಿನ ಜನತಾ ಮನೆಗಳಲ್ಲಿರುವವರು ಮನೆಯಲ್ಲಿ ತಾಡಪಾಲು, ಕೌದಿಯಿಂದ ಅಡ್ಡ ತೆರೆಯನ್ನು ಕಟ್ಟುತ್ತಾರೆ. ಬಾಣಂತಿಯನ್ನು ಇವರ ಭಾಷೆಯಲ್ಲಿ 'ಬಾಲಿಂತ' ಎಂದು ಕರೆಯುತ್ತಾರೆ. ಪ್ರಸವದ ದಿನದಿಂದ ಮೂರು ದಿನವೂ ಹೆತ್ತ ಸೂತಕದ ಪರಿಣಾಮವಾಗಿ ಬಾಣಂತಿಗೆ ಬಳಸಿದ ಬಟ್ಟೆ ಬರೆಗಳನ್ನು ಆ ಸಮುದಾಯದಲ್ಲೇ ಆದ ಸೂಲಗಿತ್ತಿಯು ತೊಳೆದು ಕೊಡುತ್ತಾಳೆ. ಬೇರೆ ಸಮುದಾಯದಂತೆ ಅಗಸಗಿತ್ತಿ ತೊಳೆಯುವುದು ಇವರಲ್ಲಿ ಇಲ್ಲ. ಹೆರಿಗೆಯಾಗಿ ಕೂಸು ಜನಿಸಿದ ತಕ್ಷಣ ಹೊಕ್ಕುಳ ಬಳ್ಳಿಯನ್ನು ಈಳಿಗೆಯಿಂದ ಕೊಯ್ಯುತ್ತಾರೆ. ನಂತರ ಅರಿಶಿಣಪುಡಿ ಮತ್ತು ಕೊಬ್ಬರಿ ಎಣ್ಣೆಯನ್ನು ಮಿಶ್ರಣಗೊಳಿಸಿ ಕೊಯ್ದ ಭಾಗಕ್ಕೆ ಹಚ್ಚುತ್ತಾರೆ. ಹೀಗೆ ಹಚ್ಚುವುದರಿಂದ ತಾಯಿಯ ವಿಸರ್ಜಿತ ವಸ್ತು ಹೊರ ಬರುತ್ತದೆ ಎಂದು ಹೇಳುತ್ತಾರೆ.

**ಮಾಯಿ ಅಥವಾ ಕೊಲ್ಲು ಹೂಳುವುದು:** ಹೆರಿಗೆಯಾದ ನಂತರ ಬರುವ ಮಾಯಿ (ಮಾಸ)ವನ್ನು ಒಂದು ಹೊಸ ಗಡಿಗೆಯಲ್ಲಿ ಇಟ್ಟು ಬಿಡಾರದ ಎದುರು ಅಥವಾ ಪಕ್ಕದ ಜಾಗದಲ್ಲಿ ೫ ಅಡಿ ವೃತ್ತದಲ್ಲಿ ವಡ್ಡು ಮಾಡಿ ಅದಕ್ಕೆ ಸುತ್ತಾ ಬೇವಿನ ಸೊಪ್ಪನ್ನು ಇಡುತ್ತಾರೆ. (ಬಾಣಂತಿಗೆ ಸ್ನಾನ ಮಾಡಿಸಿದ ನಂತರ ಆ ನೀರನ್ನು ಯಾರು ತುಳಿಯಬಾರದು ಎಂದು ಐದುಅಡಿ ವೃತ್ತದ ವಡ್ಡನ್ನು ಕಟ್ಟುತ್ತಾರೆ.) ವೃತ್ತದ ಮಧ್ಯದಲ್ಲಿ ಮಾಯಿಯನ್ನು ಹೂಳಿ ಅದರ ಮೇಲೆ ಒಂದು ಕಲ್ಲು ಇಟ್ಟು ಅದಕ್ಕೆ ಕುಂಕುಮ ಭಂಡಾರ ಮತ್ತು ಬೇವಿನ ತಪ್ಪಲು ಇಟ್ಟು ಪೂಜಿಸುತ್ತಾರೆ. ಇದಕ್ಕೆ ಇವರು 'ಕೊಲ್ಲು ಪೂಜೆ' ಎನ್ನುತ್ತಾರೆ(ಭಾ:೫.೧).

**ಪೊತ್ತಿಕಟ್ಟಡಂ:** ಹೆರಿಗೆಯಾದ ಮೇಲೆ ಬಾಣಂತಿ ಮತ್ತು ಮಗು ಇರುವ ಗುಡಾರದಲ್ಲಿ ಭೂತ ಪ್ರೇತಗಳು ಸುಳಿಯಬಾರದೆಂದು ಕಸದ ಬಾರಿಗೆ, ಚಪ್ಪಲಿ ಇಟ್ಟು, ಮೀನಿನ ಬಲೆ ಅಥವಾ ಅಳಿಲು ಬಲೆಯನ್ನು ಗುಡಾರದ ಸುತ್ತ ಕಟ್ಟಿ ಬೂದಿ ಮಂತ್ರಿಸಿ ಹಾಕುತ್ತಾರೆ. ಇದನ್ನು ಪೊತ್ತಿಕಟ್ಟಡಂ ಎಂದು ಕರೆಯುತ್ತಾರೆ.

**ಬಾಲಿಂತಕಿ ನೀಳು ಪೋಸೆದಿ (ಬಾಣಂತಿಗೆ ನೀರು ಹಾಕುವುದು)**: ಹೆರಿಗೆಯಾದ ಮೇಲೆ ಬಾಣಂತಿಯನ್ನು ಮನೆಯಿಂದ ಹೊರಗೆ ಬರುವಾಗ ಕೈಯಲ್ಲಿ ಒಂದು ಕುಡುಗೋಲು, ಬೇವಿನ ಸೊಪ್ಪು ಹಿಡಿದುಕೊಂಡು ಬರುತ್ತಾಳೆ, ಅವಳು ಹೋಗುವ ದಾರಿಗೆ ಮುಂದೆ ನೀರನ್ನು ಹಾಕುತ್ತಾ ಮಾಯ ಅಥವಾ ಕೊಲ್ಲು ಹೂಳಿರುವ ಜಾಗದ ಹತ್ತಿರ ಬಾಣಂತಿಯನ್ನು ಕರೆದುಕೊಂಡು ಹೋಗಿ ಕೂಡಿಸುತ್ತಾರೆ. ಅರಿದ ಬೇವಿನ ತಪ್ಪಲು, ಅರಿಶಿಣಪುಡಿ ಮತ್ತು ಉಪ್ಪು ಹಾಕಿ ಕುದಿಸಿದ ನಂತರ ಮೈಗೆಲ್ಲಾ ಲೇಪಿಸಿ ಸ್ನಾನ ಮಾಡಿಸುತ್ತಾರೆ. ಹೀಗೆ ಮಾಡುವುದರಿಂದ ಬಾಣಂತಿಗೆ ಮೈತಿಂಡಿಯನ್ನು ನಿವಾರಿಸಲು ಹಾಗೂ ರೋಗನಿರೋಧಕ ಶಕ್ತಿ ಹೆಚ್ಚಿಸಲು ಬೇವಿನ ಸೊಪ್ಪನ್ನು ಬಳಸುತ್ತಾರೆ. ಬಾಣಂತಿಗೆ ನೀರು ಹಾಕಲು ಸಮುದಾಯದ ಸುತ್ತಮುತ್ತಲಿನ ಬಿಡಾರದವರು ಪ್ರತಿಯೊಂದು ಕುಟುಂಬದಿಂದ ಗಡಿಗೆನೀರು ಕಾಯಿಸಿಕೊಂಡು ಬರುತ್ತಾರೆ. ನಂತರ ಚೆರಿಗೆಯಿಂದ ನೀರನ್ನು ಬಾಣಂತಿಯ ಹೊಟ್ಟೆಗೆ ಬೀರುಸಾಗಿ ಐದಾರು ಸಾರಿ ಹುಗ್ಗುತ್ತಾರೆ. ಹೀಗೆ ಮಾಡುವುದರಿಂದ ಹೊಟ್ಟೆಯಲ್ಲಿ ಹೆಪ್ಪುಗಟ್ಟಿರುವ ರಕ್ತ ಅಥವಾ ಅನವಶ್ಯಕವಾದವು ಕರಗಿಹೋಗುತ್ತದೆ ಎಂದು ಈ ರೀತಿ ಸ್ನಾನವನ್ನು ಮಾಡಿಸುತ್ತಾರೆ*(ಭಾ:ಹಿ.೨)*. ಜೊತೆಗೆ ಬಿಡಾರದ ಎಲ್ಲ ಸಣ್ಣಮಕ್ಕಳಿಗೆ ಬಾಣಂತಿ ಪಕ್ಕದಲ್ಲಿ ಸ್ನಾನಮಾಡಿಸುತ್ತಾರೆ. ಸ್ನಾನ ಆದ ಮೇಲೆ ಸೂರ್ಯನಿಗೆ ನಮಸ್ಕಾರ ಮಾಡಿ ಮನೆಗೆ ಪ್ರವೇಶಿಸುವಳು. ಬೇರೆ ಬೇರೆ ಕುಲ ಮತ್ತು ಬುಡಕಟ್ಟು ಸಮುದಾಯಗಳಲ್ಲಿ ಪ್ರತ್ಯೇಕವಾದ ಆಚರಣೆಗಳಿವೆ. ಉದಾಹರಣೆಗೆ ಕಾಡುಗೊಲ್ಲರು ಸಮುದಾಯದಲ್ಲಿ ಬಾಣಂತಿಯನ್ನು ಊರ ಹೊರಗೆ ಇಡುವ ಪದ್ಧತಿ ಇದೆ.

**ಪಿಲ್ಲಗಾಣಿಕಿ ನೀಳುಪೋಷೆದಿ (ಮಗುವಿಗೆ ನೀರು ಹಾಕುವುದು)**: ಹುಟ್ಟಿದ ಮಗುವಿಗೆ ಸೂಲಗಿತ್ತಿಯು ತನ್ನ ಅಂಗಾಲಿನಲ್ಲಿ ಮಗುವನ್ನು ಹಾಕಿಕೊಂಡು ಕಿವಿಗೆ, ಮೂಗುಗೆ ಮತ್ತು ತಲೆಯ ಮೇಲೆ ಒಟ್ಟಾರೆ ಮೈಗೆಲ್ಲಾ ಒಳ್ಳೆಣ್ಣೆಯನ್ನು ಹಚ್ಚಿ ತೀಡುತ್ತಾರೆ. ನಂತರ ಸಾಬೂನು ಬಳಸಿ ಬಿಸಿನೀರಿನಿಂದ ಸ್ನಾನ ಮಾಡಿಸುತ್ತಾರೆ.

**ಪುರುಡು(ನಾಮಕರಣ, ಈರ್ಲು)**: ಈ ಆಚರಣೆಯು ಎಲ್ಲಾ ಜನವರ್ಗದಲ್ಲೂ ಇದೆ. ಸಾಮಾನ್ಯವಾಗಿ ತೊಟ್ಟಿಲನ್ನು ಹೂವಿನಿಂದ ಅಲಂಕಾರ ಮಾಡಿರುತ್ತಾರೆ. ಸೋದರಮಾವ ಬಂದು ತೊಟ್ಟಿಲಿಗೆ ಕಾಯಿ ಒಡೆದು ಅರ್ಚಕರು ಹೇಳಿದ ಹೆಸರನ್ನು ಕೂಗುತ್ತಾರೆ. ಆದರೆ ಬುಡ್ಗ ಜಂಗಮರ ನಾಮಕರಣ ಆಚರಣೆಯಲ್ಲಿ ಭಿನ್ನವಾಗಿ ಕಂಡುಬರುತ್ತದೆ. ಮಗು ಜನಿಸಿದ ಮೂರನೆಯ ಅಥವಾ ಐದನೆಯ ದಿನವನ್ನು ಪುರುಡು ಎಂದು ಆಚರಿಸುತ್ತಾರೆ. ಅಂದು ಬೆಳಿಗ್ಗೆ ಮಾಯಿ ಹೂಣಿದ ಕಲ್ಲು ಮೇಲೆ ಬಾಣಂತಿಯನ್ನು ಕೂಡಿಸಿ ಅರಿಷಿಣ, ಬೇವಿನಸೊಪ್ಪನ್ನು ಮೈಗೆಲ್ಲಾ ಹಚ್ಚಿ ಸ್ನಾನಮಾಡಿಸುತ್ತಾರೆ. **ಕಲ್ಲುಪೂಜೆ** : ಬಾಣಂತಿಯನ್ನು ಸಂಜೆ ೪ ಗಂಟೆಯ ಸಮಯದಲ್ಲಿ ಅದೇ ಕಲ್ಲಿನ ಮುಂದೆ ಮೂರು ಬಿಂಗುಸಿ ಕಲ್ಲುಗಳನ್ನು ಇಟ್ಟು ಅವುಗಳಿಗೆ ವಿಭೂತಿ ಕುಂಕುಮ ಹಚ್ಚಿ ಬೆಳ್ಳುಳ್ಳಿಯಿಂದ ಮಾಡಿದ ಹಾರವನ್ನು ಹಾಕಿ ಬಾಣಂತಿಯಿಂದ ಪೂಜೆಮಾಡಿಸುತ್ತಾರೆ. ನಂತರ ಮೂರು ಊಟದೆಲೆ ಹಾಕಿ ಅದರಲ್ಲಿ ಅಂದು ಮಾಡಿದ ಅಡುಗೆಯನ್ನು ಎಡೆಯಾಗಿ ಇಟ್ಟು ದೀಪ ಹಚ್ಚುತ್ತಾರೆ. ಆನಂತರ

ಬಾಣಂತಿಗೆ ಉರಿವ ದೀಪವನ್ನು ಕೈಗೆ ಕೊಟ್ಟು ಮೈತುಂಬಾ ಬಟ್ಟೆ ಹೊದಿಸಿ ಮೂರು ಸಾರಿ ಪ್ರದಕ್ಷಿಣೆ ಹಾಕಿಸಿ ನಂತರ ಮಾಯಿ ಹೂಳಿದ ಕಲ್ಲಿನ ಮೇಲೆ ಕೂಡಿಸುತ್ತಾರೆ. ಪಕ್ಕದಲ್ಲಿ ಒಂದು ಸಣ್ಣ ಕುಣಿ ತೋಡಿ ಅದರಲ್ಲಿ ಪೂಜೆ ಸಲ್ಲಿಸಿ ಒಂದು ಕಲ್ಲು, ಎಡೆ, ಬೆಳ್ಳುಳ್ಳಿಹಾರ ಹಾಕಿ ಹೂಳುತ್ತಾರೆ. ಇನ್ನೊಂದು ಎಡೆಯನ್ನು ಬಾಣಂತಿ ಸ್ವಲ್ಪ ತಿಂದು ಉಳಿದಿದನ್ನು ಗಂಡು ಮಗುವಾದರೆ ಹೆಣ್ಣುಮಕ್ಕಳಿಗೆ, ಹೆಣ್ಣುಮಗುವಾದರೆ ಗಂಡು ಮಕ್ಕಳಿಗೆ ಕೊಟ್ಟು ತಿನ್ನಿಸುತ್ತಾರೆ. ಒಂದು ಬೆಳ್ಳುಳ್ಳಿ ಹಾರವನ್ನು ಅವಳು ಹಾಕಿಕೊಳ್ಳುತ್ತಾಳೆ. ಮೂರನೆಯದನ್ನು ಹೆಣ್ಣುಮಗುವಾದರೆ ಗಂಡು ನಾಯಿಯನ್ನು, ಗಂಡು ಮಗು ಜನಿಸಿದರೆ ಹೆಣ್ಣು ನಾಯಿಯನ್ನು ಕರೆತಂದು ಅದಕ್ಕೆ ಸ್ನಾನ ಮಾಡಿಸಿ ಪೂಜೆ ಸಲ್ಲಿಸಿ ಅದರ ಕೊರಳಲ್ಲಿ ಒಂದು ಬೆಳ್ಳುಳ್ಳಿ ಹಾರ ಹಾಕಿ ಎಡೆಯನ್ನು ತಿನ್ನಿಸಿ ನಾಯಿಯನ್ನು ಕಿರಚುವಂತೆ ಹೊಡೆಯುತ್ತಾರೆ*(ಛಾ:ಚಿ.೩)*.ಇದನ್ನು ಮಲ್ಲಿಕಾರ್ಜುನ ನಾಯಿ ಎನ್ನುತ್ತಾರೆ. ಆಮೇಲೆ ಅಲ್ಲೆ ನೆಲದ ಮೇಲೆ ಬೆಂಕಿ ಹಾಕಿ ಅದಕ್ಕೆ ಎಣ್ಣೆ ಹಾಕಿ ಹೊಗೆ ಏಳಿಸುತ್ತಾರೆ. ಆಗ ಬಾಣಂತಿ ಎಣ್ಣೆದಾರೆ ನೀನು ತಗೋ ಹಾಲುಧಾರೆ ನನಗೆ ಕೊಡು ಎಂದು ಮೂರುಸಾರಿ ಕೈಮುಗಿದು ಒಳಗೆ ಹೋಗುತ್ತಾಳೆ.

ಜನನವಾಗುವಾಗ ಮಗು, ಕರುಳನ್ನು ಕುತ್ತಿಗೆಯಿಂದ ಉರಿಹಾಕಿಕೊಂಡು ಬಂದರೆ, ಮೂರನೇ ದಿನದ ಸಂಜೆಯಲ್ಲಿ ಅಂದರೆ ಪುರುಡು ದಿನ ಸಂಜೆ ಒಂದು ಜೀವಂತ ಕೋಳಿಯ ಗುಪ್ತಾಂಗದಿಂದ ಕರುಳನ್ನು ತೆಗೆದು ಮಗು ಹೇಗೆ ಹುಟ್ಟುವಾಗ ಕರುಳು ಹಾಕಿಕೊಂಡು ಬಂದಿದಿಯೋ ಹಾಗೆ ಆ ಮಗುವಿನ ಮೇಲೆ ಹಾಕಿ ಆ ನಂತರ ಹುಟ್ಟಿದ ಸ್ಥಳದಲ್ಲೇ ಕೋಳಿಯನ್ನು ಕೊಯ್ಯುತ್ತಾರೆ*(ಛಾ:ಚಿ.೪)*. ನಂತರ ಮಗುವಿಗೆ ಸ್ನಾನ ಮಾಡಿಸುತ್ತಾರೆ. ಈ ರೀತಿಯ ವಿಶಿಷ್ಟವಾದ ಪದ್ಧತಿ ಇವರಲ್ಲಿ ಇಂದಿಗೂ ಕಾಣಬಹುದಾಗಿದೆ.

ಬಾಣಂತಿಯು ಆರೋಗ್ಯವಾಗಿರಲು ಕರಿಬೇವು, ಬೆಳ್ಳುಳ್ಳಿ, ಮೆಣಸಿನಪುಡಿ, ತುಪ್ಪವನ್ನು ಬಿಸಿ ಅನ್ನದಲ್ಲಿ ಮಿಶ್ರಣ ಮಾಡಿ ತಿನ್ನಲು ಕೊಡುತ್ತಾರೆ. ಕೆಲವರು ಹೆಂಡವನ್ನು ಸಹ ಕುಡಿಸುತ್ತಾರೆ. ಜನಿಸಿದ ಮಗುವನ್ನು ಮೊರದಲ್ಲಿ ಹುಲ್ಲನ್ನು ಹಾಸಿ ಮಲಗಿಸುತ್ತಾರೆ. ಮಗುವಿಗೆ ಬಜೆಯ ತುಂಡುಗಳನ್ನು ದಾರಗಳಲ್ಲಿ ಪೋಣಿಸಿ ಕುತ್ತಿಗೆಗೆ ಹಾರವಾಗಿ ಕಟ್ಟುತ್ತಾರೆ. ಇದರಿಂದ ಮಗುವಿಗೆ ಅಜೀರ್ಣ ದೂರವಾಗಿ ಹೊಟ್ಟೆ ನೋವು ಇಲ್ಲದಂತೆ ಆರೋಗ್ಯವಾಗಿ ಇರುತ್ತದೆ ಎಂಬ ನಂಬಿಕೆ ಇದೆ. ಆ ದಿನ ಬೇಟೆಗೆ ಹೋಗಿ ಬೇಟೆಯಾಡಿದ ಪ್ರಾಣಿಗಳ ಮಾಂಸದಿಂದ ಅಡುಗೆ ಮಾಡಿ ಸಮುದಾಯದೆಲ್ಲರಿಗೂ ಊಟವನ್ನು ಹಾಕಿಸಬೇಕಾಗುತ್ತದೆ. ಈಗ ಬೇಟೆಗಾರಿಕೆ ನಿಷೇಧವಿರುವುದರಿಂದ ಅಂಗಡಿಯಲ್ಲಿದ್ದ ಕೋಳಿ ಮಾಂಸವನ್ನು ತಂದು ಅಡುಗೆ ಮಾಡುತ್ತಾರೆ. ಆ ದಿನ ಸಮುದಾಯದ ಆಚಾರದ ಪ್ರಕಾರ ಬಿಡಾರದ ಸಮಸ್ತ ಕುಲಸ್ತರಿಗೆ ಹೆಂಡ ಅಥವಾ ಸರಾಯಿಯನ್ನು ಹಂಚಬೇಕು. ಸಮಸ್ತ ಬಿಡಾರದ ಎಲ್ಲ ಜನಗಳಿಗೆ ಊಟವನ್ನು ಮಾಡಿಸಿ ಅವರಿಗೆ ಎಲೆ ಅಡಿಕೆ ಕೊಡುತ್ತಾರೆ. ನಂತರ ನಾಮಕರಣ ಮಾಡುತ್ತಾರೆ.

**ಪೇರುಪೆಟ್ಟದಿ(ನಾಮಕರಣ ಮಾಡುವುದು)**: ನಂತರ ಸಭಾದಲ್ಲಿ ಸೇರಿ ಮಗುವಿಗೆ ನಾಮಕರಣ ಮಾಡಲು ಪ್ರಾರಂಭಿಸುತ್ತಾರೆ. ಭಾಗಿಯಾದ ಕುಲಸ್ತರೂ ಏಮಯ್ಯ ಅಶ್ವಿಯಾನ ನೀ ಇಂಟಿಕಿ ಇಂತಮಂದಿನಿ ಕಲ್ಪಿನವು ಎಮಿ ಸಂಗತಿ ಚೆಪ್ಪು ಎಂದು ಕೇಳುತ್ತಾರೆ. (ಏನಯ್ಯ ಅಶ್ವಿಯಾತ ನಮ್ಮನೆಲ್ಲ ಕರೆಸಿದಿಯಾ

ಏನು ಸಂಗತಿ ಎಂದು ಕೇಳುತ್ತಾರೆ.) ಏನಿಲ್ಲಯ್ಯ ಮಂಗಳವಾರದಂದು ನಮ್ಮ ಸೊಸೆ ಗಂಡು ಕೂಸಿಗೆ ಜನ್ಮ ನೀಡಿದಳು ಅದಕ್ಕಾಗಿ ನಮ್ಮ ಕುಲಾಚಾರದಂತೆ ನಿಮ್ಮನೆಲ್ಲಾ ಕರೆಸಿದಿನಿ ಏನೋ ಹುಟ್ಟಿದ ಕೂಸಿಗೆ ಒಂದು ಹೆಸರಿಟ್ಟು ನಮ್ಮನೆಲ್ಲ ಕಾಪಾಡಬೇಕು ಎಂದು ವಿನಂತಿಸಿಕೊಳ್ಳುತ್ತಾನೆ. ಅದಕ್ಕೆ ಕುಲಸ್ತರೂ ಐದು ಹೆಸರುಗಳನ್ನು ಗುರುತಿಸಿ ಕೊನೆಗೆ ಒಂದು ಹೆಸರನ್ನು ಸೂಚಿಸುತ್ತಾರೆ. ಉದಾ ಮಂಗಳವಾರ ಶುಕ್ರವಾರ ಹುಟ್ಟಿದರೆ ಸುಂಕಮ್ಮ, ಮಾರೆಮ್ಮ, ದೇವಮ್ಮ, ಜಮ್ಮುಲಮ್ಮ, ಮಲ್ಲೆಮ್ಮ. ಅದೇ ಗಂಡು ಮಗುವಾದರೆ ಸುಂಕಪ್ಪ, ಮಾರೇಪ್ಪ, ಜಂಭನ್ನ ಹೀಗೆ ಶನಿವಾರ ಹುಟ್ಟಿದರೆ ಅಂಜಿನಮ್ಮ, ಅಂಜಿನಪ್ಪ, ಹನುಮಮ್ಮ, ಹನುಮಂತಪ್ಪ. ಸೋಮವಾರ, ಬುಧುವಾರ, ಗುರುವಾರ ಹುಟ್ಟಿದರೆ ಮಂಜುನಾಥ, ರಾಘವೇಂದ್ರ, ಈರಣ್ಣ, ಸಾಲಮ್ಮ, ಸಾಂತಮ್ಮ, ಲಕ್ಷ್ಮಿ ಈ ರೀತಿಯವಾಗಿ ನಾಮಕರಣ ಮಾಡುತ್ತಾರೆ. ಸೋದರಮಾವ ಆದವನು ಮಗುವಿನ ಕಿವಿಯಲ್ಲಿ ಮೂರು ಬಾರಿ ಹೆಸರಿನಿಂದ ಕೂಗಿ ಬರುತ್ತಾನೆ. ಇತ್ತೀಚಿನ ದಿನಗಳಲ್ಲಿ ಆಧುನಿಕ ಪ್ರಭಾವಕ್ಕೆ ಒಳಗಾಗಿ ಚಲನಚಿತ್ರದ ನಾಯಕ, ನಾಯಕಿಯರ ಹೆಸರುಗಳನ್ನು ಇಡುವರು. ಉದಾಹರಣೆಗೆ ಅಂಬರೀಷ್, ಸುದೀಪ್, ಪವನ್, ಕಲ್ಯಾಣ್, ಚಿರಂಜೀವಿ, ನಾಯಕಿಯರಾದ ಸಮಂತಾ, ಪೂಜ, ಭೂಮಿಕ, ರಮ್ಯ, ರಕ್ಷಿತಾ ಇತ್ಯಾದಿ ಮತ್ತು ರಾಜಕೀಯ ವ್ಯಕ್ತಿಗಳ ಹೆಸರುಗಳನ್ನು ಇಡುವುದನ್ನು ಕಾಣಬಹುದು ಉದಾ: ಕುಮಾರಸ್ವಾಮಿ, ರಾಹುಲ್, ಶ್ರೀರಾಮುಲು, ಪ್ರಿಯಾಂಕ ಇತ್ಯಾದಿ.

**ನಾಲ್ಕನೆಯ ದಿನ** ಮಾಯಿ ಹೂಳಿದ ಸ್ಥಳವನ್ನು ಮಂಡಲವೆಂದು ತಿಳಿದು, ನಿರ್ಮಿಸಿದ ವಡ್ಡನ್ನು ಮಣ್ಣಿನಿಂದ ಮುಚ್ಚುತ್ತಾರೆ. ಕಲ್ಲು ಹೂಳಿದ ಜಾಗದಲ್ಲಿ ಬೂದಿ ಎರಚುತ್ತಾರೆ ಇಲ್ಲಿಗೆ ಅವರ ನಾಮಕರಣ ಆಚರಣೆ ಮುಗಿಯುತ್ತದೆ.

**ಉಡುದಾರ ಕಟ್ಟುವುದು:** ಇದು ಗಂಡು ಮಗುವಿನ ಸೊಂಟಕ್ಕೆ ಕಟ್ಟುವ ದಾರ. ಸಾಮಾನ್ಯವಾಗಿ ಇದು ಪಾರಂಪರಿಕವಾಗಿ ನಡೆದುಕೊಂಡ ಪದ್ಧತಿಯಾಗಿದೆ. ಉಡೆ ಎಂದರೆ ಸೊಂಟ, ಮಡಿಲು ಎಂದರ್ಥ. ಉಡೆಗೆ ಕಟ್ಟುವ ದಾರ ಉಡುದಾರ. ಇದನ್ನು ಉಡುದಾರ, ಉಡಿದಾರ ಎಂದು ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಬುಡ್ಗ ಜಂಗಮರು ತಮ್ಮ ಭಾಷೆಯಲ್ಲಿ 'ಮಲತಾಡು' ಎಂದು ಕರೆಯುತ್ತಾರೆ. ಈ ಮಲತಾಡನ್ನು ಮಗು ಹುಟ್ಟಿದ ನಾಮಕರಣ ಮಾಡುವ ಸಂದರ್ಭದಲ್ಲಿ ಕಟ್ಟುತ್ತಾರೆ. ಇತ್ತೀಚಿನ ದಿನಗಳಲ್ಲಿ ಸೋದರಮಾವನು ಬೆಳ್ಳಿಯಿಂದ ಮಾಡಿಸಿದ ಉಡುದಾರವನ್ನು ಕಟ್ಟುವುದನ್ನು ಕಾಣಬಹುದು.

**ಗಂಗಾ ಪೂಜೆ:** ಭಾರತೀಯರಿಗೆ ದೇಶದ ಯಾವ ಮೂಲೆಯಲ್ಲಿದ್ದರೂ ನೀರೂ ಗಂಗೆಯಾಗಿಯೇ ಕಾಣುತ್ತಾಳೆ. ಹಾಗಾಗಿ ನೀರಿನ ಸ್ಥಾನಗಳನ್ನು ಪೂಜಿಸುವುದಕ್ಕೆ ಗಂಗಾ ಪೂಜೆಯೆಂಬುವುದು ರೂಢಿಯಲ್ಲಿದೆ. ಬಾವಿ, ಕೆರೆ, ನದಿಗಳ ಹತ್ತಿರ ಹೋಗಿ ಪೂಜಿಸುವುದಕ್ಕೆ ಗಂಗಮ್ಮನ ಪೂಜೆಯೆಂತಲೂ ಕರೆಯುತ್ತಾರೆ. ಬುಡ್ಗ ಜಂಗಮರಲ್ಲಿ ಹೆರಿಗೆಯಾದ ಐದನೆಯ ದಿನಕ್ಕೆ ಅಥವಾ ಒಂಭತ್ತನೇ ದಿನದಲ್ಲಿ ಬಾಣಂತಿಗೆ ತಣ್ಣೀರು ಮುಟ್ಟಿಸುವ ಕಾರ್ಯಕ್ರಮ ಇರುತ್ತದೆ. ಉಡಿಯಲ್ಲಿ ಬೇವಿನ ಸೊಪ್ಪು ಮತ್ತು ನವಧಾನ್ಯಗಳನ್ನು ಬೆರಸಿಕೊಂಡು ದಾರಿಯಲ್ಲಿ ಉದುರಿಸಿಕೊಳ್ಳುತ್ತಾ ನೀರು ಇರುವ ಕೆರೆಗೋ ಬಾವಿಗೋ

ಅಥವಾ ನಲ್ಲಿಗೋ ಹೋಗುತ್ತಾರೆ. ಅಲ್ಲಿ ಮಣ್ಣಿನರಾಶಿ ಮಾಡಿ ಅದಕ್ಕೆ ಅರಿಶಿಣ, ಕುಂಕಮ ಹಚ್ಚಿ ಹಂಗುನೂಲು ಏರಿಸಿ ತಂಬಿಗೆಯಲ್ಲಿ ನೀರು ತುಂಬಿ ಅದಕ್ಕೂ ಊದುಬತ್ತಿ ಹಚ್ಚಿ ತೆಂಗಿನಕಾಯಿ ಒಡೆದು ನೀರಿನಲ್ಲಿ ಎಲೆಅಡಿಕೆ, ಒಂದುರೂಪಾಯಿ ದಕ್ಷಿಣೆ ಇಟ್ಟು ಆ ತಂಬಿಗೆಯನ್ನು ತಲೆಮೇಲೆ ಹೊತ್ತುಕೊಂಡು ನೀರು ಚಿಮುಕಿಸುತ್ತಾ ಬಿಡಾರಕ್ಕೆ ಬರುವರು. ಇದನ್ನು ಗಂಗಾ ಪೂಜೆ ಎಂದು ಕರೆಯುತ್ತಾರೆ. ಗಂಗಾ ಪೂಜೆ ಮಾಡಿಬಂದ ತಕ್ಷಣ ಮಗುವಿದ್ದ ಸ್ಥಳಕ್ಕೆ ಬಾಣಂತಿ ಹೋಗಿ ತನ್ನ ತಲೆಮೇಲಿರುವ ತಂಬಿಗೆಯ ನೀರು ಮಗುವಿನ ಮೇಲೆ ಬೀಳುವಂತೆ ಮಾಡುತ್ತಾಳೆ. ಈ ರೀತಿಯಾಗಿ ಬುಡ್ಗ ಜಂಗಮರಲ್ಲಿ ಗಂಗಾಪೂಜೆಯನ್ನು ಆಚರಿಸುತ್ತಾರೆ.

**ಕಾಸಿದ ಸೂಜಿಯಿಂದ ಚಿಟಕೆ ಹಾಕುವುದು:** ನಾಮಕರಣ ಮುಗಿದ ನಂತರ ದಿನಗಳಲ್ಲಿ ಮಗುವಿಗೆ ಊದಿನಕಡ್ಡಿಯಿಂದ ತಲೆಗೆ, ಎದೆಗೆ, ಕಣ್ಣಿನ ಉಬ್ಬಿಗೆ, ಎಡಗೈ ಎಬ್ಬೆರಳುಗೆ ಮತ್ತು ಎಡಗಾಲು ಎಬ್ಬೊಟ್ಟುಗೆ ಸಣ್ಣದಾಗಿ ಚಿಟಕೆ ಹಾಕುತ್ತಾರೆ. ನಂತರ ಹುಣ್ಣಿಸೆಯ ಮರದ ತೊಗಟೆಯಿಂದಾಗಲಿ, ಉತ್ತರಾಣಿ ಕಡ್ಡಿಯಿಂದಾಗಲಿ ಅಥವಾ ಸೂಜಿಯನ್ನು ಕೆಂಪಾಗಿ ಕಾಯಿಸಿ, ಹೊಕ್ಕಳು ಮೇಲೆ, ಹೊಕ್ಕುಳು ಎಡ ಮತ್ತು ಬಲ ಭಾಗದಲ್ಲಿ ಪ್ಲಸ್ ಮೈನಸ್ ಚಿಹ್ನೆಯಂತೆ ಚಿಟಕೆ ಹಾಕುತ್ತಾರೆ. ಹೀಗೆ ಚಿಟಕೆ ಹಾಕುವುದರಿಂದ ಮಗುವಿನ ಗರ್ಭವಾಯು, ಹೊಟ್ಟೆ ಉಬ್ಬರ ಬರುವುದಿಲ್ಲವೆಂದು ಮತ್ತು ಮಗುವಿನ ಆರೋಗ್ಯ ಚೆನ್ನಾಗಿರುತ್ತದೆಂದು ನಂಬಿದ್ದಾರೆ.

**ಬಾಣಂತಿಗೆ ಬೆಂಕಿ ಕಿಚ್ಚು ಹಾಯಿಸುವುದು:** ಪ್ರತಿದಿನ ಸಂಜೆ ಬಾಣಂತಿಗೆ ಒಂದು ಪಾತ್ರೆಯಲ್ಲಿ ಕಾಯಿಸಿದ ಕೆಂಡದಲ್ಲಿ ಬೆಳ್ಳುಳ್ಳಿ ಸಿಪ್ಪೆ, ಅಜಿವಾನ ಮತ್ತು ಸ್ವಲ್ಪ ಬೇವಿನ ಸೊಪ್ಪು ಹಾಕಿ ಹೊಗೆಯನ್ನು ಕಾಯಿಸುತ್ತಾರೆ. ಹೀಗೆ ಮಾಡುವುದರಿಂದ ಬಾಣಂತಿಗೆ ಶಕ್ತಿಯನ್ನು ಒದಗಿಸುತ್ತದೆ, ಇದು ಒಂದು ಪದ್ಧತಿ ನಮ್ಮಲ್ಲಿ ಪರಂಪರಾಗತವಾಗಿ ಮಾಡುತ್ತಾ ಬಂದಿದ್ದೇವೆ ಎಂದು ಹೇಳುತ್ತಾರೆ.

**ಹೆರಿಗೆಯಾದ ಬಾಣಂತಿಯ ಊಟದ ಪದಾರ್ಥಗಳು:** ಬಂಠಿ ಮಿರಿಯಾಲು, ಮೋಡಿ, ಹಿಪ್ಲಿ, ವಾಯುಲವಂಗ, ಹಜವಾಂ, (ಹಜವಾನ) ಚಂದ್ರ ವಾಮ, ಸೂರ್ಯವಾನು ಮಂಟಿವಾಮ, ಹಾಕುಪತ್ರಿ, ಹಾಕಲಕರ್ರ, ನೂಲಿಕಾಯ, ಮಂಡ್ರಪಶುಪ್ರ, ಅರಿಶಿಣ, ಏಕೆಲ್ಲಿಪಾಲ (ಒಂಟಿಬೆಳ್ಳುಳ್ಳಿ) ಕುಂಕುಮಪುವ್ವು, ಜಾಜಿಕಾಯಿ, ಜಾಪತ್ರಿ, ರಸಕರ್ಪೂರ, ಅಥವಾ ಚಂಡೂರಂ ಕಾರ್ಕಯ ಮುಂತಾದವುಗಳ್ನು ಬಾಣಂತಿಗೆ ಬಳಸುತ್ತಾರೆ.

**ತಯಾರಿಸುವ ವಿಧಾನ:** ಹಜುವಾನ, ಜಾಜಿಕಾಯಿ, ಜಾಪತ್ರಿ, ಕುಂಕುಮಪ್ರವು, ಕಾರ್ಕಯಿ, ತಾಟಗಿ ಬೆಲ್ಲ, ಬೆಳ್ಳುಳ್ಳಿ, ಇವುಗಳನ್ನು ಬಿಟ್ಟು ಉಳಿದ ಸಾಮಾನುಗಳನ್ನು ಹಂಚಿನ ಮೇಲೆ ಸ್ವಲ್ಪ ಬೆಚ್ಚಗೆ ಮಾಡಿ ಪುಡಿಮಾಡಬೇಕು. ಕುಸುಬೆ ಎಣ್ಣೆ ಅಥವಾ ಎಳ್ಳುಎಣ್ಣೆ ಅದರಲ್ಲಿ ಬೆಳ್ಳುಳ್ಳಿಯನ್ನು ಹಾಕಿ ನೆನಸಬೇಕು. ಸ್ವಲ್ಪ ಸಮಯದ ನಂತರ ಆ ಪುಡಿಯನ್ನು ಅದೇ ಎಣ್ಣೆಯಲ್ಲಿ ಹಾಕಿ ದುಂಡಾಗಿ ಗೋಲಿ ತರಹ ಮಾಡಿ ಸೇವಿಸಬೇಕು. ಇದನ್ನು ಪ್ರತಿದಿನ ಬೆಳಿಗ್ಗೆ ಸಾಯಂಕಾಲ ೪ ಅಥವಾ ೫ ದಿವಸದವರಿಗೆ ಬಾಣಂತಿಗೆ ಸೇವಿಸಲು ಕೊಡುತ್ತಾರೆ.

**ಪುಟ್ಟೆಂಟಿಕಲು ತಿಸೆದಿ (ಜವುಳ ಕಾರ್ಯಕ್ರಮ)**

ಬುಡ್ಗ ಜಂಗಮರಲ್ಲಿ ಸಾಮಾನ್ಯವಾಗಿ ಮಗು ಜನಿಸಿದ ಒಂದು ವರ್ಷದೊಳಗೆ ಹುಟ್ಟು ಕೂದಲನ್ನು ತೆಗೆಯುವ ಕಾರ್ಯವೇ ಜವಳ ಕಾರ್ಯ ಎನ್ನುತ್ತಾರೆ. ಇದನ್ನು ಪುಟೆಂಟಿಕಲು ತಿಸೇದಿ ಎಂದು ಬುಡ್ಗ ಜಂಗಮರು ಕರೆಯುತ್ತಾರೆ. ಇದು ಕ್ರೈಸ್ತ, ಮುಸ್ಲಿಮರಲ್ಲಿ ಅಷ್ಟಾಗಿ ಕಂಡು ಬರುವುದಿಲ್ಲ. ತಾಯಿಯು ಹೆರಿಗೆ ಸಂದರ್ಭದಲ್ಲಿ ಕಟ್ಟಿಕೊಂಡ ಹರಕೆಯನ್ನು ಮಗುವಿನ ಹುಟ್ಟುಕೂದಲು ಜವಳವನ್ನು ತೆಗೆಸುವುದು ಒಂದಾಗಿದೆ. ಈ ಕಾರ್ಯವನ್ನು ಮನೆದೇವರ ದೇವಸ್ಥಾನದಲ್ಲಿ ಅಥವಾ ಮನೆಯಲ್ಲಿಯೇ ನೆರವೇರಿಸಲಾಗುತ್ತದೆ. ಈ ಜವಳ ಕಾರ್ಯವನ್ನು ಹೆಚ್ಚಾಗಿ ಸೋದರ ಮಾವನು ನೆರವೇರಿಸುತ್ತಾನೆ. ಅವರಿಲ್ಲದ ಸಂದರ್ಭದಲ್ಲಿ ಕುಲದ ಹಿರಿಯ ಅಥವಾ ಕುಟುಂಬದ ಮುಖ್ಯಸ್ಥನು ನೆರವೇರಿಸುತ್ತಾನೆ. ಎಲೆನ್ನು ಕತ್ತರಿಯಂತೆ ಮಾಡಿಕೊಂಡು ತಲೆಯಮೇಲೆ ಸ್ಪರ್ಶಿಸುತ್ತಾರೆ. ಮಕ್ಕಳಿಗೆ ಕೂದಲು ತೆಗೆಯುವಾಗ ಕತ್ತರಿಯಿಂದ ವೀಳದೆಲೆಯನ್ನು ತಲೆಯಮೇಲೆ ಇಟ್ಟು ಎರಡು ಎಲೆಗಳನ್ನು ಕತ್ತರಿಸುತ್ತಾನೆ. ನಂತರ ಒಂದೆರಡು ದಿನಗಳ ಬಳಿಕ ಸಂಪೂರ್ಣ ತಲೆಕೂದಲುಗಳನ್ನು ಕತ್ತರಿಸುವರು. ಹೀಗೆ ಮಾಡುವುದರಿಂದ ನಂಜಾಗುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ. ನೆಂಟರು ಮಗುವಿನ ತಂದೆತಾಯಿಗಳಿಗೆ ಹಣ, ಪಾತ್ರೆಗಳು ಮತ್ತು ಹೊಸ ಬಟ್ಟೆಯನ್ನು ಮುಯ್ಯನ್ನು ನೀಡುತ್ತಾರೆ. ಈ ಸಂದರ್ಭದಲ್ಲಿ ಸೋದರಮಾವನು ಗಂಡುಮಗುವಾದರೆ ಬೆಳ್ಳಿಯ ಉಡುದಾರ, ಕೊರಳಿಗೆ ಲಿಂಗದ ಕಾಯಿ ಚೈನು, ಕೈಗೆ ಕಡಗಗಳನ್ನು ತೊಡಿಸುತ್ತಾರೆ. ಹೆಣ್ಣುಮಗುವಾದರೆ ಮಗುವಿಗೆ ಕಾಲುಚೈನು, ಕಡಗ, ಬಂಗಾರದ ಓಲೆಗಳನ್ನು ತೊಡಿಸುವನು. ಹಿಂದೆ ಆ ಹೆಣ್ಣು ನಮ್ಮ ಮನೆಯ ಸೊಸೆ ಎಂದು ಮೊದಲೇ ನಿಶ್ಚಿಯಿಸಿಕೊಳ್ಳುತ್ತಿದ್ದರು. ಹೀಗೆ ತೊಟ್ಟಿಲು ವಿವಾಹಗಳು ಹಿಂದೆ ನಡೆಯುತ್ತಿದ್ದವು ಎಂದು ಹಿರಿಯರು ಹೇಳುತ್ತಾರೆ. ಸೋದರಮಾವನು ಕಿವಿಓಲೆ ಕೊಟ್ಟರೆ ಹೆಣ್ಣು ನಿಶ್ಚಯ ಮಾಡಿಕೊಂಡಂತೆ ತಿಳಿಯುತ್ತಿದ್ದರು. ಒಂದುವೇಳೆ ಅದನ್ನು ನಿರಾಕರಿಸಿದರೆ ಮಗಳನ್ನು ಕೊಡುವುದಿಲ್ಲ ಎಂಬ ಸೂಚನೆ ಅವರಿಗೆ ತಿಳಿಯುತ್ತಿತ್ತು. ಇವರಲ್ಲಿ ಇತರೆ ಬ್ರಾಹ್ಮಣ, ಕ್ಷತ್ರಿಯ ಸಮುದಾಯಗಳಲ್ಲಿದ್ದಂತೆ ಬಾಲ್ಯದಲ್ಲಿ ನಡೆಸಲೇಬೇಕಾದ ಉಪನಯನ, ಮುಂಜಿ, ದಿಕ್ಷಾ ಕಾರ್ಯಕ್ರಮಗಳು ನಡೆಯುವುದಿಲ್ಲ. ಈ ರೀತಿಯಾಗಿ ಬುಡ್ಗ ಜಂಗಮರು ಹೆರಿಗೆ, ಬಾಣೆತನ, ಮಾಯಿ ಹೂಳುವುದು, ಕೋಳಿ ಕೊಯ್ಯುವುದು, ಪುರುಡು(ನಾಮಕರಣ) ಮಾಡುವುದು, ಮಗುವಿಗೆ ಸೂಜಿಯಿಂದ ಚಿಟಿಕೆ ಹಾಕುವುದು, ಜವಳ ತಗಿಸುವುದು ಹೀಗೆ ಪಾರಂಪರಿಕ ಆಚರಣೆಗಳನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ. ಇವುಗಳು ಮೌಢ್ಯತೆಗಿಂತ ಭಿನ್ನವಾಗಿ ವೈಜ್ಞಾನಿಕ ವಿಧಾನದ ಮೂಲಕ ಎರಡು ಜೀವಗಳ ರಕ್ಷಣಾಕ್ರಮಗಳಾಗಿವೆ ಎಂದು ಹೇಳಬಹುದು. ಆದರೆ ಆಧುನಿಕ ಅನ್ಯ ಸಮಾಜ ಪ್ರಭಾವದಿಂದ ತಮ್ಮ ಪಾರಂಪರಿಕ ಆಚಾರ ವಿಚಾರಗಳನ್ನು ಕಳೆದುಕೊಂಡು ಶಿಷ್ಟ ಸಂಸ್ಕಾರಗಳೆಡೆಗೆ ಸಾಗುತ್ತಿರುವುದು ಕಾಣಬಹುದು. ಇವುಗಳನ್ನು ಪುನರ್ ರಚನೆಗೆ ಒಳಪಡಿಸಿ ಮುಂದುವರಿಯುವಂತೆ ನೋಡಿಕೊಳ್ಳುವ ಮತ್ತು ಅವುಗಳಲ್ಲಿ ಕಂಡುಬರುವ ಜ್ಞಾನಪರಂಪರೆಯನ್ನು ದಾಖಲಿಸುವ ಅಗತ್ಯತೆ ಇದೆ.

**ಪೆದ್ದಮನಿಷಿ ಲೇಪೆದಿ (ಋತುಮತಿ)**

ನಿಸರ್ಗದ ನಿಯಮದಂತೆ ಪ್ರತಿಯೊಂದು ಜೀವಸಂಕುಲಗಳು ದೈಹಿಕ ಬದಲಾವಣೆಯಾಗುವುದು ಸಹಜ. ಇದಕ್ಕೆ ಮನುಷ್ಯಜೀವಿ ಹೊರತಾಗಿಲ್ಲ. ಹೆಣ್ಣು ಪ್ರೌಢಾವಸ್ಥೆಗೆ ತಲುಪಿ ಋತುಮತಿಯಾಗುವುದು ನಿಸರ್ಗದತ್ತವಾದದ್ದು, ಇದನ್ನು ಮೈನೆರೆದಿದ್ದಾಳೆ, ಋತುಮತಿಯಾಗಿದ್ದಾಳೆ, ಪುಷ್ಪಾವತಿಯಾಗಿದ್ದಾಳೆ, ದೊಡ್ಡವಳಾಗಿದ್ದಾಳೆ, ನೆರ್ತಾಳ, ದೊಡ್ಡಾಕಿ ಆಗ್ಯಾಳ ಎಂದು ಪ್ರಾದೇಶಿಕವಾಗಿ ಕರೆಯುತ್ತಾರೆ. ಬುಡ್ಗ ಜಂಗಮರು ಇದನ್ನು ಪಿಲ್ಲಸೇತಿಕಿ ವಚ್ಚಿಂದಿ (ಪಿಳ್ಳೆ ಕೈಗೆ ಬಂದೈತಿ), ಎಂದು ಕರೆಯುವರು. ಹೆಣ್ಣಿಗೆ ಅರ್ಹತೆಗಳು ಲಭಿಸಬೇಕಾದರೆ, ಅವಳು ಋತುಮತಿಯಾಗಲೇಬೇಕು. ಹೆಣ್ಣಿಗೆ ಈ ಸಂದರ್ಭದಲ್ಲಿ ಶಾರೀರಿಕ ಬದಲಾವಣೆ ಮತ್ತು ಮಾನಸಿಕ ಸ್ವಾಸ್ಥ್ಯ ಕೂಡ ಬದಲಾಗುತ್ತದೆ. ಮೈನೆರೆದ ಹುಡುಗಿಯ ಮನೆಯವರು ರಕ್ತಸಂಬಂಧಿಗಳಿಗೆ ವಿಷಯ ತಿಳಿಸುತ್ತಾರೆ. ಪ್ರತಿಯೊಂದು ಅಲೆಮಾರಿ ಬುಡಕಟ್ಟು ಸಮುದಾಯಗಳಂತೆ ಬುಡ್ಗ ಜಂಗಮರಲ್ಲಿ ಕೂಡ ಹೆಣ್ಣುಮಗಳು ಋತುಮತಿಯಾದ ಸಂದರ್ಭವನ್ನು ಮೈಲಿಗೆ ಅಥವಾ ಸೂತಕ ಎಂದು ಭಾವಿಸುತ್ತಾರೆ. ಋತುಮತಿಯಾದ ಹೆಣ್ಣಿಗೆ ಅವರವರ ಆರ್ಥಿಕ ಸ್ಥಿತಿಗತಿಯ ಅನುಸಾರ ಕೆಲ ಆಚರಣೆಗಳನ್ನು ಮಾಡುವರು.

ಬುಡ್ಗ ಜಂಗಮರು ತಮ್ಮ ಸಾಮಾಜಿಕ ಜೀವನದಲ್ಲಿ ತಮ್ಮ ಹೆಣ್ಣುಮಕ್ಕಳು ಋತುಮತಿಯಾದರೆ ತಮ್ಮದೇಯಾದ ವಿಶಿಷ್ಟ ಆಚರಣೆಗಳನ್ನು ಬಹುಹಿಂದಿನಿಂದ ಇಂದಿನವರೆಗೂ ಉಳಿಸಿಕೊಂಡು ಬಂದಿದ್ದಾರೆ. ಅಂದರೆ ಬುಡ್ಗ ಜಂಗಮರ ಹೆಣ್ಣುಮಕ್ಕಳು ತಮ್ಮ ಬಾಲ್ಯ ಜೀವನವನ್ನು ತಂದೆತಾಯಿಯ ಮನೆಯಲ್ಲಿಯೇ ಪೂರೈಸುತ್ತಾ ತಾರುಣ್ಯಾವಸ್ಥೆಗೆ ಬರುವ ಸೂಚನೆ ಎಂಬಂತೆ ಋತುಮತಿದಾಗ ಈ ವಿಷಯ ಆ ಒಬ್ಬ ಹುಡಿಗಿಯ ಮನೆಯಲ್ಲಷ್ಟೇ ಅಲ್ಲ, ಇಡೀ ಬುಡ್ಗ ಜಂಗಮರ ಬಿಡಾರ (ಕಾಲೋನಿ)ಯಲ್ಲಿಯೇ ದೊಡ್ಡ ಸುದ್ದಿಯಾಗುತ್ತದೆ. ಈ ಸಮುದಾಯದಲ್ಲಿ ಋತುಮತಿಯಾದರೆ ಸೋದರಮಾವ ಅಥವಾ ತಾತನಿಂದ ಇಲ್ಲವೇ ಹಿರಿಯ ಅಜ್ಜಿಯಿಂದ ಪ್ರತ್ಯೇಕ ಬಿಡಾರ (ಗುಡಿಸಲು) ಮಾಡಿಸುತ್ತಾರೆ *(ಭಾ:೫.೫).* ನಂತರ ಸೋದರಮಾವನು ಆಕೆಯ ಮುಖ ನೋಡದ ಹಾಗೆ ಹಿಂಬಂಧಿಯಿಂದಲೇ ಬಂದು ಆ ಮಗುವಿನ ತಲೆಯಮೇಲೆ ಕೊಬ್ಬರಿಬಟ್ಟಲನ್ನು ಮುರಿಯುತ್ತಾನೆ. ಕೊಬ್ಬರಿ ಬಟ್ಟಲು ಎಡಕ್ಕೆ ಮತ್ತು ಬಲಕ್ಕೆ ಎರಡು ಓಳಾಗಿ ಬೀಳುತ್ತದ. ನಂತರ ಹೆಂಡದ ಅಂಗಡಿ ಹೋಗಿ ಹೆಂಡ ಕುಡಿದು ಬರುತ್ತಾನೆ. ಐದು ದಿನಗಳವರೆಗೂ ಅಥವಾ ಒಂಬತ್ತು ದಿನಗಳವರೆಗೂ ಅವಳು ಅಲ್ಲಿಯೇ ವಾಸವಾಗಿರಬೇಕು. ಮಣ್ಣಿನ ಮಗಿ ಅಥವಾ ಪರ್ಯಾಣದಲ್ಲಿ ಊಟ ಮತ್ತು ನೀರು ಕೊಡುತ್ತಾರೆ. ಆ ಸಾಮಾನುಗಳನ್ನು ಯಾರು ಮುಟ್ಟಿಸಿಕೊಳ್ಳುವಂತಿಲ್ಲ, ಅವಳ ಮುಖ ಕೂಡ ನೋಡುವಂತಿಲ್ಲ. ಅವಳ ಆಹಾರದಲ್ಲಿ ಉಪ್ಪು ಹುಳಿ ಖಾರ ಹೆಚ್ಚಾಗಿ ಇಲ್ಲದೆ ಮಾಡಿದ ಕಿಚಿಡಿ, ಗೋಧಿ ಪಾಯಸವನ್ನು ನೀಡುತ್ತಾರೆ. ಕೊಬ್ಬರಿ–ಬೆಲ್ಲ–ಉತ್ತುತ್ತಿ ತಿನ್ನಲು ಕೊಡುವರು. ಇಂತಹ ಈ ರೀತಿಯ ಆಹಾರ ತಿನ್ನುವುದರಿಂದ ಸೊಂಟಕ್ಕೆ ಶಕ್ತಿ ಬರುತ್ತದೆ, ಸ್ತನದ ಬೆಳವಣಿಗೆ, ಶರೀರಕ್ಕೆ ನುಣುಪು ಬರುತ್ತದೆ ಎಂದು ಹೇಳುತ್ತಾರೆ. ಯಾರಿಗೂ ಕಾಣದ ಹಾಗೆ ಬೆಳಕು ಹರಿಯುವ ಮೊದಲೇ

ಬೆಳಗಿನ ನಿತ್ಯ ಕರ್ಮಗಳನ್ನು ಮಾಡಿಕೊಳ್ಳುತ್ತಾರೆ. ಅದರಂತೆ ಆ ಹುಡುಗಿಯು ಋತುಮತಿಯಾಗಿದ್ದಾಳೆಂಬುದನ್ನು ತಿಳಿದ ಪೋಷಕರು ಹಾಗೂ ಬಿಡಾರದ ಬಂಧು ಬಳಗದವರು ಸಂತೋಷಗೊಂಡು ತಮ್ಮ ಆರ್ಥಿಕ ಸ್ಥಿತಿಗತಿಗಳಾನುಸಾರವಾಗಿ ಮೈನೆರೆತ ಹುಡುಗಿಗೆ ತಿನ್ನಲು ಒಣಕೊಬ್ಬರಿ, ಕರ್ಜೂರಣ್ಣು, ಸಿಹಿತಿಂಡಿಗಳನ್ನು ತಂದು ಕೊಡುವರು.

ಇವರಲ್ಲಿ ಐದು ಅಥವಾ ಒಂಭತ್ತು ದಿನದಲ್ಲಿ ಸೂತಕ ಕಳೆಯುವುದು ಕಂಡುಬರುತ್ತದೆ. ಅಂದು ಅವಳ ಸೋದರಮಾವ ಅವಳ ಮುಖದ ಮುಂದೆ ಒಂದು ಕೋಳಿಯನ್ನು ಕೊಯ್ಯುವನು. ನಂತರ ಹುಡುಗಿಗೆ ಸ್ನಾನ ಮಾಡಿಸಿ, ಹೆಂಡವನ್ನು ಅವಳ ಮುಖಕ್ಕೆ ಪ್ರೋಕ್ಷಿಸಿಸುತ್ತಾರೆ. ನಂತರ ಅವಳಿಗೆ ಸಾಯಂಕಾಲ ಮಾಂಸದ ಆಹಾರ ಸಿದ್ಧಪಡಿಸಿ ಸುತ್ತಮುತ್ತಲಿನ ಕುಲಸ್ತರಿಗೆ ಊಟ ಮಾಡಿಸಿ, ಸರಾಯಿ ಕುಡಿಸಿ ಕಳುಹಿಸುವ ಪದ್ಧತಿ ಇದೆ. ಋತುಮತಿಯಾಗುವ ಮೊದಲೇ ಮದುವೆಯಾಗಿದ್ದರೆ ಅಥವಾ ಬಾಲ್ಯವಿವಾಹ ಆಗಿದ್ದರೆ ಗಂಡನ ಕಡೆಯವರು ಎರಡು ಭಾಗ ಹುಡುಗಿಯ ತಂದೆಯವರು ಒಂದು ಭಾಗ ಅಂದಿನ ಖರ್ಚನ್ನು ಭರಿಸುತ್ತಾರೆ. ಪ್ರಸ್ತುತ ದಿನಗಳಲ್ಲಿ ಕೆಲವು ಕಡೆ ಕೊನೆಯ ದಿನದಂದು ಪೆದ್ದಮನಿಷಿ ಪಿಲ್ಲಕಿ ಪೂಲುಪೂಡ್ಸತಂ ರಾಂಡಿ ಎಂದು ಎಲ್ಲರನ್ನೂ ಕರೆಯುತ್ತಾರೆ. ಅಂದರೆ ಮೈನೆರೆದ ಹುಡುಗಿಗೆ ಹೂಮುಡುಸುತ್ತೇವೆ ಎಂದು ತಮ್ಮ ಸಂಬಂಧಿಕರೆಲ್ಲರನ್ನು ಕರೆಯಿಸಿಕೊಳ್ಳುತ್ತಾರೆ. ತಮ್ಮ ಗುಡಾರವನ್ನು ಹೆಂಡೆಯಿಂದ ಸಾರಿಸಿ ಸ್ವಚ್ಛಗೊಳಿಸಿಕೊಂಡು, ಸೂತಕ ಕಳೆಯಲು ಮನೆಗೆ ಗೋಮೂತ್ರ ಪ್ರೋಕ್ಷಿಸಿಕೊಳ್ಳುವರು. ಅಂದು ಆ ಹುಡುಗಿಗೆ ಸ್ನಾನ ಮಾಡಿಸುತ್ತಾರೆ. ನಂತರ ಸಂಜೆ ಹುಡುಗಿಯನ್ನು ಕೂಡಿಸಿ ಹೂಮುಡುಸುತ್ತಾರೆ. ನಂತರ ಬಂದಂತ ಎಲ್ಲಾ ಬಂಧು ಬಳಗಕ್ಕೆ ಸಿಹಿ ಊಟ ಮಾಡಿಸಿ, ಅವರಿಗೆ ಬಸ್‌ಚಾರ್ಜ್ ಕೊಟ್ಟು ಕಳುಹಿಸುವ ಪದ್ಧತಿಯನ್ನು ಹೊಂದಿದ್ದಾರೆ. ಅಂತೆಯೇ ಅದೇ ಹುಡುಗಿಯು ಮತ್ತೊಮ್ಮೆ ಋತುಮತಿಯಾದರೆ ಹೂ ಮೂಡಿಸುವ ಕಾರ್ಯವನ್ನು ಬಿಟ್ಟು ಈ ಮೇಲಿನ ಎಲ್ಲಾ ಕಾರ್ಯಗಳನ್ನು ಎರಡನೆ ಸಲವೂ ಮಾಡುತ್ತಾರೆ. ಈ ರೀತಿಯಾಗಿ ಋತುಮತಿಯರಾದ ಹುಡುಗಿಯರನ್ನು ಒಂದೆರೆಡು ವರ್ಷದಲ್ಲಿಯೇ ಮದುವೆ ಮಾಡಿಕೊಡುತ್ತಾರೆ. ಒಂದುವೇಳೆ ಋತುಮತಿಯಾದ ಹುಡುಗಿ ಬಹಳ ದಿನಗಳವರೆಗೆ ಮದುವೆಯಾಗದೇ ತವರಲ್ಲೆ ಉಳಿದರೆ ಆತಂಕಗೊಳ್ಳುತ್ತಾರೆ. ಹಾಗಾಗಿ ಬುಡ್ಗ ಜಂಗಮರು ಆದಷ್ಟು ಬೇಗ ಮದುವೆ ಮಾಡಲು ಬಯಸುವರು.

**ವಿವಾಹ ಪದ್ಧತಿಯ ಆಚರಣೆಗಳು**

ಬುಡ್ಗ ಜಂಗಮ್ ಸಮುದಾಯದಲ್ಲಿ ವಿವಾಹ ಪದ್ಧತಿಯು ತನ್ನದೇಯಾದ ಸಾಂಸ್ಕೃತಿಕ ವೈಶಿಷ್ಟತೆಯನ್ನು, ವೈಜ್ಞಾನಿಕತೆಯನ್ನು, ವೈಚಾರಿಕತೆಯನ್ನು ಅನುಸರಿಕೊಂಡು ಬಂದಿರುವುದು, ಅವರ ಸಾಂಸ್ಕೃತಿಕ ಪ್ರಜ್ಞೆಗೆ ಹಾಗೂ ಜಾಣ್ಮೆಗೆ ಅಥವಾ ನಾಗರೀಕ ಸಮಾಜಕ್ಕೆ ಹಿಡಿದ ಕನ್ನಡಿಯಾಗಿದೆ. ಈ ಸಮುದಾಯದಲ್ಲಿ ವರದಕ್ಷಿಣೆ ಕೊಟ್ಟು ವಿವಾಹವಾಗುವ ಪದ್ಧತಿ ಇಲ್ಲ, ವಿಶೇಷವಾಗಿ ವಧುದಕ್ಷಿಣೆ (ಓಲಿ) ಕೊಟ್ಟು ವಿವಾಹವಾಗುವ ಪದ್ಧತಿಯನ್ನು ಇವರಲ್ಲಿ ಕಾಣಬಹುದು. ಜೊತೆಗೆ ಅತ್ಯಂತ ಸರಳವಾಗಿ ವಿವಾಹವನ್ನು ನೆರವೇರಿಸುತ್ತಾರೆ. ಈ ಸಂದರ್ಭದಲ್ಲಿ ಇವರು ತಮ್ಮ ರಕ್ತಸಂಬಂಧಿಯಲ್ಲಿಯೇ

ಹೆಚ್ಚು ವಿವಾಹ ಸಂಬಂಧಗಳನ್ನು ಬೆಳೆಸುವರು. ಒಂದೇ ಸಮ ಬೆಡಗಿನವರೊಂದಿಗೆ ವಿವಾಹ ಸಂಬಂಧ ನಿಷೇಧಿಸುವ ಭಿನ್ನಬೆಡಗಿನೊಂದಿಗೆ ವಿವಾಹವಾಗುತ್ತಾರೆ. ಇವರಲ್ಲಿ ವಿಶೇಷವಾಗಿ ವಧುವಿನ ಮನೆಯ ಮುಂದೆಯೇ ವರನು ಬಂದು ಬಿಡಾರ ಹಾಕಿಕೊಂಡು ವಿವಾಹ ಮಾಡಿಕೊಳ್ಳುವ ಪದ್ಧತಿ ಇದೆ. ಇವರು ಮದುವೆಗೆ ಒಳ್ಳೆಯ ಮೂಹುರ್ತಗಳನ್ನುನೋಡುವುದಿಲ್ಲ. ಇವರಿಗೆ ವಾರಗಳ ಮೇಲೆ ಶುಭ ಅಶುಭ ದಿನಗಳನ್ನು ಗುರುತಿಸಿಕೊಳ್ಳುತ್ತಾರೆ. ಉದಾ ಸೋಮವಾರ, ಬುಧುವಾರ, ಗುರುವಾರ, ಶುಕ್ರವಾರ, ಹುಣ್ಣಿವೆ ಇವುಗಳು ಶುಭದಿನಗಳಾಗಿವೆ. ಮಂಗಳವಾರ, ಶನಿವಾರ, ರವಿವಾರ, ಅಮವಾಸ್ಯೆ ಇವುಗಳು ಶುಭಕರವಲ್ಲದ ದಿನಗಳೆಂದು ನಂಬುತ್ತಾರೆ.

ವಿವಾಹ ಸಂದರ್ಭದಲ್ಲಿ ವರನ ಕಡೆಯವರು, ಬಂದಂತ ಬಂಧುಬಳಗದವರಿಗೆ ಮತ್ತು ವಧುವಿನ ತವರುಮನೆಯ ಸಂಬಂಧಿಕರಿಗೆ ಹೆಂಡ, ಸರಾಯಿ, ಹೊಟ್ಟೆತುಂಬಾ ಊಟ ಹಾಕಿಸಿ ಮತ್ತು ಬಸ್ಸು ಚಾರ್ಜ್(ಹಣವನ್ನು) ಕೊಟ್ಟು ಕಳುಹಿಸುವ ಪರಂಪರೆ ಇಂದಿಗೂ ಆಚರಣೆಯಲ್ಲಿದೆ. ಒಂದು ವೇಳೆ ಯಾರಾದರೂ ಆಪ್ತರು ಬಂದಿಲ್ಲವೆಂದರೆ ಅವರಿಗೆ ಅವರ ಸಂಬಂಧಿಕರ ಕೈಯಲ್ಲಿ ಹಣವನ್ನು ಕೊಟ್ಟು ಸರಾಯಿ ಕುಡಿಯಲಿ ಎಂದು ಕಳಿಸುತ್ತಾರೆ. ಹೀಗೆ ಬುಡ್ಗ ಜಂಗಮರು ಬಹುಹಿಂದಿನಿಂದಲೂ ವಿವಾಹ ಸಂದರ್ಭದಲ್ಲಿ ತಾವು ಅನುಸರಿಸುವ ಪದ್ಧತಿಗಳನ್ನು ಅಥವಾ ಆಚರಣೆಗಳನ್ನು ಇಂದಿಗೂ ಉಳಿಸಿಕೊಂಡು ಬಂದಿರುವದನ್ನು ಕ್ಷೇತ್ರಕಾರ್ಯದ ಮೂಲಕ ಪ್ರತ್ಯಕ್ಷವಾಗಿ ಕಂಡು ವಿವರಿಸಲಾಗಿದೆ.

ಈ ಸಮುದಾಯದಲ್ಲಿ ಮೊದಲು ಐದುದಿನದ ವಿವಾಹ ಪದ್ಧತಿ ಮತ್ತು ಮೂರುದಿನದ ವಿವಾಹ ಮಾಡಿಕೊಳ್ಳುವ ಪದ್ಧತಿ ಇತ್ತು. ಐದುದಿನದ ಮದುವೆಯು ಬುಡ್ಗ ಜಂಗಮರ ಪ್ರಾಚೀನ ಕಾಲದ ಪದ್ಧತಿಯಾಗಿದೆ. ಇಂದು ಆಧುನಿಕತೆಯ ಪ್ರಭಾವದಿಂದ ಮೂರು ದಿನಕ್ಕೆ ಸೀಮಿತವಾಗಿದೆ.

ವಿವಾಹದ ಮೊದಲ ದಿನದಂದು ಮನೆದೇವರ ಪೂಜೆ, ಪಿಲ್ಲನಿ ತೋಲುಕುನೇದಿ(ಹೆಣ್ಣನ್ನು ಕರೆದುಕೊಳ್ಳುವುದು), ಹುಡುಗಿಗೆ ಪಲ್ಲುಪುಲ್ಲು ಅನ್ನಂ ಪೆಟ್ಟೆದಿ, ಕೈಗೆ ಬಳೆ ಹಾಕಿಸುವುದು, ಕುಲಬಾಂಧವರಿಗೆಲ್ಲಾ ಊಟ ಮಾಡಿಸುವುದು ಇತ್ಯಾದಿ ಕಾರ್ಯಗಳು ವಿವಾಹದ ಮೊದಲ ದಿನದಂದು ಆಚರಿಸುತ್ತಾರೆ. ಬುಡ್ಗ ಜಂಗಮರಲ್ಲಿ ವಿವಾಹದ ಸಂದರ್ಭದಲ್ಲಿ ವಿವಾಹವು ಇನ್ನೂ ಒಂದುವಾರ ಇರುವಾಗಲೇ ಗಂಡಿನಕಡೆಯವರು ಹೆಣ್ಣು ಇರುವ ಸ್ಥಳಕ್ಕೆ ಬಂದು ಟೆಂಟ್ ಹಾಕಿ, ಆ ಊರಿನ ವಿವಾಹದ ಕುಲಪದ್ಧತಿಯನ್ನು ಅನುಸರಿಸಿ ವಿವಾಹ ಕಾರ್ಯವನ್ನು ನಿರ್ವಹಿಸುತ್ತಾರೆ.

**ಇಂಟಿದೇವಡು ಪೂಜಾ(ಮನೆದೇವರ ಪೂಜೆ):** ಮನೆದೇವರಾದ ಸುಂಕ್ಲಮ್ಮ, ಜಮ್ಮುಲಮ್ಮ ದೇವರುಗಳಿಗೆ ಸೇರುಪಾವು ಅಕ್ಕಿ, ಬ್ಯಾಳೆ ಮತ್ತು ಬೆಲ್ಲ, ಎರಡು ಕೊಬ್ಬರಿ ಬಟ್ಟಲು ಮತ್ತು ಉತ್ತುತ್ತಿಯನ್ನು ಇಟ್ಟು ಉಡಿಕೊಡುತ್ತಾರೆ. ನಂತರ ತೆಂಗಿನ ಕಾಯಿಯನ್ನು ಹೊಡೆಯುತ್ತಾರೆ. ಸುತ್ತಮುತ್ತ ಎಲ್ಲಾ ದೇವರುಗಳಿಗೆ ನಮ್ಮಲ್ಲಿ ಮದುವೆಯ ಶುಭ ಕಾರ್ಯ ಜರುಗುತ್ತಿದೆ ಯಾವುದೇ ರೀತಿಯ ವಿಘ್ನಗಳು ಆಗದಂತೆ ಕಾಪಾಡಬೇಕು ಎಂದು ದೇವರನ್ನು ಬೇಡಿಕೊಂಡು ಪೂಜೆ ಸಲ್ಲಿಸಿ ತೆಂಗಿನಕಾಯಿಯನ್ನು ಹೊಡೆಯುತ್ತಾರೆ.

**ಪಿಲ್ಲನಿ ತೋಲುಕುನೇದಿ (ಹೆಣ್ಣನ್ನು ಕರೆದುಕೊಳ್ಳುವುದು):** ಈ ಕಾರ್ಯವನ್ನು ಮದುವೆ ಒಂದುದಿನ ಮುಂಚೆ ಅಲ್ಲಿರುವ ಎಲ್ಲಾ ಕುಲಸ್ಥರನ್ನು ಭೇಟಿ ಮಾಡಿ, ನಾಳೆ ನಾವು ಹುಡುಗಿಯನ್ನು ಕರೆದುಕೊಳ್ಳುತ್ತೇವೆ

ಎಂದು ಹೇಳಿ ಅವರಿಗೆಲ್ಲಾ (ಕುಲಾಚಾರದಂತೆ)ಟೀ, ಹೆಂಡ, ಸರಾಯಿ ಕುಡಿಸುತ್ತಾರೆ. ನಂತರ ಸಾಯಂಕಾಲ ಗಂಡಿನ ಕಡೆಯ ಹೆಣ್ಣುಮಕ್ಕಳು ಹುಡುಗಿಯನ್ನು ಕರೆದುಕೊಂಡು ಸ್ನಾನ ಮಾಡಿಸಿ ಅವಳಿಗೆ ಹೊಸ ಸೀರೆ ಉಡಿಸಿ, ಕೊಬ್ಬರಿ ಬಟ್ಟಲು, ಬೆಲ್ಲದ ಚೂರು ಉಡಿಯಲ್ಲಿ ಹಾಕಿ ಮನೆಗೆ ಕರೆದುಕೊಳ್ಳುತ್ತಾರೆ.

**ಪಲ್ಲುಪುಲ್ಲು ಅನ್ನಂ ಪೆಟ್ಟೆದಿ:** ಹುಡುಗಿಯನ್ನು ಮನೆಗೆ ಕರೆದುಕೊಂಡ ನಂತರ ರಾತ್ರಿ ಈರುಳ್ಳಿ, ಒಣಮೆಣಸಿನಕಾಯಿ, ಬೆಲ್ಲ, ಹುಂಚೆಣ್ಣುನಿಂದ ತಯಾರಿಸಿದ ಸಾಂಬರೂ ಅನ್ನ ಮಾಡಿ ಊಟಮಾಡಿಸುತ್ತಾರೆ. ಇದನ್ನು ಪಲ್ಲುಪುಲ್ಲು ಅನ್ನಂ ಎಂದು ಕರೆಯುತ್ತಾರೆ. ಇದನ್ನು ಮದುವೆಯಾಗುವ ದಿನದವರೆಗೂ ಬೆಳಿಗ್ಗೆ, ಸಾಯಂಕಾಲ ಈ ರೀತಿ ಊಟಮಾಡಿಸಬೇಕಾಗುತ್ತದೆ. ಕಾರಣ ಹುಡುಗಿ ಮದುವೆಯಾದ ಮೇಲೆ ನೇರವಾಗಿ ಗಂಡನ ಮನೆಗೆ ಹೋಗಬೇಕಾದರೆ ಹಿಂಜರಿಯುತ್ತಾಳೆ ಎನ್ನುವ ಕಾರಣಕ್ಕೆ ಗಂಡನ ಮನೆಯಲ್ಲಿ ಸಲೀಸಾಗಿ ಹೋಗಬೇಕು ಎಂಬ ಕಾರಣದಿಂದ ಮದುವೆಯ ಪೂರ್ವದಲ್ಲಿಯೇ ಗಂಡಿನವರು ತಮ್ಮ ಮನೆಗೆ ಕರೆದುಕೊಂಡು ಅವಳಿಗೆ ತಿಂಡಿ ತಿನಿಸು, ಫಲಹಾರಗಳನ್ನು ತಿನ್ನಲು ಕೊಡಿಸುತ್ತಾರೆ. ಹೀಗೆ ಕೊಡಿಸುವುದರ ಮೂಲಕ ಹುಡುಗಿಯನ್ನು ಮರಳು ಮಾಡಿಕೊಳ್ಳುತ್ತಾರೆ. ಇವರಲ್ಲಿ ಸಣ್ಣ ವಯಸ್ಸಿನಲ್ಲಿಯೇ ಹೆಚ್ಚು ವಿವಾಹವಾಗುವ ಸಾಮಾಜಿಕ ರಚನೆಯನ್ನು ಹೊಂದಿದ್ದಾರೆ. ಹೀಗಾಗಿ ಮಕ್ಕಳಿಗೆ ಇನ್ನೂ ವಿವಾಹದ ತಿಳುವಳಿಕೆ ಇಲ್ಲದಿರುವುದರಿಂದ ಈ ರೀತಿ ಗಂಡನ ಮನೆಗೆ ಕರೆದುಕೊಂಡು ಬಂದು ಊಟ, ತಿಂಡಿ ಕೊಡಿಸುವುದು, ಮರಳುಮಾಡುವುದನ್ನು ಕಾಣಬಹುದು. ನಂತರ ಕ್ರಮವಾಗಿ ಈ ಕೆಳಗಿನಂತೆ ಆಚರಣೆಗಳನ್ನು ಅನುಸರಿಸುತ್ತಾರೆ.

**ಬಳೆ ಹಾಕಿಸುವುದು:** ಅಂದು ಸಂಜೆ ವಧುವಿಗೆ ಮತ್ತು ಅವರ ಬಂಧುಬಳಗಕ್ಕೆ ವಧುವಿನ ಕಡೆಯವರು ಒಂದಿಬ್ಬರು, ವರನ ಕಡೆಯವರು ಒಂದಿಬ್ಬರು ಮುತ್ತೈದೆಯರೊಡಗೂಡಿ ಬಳೆ ಹಾಕಿಸಲು ಪಕ್ಕದ ಬಳೆ ಅಂಗಡಿ ಇರುವ ಊರುಗಳಿಗೆ ಹೋಗುತ್ತಾರೆ. ಹಾಗೆ ಹೋಗುವಾಗ ವಧುವಿಗೆ ಕಂಬಳಿ ಇಲ್ಲವೇ ಬಟ್ಟೆ ಹೊದಿಸಿಕೊಂಡು ಹೋಗುತ್ತಾರೆ. ಇತ್ತೀಚಿನ ದಿಗಳಲ್ಲಿ ಬಳೆಗಾರರನ್ನು ಮನೆಗೆ ಕರೆಯಿಸಿ ಬಳೆಗಳನ್ನು ಹಾಕಿಸಿಕೊಳ್ಳುತ್ತಾರೆ. ನಂತರ ಕುಲಬಾಂಧವರಿಗೆಲ್ಲಾ ಊಟ ಮಾಡಿಸುತ್ತಾರೆ.

**ಎರಡನೇಯ ದಿನದ ವಿವಾಹದ ಕಾರ್ಯಕ್ರಮಗಳು**

ಬುಡ್ಗ ಜಂಗಮರು ಎರಡನೇಯ ದಿನದ ವಿವಾಹದ ಕಾರ್ಯಕ್ರಮದಂದು ಸಾಪಲೆಸೆದಿ (ಚಾಪೆ ಹಾಕುವುದು), ಪಂದ್ಯರ ಎಸೇದಿ (ಹಂದರ ಹಾಕುವುದು), ಬೋದುಗುಡುಪು (ಓಲಿಕೊಡುವುದು), ಮದುಮಗನನ್ನು ಕರೆದುಕೊಂಡು ಬರುವ ಕಾರ್ಯಕ್ರಮ, ಮದುಮಗಳನ್ನು ಕರೆದುಕೊಂಡು ಬರುವುದು, ಕಂಕಣ ಕಟ್ಟುವುದು, ಆಕು ತಾಂಬೂಲ ಮಲಪೇದಿ (ಎಲೆ ತಾಂಬೂಲ ಶಾಸ್ತ್ರ), ತಾಳಿಬೊಟ್ಟು ಕಟ್ಟಚೇದಿ (ಮಂಗಳ ಸೂತ್ರ ಕಟ್ಟಿಸುವುದು), ವಡಿಬಾಲು ಕಟ್ಟೇದಿ(ಉಡಿಯಕ್ಕಿ ಹಾಕುವುದು), ಬ್ರಹ್ಮಗಂಟು, ತಲವಾಕಲಿ (ಹೆಬ್ಬಾಗಿಲು)ದಾಟುವುದು, ಕುಲದೈವಕ್ಕೆ ಅನ್ನ ದಾಸೋಹ ಏರ್ಪಡಿಸುವುದು, ಹೆಣ್ಣನ್ನು ಗಂಡಿನ ಮನೆಗೆ ಕಳಿಸುವುದು, ಕಲಿಕುಂಡ ದೇವದಿ (ಹೆಂಬಲ ಗಡಿಗೆಯಲ್ಲಿ ಹುಡುಕುವುದು) ಇತ್ಯಾದಿ ಕಾರ್ಯಕ್ರಮಗಳನ್ನು ವಿವಾಹದ ಎರಡನೇದಿನ ನೆರವೇರಿಸುತ್ತಾರೆ.

**ಸಾಪಲೆಸೆದಿ (ಚಾಪೆ ಹಾಕುವುದು)**: ಸಾಪಲೆಸೆದಿ ಎಂದರೆ ವಧುವಿನ ಮನೆಯ ಮುಂದೆ ಈಚಲು ಮರದ ಚಾಪೆ ಹಾಕಿ ಎರಡು ಕುಟುಂಬಗಳ ಕುರಿತು ಸಭೆ ನಡೆಸಿ ಮುಂದಿನ ವೈವಾಹಿಕ ಜೀವನದ ಹೆಣ್ಣಿನ ಭದ್ರತೆ ಕುರಿತು ನೆರೆದ ಕುಲಸ್ಥರ ಮುಂದೆ ಮಾತುಕತೆ ನಡೆಸುವ ವೇದಿಕೆಯಾಗಿರುತ್ತದೆ. ಇದನ್ನು ಬುಡ್ಗ ಜಂಗಮರು ಸಭಾ, ದೈವದ ಕಟ್ಟೆ ಎಂದು ತಿಳಿಯುತ್ತಾರೆ. ಚಾಪೆಯ ಮೇಲೆ ಕುಳಿತುಕೊಂಡು ಮಾತನಾಡಿದ ವಿಷಯಗಳು ಯಾವಾಗಲೂ ಸತ್ಯವಾಗಿರುತ್ತವೆ ಎಂದು ನಂಬಿರುತ್ತಾರೆ.*(ಭಾ:೫.೬)* ಈ ಕಾರ್ಯವನ್ನು ಮದುವೆಯ ಮೂಹುರ್ತ ದಿನದ ಹಿಂದೆ ಎಲ್ಲಾ ಕುಲಸ್ಥರಿಗೆ ಮುಂತಕಲ್ಲು ಹಂಚಿ ನಾಳೆ ಸಾಪಲೆಸ್ತಂ(ಚಾಪೆ ಹಾಕುತ್ತೀವಿ) ಎಂದು ಹೇಳುತ್ತಾರೆ.

ಮರುದಿನ ಮೂಹೂರ್ತ ದಿನದಂದು ಬೆಳ್ಳಿಗ್ಗೆ ಒಬ್ಬ ಗಂಡ ಹೆಂಡತಿಯನ್ನು ಕಳಸ ಇಡುಕೊಳ್ಳಲು ಮುತ್ತೈದೆತನ ಮಾಡಿ ಅವರಿಂದ ಇಂತವರ ಮನೆಮುಂದೆ ಚಾಪೆ ಹಾಕುತಿದ್ದಾರೆ.(ಪಲ್ಲಾನು ಇಂಟಳೂ ಸಾಪಲುವೆಸ್ತುನ್ನಾರು ರಾಂಡಿ) ಎಂದು ಹೇಳಿ ಕಳಿಸುತ್ತಾರೆ. ನಂತರ ಗಂಡಿನ ಕಡೆಯವರು ಹೆಣ್ಣಿನ ಮನೆಯ ಮುಂದೆ ಚಾಪೆಯನ್ನು ಹಾಕಿ ಎಲ್ಲಾ ಕುಲಸ್ಥರನ್ನು ಸೇರಿಸುತ್ತಾರೆ.

ಚಾಪೆಯ ಮೇಲೆ ಸೇರಿದ ಕುಲದೈವದ ಮುಂದೆ ವಧುವಿನ ತಂದೆ ಕೆಲವು ಬೇಡಿಕೆಗಳನ್ನು ಮುಂದಿಡುತ್ತಾನೆ. ತನ್ನ ಮಗಳನ್ನು ಮದುವೆಯಾದ ಮೇಲೆ ಎರಡು ಮಕ್ಕಳಾಗುವವರೆಗೆ ನನ್ನ ಸೇವೆ ಮಾಡುತ್ತ ಇರಬೇಕು. ಕಾರಣ ನನ್ನ ಮಗಳನ್ನು ಸರಿಯಾಗಿ ನೋಡಿಕೊಳ್ಳುತ್ತಾನೊ ಇಲ್ಲವೋ ಎಂದು ಕೇಳುತ್ತಾನೆ. ಅದಕ್ಕೆ ವರನ ಕಡೆಯವರು ನಾವು ನಿಮ್ಮ ಮಗಳನ್ನು ಸರಿಯಾಗಿ ನೋಡಿಕೊಳ್ಳುತ್ತೇವೆಯೋ, ಇಲ್ಲವೋ ಅನುಮಾನವೇಕೆ..? ಒಬ್ಬರನ್ನು ಪೂಟ ಏರ್ಪಡಿಸು, ಎಂದರೆ ಮಧ್ಯವರ್ತಿಯನ್ನು ನಿಯಮಿಸು ನಿಮಗೆ ಗೊತ್ತಾಗುತ್ತದೆ ಎಂದು ಮರು ಸವಾಲನ್ನು ವರನ ಕಡೆಯವರು ಹಾಕುತ್ತಾರೆ. (ಪೂಟ ಎಂದರೆ ಒಬ್ಬ ಮನುಷ್ಯ ಇವರ ಕುಟುಂಬವು ಅಡ್ಡಾಡಿದಂತೆಲ್ಲ ಅವರ ನಡೆನುಡಿಗಳನ್ನು ಪರೀಕ್ಷಿಸುವುದು. ಇಂತಹವರ ಖರ್ಚು ಕುಟುಂಬದವರಾಗಿರುತ್ತದೆ). ಹಾಗೂ ಹೀಗೂ ಮಾತನಾಡಿ ಒಂದು ಮಗುವಾಗುವವರೆಗೂ ಅಥವಾ ಒಂದು ವರ್ಷಕ್ಕೂ ಒಪ್ಪಿಸುತ್ತಾರೆ. ಅದಕ್ಕೆಲ್ಲಾ ಬದ್ದರಾಗಿ ಹೆಣ್ಣನ್ನು ಮಾಡಿಕೊಳ್ಳಬೇಕಾಗುತ್ತದೆ. ಇದನ್ನು ಚಾಪೆ ಹಾಕುವುದು ಎಂದು ಕರೆಯುತ್ತಾರೆ. ಇದಾದ ನಂತರ ಎಲ್ಲಾಕುಲಸ್ಥರಿಗೆ ಮತ್ತೆ ಕುಲಾಚರ ಪ್ರಕಾರ (ಮುಂತಕಲ್ಲು) ಹೆಂಡ ಸರಾಯಿ ಕುಡಿಸುತ್ತಾರೆ. ನಂತರ ಮುಂದಿನ ಪ್ರಕ್ರಿಯೆಗಳು ಪ್ರಾರಂಭವಾಗುತ್ತವೆ.

**ಪಂದ್ಯರ ಎಸೇದಿ(ಹಂದರ ಹಾಕುವುದು)**: ಮನೆಯ ಮುಂದೆ ಹಂದರ ಹಾಕುವ ಸಂದರ್ಭದಲ್ಲಿ ತಮ್ಮ ದಿನ ನಿತ್ಯದ ಸಂಗೀತ ವಾದ್ಯಗಳಾದ ಹಾರ್ಮೋನಿಯಂ, ತಬಲ ತಾಳ, ಡೋಲಕ್ ವಾದ್ಯಮೇಳಗಳೊಂದಿಗೆ ಸಂಗೀತ ಹಾಡುತ್ತಾ ಮುತ್ತೈದೆಯರೊಡಗೂಡಿ ಕಾನಿಗೆ ಗಿಡದ ತೊಪ್ಪಲು, ತೆಂಗಿನ ಮರದ ಗರಿಗಳು, ಬಸರಿಗಿಡದ ಸೊಪ್ಪು, ಆಲದ ಮರ ಹೀಗೆ ವಿವಿಧ ಬಗೆಯ ತಳಿರುಗಳಿಂದ ಹಂದರವನ್ನು ಹಾಕಿ ಮದುವೆಯ ಕಾರ್ಯಕ್ರಮವನ್ನು ಪ್ರಾರಂಭಿಸುತ್ತಾರೆ. ಹಂದರಕ್ಕೆ ಒಂದು ತೆಂಗಿನ ಕಾಯಿ ಮತ್ತು ಉತ್ತುತ್ತಿ ಕೊಬ್ಬರಿಬಟ್ಟಲನ್ನು ಕಟ್ಟಿ ಪೂಜಿಸುತ್ತಾರೆ. ಆ ಹಂದರದ ಕೆಳಗೆ ಕರಿಯ

ಕಂಬಳಿಯನ್ನು ಹಾಕಿ, ಅರಿಷಿಣ ಕಲಿಸಿದ ಅಕ್ಕಿಯಿಂದ ರಾಮನ ತೊಟ್ಟಿಲು, ಆ ಕಡೆ ಈ ಕಡೆ ಸೂರ್ಯ, ಚಂದ್ರರಿವ ಶಾಷ (ಹಸೆ)ವನ್ನು (ರಂಗೋಲಿ ಚಿತ್ರವನ್ನು) ಹಾಕುತ್ತಾರೆ *(ಭಾ: ೫.೭)*

**ಬೋದುಗುಡುಪು(ಓಲಿ ಕೊಡುವುದು)**: ಓಲಿ ಎಂದರೆ ವಧುದಕ್ಷಿಣೆ ಎಂದರ್ಥ. ಮದುವೆ ಸಂದರ್ಭದಲ್ಲಿ ವರನ ಮನೆಯ ಮುಂದೆ ಹಂದರ ಹಾಕಿದ ನಂತರ ಗಂಡಿನ ಕಡೆಯವರು ತಾಳಮೇಳಗಳೊಂದಿಗೆ ವಧುವಿನ ಗುಡಾರಕ್ಕೆ ಬಂದು, ಒಂಭತ್ತು ತಿಂಗಳು ಹೊತ್ತು ಸಾಕಿಸಲುಹಿದಕ್ಕೆ ಐದು ಅರಿಷಿಣ ಕೊಂಬು, ಎರಡಾಣೆ ನಾಣ್ಯ(ಬೇಡ), ಎಲೆ ಅಡಿಕೆಯಲ್ಲಿಟ್ಟು ಅರಿಷಿಣ ಬಟ್ಟೆಯಲ್ಲಿ ಕಟ್ಟಿ ವಧುವಿನ ತಾಯಿಗೆ ಕೊಟ್ಟು ಹೆಣ್ಣನ್ನು ತಮ್ಮದಾಗಿಸಿಕೊಳ್ಳುತ್ತಾರೆ. ಇದನ್ನು ಓಲಿಕೊಡುವುದು ಎಂದು ಕರೆಯುತ್ತಾರೆ. ಅಂದು ಒಂಭತ್ತು ಅರಿಷಿಣಕೊಂಬು>ಒಂಭತ್ತು ಉತ್ತುತ್ತಿ>ಎರಡಾಣೆ(ಬೇಡ) ಹಣ>ಒಂಭತ್ತು ರೂಪಾಯಿ>೧೬ ಹೆಂಡದ ಸರಾಯಿ ಬಾಟಲಿಗಳು ಕೊಟ್ಟು ಹೆಣ್ಣನ್ನು ನಿಶ್ಚಯ ಮಾಡಿಕೊಳ್ಳುತ್ತಿದ್ದರು. ಈಗ ಕಾಲಕ್ಕೆತಕ್ಕಂತೆ ೧೦೧, ೧೦೦೧ ರೂಪಾಯಿಗಳು ಕೊಟ್ಟು ಮದುವೆಮಾಡಿಕೊಳ್ಳುತ್ತಿದ್ದಾರೆ. ಇಂದಿನ ಆಧುನಿಕ ಜಗತ್ತಿನಲ್ಲಿ ಕೆಲವು ಅನ್ಯ ಸಮುದಾಯದಲ್ಲಿ ವರದಕ್ಷಿಣೆ ಕೊಟ್ಟು ಮದುವೆ ಮಾಡಿಕೊಳ್ಳುವ ಸಂದರ್ಭದಲ್ಲಿ, ಇಂದಿಗೂ ಬುಡ್ಗ ಜಂಗಮರಲ್ಲಿ ವಧು ದಕ್ಷಿಣೆ ಕೊಟ್ಟು ಮದುವೆ ಮಾಡಿಕೊಳ್ಳುವ ಪದ್ಧತಿ ಕಾಣಬಹುದಾಗಿದೆ. *(ಭಾ: ೫.೮)*

**ಮದುಮಗನನ್ನು ಕರೆದುಕೊಂಡು ಬರುವುದು:** ಓಲಿಕೊಡುವುದು ನಂತರ ಮೊದಲು ಮದುಮಗನ್ನು ಮನೆಯಿಂದ ತನ್ನ ಸೋದರ ಮಾವನು ಅವನಿಗೆ ಅಂಗಿ, ದೋತ್ರ, ರುಮಾಲು ಸುತ್ತಿ, ಕೊರಳಲ್ಲಿ ಪಗಡಾಲು ದಂಡ(ಹವಳದ ಸರ) ಹಾಕಿ, ಕೈಯಲ್ಲಿ ಜಂಭೆ (ನಿಂಬೆಹಣ್ಣು ಚುಚ್ಚಿರುವ ಕತ್ತಿ)ಯನ್ನು ಕೊಟ್ಟು ಸಿದ್ದಪಡಿಸುತ್ತಾರೆ. ಆ ಮನೆಯ ಯಾರಾದರೂ ಒಬ್ಬರು ಕಳಸ ಹಿಡಿದವರಿಗೆ ಕಾಲಿಗೆ ನೀರು ಹಾಕಿ ನಮಸ್ಕರಿಸಿ ಮದುಮಗನ್ನನ್ನು ಭುಜದ ಮೇಲೆ ಎತ್ತಿಕೊಂಡು ವಾದ್ಯಮೇಳಗಳೊಂದಿಗೆ ಹಂದರ ಹಾಕಿರುವ ಹೆಣ್ಣಿನ ಮನೆಗೆ ಬರುತ್ತಾನೆ.

**ಮದುಮಗಳನ್ನು ಕರೆದುಕೊಂಡು ಬರುವುದು:** ಮದುಮಗನನ್ನು ಕರೆದುಕೊಂಡು ಬಂದ ನಂತರ ಮದುಮಗಳನ್ನು ತನ್ನ ಸೋದರಮಾವನು ಭುಜದ ಮೇಲೆ ಎತ್ತಿಕೊಂಡು ಮದುವೆ ಹಂದರ ಹಾಕಿರುವ ಜಾಗದಲ್ಲಿ ಕರೆದುಕೊಂಡು ಬರುತ್ತಾರೆ.

**ಕಂಕಣ ಕಟ್ಟುವುದು:** ಮದುವೆ ಹಂದರದ ಕೆಳಗೆ ಕರಿಕಂಬಳಿಯ ಮೇಲೆ ಅಕ್ಕಿಯಿಂದ ಷಾಸ(ಹಸೆ) ಹಾಕಿರುತ್ತಾರೆ. ಸೋದರ ಮಾವಂದಿರು ಎತ್ತಿಕೊಂಡು ಬಂದ ಮದುಮಕ್ಕಳನ್ನು ದಿಬ್ಬಣದಲ್ಲಿ ಇಳಿಸಿ ಪೂರ್ವಾಪಶ್ಚಿಮಾಭಿಮುಖವಾಗಿ ಕೂಡಿಸುವರು. ವರನ ಕಡೆಯವರು ಮಂಗಳಸೂತ್ರ(ತಾಳಿ), ಬೆಳ್ಳಿಯ ಕಡಗ, ಕಾಲುಂಗರ, ಕಂಚು, ಹೂವಿನ ಹಾರ, ಉಡಿಅಕ್ಕಿ ಸಾಮಾನುಗಳು ಮತ್ತು ಅರಿಷಿಣ ಕುಂಕುಮದಿಂದ ಕಲಿಸಿದ ಅಕ್ಷತೆಕಾಳು ತಂದು ಇಟ್ಟಿರುತ್ತಾರೆ. ಮತ್ತೈದೆಯಾದವರು ಮದುಮಕ್ಕಳಿಗೆ ವಿಭೂತಿ, ಕುಂಕುಮ ಹಚ್ಚಿ ಕೈಗೆ ಕಂಕಣವನ್ನು ಕಟ್ಟುತ್ತಾರೆ. ನಂತರ ಕಳಸಕ್ಕೆ, ಕಳಸ ಹಿಡಿಯುವ ಮತ್ತೈದೆಯರಿಗೆ ಮತ್ತು ಮದುಮಗ, ಮದುಮಗಳ ತಂದೆ ತಾಯಿಗಳಿಗೆ ಹಾಗೂ ಕುಲದ ಹಿರಿಯರಿಗೆ,

ಮತ್ತು ಸೋದರಮಾವನಿಗೆ ಕಂಕಣವನ್ನು ಕಟ್ಟುತ್ತಾರೆ. ಕಂಕಣ ಎಂದರೆ ಎಲೆ ಅರಿಷಿಣಕೊಂಬು ಇಟ್ಟು ದಾರದಿಂದ ಕಟ್ಟಿದ ಒಂದು ಕಂಕಣವಾಗಿರುತ್ತದೆ.

**ಆಕು ತಾಂಬೂಲಂ ಮಲಪೇದಿ(ಎಲೆಶಾಸ್ತ್ರ):** ಕುಲದ ಹಿರಿಯನೇ ಪುರೋಹಿತನಾಗಿ ಕಾರ್ಯನಿರ್ವಹಿಸುತ್ತಾನೆ. ಮದುಮಕ್ಕಳಿಬ್ಬರ ಕೈಗೆ ಎರಡೆರೆಡು ಎಲೆಅಡಿಕೆ ಕೊಟ್ಟು ಆ ಎಲೆ ಅಡಿಕೆಗಳನ್ನು ಅವರಿಬ್ಬರ ಕೈಯಲ್ಲಿಟ್ಟು ಐದು ಸಾರಿ ಬದಲಾವಣೆ ಮಾಡಿಸುತ್ತಾರೆ. ನಂತರ ಮೊದಲ ತಾಂಬೂಲ ತಾಯಿತಂದೆ–ಗುರುದ್ಯೆವ, ಎರಡನೆಯ ತಾಂಬೂಲ ವಿಭೂತಿ–ರುದ್ರಾಕ್ಷಿ, ಮೂರನೆಯ ತಾಂಬೂಲ ಧೂಪಂ–ದೀಪಂ, ನಾಲ್ಕನೆ ತಾಂಬೂಲ ಮಹಾಂತು(ಯಡವಲಿ)– ಗಣಾಚಾರಿ(ಶಿರಿಶ್ಯಾಲ), ಐದನೆಯ ತಾಂಬೂಲ 'ಕುಲಂ' ತಾಂಬೂಲ ಎಂದು ನೆರೆದ ಕುಲಸ್ಥರಿಗೆ ಕೊಡುತ್ತಾರೆ. ಕಾರಣ ಈ ಎಲೆಶಾಸ್ತ್ರವು ಮಾಡುವುದರಿಂದ ಕುಲಕ್ಕೆ ಪ್ರಮಾಣ ಮಾಡಿದಂತೆ ಎಂದು ಪರಂಪರಾನುಗತವಾಗಿ ಇದನ್ನು ಆಚರಿಸುತ್ತಾ ಬಂದಿದ್ದಾರೆ*(ಛಾ:೫.೯)*

**ಮಂಗಳಸೂತ್ರಂ ಕಟ್ಟಚೇದಿ(ತಾಳಿ ಕಟ್ಟಿಸುವುದು):** ಮಂಗಲಸೂತ್ರಂ ಎಂದರೆ ಅರಿಷಿಣಕೊಂಬು ದಾರದಿಂದ ತಯಾರಿಸಿದ ಒಂದು ಮಾಂಗಲ್ಯ ಸರ, ಅದನ್ನು ಬುಡ್ಗ ಜಂಗಮರು ಮಂಗಲಸೂತ್ರಂ ಎಂದು ಕರೆಯುತ್ತಾರೆ. ಮದುಮಗನು ಮದುಮಗಳಿಗೆ ಕೈಗೆ ಬೆಳ್ಳಿಕಡಗ ಮತ್ತು ಮೂಗಿಗೆ ಮೂಗುತಿ ತೊಡುಸುತ್ತಾನೆ. ನಂತರ ಕೊರಳಲ್ಲಿ ಮಂಗಲಸೂತ್ರಂ(ತಾಳಿ) ಕಟ್ಟಿಸುತ್ತಾರೆ*(ಛಾ:೫.೧೦).* ಇತ್ತೀಚಿನ ದಿನಗಳಲ್ಲಿ ಆಧುನಿಕ ಪ್ರಭಾವದಿಂದ ಬಂಗಾರದ ತಾಳಿಬೊಟ್ಟನ್ನು ಬಳಸುತ್ತಿದ್ದಾರೆ. ನಂತರ ಬಂದಂತ ಬಂಧುಬಳಗದವರೆಲ್ಲರೂ ಅಕ್ಷತೆಯನ್ನು ಹಾಕಿ ಆರ್ಶೀವದಿಸುತ್ತಾರೆ. ನಂತರ ಮದುಮಗ ಮದುಮಗಳ ಕಾಲಿಗೆ ಕಾಲುಂಗುರ ತೊಡುಸುತ್ತಾನೆ. ನಂತರ ಕೊಬ್ಬರಿ ಬಟ್ಟಲಿನಲ್ಲಿ ಹಾಲು ತುಪ್ಪ ಹಾಕಿ ಐದು ಜನರ ಬಲಗೈಯಿಯ ಕಿರು ಬೆರಳಗಳ ಮೂಲಕ ಮೊದಲು ಮದುಮಗನಿಗೆ ನಂತರ ಮದುಮಗಳಿಗೆ ಕುಡಿಸುತ್ತಾರೆ*(ಛಾ:೫.೧೧).* ಮಂಗಲಸೂತ್ರದ ಕಾರ್ಯವನ್ನು ಮುಗಿಸಿದ ನಂತರ ಸೂರ್ಯ ಚಂದ್ರರಿಗೆ (ಅರುಂಧತಿ ನಕ್ಷತ್ರ) ನಮಸ್ಕರಿಸುತ್ತಾರೆ.

**ಬ್ರಹ್ಮಗಂಟು:** ಅಕ್ಷತೆ ಹಾಕಿ ಕಳಸವನ್ನು ಬೆಳಗಿದ ನಂತರ ಮಧುಮಗನ ಟಾವಲ್‌ಗೆ ಮತ್ತು ಮದುಮಗಳ ಸೀರೆಯ ಸೆರಗಿಗೆ ಎರಡಾಣೆ(ಬೇಡ) ನಾಣ್ಯವನ್ನು ಇಟ್ಟು ಗಂಟು ಹಾಕುತ್ತಾರೆ. ಇದನ್ನು ಬುಡ್ಗ ಜಂಗಮರು 'ಬ್ರಹ್ಮಗಂಟು' ಎಂದು ಕರೆಯುತ್ತಾರೆ. ಬ್ರಹ್ಮಗಂಟು ನಂತರ ಅದಕ್ಕೆ ಊದಿನಕಡ್ಡಿಯಿಂದ ಪೂಜೆಮಾಡುತ್ತಾರೆ. ನಂತರ ತಂದಿರುವ ಹೂವಿನ ಹಾರಗಳನ್ನು ಪರಸ್ಪರ ಬದಲಾಯಿಸಿಕೊಳ್ಳುತ್ತಾರೆ. ನಂತರ ಬಂದಂತ ಬಂಧು ಬಳಗದವರು ಶುಭ ಹಾರೈಸಿ ಅವರಿಗೆ ಆರತಿ ಎತ್ತಿ ಅಕ್ಷತೆ ಹಾಕುತ್ತಾರೆ. ಕೆಲವರು ಕೊಡುಗೆ ರೂಪದಲ್ಲಿ (ಮುಯ್ಯಿ) ವೀಳ್ಯದೆಲೆಯೊಡನೆ ಹಣವನ್ನು ಕೊಡುವರು, ಇನ್ನೂ ಕೆಲವರು ಅವರ ಮುಂದಿನ ಜೀವನಕ್ಕೆ ಸಹಾಯವಾಗಲೆಂದು ವಸ್ತುಗಳನ್ನು ಕೊಡುವರು.

**ತಲವಾಕಲಿ(ಹೆಬ್ಬಾಗಿಲು) ದಾಟುವುದು:** ತಾಳಿಕಟ್ಟುವ ಕಾರ್ಯಕ್ರಮ ಮುಗಿದ ತಕ್ಷಣ ಮಧುಮಕ್ಕಳನ್ನು ಬಿಡಾರಕ್ಕೆ ಕರೆದುಕೊಂಡು ಹೋಗುತ್ತಾರೆ. ಬಿಡಾರದೊಳಕ್ಕೆ ಹೋಗುವ ಮೊದಲು ದೃಷ್ಟಿ ತೆಗೆದು

ಓಕುಳಿ ನೀರನ್ನು ಆ ಕಡೆ ಈ ಕಡೆ ಚೆಲ್ಲುತ್ತಾರೆ. ನಂತರ ಗುಡಾರ ಅಥವಾ ಮನೆಯೊಳಗಿನ ತಲಬಾಗಿಲನ್ನು ಮದುಮಕ್ಕಳು ಬಲಗಾಲು ಮುಂದಿಟ್ಟು ದಾಟುತ್ತಾರೆ. ಇದನ್ನು ಬುಡ್ಗ ಜಂಗಮರು ತಲವಾಕಲಿ ದಾಟುವುದು ಎಂದು ಕರೆಯುತ್ತಾರೆ.

**ವಡಿಬಾಲು ಕಟ್ವೇದಿ(ಉಡಿಅಕ್ಕಿ ಹಾಕುವುದು)**: ಮದುವಣಗಿತ್ತಿಯನ್ನು ತವರಮನೆಯ ತಂದೆತಾಯಿಗಳು ತಮ್ಮ ಬಿಡಾರದದೊಳಗೆ ಕರೆದುಕೊಂಡು ಹೋಗಿ ಕಂಬಳಿ ಹಾಸಿ ಅದರ ಮೇಲೆ ಕೂಡಿಸಿ, ಕೊರಳಲ್ಲಿ ಅರಿಶಿಣದ ದಾರ ಹಾಕಿ, ತಲೆಗೆ ಕುಂಕುಮವಿಟ್ಟು ಐದಿಡಿಕೆ ಅಕ್ಕಿ, ಕೊಬ್ಬರಿ ಬಟ್ಟಲು, ಅರಿಶಿಣಕೊಂಬು, ಬೆಳ್ಳುಳ್ಳಿ, ಎಲೆಅಡಿಕೆ ಇಟ್ಟು ಉಡಿತುಂಬಿ ಕಳಸದಿಂದ ಆರತಿ ಬೆಳಗುತ್ತಾರೆ.

**ಕುಲದೈವಕ್ಕೆ ಅನ್ನ ದಾಸೋಹ**: ಅಂದು ಮುಂಜಾನೆ ಮುತ್ತೈದೆಯವರೊಂದಿಗೆ ಅಡುಗೆ ಮಾಡುವ ಮೂರು ಕಲ್ಲುಗಳು ತಂದು ಒಲೆ ಮಾಡಿ, ಒಲೆಯ ಹಿಂದೆ ಹುತ್ತದ ಮಣ್ಣಿನಿಂದ ದೃಷ್ಟಿಗೊಂಬೆಯನ್ನು ಮಾಡಿ ಅದಕ್ಕೆ ಕಣ್ಣು, ಮೂಗು, ಮೀಸೆಗೆ ಕೂದಲು ಇಟ್ಟು ವಿಕಾರವಾಗಿ ಮಾಡಿ ಪೂಜಿಸುತ್ತಾರೆ. ಇದಕ್ಕೆ ಗಾಟುಪ್ಪೆ ಎಂದು ಕರೆಯುತ್ತಾರೆ. ಅಡುಗೆ ತಯಾರಿಸುವಾಗ ಉಕ್ಕಿಬರುವ ಬುರುಗನ್ನು ಮೊದಲ ಎಡೆಯಾಗಿ ದೃಷ್ಟಿಗೊಂಬೆಗೆ ಹಾಕುತ್ತಾರೆ. ಕಾರಣ ಏನಾದರೂ ವಿಘ್ನಗಳು ಬಂದರೆ ದೃಷ್ಟಿಗೊಂಬೆ ಪರಿಹರಿಸುತ್ತದೆ ಎಂದು ನಂಬಿದ್ದಾರೆ. ಅಡುಗೆಯಾದ ನಂತರ ಬಂದಂತ ಎಲ್ಲ ಕುಲಸ್ಥರಿಗೆ ಮಾಡಿಸುತ್ತಾರೆ. ಹಿಂದಿನ ಕಾಲದಲ್ಲಿ ಮದುವೆಗೆ ಅಡುಗೆ ಮಾಡಿಸುವ ಪದ್ಧತಿ ಇದ್ದಿಲ್ಲ. ಕುಲದ ಹಿರಿಯರು ತಮ್ಮ ಬಿಡಾರದ ಸುತ್ತಮುತ್ತ ಎಷ್ಟು ಕುಟುಂಬಗಳಿವೆಯೋ ಅಷ್ಟು ಕುಟುಂಬಗಳನ್ನು ಲೆಕ್ಕ ಹಾಕಿಕೊಂಡು ವರನ ತಂದೆಯಿಂದ ಅಕ್ಕಿ, ಬೇಳೆ, ಹೆಂಡಕ್ಕೆ ಎಷ್ಟು ಬೇಕೋ ಅಷ್ಟು ಹಣವನ್ನು ಕೊಡುತ್ತಿದ್ದರು. ಇದನ್ನು ಕುಲಾಚಾರ ಎಂದು ಕರೆಯುತ್ತಾರೆ. ಇತ್ತೀಚೆಗೆ ಅಡುಗೆ ಮಾಡಿಸುವ ಪರಿಪಾಟ ಪ್ರಾರಂಭವಾಗಿದೆ.

**ಮದುಮಕ್ಕಳಿಗೆ ಅರಿಷಿಣ ನೀರು ಹಾಕುವುದು**: ಸಂಜೆ ಮದುಮಗಳನ್ನು ಮನೆ ತುಂಬಿಸಿಕೊಳ್ಳುವ ಕಾರ್ಯಕ್ರಮವಿರುತ್ತದೆ. ಹೆಣ್ಣಿನ ಗುಡಾರದ ಹಂದರ ಕೆಳಗೆ ಕರಿ ಕಂಬಳಿಯನ್ನು ಹಾಸಿ ಅದರಮೇಲೆ ಅರಿಷಿಣ ಅಕ್ಕಿಯಿಂದ ಸೂರ್ಯ ಚಂದ್ರ ವಿರುವ ಷಾಸ(ಹಸೆ ಚಿತ್ರವನ್ನು)ವನ್ನು ಹಾಕಿ ಅದರಮೇಲೆ ಒನಕೆಯನ್ನು ಇಡುತ್ತಾರೆ. ಆ ಒನಕೆಯ ಮೇಲೆ ಮದುಮಕ್ಕಳನ್ನು ಕೂಡಿಸಿ ಅವರಿಗೆ ಎರಡಾಣೆ (ಬೇಡ) ನಾಣ್ಯ ಇಟ್ಟು ಬ್ರಹ್ಮಗಂಟನ್ನು ಹಾಕಿ, ಮೈಗೆ ಎಣ್ಣೆ ಅರಿಷಿಣ ಹಚ್ಚಿ ನೀರು ಹಾಕುತ್ತಾರೆ. ಮುತ್ತೈದೆಯರು ಸ್ನಾನ ಮಾಡಿಸಿ ಹೊಸ ಬಟ್ಟೆಯನ್ನು ತೊಡಿಸುತ್ತಾರೆ.

**ಗಂಡಿನ ಮನೆಗೆ ಕಳಿಸುವುದು**: ಅರಿಷಿಣ ನೀರು ಹಾಕಿದ ನಂತರ ಮದುಮಕ್ಕಳಿಗೆ ಹೊಸಬಟ್ಟೆಗಳನ್ನು ತೊಡಿಸುತ್ತಾರೆ. ನಂತರ ಬ್ರಹ್ಮಗಂಟು ಹಾಕಿ ಮದುಮಗನ ಕೈಗೆ ನಿಂಬೆಹಣ್ಣು, ಸಣ್ಣಕತ್ತಿ ಕೊಟ್ಟು ಸಾಯಂಕಾಲ ತಮ್ಮ ಸಂಪ್ರದಾಯಿಕ ವಾದ್ಯಗಳೊಂದಿಗೆ ಮೆರವಣಿಗೆಯ ಮೂಲಕ ಗಂಡಿನ ಮನೆಗೆ ಕಳಿಸುವರು. ಆ ಸಮಯದಲ್ಲಿ ಮದುಮಕ್ಕಳ ಮೇಲೆ ಬಿಸಿಲಿನ ಕಿರಣಗಳು ಬೀಳಬಾರದೆಂದು ಒಂದು ವಸ್ತ್ರ ಅಥವಾ ಛತ್ರಿಯಿಂದ ನೆರಳು ಹಿಡಿದುಕೊಂಡು ಹೋಗುತ್ತಾರೆ. ಈ ಸಂದರ್ಭದಲ್ಲಿ ತವರುಮನೆಯವರು ಮಗಳನ್ನು ಗಂಡನ ಮನೆಗೆ ಕಳುಹಿಸುವಾಗ ದುಂಖಿಸುತ್ತಾರೆ.

**ಕಲಿಕುಂಡ ದೇವದಿ (ಹಂಬ್ಲಿ ಗಡಿಗೆಯಲ್ಲಿ ಹುಡುಕುವುದು):** ಮದುಮಕ್ಕಳು ಮರವಣಿಗೆಯ ಮೂಲಕ ಗಂಡಿನ ಗುಡಾರಕ್ಕೆ ಬರುವಷ್ಟರೊಳಗಾಗಿ ಗುಡಾರದ ಹಂದರ ಹಾಕಿದ ಬಲಗಂಬದ ಹತ್ತಿರ ಸಗಣಿಯಿಂದ ಸಾರಿಸಿ, ಒಂದು ಗಡಿಗೆಯಲ್ಲಿ ಅಕ್ಕಿ ತೊಳೆದ ನೀರು ಹಾಕಿ ಪೂಜೆ ಮಾಡುತ್ತಾರೆ. ಪೂರ್ವದಲ್ಲಿ ಆ ಗಡಿಗೆಯಲ್ಲಿ ಈಚಲ ಹೆಂಡ ಹಾಕುತ್ತಿದ್ದರಂತೆ ಈಗ ಸಿಗದಿರುವುದರಿಂದ ಅಕ್ಕಿ ತೊಳೆದ ನೀರನ್ನು ಬಳಸುತ್ತಾರೆ. ಗಡಿಗೆಯಲ್ಲಿ ಬೆಳ್ಳಿ, ಬಂಗಾರ ಆಭರಣಗಳನ್ನು ಹಾಕಿ ಮೂರು ಬಾರಿ ಹುಡುಕಲು ಮದುಮಕ್ಕಳನ್ನು ಬಿಡುತ್ತಾರೆ*(ಛಾ:೫.೧೨)*. ಆ ಮದುಮಕ್ಕಳು ಹುಡುಕುವಾಗ ಮೊದಲು ಯಾರಕ್ಕೆಗೆ ಏನು ಸಿಗುತ್ತದೆಯೋ ಅದನ್ನು ತೋರಿಸುವರು. ಗಂಡಿಗೆ ಬಂಗಾರದ್ದು, ಹೆಣ್ಣಿಗೆ ಬೆಳ್ಳಿಯದು ಸಿಕ್ಕರೆ ಒಳ್ಳೆಯದು. ಗಂಡಿಗೆ ಸಿಕ್ಕು ಹೆಣ್ಣಿಗೆ ಸಿಗದಿದ್ದರೂ ಒಳ್ಳೆಯದು. ಇಬ್ಬರಿಗೂ ಬಂಗಾರದ ಆಭರಣ ಸಿಕ್ಕರೆ ಒಳ್ಳೆಯದು. ಆದರೆ ಹೆಣ್ಣಿಗೆ ಸಿಕ್ಕು ಗಂಡಿಗೆ ಸಿಗದಿದ್ದರೆ ಮತ್ತು ಇಬ್ಬರಿಗೂ ಸಿಗದಿದ್ದರೂ ಕೆಟ್ಟದು ಎಂದು ನಂಬುತ್ತಾರೆ. ಇದನ್ನು ಕಲಿಕುಂಡ ಎಂದು ಕರೆಯುತ್ತಾರೆ. ನಂತರ ಗಂಡಿನ ಮನೆಗೆ ಹೆಣ್ಣಿನ ಬಲಗಾಲು, ಗಂಡಿನ ಎಡಗಾಲು ಇಟ್ಟು ಮನೆಬಾಗಿಲನ್ನು ದಾಟುತ್ತಾರೆ. ಆಗ ಹುಡುಗಿಯ ತಂದೆ ತಾಯಿಗಳು ಹುಡುಗನ ತಂದೆತಾಯಿಗಳಿಗೆ; ನೋಡಪ್ಪ ನನ್ನ ಮಗಳು ಅಲ್ಲ; ಇನ್ನೂಮುಂದೆ ನಿನ್ನ ಮಗಳು, ಅವಳೇನಾದರೂ ತಪ್ಪುಒಪ್ಪು ಮಾಡಿದರೆ ತಿದ್ದಿಬುದ್ಧಿಹೇಳಿ ಸರಿಪಡಿಕೊಂಡು ಹೋಗಬೇಕೆಂದು ಕೇಳಿಕೊಳ್ಳುತ್ತಾನೆ. ನಂತರ ಗಂಡಿನ ಮನೆಯಲ್ಲಿ ಮುತ್ತೈದೆಯರ ಜೊತೆಯಲ್ಲಿ ರಾತ್ರಿ ನಿದ್ದೆ ಮಾಡಿಸುತ್ತಾರೆ.

**ಮೂರನೇಯ ದಿನ ವಿವಾಹ ಕಾರ್ಯಕ್ರಮಗಳು**

ಬುಡ್ಗ ಜಂಗಮರಲ್ಲಿ ವಿವಾಹದ ಮೂರನೇ ದಿನದಂದು ನವ ಮದುಮಕ್ಕಳಿಗೆ ಅರಿಷಿಣ ನೀರು ಹಾಕುವುದರಿಂದ ಹಿಡಿದು ವಡಿಬಾಲು(ಅನ್ನ ಪರೀಕ್ಷೆ) ಕಾರ್ಯ, ತಲಮಾಡು ಷಾಸಮಾಡು ಕಟ್ಟಡ ಕಟ್ಟಿಸುವದು, ಪಂದ್ಯರ ತಿಪ್ಪೆಸೆದಿ (ಹಂದರ ತಿರುವಿ ಹಾಕುವುದು)ಕಾರ್ಯ, ನಾಗೋಲಿ (ಬೇಟೆ ಕೊಯ್ಯುವ ಕಾರ್ಯಕ್ರಮ), ಪ್ರಸ್ಥ(ಸೋಬಾನ) ಕಾರ್ಯಕ್ರಮ, ಬೊಟ್ಟು ಪೆಟ್ಟುಕೊನೆದಿ(ಕುಂಕುಮ ಭಂಡಾರ ಇಟ್ಟುಕೊಳ್ಳುವುದು) ಕಾರ್ಯಕ್ರಮದಿಂದ ಇವರ ವಿವಾಹದ ಆಚರಣೆ ಮುಕ್ತಾಯವಾಗುವುದನ್ನು ನೋಡಬಹುದು.

**ಅರಿಷಿಣ ನೀರು ಹಾಕುವುದು:** ಮರುದಿನ ಬೆಳಿಗ್ಗೆ ವರನ ಮನೆಯಮುಂದೆ ಕರಿಕಂಬಳಿಯ ಮೇಲೆ ಹಸೆ ಹಾಕಿ ಅದರ ಮೇಲೆ ನಾಲ್ಕು ಒನಕೆಗಳನ್ನು ಇಟ್ಟು, ಒನಕೆಯ ಮೇಲೆ ಹೆಣ್ಣಿನ ತಂದೆತಾಯಿಗಳು, ಗಂಡಿನ ತಂದೆತಾಯಿಗಳು, ಕಳಸ ಹಿಡಿಯುವ ಮುತ್ತೈದೆಯರು ಮತ್ತು ಮದುಮಕ್ಕಳನ್ನು ಕೂಡಿಸಿ ಬ್ರಹ್ಮಗಂಟು ಹಾಕಿ, ಅರಿಷಿಣ ಹಚ್ಚಿ ಕಳಸದಿಂದ ಬೆಳಗುತ್ತಾರೆ. ನಂತರ ಕರಿಕಂಬಳಿ ತೆಗೆದು ಒನಕೆಯಮೇಲೆ ಮೂರುಜೋಡಿಗಳನ್ನು ಕೂಡಿಸಿ ಎಣ್ಣೆಹಚ್ಚಿ ನೀರು ಹಾಕುತ್ತಾರೆ. ಗಂಡಿನಕಡೆಯಿಂದ ತಂದ ಹೊಸಬಟ್ಟೆಗಳನ್ನು ಹೆಣ್ಣಿನ ತಂದೆ ತಾಯಿಗಳಿಗೆ ಕೊಡುತ್ತಾರೆ. ನಂತರ ಮೂರು ಜೋಡಿಗಳಿಗೂ ಮತ್ತೆ ಬ್ರಹ್ಮಗಂಟು ಹಾಕಿ ಕಲಿಕುಂಡದ ಹತ್ತಿರ ಕರೆದುಕೊಂಡು ಹೋಗಿ ವಡಿಬಾಲು ಅನ್ನವನ್ನು ಸೇವಿಸುವ ಪದ್ಧತಿಯನ್ನು ಆಚರಿಸುತ್ತಾರೆ.

**ವಡಿಬಾಲು(ಅನ್ನ ಪರೀಕ್ಷೆ):** ತವರು ಮನೆಯವರು ಹಾಕಿದ ಉಡಕ್ಕಿಯ ಅಕ್ಕಿಯನ್ನು ತೆಗೆದು ಅರಿಷಿಣ, ಹೆಸರುಬ್ಯಾಳೆ ಕಲಿಸಿ ಅನ್ನವನ್ನು ತಯಾರಿಸುತ್ತಾರೆ. ಈ ವಡಿಬಾಲು ಅನ್ನವನ್ನು ನಾಲ್ಕು ಜೋಡಿಗಳಿಗೂ ಪ್ರತ್ಯೇಕವಾದ ಎಲೆಯಲ್ಲಿ ಹಾಕಿ ಪ್ರತಿಯೊಂದು ಜೋಡಿಯು ಪರಸ್ಪರ ಒಬ್ಬರಿಗೊಬ್ಬರಿಗೂ ತಿನ್ನಿಸುತ್ತಾರೆ. ನಂತರ ಮಕ್ಕಳಿಗೆ ಊಟ ಮಾಡಿಸುವರು. ಇದನ್ನು ಅನ್ನ ಪರೀಕ್ಷೆ ಎಂದು ಕರೆಯುತ್ತಾರೆ. ಅಥವಾ ವಡಿಬಾಲು ಅನ್ನಂ, ಉಡಿಅಕ್ಕಿ ಊಟ ಎಂದು ಕರೆಯುತ್ತಾರೆ. ನಂತರ ಕಲಿಕುಂಡದ ನೀರನ್ನು ಜಂಭೆಗಿಡಕ್ಕೆ ಹಾಕಿ ಬರುತ್ತಾರೆ.

**ತಲಮಾಡು, ಷಾಸಮಾಡು ಕಟ್ಟಡ:** ಮದುವೆಯ ಮನೆಯ ಮುಂದೆ ಹಂದರ(ಚಪ್ಪರ) ಮತ್ತು ಹಸೆ ಹಾಕಿದ ತೆರಿಗೆಯನ್ನು ತಲಮಾಡು, ಷಾಸಮಾಡು ಕಟ್ಟಡ ಎಂದು ಕರೆಯುತ್ತಾರೆ. ಇದನ್ನು ಗಂಡಿನವರಿಗೆ ೧೦೦೧, ಹೆಣ್ಣಿನವರಿಗೆ ೫೦೧ ರೂಪಾಯಿ ಕಟ್ಟಡವನ್ನು ಕುಲಸ್ತರು ತೆಗೆದುಕೊಳ್ಳುತ್ತಾರೆ. ಇದನ್ನು ಮದುವೆಗೆ ಬಂದಂತ ಸಮಸ್ತ ಕುಲಸ್ತರಿಗೆ ಒಂದೊಂದು ರೂಪಾಯಿಯಾಗಲಿ ಹಂಚಿಕೊಳ್ಳುತ್ತಾರೆ. ಇದನ್ನು ಕುಲದ ಆಚಾರ ಎಂದು ಕರೆಯುತ್ತಾರೆ. ನಂತರ ಕಳಸ ಹಿಡಿದ ಮುತ್ತೈದೆಯರಿಗೆ ಮತ್ತು ವಾದ್ಯಮೇಳದವರಿಗೆ ಪ್ರತ್ಯೇಕವಾಗಿ ತಿಳಿದಷ್ಟು ಕಾಣಿಕೆಯನ್ನು ಕೊಡುತ್ತಾರೆ.

**ಪಂದ್ಯರ ತಿಪ್ಪೆಸೆದಿ(ಹಂದರ ತಿರುವಿ ಹಾಕುವುದು):** ಒಂದು ಹೆಣ್ಣನ್ನು ಇನ್ನೊಂದು ಮನೆಗೆ ಕಳಿಸಿಕೊಟ್ಟಿದ್ದಾರೆ ಇಲ್ಲಿಗೆ ಮದುವೆ ಕಾರ್ಯಗಳು ಮುಗಿಯಿತು ಎಂದು ಅವರವರ ಮನೆಯ ಮುಂದೆ ಹಾಕಿದ ಚಪ್ಪರವನ್ನು ತಿರುವಿ ಹಾಕುತ್ತಾರೆ ಇದನ್ನು ಪಂದ್ಯರ ತಿಪ್ಪೆಸೆದಿ ಎಂದು ಕರೆಯುತ್ತಾರೆ. ನಂತರ ನಾಗೋಲಿ ಮಾಂಸದ ಊಟದ ಕಾರ್ಯಕ್ರಮ ಮಾಡುತ್ತಾರೆ.

**ನಾಗೋಲಿ (ಬೇಟೆ ಕೊಯ್ಯುವ ಕಾರ್ಯಕ್ರಮ):** ನಾಗೋಲಿ ಕಾರ್ಯವು ಬುಡ್ಗ ಜಂಗಮರ ಮದುವೆಯ ಕೊನೆಯ ದಿನದ ಕಾರ್ಯಕ್ರಮವಾಗಿರುತ್ತದೆ. ಗಾಟುಪ್ಯೆ ಇರುವ ದೃಷ್ಟಿಗೊಂಬೆ ಹತ್ತಿರ ಕುಲಸ್ಥರು ಬೇಟೆಯನ್ನು ಕೊಯ್ದು ಆ ರಕ್ತದಿಂದ ಮದುಮಗ ಮದುಮಗಳ ಹಣೆಗೆ ರಕ್ತದ ತಿಲಕವನ್ನಿಡುವನು. ನಂತರ ಕಡ್ಡಾಯವಾಗಿ ಹಾಗೂ ವಿಶೇಷವಾಗಿ ಎಲ್ಲರಿಗೂ ಜೋಡಿಗೊಂದರಂತೆ ಹೆಂಡ-ಸರಾಯಿ ಹಂಚುತ್ತಾರೆ. ನಂತರ ಎಲ್ಲರೂ ಸೇರಿ ಮಾಂಸದ ಊಟ ಮಾಡಿ ಅವರವರ ಊರಿಗೆ ತೆರಳುತ್ತಾರೆ. ನಾಗೋಲಿ ಕಾರ್ಯಕ್ರಮದ ಖರ್ಚನ್ನು ಗಂಡಿನವರು ಎರಡು ಭಾಗ, ಹೆಣ್ಣಿನವರು ಒಂದು ಭಾಗ ಭರಿಸುವರು. ಮದುವೆಗೆ ಬಂದ ಎಲ್ಲ ಕುಲಸ್ಥರಿಗೆ ಊಟ ಉಪಚಾರ ಹೆಂಡ, ಸರಾಯಿ ಅಲ್ಲದೆ ತಮ್ಮ ಬಂದುಬಳಗಕ್ಕೆ ಬಂದುಹೋಗುವ ಬಸ್ ಪ್ರಯಾಣದ ಚಾರ್ಜ್‌ನ್ನು ಕೂಡ ಕೊಟ್ಟುಕಳಿಸುವ ಪದ್ಧತಿ ಇವರಲ್ಲಿ ತಲಾಂತರದಿಂದ ಬಂದಿದೆ.

**ಪ್ರಸ್ಥ(ಸೋಬನ)ಕಾರ್ಯ:** ಈ ಕಾರ್ಯವನ್ನು ಅನ್ಯ ಸಮುದಾಯಗಳಂತೆ ಮೂಹುರ್ತ ಇಟ್ಟುಕೊಂಡು ಇಂತಹ ದಿನದಂದೆ ಮಾಡಿಕೊಳ್ಳಬೇಕೆಂಬ ನಿಯಮ ಇವರಲ್ಲಿಲ್ಲ. ಮದುವೆಯಾದ ನಾಗೋಲಿ ದಿನದಂದೆ ಪ್ರಸ್ತಕಾರ್ಯವನ್ನು ನೆರವೇರಿಸುವರು. ಸೋಬನ ದಿನ ರಾತ್ರಿ ಕುಲಸ್ಥರಿಗೆಲ್ಲಾ ಹೆಂಡ ಸರಾಯಿ ಕೊಟ್ಟು ಊಟಮಾಡಿಸುತ್ತಾರೆ. ರಾತ್ರಿ ವಧುವಿನ ಸೋದರ ಮಾವನಿಂದ ಪ್ರತ್ಯೇಕ ಗುಡಿಸಲನ್ನು

ನಿರ್ಮಿಸುತ್ತಾರೆ. ಯಾರದರೂ ಹಿರಿಯ ಹೆಣ್ಣುಮಕ್ಕಳು ಗುಡಿಸಲೊಳಗೆ ಹೋಗಿ ಅವಳ ಉಡಿಯಲ್ಲಿ ಎರೆಡೆರೆಡು ಕೊಬ್ಬರಿಬಟ್ಟಲು, ಉತ್ತುತ್ತಿ ಹಣ್ಣು, ಹಣ್ಣುಹಂಪಲು, ಸಿಹಿತಿಂಡಿಗಳನ್ನು ಕೊಟ್ಟು ಎಲ್ಲರಿಗೆ ಆಗುವಂತೆ ನಿಮಗೆ ಆಗುತ್ತದೆ. ಇದು ಸ್ವಾಭಾವಿಕವಾದ ಕ್ರಿಯೆ ಎಂದು ಧೈರ್ಯ ಹೇಳಿ ಹೊರಗೆ ಹೋಗುವರು. ಪ್ರತ್ಯೇಕ ಗುಡಾರ ನಿರ್ಮಿಸಿದ ಸೋದರಮಾವನಿಗೆ ಹೆಂಡ ಸರಾಯಿ ಕುಡಿಸುತ್ತಾರೆ.

ಬುಡ್ಗ ಜಂಗಮರಲ್ಲಿ ಬಾಲ್ಯದಲ್ಲಿ ಹೆಚ್ಚು ವಿವಾಹವಾಗುವ ಪದ್ಧತಿ ರೂಢಿಯಲ್ಲಿರುವುದರಿಂದ ಸಾಮಾನ್ಯವಾಗಿ ಮದುವೆಯಾದ ಮೇಲೆಯೇ ಹೆಣ್ಣು ಋತುಮತಿಯಾಗುತ್ತಾಳೆ. ಋತುಮತಿಯಾದ ತಕ್ಷಣ ಗಂಡನ ಮನೆಗೆ ಸುದ್ದಿಯನ್ನು ಹೇಳಿ ಕಳುಹಿಸುತ್ತಾರೆ. ಇಲ್ಲವಾದರೆ ಸ್ವತಃ ಅವಳ ತಂದೆಯೇ ಗಂಡನ ಮನೆಗೆ ಹೋಗಿ ನನ್ನ ಮಗಳು ತಿಂಡಿ ತಿನ್ನುವವುಳಾಗಿದ್ದಾಳೆ. ಬಟ್ಟೆ ಉಡುವವುಳಾಗಿದ್ದಾಳೆ. ಅವಳನ್ನು ಉಡಿ ತುಂಬಿಸಿಕೊಳ್ಳಿರಿ ಎಂದೇಳಿ ಬರುತ್ತಾನೆ. ಒಂದು ಪ್ರಸಕ್ತವಾದ ದಿನವನ್ನು ನೋಡಿ ಉಡಿತುಂಬಿಸಿಕೊಳ್ಳುತ್ತಾರೆ.

**ಬೊಟ್ಟು ಪೆಟ್ಟುಕೊನೆದಿ(ಕುಂಕುಮ ಭಂಡಾರ ಇಟ್ಟುಕೊಳ್ಳುವ ಕಾರ್ಯ):** ಮದುವೆಯಾದ ನಂತರ ಗಂಡನ ಮನೆಗೆ ಬಂದ ನಂತರ ಅವರ ಮನೆದೇವರಿಗೆ ಪೂಜೆ ಮಾಡಿ ಎರಡು ತೆಂಗಿನ ಕಾಯಿ ಹೊಡೆದು ಕುಂಕುಮ ಭಂಡಾರವನ್ನು ಹಚ್ಚುತ್ತಾರೆ. ಮನೆದೇವರ ಭಂಡಾರವನ್ನು ಹಚ್ಚಿಕೊಳ್ಳುವುದರ ಮೂಲಕ ತನ್ನ ತವರುಮನೆಯ ಕುಲ, ಬೆಡಗು ಬದಲಾವಣೆಯಾಗುತ್ತದೆ. ಉದಾಹರಣೆ ಯಡವಲಿ ಬೆಡಗಿನ ಹುಡುಗಿ ಅಶ್ವ ಬೆಡಗು ಆಗಿ ಬದಲಾವಣೆಯಾಗುತ್ತಾಳೆ.

ಈ ಎಲ್ಲಾ ಮದುವೆ ಕಾರ್ಯಗಳನ್ನು ಹಿಂದಿನ ಕಾಲದಲ್ಲಿ ಸಂಜೆ ಅಥವಾ ರಾತ್ರಿ ವೇಳೆಯಲ್ಲಿ ನೆರವೇರಿಸುತ್ತಿದ್ದರು. ಕಾರಣ ಬುಡ್ಗ ಜಂಗಮರು ಮುಖ್ಯವಾಗಿ ಪಶುಪಾಲಕರಾಗಿದ್ದರು. ಹಗಲಲ್ಲಿ ಅಡವಿಯಲ್ಲಿ ದನಗಳನ್ನು ಮೇಯಿಸಲು ಹೋಗುತ್ತಿದ್ದರಿಂದ ಅವುಗಳು ಬರಲು ಸಂಜೆ ಅಥವಾ ರಾತ್ರಿ ವೇಳೆಯಲ್ಲಿ ಆಗುತ್ತಿತ್ತು. ಹೀಗೆ ಪಶುಪ್ರಾಣಿಗಳ ಮತ್ತು ಪ್ರಕೃತಿಯ ಸಮ್ಮುಖದಲ್ಲಿ ಇವರ ವಿವಾಹಗಳು ಸಂಜೆ ಅಥವಾ ರಾತ್ರಿಯಲ್ಲಿ ಜರುಗುತ್ತಿದ್ದವು. ಒಂದುವೇಳೆ ಮದುವೆ ಕಾರ್ಯಗಳನ್ನು ಹಗಲು ಹೊತ್ತಿನಲ್ಲಿ ಮಾಡಿದರೆ ದನಗಳಿಗೆ ಆಹಾರವಿಲ್ಲದೆ ಉಪವಾಸವಿರುತ್ತವೆ. ಹೀಗೆ ವಿಶಿಷ್ಟವಾಗಿ ಬುಡ್ಗ ಜಂಗಮರು ತಮ್ಮ ವಿವಾಹದ ಆಚರಣೆ ಮಾಡುತ್ತಿರುವುದು ಕಾಣಬಹುದು.

ಬುಡ್ಗ ಜಂಗಮರಲ್ಲಿ ಇಂದು ವಿವಾಹಗಳು ಆಧುನಿಕತೆಯ ಮತ್ತು ಅನ್ಯ ಸಮುದಾಯದ ಪ್ರಭಾವಗಳಿಂದಾಗಿ ಶಾಮಿಯಾನ ಹಾಕುವುದು. ಬಾಸಿಂಗ ಕಟ್ಟುವುದು, ಮುತ್ತಿನ ದಂಡೆ ಕಟ್ಟುವುದು ಇತ್ಯಾದಿ ಬದಲಾವಣೆಗಳು ಆಗಿರುವುದು ಆಚರಣೆಗಳಲ್ಲಿ ಕಾಣಬಹುದು.

**ಮ್ಯಾರ:** ಚಾಪೆಯ ಮೇಲೆ ಆಡಿದ ಮಾತಿನ ಪ್ರಕಾರ ಅಳಿಯನು ಎಷ್ಟು ವರ್ಷ ಒಪ್ಪಿಕೊಂಡಿರುತ್ತಾನೆಯೋ ಅಷ್ಟು ದಿನ ಮಾವನ ಅಧೀನದಲ್ಲಿರಬೇಕಾಗುತ್ತದೆ. ಹೀಗೆ ಮಾವನ ಹಿಂದೆ ತಿರುಗುವದನ್ನು 'ಮ್ಯಾರ' ಎಂದು ಕರೆಯುತ್ತಾರೆ. ಈ ಸಮಯದಲ್ಲಿ ಅತ್ತೆ ಮಾವಂದಿರಿಗೆ ಚಾಕರಿ ಮಾಡಬೇಕು.

**ಪೊಟ:** ಮ್ಯಾರ ಸಮಯದಲ್ಲಿ ಅಳಿಯನು ಅತ್ತೆಮಾವ, ಹೆಂಡತಿಯನ್ನು ಸರಿಯಾಗಿ ನೋಡಿಕೊಳ್ಳದಿದ್ದರೆ, ಅದು ರುಜುವಾಗಲು ಪೊಟ ಏರ್ಪಡಿಸುವರು. ಪೊಟ ಎಂದರೆ ಕುಟುಂಬದ ಹಿಂದೆ ಒಬ್ಬ ಕುಲಸ್ಥನನ್ನು

ನೋಡಿಕೊಳ್ಳಲು ನೇಮಿಸುತ್ತಾರೆ. ಅವನು ಈ ಕುಟುಂಬವು ದೇಶ ತಿರುಗಿದಂತೆಲ್ಲ ಅವರ ಹಿಂದೆ ಹಿಂದೆ ಸುತ್ತುತ್ತಾ ಉಭಯರ ಗುಣ ಅವಗುಣಗಳನ್ನು ಪರೀಕ್ಷಿಸುತ್ತಾನೆ. ಆ ಹಿರಿಯನ ಊಟ ಉಪಚಾರದ ಖರ್ಚು ಮ್ಯಾರ ತಿರುಗುವ ಕುಟುಂಬದ್ದಾಗಿರುತ್ತದೆ. ಹೀಗೆ ಹಿಂದೆ ಸುತ್ತುವಾಗ ಯಾರದು ತಪ್ಪಿರುತ್ತದೆಯೋ ಅವರಿಗೆ ತಿದ್ದಿಬುದ್ಧಿ ಹೇಳುತ್ತಾರೆ. ಅಷ್ಟರಲ್ಲಿ ಮಾವನಿಗೆ ಅಳಿಯ ಚೆನ್ನಾಗಿ ನೋಡಿಕೊಳ್ಳುತ್ತಾನೆ ಎಂದು ಖಾತ್ರಿಯಾದರೆ ಮ್ಯಾರವನ್ನು ಅಲ್ಲಿಗೆ ಕಡಿತಗೊಳಿಸಿ ಸ್ವೇಚ್ಛೆಯಾಗಿ ಗಂಡಹೆಂಡತಿಯರನ್ನು ಬದುಕಲು ಕಳುಹಿಸುತ್ತಾರೆ. ಹೀಗೆ ಬುಡ್ಗ ಜಂಗಮರಲ್ಲಿ ವಿವಾಹವು ಈ ರೀತಿಯ ವಿಶಿಷ್ಟವಾದ ಆಚರಣೆಗಳೊಂದಿಗೆ ಸಾಮಾಜಿಕ ಸಂಬಂಧಗಳನ್ನು ಗಟ್ಟಿಗೊಳಿಕೊಂಡಿದ್ದಾರೆ.

ಶಿಷ್ಟ ಹಾಗೂ ಅನ್ಯ ಸಮುದಾಯದಲ್ಲಿ ಹೆಣ್ಣಿನ ಮನೆಯಲ್ಲಿ ನಿಶ್ಚಿತಾರ್ಥ ಮಾಡಿದರೂ ಅದರ ಖರ್ಚನ್ನು ಹೆಣ್ಣಿನ ಕಡೆಯವರೇ ಭರಿಸುತ್ತಾರೆ. ಗಂಡಿನ ಕಡೆಯವರು ಭರಿಸುವುದು ಹೆಚ್ಚಾಗಿ ಕಂಡುಬರುವುದಿಲ್ಲ. ವರದಕ್ಷಿಣೆ ನೀಡುವುದು, ಮದುವೆಯ ಖರ್ಚು, ಸೀಮಂತ ಕಾರ್ಯದ ಖರ್ಚು, ಇತ್ಯಾದಿ ಕಾರ್ಯಗಳ ಖರ್ಚನ್ನು ಹೆಣ್ಣಿನ ಮನೆಯವರೇ ಭರಿಸುವುದು ಕಾಣಬಹುದು. ಮತ್ತು ಭಾಮೈದ ಅಥವಾ ಭಾವ ಆದವನಿಗೆ ಮದುವೆಯಲ್ಲಿ ಬಂಗಾರದ ಆಭರಣ ಹಾಕುವುದು, ಹುಟ್ಟಿದ ಮಗುವಿಗೆ ಬಂಗಾರದ ಆಭರಣ ಹಾಕುವುದು ಇತ್ಯಾದಿ ಖರ್ಚುಗಳನ್ನು ಹೆಣ್ಣಿನ ಮನೆಯವರು ಭರಿಸಿಸುವುದು ಕಾಣುತ್ತೇವೆ. ಆದರೆ ಬುಡ್ಗ ಜಂಗಮರು ಶಿಷ್ಟ ಸಮಾಜದ ತದ್ವಿರುದ್ಧವಾಗಿ ಆಚರಣೆಗಳನ್ನು, ನಿಯಮಗಳನ್ನು ಕಾಣಬಹುದು. ಇವರಲ್ಲಿ ಕನ್ಯಾ ನಿಶ್ಚಿತಾರ್ಥ ಕಾರ್ಯದಿಂದ ಹಿಡಿದು ಹೆಣ್ಣು ಮದುವೆಯಾಗಿ ತಾಯಿಯಾಗುವರೆಗೂ ಎಲ್ಲಾ ಖರ್ಚುವೆಚ್ಚಗಳನ್ನು ಗಂಡಿನ ಮನೆಯವರೇ ಭರಿಸುತ್ತಾರೆ. ಕನ್ಯೆಯನ್ನು ನಿಶ್ಚಯ ಮಾಡುವಾಗ ಹೆಣ್ಣು ಇರುವ ಮನೆಯಲ್ಲಿಯೇ ಹೋಗಿ ನಿಶ್ಚಿತಾರ್ಥ ಮಾಡಿಕೊಳ್ಳಬೇಕಾಗುತ್ತದೆ. ಶುಭ ಕಾರ್ಯಗಳಿಗೆ ಆಗಮಿಸಿದ ಅವರ ಬಂಧುಬಳಗದವರಿಗೆ ಬಂದು ಹೋಗುವ ಪ್ರಯಾಣದ ಖರ್ಚುವೆಚ್ಚಗಳನ್ನು ಕೂಡ ಗಂಡಿನ ಮನೆಯವರೇ ನೋಡಿಕೊಳ್ಳುತ್ತಾರೆ. ಬುಡ್ಗ ಜಂಗಮರಲ್ಲಿ ಹೆಣ್ಣು ಹೆತ್ತವರಿಗೆ ಗೌರವಾಧರಗಳು ನೀಡುವುದು ಕಂಡುಬರುತ್ತವೆ. ಇತ್ತೀಚಿನ ದಿನಗಳಲ್ಲಿ ಆಧುನಿಕ ಮತ್ತು ಅನ್ಯ ಸಮುದಾಯದ ಪ್ರಭಾವದಿಂದ ಇವರಲ್ಲಿ ವರದಕ್ಷಿಣೆ ಪದ್ಧತಿಯನ್ನು ಅಲ್ಲಲ್ಲಿ ಕಾಣಬಹುದು.

**ಬಹುಪತ್ನಿತ್ವ ವಿವಾಹ:** ಬುಡ್ಗ ಜಂಗಮ್ ಸಮುದಾಯದಲ್ಲಿ ಮೊದಲಿನಿಂದಲೂ ಬಹುಪತ್ನಿತ್ವ ಪದ್ಧತಿ ಸಾಮಾನ್ಯವಾಗಿದೆ. ಮೊದಲ ಹೆಂಡತಿಯು ಅನಾರೋಗ್ಯದಿಂದ ನರಳುತ್ತಿದ್ದರೆ, ಮಕ್ಕಳಾಗದಿದ್ದರೆ, ಆರ್ಥಿಕ ಸಹಾಯಕ್ಕಾಗಿ ದುಡಿಮೆ ಮಾಡಿಕೊಳ್ಳಲು ಇನ್ನೊಂದು ಮದುವೆಯಾಗುವ ಪದ್ಧತಿ ಇವರಲ್ಲಿದೆ. ಇವರಲ್ಲಿ ಅಂತರ್ ಜಾತಿಯ ವಿವಾಹಕ್ಕೆ ಸಮ್ಮತಿ ನೀಡುವುದಿಲ್ಲ. ಇತ್ತೀಚಿನ ದಿನಗಳಲ್ಲಿ ಅಂತರ್ ಜಾತಿಯ ವಿವಾಹಗಳು ಅಲಲ್ಲಿ ಕಂಡುಬರುತ್ತಿವೆ.

**ಸೂಲು ಪುಡಿಸೆದಿ ಅಥವಾ ಕುಸಪೆಟ್ಟೇದಿ(ಸೀಮಂತ ಕಾರ್ಯ)**

ಈ ಕಾರ್ಯವು ಇತ್ತೀಚಿನ ದಿನಗಳಲ್ಲಿ ಅನ್ಯ ಸಮುದಾಯಗಳ ಪ್ರಭಾವದಿಂದ ಇವರಲ್ಲಿ ಕೂಡ ಸೀಮಂತ ಕಾರ್ಯ ಆಚರಿಸುತ್ತಿದ್ದಾರೆ. ಹಿಂದಿನ ಕಾಲದಲ್ಲಿ ಈ ಕಾರ್ಯ ಇವರಲ್ಲಿಲಿಲ್ಲ. ಮದುವೆಯಾದ

ಗೃಹಿಣಿಯು ಗರ್ಭಾವತಿಯಾದಾಗ ಐದು ಅಥವಾ ಏಳು ತಿಂಗಳಲ್ಲಿ ಮಾಡುವ ಆಚರಣೆಯನ್ನು ಸೀಮಂತ ಕಾರ್ಯ ಎಂದು ಕರೆಯುತ್ತಾರೆ. ತವರು ಮನೆಯವರು ಗಂಡನ ಮನೆಗೆ ಬಂದು ಆಚರಿಸುವ ಆಚರಣೆಯಾಗಿದೆ. ಈ ಕಾರ್ಯಕ್ರಮದಲ್ಲಿ ಗರ್ಭಾವತಿಯಾದ ಗೃಹಿಣಿಯನ್ನು ಒಂದು ವೇದಿಕೆಮೇಲೆ ಕೂಡಿಸಿ, ಅರಿಷಿಣ ಕುಂಕುಮ, ಹಸಿರುಸೀರೆ, ಬಳೆಗಳನ್ನು ತೊಡಿಸಿ, ಹೂವಿನ ಹಾರ ಹಾಕಿ ಆರತಿ ಬೆಳಗಿ ಆಚರಿಸುತ್ತಾರೆ. ಬಂಧುಬಳಗದವರೆಲ್ಲರೂ ವಿವಿಧ ಸಿಹಿ ಖಾದ್ಯದ ಅಡುಗೆಯನ್ನು ಮಾಡಿಕೊಂಡು ಬಂದು ಕೊಡುತ್ತಾರೆ. ನಂತರ ಬಟ್ಟೆಬರೆಗಳನ್ನು ಮುಯ್ಯಮಾಡುವರು. ಈ ಕಾರ್ಯವು ಮುಗಿದ ನಂತರ ತವರಮನೆಗೆ ಕರೆದುಕೊಂಡು ಹೋಗುತ್ತಾರೆ.

**ಶವಸಂಸ್ಕಾರದ ಆಚರಣೆಗಳು**

ಪ್ರಕೃತಿಯಲ್ಲಿ ಜನಿಸಿದ ಪ್ರತಿಯೊಂದು ಜೀವಿಗೂ ಹುಟ್ಟು ಎಷ್ಟು ಸಹಜವೊ ಸಾವೂ ಕೂಡ ಅಷ್ಟೇ ಸಹಜವಾದದ್ದು. ಸಾವು ಭೂಮಿಯಮೇಲೆ ಜನ್ಮ ತಾಳಿರುವ ಪ್ರತಿಯೊಂದು ಜೀವರಾಶಿಗಳಿಗೂ ಇರುತ್ತದೆ. ಅದು ಸೃಷ್ಟಿಯ ನಿಯಮವೂ ಹೌದು. ಮನುಷ್ಯನ ಜೀವನಾವರ್ತಕ ಆಚರಣೆಗಳಲ್ಲಿ ಕೊನೆಯ ಆಚರಣೆಯಾದ ಶವಸಂಸ್ಕಾರದ ಆಚರಣೆಯು ಒಂದಾಗಿದೆ. ಆದ್ದರಿಂದ ಅದನ್ನು ಅಂತ್ಯ (ಕೊನೆಯ) ಸಂಸ್ಕಾರವೆಂದು ಕರೆಯುತ್ತಾರೆ. ಪ್ರತಿಯೊಂದು ಅಲೆಮಾರಿ ಸಮುದಾಯಗಳಲ್ಲಿ ತಮ್ಮದೇಯಾದ ಸಮುದಾಯದ ಪದ್ಧತಿಗೆ ಅನುಸಾರವಾಗಿ ಶವಸಂಸ್ಕಾರವನ್ನು ಮಾಡುತ್ತಾರೆ. ಅದರಲ್ಲಿಯು ಬುಡ್ಗ ಜಂಗಮರು ಅಲೆಮಾರಿಗಳಾದರು ವಿಶಿಷ್ಟವಾಗಿ ಆಚರಿಸುವುದನ್ನು ಕಾಣಬಹುದು.

ಬುಡ್ಗ ಜಂಗಮರಲ್ಲಿ ಸತ್ತವರು ದೈವರಾಗುತ್ತಾರೆಂಬ ನಂಬಿಕೆಯು ಇರುತ್ತದೆ. ಸಾವು ಒಂದು ಪ್ರಕೃತಿದತ್ತವಾದ ಕ್ರಿಯೆ. ಮನುಷ್ಯ ಬದುಕಿರುವಾಗ ಸಮಾಜದ ಒಂದು ಅಂಗವಾಗಿರುತ್ತಾನೆ. ಅಲ್ಲಿ ಸಾಮಾಜಿಕ ಸಂಬಂಧಗಳನ್ನು ಹೊಂದಿ, ಏರಿಳಿತಗಳನ್ನೂ ಅನುಭವಿಸುತ್ತಾನೆ. ಆ ಅನುಭವಗಳನ್ನು ಅವನಿಗೆ ನೀಡಿದ ಸಮಾಜವೊಂದಿರುತ್ತದೆ ಎಂಬುದನ್ನು ಮರೆಯುವಂತಿಲ್ಲ. ವ್ಯಕ್ತಿ ಸತ್ತರೂ, ಅವು ಹಾಗೆಯೇ ಜೀವಂತಿಕೆಯ ಪಳಿಯುಳಿಕೆಗಳಾಗಿ ಉಳಿದುಕೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ಸಾವಿಗೆ ಸಂಬಂಧಿಸಿದಂತೆ ಮಾಡಲಾಗುವ ವಿಧಿವಿಧಾನಗಳನ್ನೇ ಶವಸಂಸ್ಕಾರ ಎಂದು ಕರೆಯಲಾಗುವುದು. ಶವಸಂಸ್ಕಾರದ ಆಚರಣೆಯಲ್ಲಿ ಎರಡು ವಿಧದಲ್ಲಿ ಕಾಣಬಹುದು. ಒಂದು ದೇಹ ಸಂಸ್ಕಾರ ಹಾಗೂ ಆತ್ಮ ಸಂಸ್ಕಾರ ಆಚರಣೆಗಳೆಂದು ಗುರುತಿಸಲಾಗಿದೆ. ದೇಹವನ್ನು ಮಣ್ಣುಮಾಡುವವರೆಗೆ ನಡೆಯುವ ಕ್ರಿಯೆಗಳು ದೇಹ ಸಂಸ್ಕಾರಕ್ಕೆ ಸಂಬಂಧಪಟ್ಟರೆ ಈ ಕ್ರಿಯೆ ಆನಂತರದಲ್ಲಿ ನಡೆಯುವ ಸಂಪ್ರದಾಯ ಕ್ರಿಯೆಗಳು ಆತ್ಮಸಂಸ್ಕಾರಕ್ಕೆ ಸಂಬಂಧಪಟ್ಟ ಆಚರಣೆಗಳಾಗಿವೆ. ಇಲ್ಲಿ ದೇಹ ಮಾತ್ರ ಸಾಯುತ್ತದೆ. ಆತ್ಮ ಈ ಬಂಧನದಿಂದ ಬಿಡುಗಡೆಯಾಗಿ ಮತ್ತೊಂದೆಡೆ ಹೋಗಲು ಅನುವು ಮಾಡುವ ಆಚರಣೆಯಾಗಿರುತ್ತದೆ.

ಅಂತ್ಯ ಸಂಸ್ಕಾರದ ಆಚರಣೆಗಳಲ್ಲಿ ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತದೆ. ಕೆಲವರು ಶವವನ್ನು ಹೂಳುವ ಪದ್ಧತಿಯಿದ್ದರೆ ಇನ್ನೂ ಕೆಲವರು ಸುಡುತ್ತಾರೆ.

ಇನ್ನೂ ಬಾಣಂತಿಯರು, ಬಸುರಿಯವರು, ತೊನ್ನುರೋಗ ಇದ್ದವರನ್ನು ಸಾಮಾನ್ಯವಾಗಿ ಸುಡುತ್ತಾರೆ ಇಲ್ಲದಿದ್ದರೆ ಬಾರ್ಲ ಮಲಗಿಸಿ ಹೂಳುತ್ತಾರೆ.

ಸಾಮಾನ್ಯವಾಗಿ ವ್ಯಕ್ತಿ ಪ್ರಾಣ ಬಿಡುವ ಸಂದರ್ಭದಲ್ಲಿ ಮಕ್ಕಳು ಮತ್ತು ಸಮೀಪದ ಬಂಧುಗಳು ಬಾಯಲ್ಲಿ ನೀರು ಹಾಕುವ ಕ್ರಮವನ್ನು ಕಾಣಬಹುದು. ಪ್ರಾಯಶಃ ಪ್ರಾಣ ಹೋಗುವ ವ್ಯಕ್ತಿಗೆ ಕೊನೆಗಳಿಗೆಯಲ್ಲಿ ನೀರು ಹಾಕಿ ತನ್ನ ಋಣವನ್ನು ತೀರಿಸಿಕೊಂಡೆ ಎಂಬ ನಂಬಿಕೆಯನ್ನು ಬುಡ್ಗ ಜಂಗಮರಲ್ಲಿ ಕಾಣಬಹುದು.

ಬುಡ್ಗ ಜಂಗಮರು ಶವವನ್ನು ಉತ್ತರ ದಿಕ್ಕಿಗೆ ಪದ್ಮಾಸನದಲ್ಲಿ ಕೂಡಿಸಿ ಹಣೆಗೆ ವಿಭೂತಿ, ಕುಂಕುಮ ಹಚ್ಚಿ, ಬಾಯಲ್ಲಿ ವಿಭೂತಿ ರುದ್ರಾಕ್ಷಿ ಇಟ್ಟು, ಕೈಯಲ್ಲಿ ವಿಭೂತಿ ಉಂಡೆಯನ್ನು ಇಟ್ಟು ಪಕ್ಕದಲ್ಲಿ ದೀಪವನ್ನು ಹಚ್ಚಿ ಇಡುತ್ತಾರೆ*(ಛಾ:ಚಿ.೧೩).* ಬುಡ್ಗ ಜಂಗಮರಲ್ಲಿ ಸತ್ತ ಸುದ್ದಿಯನ್ನು ಕುಲಸ್ಥರಿಗೆ ಮುಖಾ ಮುಖಿಯಾಗಿ ಹೇಳುವ ಹಾಗಿಲ್ಲ. ಸರಾಯಿ ಅಂಗಡಿಯಲ್ಲಿಯೋ, ಟೀ ಹೋಟಲ್‌ನಲ್ಲಿಯೋ, ಅಥವಾ ಸಂತೆಯಲ್ಲಿಯೋ ಕರೆದುಕೊಂಡು ಹೋಗಿ ತಿಳಿಸಬೇಕು. ಹೀಗೆ ತಿಳಿಸುವುದರಿಂದ ಸುದ್ದಿ ಕೇಳುವ ವ್ಯಕ್ತಿಗೆ ಭಯ-ದುಗುಡ ಆಗದಿರಲೆಂದು ಇರಬಹುದಾಗಿದೆ. ಇಂದು ದೂರವಾಣಿ ಸಂಪರ್ಕದ ಮೂಲಕ ಸುದ್ದಿಯನ್ನು ತಿಳಿಸುತ್ತಾರೆ. ಯಾರಾದರೂ ಮುಖ್ಯವಾದ ವ್ಯಕ್ತಿಗಳು ಬರುವವರಿದ್ದರೆ ಶವವನ್ನು ರಾತ್ರಿ ಇಟ್ಟುಕೊಳ್ಳುತ್ತಾರೆ. ಅಂದು ರಾತ್ರಿಯೆಲ್ಲಾ ಬುರ್ರಕಥಾ, ಭಕ್ತಿ ಗೀತೆಗಳನ್ನು ಹಾಡುತ್ತಾ ಭಜನೆ ಮಾಡುತ್ತಾರೆ. ಒಂದು ವೇಳೆ ಇಲ್ಲದಿದ್ದರೆ ಅಂದೇ ಅಂತ್ಯಕ್ರಿಯೆಯನ್ನು ನೆರವೇರಿಸುತ್ತಾರೆ. ಸತ್ತ ಸುದ್ದಿ ಕೇಳಿದ ಬಂಧು ಬಳಗದವರು, ಕುಲಸ್ಥರು ಹೂವಿನ ಹಾರ, ತೆಂಗಿನಕಾಯಿ, ಎಲೆ ಅಡಿಕೆ, ಊದಿನಕಡ್ಡಿ ತಂದು ಹೆಣದ ಮುಂದೆ ಇಟ್ಟು ದುಂಖಿಸುತ್ತಾರೆ. ಬಂಧುಗಳೆಲ್ಲಾ ಬಂದ ಮೇಲೆ ಶವವನ್ನು ಸ್ಮಶಾನಕ್ಕೆ ಒಯ್ಯಲು ಏರ್ಪಾಡು ಮಾಡುತ್ತಾರೆ. ಶವ ಯಾತ್ರೆಯಲ್ಲಿ ಹೆಂಡತಿ ಸತ್ತರೆ ಗಂಡ ಮುಂದೆ, ಗಂಡ ಸತ್ತರೆ ಹಿರಿಯ ಪುತ್ರ ಮುಂದೆ ನಡೆಯುತ್ತಾರೆ. ವಿಧವೆ ಸತ್ತರೆ ಸಣ್ಣಮಗ ಮುಂದೆ ನಡೆಸುತ್ತಾರೆ. ಅಂತ್ಯಕ್ರಿಯೆ ಮಾಡುವ ಮುಂಚೆ ಸತ್ತ ವ್ಯಕ್ತಿಯನ್ನು ಎಣ್ಣೆ ಹಚ್ಚಿ ಸ್ನಾನ ಮಾಡಿಸಿ, ಹೊಸ ಬಟ್ಟೆಗಳನ್ನು ತೊಡಿಸುತ್ತಾರೆ. ತಮ್ಮಲ್ಲಿಯೇ ಒಬ್ಬರು ಜಂಗಮವೇಷ ಧರಿಸಿದ ವ್ಯಕ್ತಿಯಿಂದ ಶವಕ್ಕೆ ಪೂಜೆ ಮಾಡಿಸಿ ಚಟ್ಟದಲ್ಲಿ ಕೂರಿಸುತ್ತಾರೆ. ಕೂರಿಸುವ ಸಂದರ್ಭದಲ್ಲಿ ತನ್ನ ಬಂಧು ಬಳಗದವರು ಜೋರಾಗಿ ಅಳುತ್ತಿರುವವರು, ದುಂಖದ ಆಕ್ರಂದನ ಮುಗಿಲು ಮುಟ್ಟುತ್ತಿರುತ್ತದೆ.

**ಚಟ್ಟ ತಯಾರಿಸುವ ಕ್ರಮ:** ಬುಡ್ಗ ಜಂಗಮರು ಪ್ರಾರಂಭದಲ್ಲಿ ಶವ ಸಂಸ್ಕಾರ ಪದ್ಧತಿಯಲ್ಲಿ ಹೆಣವನ್ನು ಹಳೆಯ ಕೌದಿಯಲ್ಲಿ ಅಥವಾ ಗೋಣಿಚೀಲದಲ್ಲಿ ನಾಲ್ಕು ಮೂಲೆಗಳಿಗೆ ಹಿಡಿದುಕೊಳ್ಳಲು ಕಟ್ಟಿಗೆಗಳನ್ನು ಕಟ್ಟಿಕೊಂಡು ಅದರಲ್ಲಿ ಶವವನ್ನು ಹೊತ್ತುಕೊಂಡು ಹೋಗುತ್ತಿದ್ದರು. ಇದನ್ನು 'ಗಳ' ಎಂದು ಕರೆಯುತ್ತಾರೆ. ಇಂದು ಅನ್ಯ ಧರ್ಮದ ಪ್ರಭಾವದಿಂದ ಗೋಪುರಾಕಾರದ ಮಂಟಪವನ್ನು ತಯಾರಿಸಿದ ಚಟ್ಟದಲ್ಲಿ ಶವವನ್ನು ಕೂರಿಸಿಕೊಂಡು ಹೊತ್ತುಕೊಂಡು ಹೋಗುತ್ತಾರೆ.*(ಛಾ:ಚಿ.೧೪).* ಚಟ್ಟವನ್ನು ಬೇರೆ ಸಮುದಾಯದವರಿಂದ ತಯಾರಿಸುತ್ತಾರೆ. ಒಂದು ವೇಳೆ ಅವರು ಸಿಗದಿದ್ದಾಗ ತಾವೇ ಸ್ವತಃ ಚಟ್ಟವನ್ನು ತಯಾರಿಸುತ್ತಾರೆ. ಇವರಲ್ಲಿ ಅನ್ಯ ಸಮುದಾಯದವರಂತೆ ಪೂಜೆ ಕ್ರಿಯೆಗಳಿಗೆ ಊರ ಜಂಗಮರನ್ನು ಮತ್ತು ಬ್ರಾಹ್ಮಣರನ್ನು ಕರೆಸಿಕೊಳ್ಳುವ ಪದ್ಧತಿ ಇವರಲ್ಲಿಲ್ಲ. ತಮ್ಮಲ್ಲಿಯೇ ಒಬ್ಬ ಕುಲಸ್ತ

ಜಂಗಮರಂತೆ ವೇಷ ಹಾಕಿಕೊಂಡು ಗಂಟೆ, ಶಂಖವನ್ನು ಊದುತ್ತಾ ಹರಹರ ಶಂಭೋ ಶಂಕರ ಮಹಾದೇವ ಎಂದು ಹೇಳುತ್ತಾ ಮುಂದೆ ಸಾಗುವರು.*(ಛಾ: ೫.೧೫)* ಕಳೇಬರಹದ ಮೆರವಣಿಗೆಯ ಮುಂದೆ ನವಣೆ, ಎಳ್ಳು, ಮಂಡಕ್ಕಿ, ಎಲೆಗಳನ್ನು ದಾರಿಯಲ್ಲಿ ಚೆಲ್ಲುತ್ತಾ, ಪಟಾಕಿ ಸಿಡಿಸುತ್ತಾ ಮಂದೆ ಸಾಗುತ್ತಾರೆ. ಹೆಣವನ್ನು ಮೊದಲು ಮನೆಯ ಹಿರಿಮಗ ಮತ್ತು ತನ್ನ ಸ್ವಗೋತ್ರದ ಬಳಗದವರು ಹೊತ್ತುಕೊಂಡು ಹೋದನಂತರ ಇತರೆ ಕುಲಸ್ಥರು ಹೊತ್ತುಕೊಂಡು ಹೋಗುತ್ತಾರೆ.

**ದಿಂಪುಡುಕಳ್ಳಂ:** ಶವಸಂಸ್ಕಾರದ ಮೆರವಣಿಗೆ ಹೋಗುವ ಸಂದರ್ಭದಲ್ಲಿ ಸ್ಮಶಾನ ಸಮೀಪಿಸುತ್ತಿದ್ದಂತೆಯೇ ಒಂದು ಸ್ಥಳದಲ್ಲಿ ಶವವನ್ನು ಇಳಿಸುತ್ತಾರೆ. ಇದನ್ನು ದಿಂಪುಡುಕಳ್ಳಂ ಎಂದು ಕರೆಯುತ್ತಾರೆ. ಅಲ್ಲಿ ಶವದ ಮೈಮೇಲೆ ಇರುವ ಎಲ್ಲಾ ಆಭರಣಗಳನ್ನು ತೆಗೆದು ಕುಲಸ್ತರ ಮುಂದೆ ಅವನು ಸಂಪಾದಿಸಿದ ಬಂಗಾರ, ಬೆಳ್ಳಿಯನ್ನು ಇಂತಿಷ್ಟು ಇದೆ ಎಂದು ಹೇಳುತ್ತಾರೆ. ಅವನ ಇಡೀ ಜೀವನದಲ್ಲಿ ಎಷ್ಟು ಒಳ್ಳೆತನವನ್ನು, ಎಷ್ಟು ಸಂಪತ್ತನ್ನು, ಎಷ್ಟು ಜನರನ್ನು ಸಂಪಾದಿಸಿದ್ದಾನೆಂದು ಸಾವನ್ನಪ್ಪಿದ ವ್ಯಕ್ತಿಯ ಕುರಿತು ಗುಣಗಾನ ಮಾಡುತ್ತಾರೆ. ಹಾಗಾಗಿ ಶರಣರ ಮಹಿಮೆ ಮರಣದಲ್ಲಿ ನೋಡು ಎನ್ನುವಾಗೆ ಒಬ್ಬ ವ್ಯಕ್ತಿಯ ಕುರಿತು ತಿಳಿದುಕೊಳ್ಳಬೇಕಾದರೆ ಅವನು ಸತ್ತಮೇಲೆ ಅವನ ಗುಣಾಅವಗುಣಗಳನ್ನು ತಿಳಿಯಬಹುದು ಎಂದು ಹಿರಿಯರು ಹೇಳುತ್ತಾರೆ. ಎಲ್ಲರೂ ಬಂದ ಮೇಲೆ ಮತ್ತೆ ಹೆಣವನ್ನು ಹೊತ್ತು ಮುಂದೆ ಸ್ಮಶಾನ ಸಾಗುವರು *(ಛಾ:೫.೧೬)*.

**ಅಂತ್ಯ ಕ್ರಿಯೆ:** ಸ್ಮಶಾನಕ್ಕೆ ಬಂದಾದ ಮೇಲೆ ದಾಯಾದಿಗಳು ಮತ್ತು ಎಲ್ಲರೂ ಕುಣಿಯ ಸುತ್ತಾ ಮೂರು ಬಾರಿ ಪ್ರದಕ್ಷಿಣೆ ಮಾಡುತ್ತಾರೆ. ಕುಣಿಯಲ್ಲಿ ವಿಭೂತಿ ಕುಂಕುಮ ಹಚ್ಚಿ ಪೂಜೆ ಮಾಡಿ, ಕೆಳಗಡೆ ಉಪ್ಪು, ಅಮರೇ(ತಂಗಡಿಗಿಡದ) ತಪ್ಪಲು, ಹೂಗಳನ್ನು ಹಾಕುವರು. ಅಮರೇ ತೊಪ್ಪಲನ್ನು ಬಂಗಾರ ಎಂದು ತಿಳಿದುಕೊಳ್ಳುವರು. ಶವದ ಮೇಲಿದ್ದ ಬಟ್ಟೆ, ಹೂವು ತೆಗೆದು ಹೊರಗಡೆ ಹಾಕುವರು. ಉತ್ತಾರಾಭಿಮುಖವಾಗಿ ಹೆಣವನ್ನು ಕುಣಿಯಲ್ಲಿ ಪದ್ಮಾಸನದಲ್ಲಿ ಕೂಡಿಸಿ ಮತ್ತೊಮ್ಮೆ ಪೂಜೆ ಮಾಡಿ ಎಲ್ಲರೂ ಅಮರೇ ತೊಪ್ಪಲನ್ನು ಹಾಕಿ, ಮಣ್ಣು ಹಾಕಿ ಅಂತಿಮ ದರ್ಶನ ಪಡೆದುಕೊಳ್ಳುವರು. ಮೊದಲು ಹಿರಿಯ ಮಗ ಮಣ್ಣುಕೊಡುತ್ತಾನೆ. ನಂತರ ಬಂದವರೆಲ್ಲಾ ಮಣ್ಣು ಕೊಡುವರು *(ಛಾ:೫.೧೭)*.

ಸಮಾಧಿ ಮೇಲೆ ಮಣ್ಣಿನರಾಶಿಯನ್ನು ದಿಬ್ಬಮಾಡಿ ಮೇಲೆ ಕಲ್ಲನ್ನು ಇಡುವರು. ನಂತರ ಜಂಗಮವೇಷ ಧರಿಸಿದ ಕುಲಸ್ತನು ಆ ಕಲ್ಲಿಗೆ ಮತ್ತು ಸಮಾಧಿಯ ಮೇಲೆ ಹೂವಿನಹಾರಗಳಿಂದ ಅಲಂಕರಿಸಿ ಪೂಜೆ ಮಾಡಿ ಮಂಗಳ ಹಾಡುತ್ತಾನೆ. ಜಂಗಮವೇಷಧಾರಿ ಅದರ ಮೇಲೆ ನಿಂತು ಗಂಟೆ ನುಡಿಸಿ, ಶಂಖ ಊದುತ್ತಾ ಹರಹರಾ ಶಿವಶಿವಾ ಶಂಭೋ ಶಂಕರ ಮಹಾದೇವ ಎಂದು ಹೇಳುತ್ತಾನೆ. ಸತ್ತ ವ್ಯಕ್ತಿಯ ಹಿರಿಯ ಮಗ ಕಾಲಿಗೆ ಬಿದ್ದು ಕಾಣಿಕೆ ಸಲ್ಲಿಸುತ್ತಾನೆ. ಆ ಜಂಗಮ ವೇಷಧಾರಿ ತಲೆಯ ಮೇಲೆ ವಿಭೂತಿ ಹಾಕಿ ಹಣೆಗೆ ಭಸ್ಮ ಹಚ್ಚಿ ಆಶೀರ್ವಾದ ನೀಡುತ್ತಾನೆ. ನಂತರ ಮನೆಯ ಹಿರಿಯ ಮೊಮ್ಮಗನಿಂದ ಸಮಾಧಿಯ ಮೇಲೆ ಬಲಗಾಲನ್ನು ಇರಿಸುತ್ತಾರೆ.*(ಛಾ:೫.೧೮)*. ಇದಕ್ಕೆ ಕಾರಣ ಹಿರಿಯ ಮೊಮ್ಮಗ ಕಾಲಿಟ್ಟರೆ ಪಾತಾಳಕ್ಕೆ ಹೋಗುತ್ತಾರೆ ಅಥವಾ ಮೋಕ್ಷ ಲಭಿಸುತ್ತದೆ ಎಂಬ ನಂಬಿಕೆ ಇವರಲ್ಲಿದೆ. ನಂತರ ಎಲ್ಲರೂ ನಮಸ್ಕಾರ ಮಾಡುತ್ತಾರೆ.

**ಮುತ್ತೈದೆತನವನ್ನು ಅಳಿಸುವುದು:** ನಂತರ ಕುಲದ ಹಿರಿಯರು ಮತ್ತು ವಿಧವೆಯರು ಸತ್ತ ವ್ಯಕ್ತಿಯ ಹೆಂಡತಿಯ ತಾಳಿಯನ್ನು ಸಮಾಧಿಗೆ ಮುಟ್ಟಿಸಿ ಅರಿಯುವರು. ಬಳೆ ಒಡೆಸುವರು*(ಭಾ:ಹ.೧೯)*. ಅವಳ ಮುಖ ಕಾಣದಂತೆ ಸೆರಗಿನಿಂದ ಮುಚ್ಚಿಕೊಂಡು ಹಿಂದಿರುಗುವರು, ಸತ್ತವರು ಹೆಣ್ಣಾಗಿದ್ದರೆ ಗಂಡನ ಉಡದಾರ ಹರಿದು ಹಾಕಬೇಕು.

**ಕಾಲುವೆಗೆ ಹೋಗಿ ಸ್ನಾನ ಮಾಡುವುದು:** ಸ್ಮಶಾನದಿಂದ ಹಿಂದಿರುಗಿ ಹೋಗುವಾಗ ಹಿಂದೆ ತಿರುಗಿ ಯಾರು ನೋಡುವ ಹಾಗಿಲ್ಲ. ಹೋಗುವ ದಾರಿಯಲ್ಲಿ ಕೆರೆ, ಬಾವಿ, ಕಾಲುವೆಗಳಿದ್ದರೆ ಅಲ್ಲೇ ಸ್ನಾನಹೋಗುತ್ತಾರೆ. ಶವ ಸಂಸ್ಕಾರಕ್ಕೆ ಬಂದಂತ ಎಲ್ಲ ಬಂಧು ಬಳಗದವರು ಸ್ನಾನ ಮಾಡುತ್ತಾರೆ. ಸ್ನಾನ ಮಾಡುವಾಗ ಸತ್ತ ವ್ಯಕ್ತಿಯ ಬೆಡಗಿನವರು ಸೂತಕ(ಮುಟ್ಟಚಟ್ಟು) ಇರುವುದರಿಂದ ಕೆಳಗೆ ಸ್ನಾನ ಮಾಡುತ್ತಾರೆ, ಅನ್ಯ ಬೆಡಗಿನವರು ಮೇಲೆ ಭಾಗದಲ್ಲಿ ಕೆರೆ, ಕಾಲುವೆ ಅಥವಾ ಬಾವಿಯಲ್ಲಿ ಸ್ನಾನ ಮಾಡುತ್ತಾರೆ *(ಭಾ:ಹ.೨೦)*. ನಂತರ ಬಂದಂತ ಎಲ್ಲರೂ ತಮ್ಮಲ್ಲಿಯೇ ಒಬ್ಬ ಕುಲಸ್ತ ಜಂಗಮರಂತೆ ವೇಷ ಹಾಕಿಕೊಂಡು ಗಂಟೆ, ಶಂಖವನ್ನು ಊದುತ್ತಾ ಹರಹರ ಶಂಭೋ ಶಂಕರ ಮಹಾದೇವ ಎಂದು ಹೇಳುತ್ತಾ ಎಲ್ಲರಿಗೂ ವಿಭೂತಿ ಕುಂಕುಮ ಹಚ್ಚಿ ಎರಡಾಣೆ(ಬೇಡ) ಹಣವನ್ನು ಪಡೆದು ಎಲ್ಲರಿಗೂ ಆಶೀರ್ವಾದ ಮಾಡುವನು. ಇದೀಗ ಬೇಡ ನಾಣ್ಯಗಳು ಚಲಾವಣೆ ಇಲ್ಲದಿದ್ದರಿಂದ ರೂಪಾಯಿ ನಾಣ್ಯಗಳನ್ನು ಕೊಟ್ಟು ಆಶೀರ್ವಾದ ಪಡೆಯುವರು.*(ಭಾ: ಹ.೨೧)*

**ಕಲ್ಚುಕುನೇದಿ(ಹೋಟಲ್‌ಗೆ ಹೋಗುವುದು):** ಅಂತ್ಯಕ್ರಿಯಲ್ಲಿ ಭಾಗವಹಿಸಿದರೆಲ್ಲರೂ ನೇರವಾಗಿ ಮರಣಿಸಿದವರ ಮನೆಗೆ ಹೋಗುವವಾಗೆ ಇಲ್ಲ. ಅದಕ್ಕಿಂತ ಮುಂಚೆ ಎಲ್ಲರೂ ನೇರವಾಗಿ ಚಹಾ, ಸರಾಯಿ ಹೆಂಡದ ಅಂಗಡಿಗೆ ಹೋಗಿ ಕುಲಾಚಾರ ಪ್ರಕಾರವಾಗಿ ಬಂದಂತ ಬಂಧು ಬಳಗದವರು ತಮ್ಮ ಸ್ವಂತ ಖರ್ಚಿನಲ್ಲಿ ಚಹಾ, ಸರಾಯಿ, ಅಥವಾ ಹೆಂಡವನ್ನು ತೆಗೆದುಕೊಂಡು ಮೃತರ ಕುಟುಂಬ ಯಾರಾದರೂ ಒಬ್ಬರಿಂದ ಚಹಾ, ಸರಾಯಿ ಅಥವಾ ಹೆಂಡವನ್ನು ಹಂಚಿಕೊಂಡು ಅಥವಾ ಬದಲಿಸಿಕೊಂಡು ಸ್ವಲ್ಪ ಭೂಮಿಗೆ ಹಾಕಿ ನಂತರ ಕುಡಿಯುತ್ತಾರೆ. ಹೀಗೆ ಮಾಡುವುದರಿಂದ ಈ ಕರ್ಮ, ಸೂತಕ ಇಲ್ಲಿಗೆ ಹೋಗುತ್ತದೆ ನಮಗೆ ಇದು ಬಾದಿಸುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ. ಇದನ್ನು ಟೀ ಕಲ್ಚುಕುನೇದಿ ಎಂದು ಕರೆಯುತ್ತಾರೆ. ಅಲ್ಲಿಂದ ಮತ್ತೆ ನೇರವಾಗಿ ಎಲ್ಲರೂ ಮೃತರ ಮನೆಗೆ ತೆರಳಿ ಕಾಲುಮುಖ ತೊಳೆದುಕೊಂಡು ಸತ್ತವರ ಮನೆಯಲ್ಲಿ ಗೋವಿನ ಸಗಣಿ ಮೇಲೆ ಪಾದ ಇಟ್ಟು ದೀಪ ನೋಡಿಕೊಂಡು ಅವರವರ ಮನೆಗೆ ತೆರಳುತ್ತಾರೆ.*(ಭಾ: ಹ.೨೨)*

**ವಿಷಬಾಯಿ ತೊಳೆಯುವುದು:** ಮೃತರ ಮನೆಯಲ್ಲಿ ದೀಪ ನೋಡಿದ ಎಲ್ಲರೂ ಸಿಹಿ ನೀರಿನಿಂದ ಬಾಯಿಯನ್ನು ಮುಕ್ಕಳಿಸುತ್ತಾರೆ ಇದನ್ನು 'ವಿಷಬಾಯಿ ತೊಳೆಯುವುದು' ಎನ್ನುತ್ತಾರೆ.

**ಭರವು ದಿಂಪುಕುನೇದಿ(ಭಾರ ಇಳಿಸಿಕೊಳ್ಳುವುದು):** ಮೆರವಣಿಗೆಯಲ್ಲಿ ಅನ್ಯ ಬೆಡಗಿನವರು ಶವವನ್ನುಹೊತ್ತಿದ ಜನರಿಗೆ ಭುಜದಿಂದ ಕೈ ಕೆಳಗಿನವರಿಗೆ ಕೊಬ್ಬರೆಎಣ್ಣೆ ಮತ್ತು ಒಳ್ಳೆಣ್ಣೆ ಹಚ್ಚಿ ಮಾ ಭಾರಂ ಮಾಕಿ (ನಮ್ಮ ಭಾರ ನಮಗಿರಲಿ) ಎಂದು ಮೃತರಕುಟುಂಬದವರು ಅವರ ಭುಜವನ್ನು ತೊಳೆಯುತ್ತಾರೆ. ಇದನ್ನು 'ಭರವು ದಿಂಪುಕುನೇದಿ (ಭಾರ ಇಳಿಸಿಕೊಳ್ಳುವುದು)'ಎನ್ನುತ್ತಾರೆ. ನಂತರ

ಎಲ್ಲರೂ ಕಾಲುಮುಖ ತೊಳೆದುಕೊಂಡು ಸ್ವಲ್ಪ ಹೊತ್ತು ಕುಳಿತುಕೊಂಡು ಮೃತರ ಕುಟುಂಬದ ಮಕ್ಕಳಿಗೆ ಬುದ್ಧಿಮಾತುಗಳು ಹಾಗೂ ತಿಳುವಳಿಕೆಯನ್ನು ಹೇಳುತ್ತಾರೆ. ಭಾಗವಹಿಸಿದ ಕುಲಸ್ಥರೆಲ್ಲರಿಗೆ ತಲಾ ಒಂದು ಹೆಂಡ ಸರಾಯಿಯನ್ನು ಕುಡಿಸಿ ಕಳುಸುತ್ತಾರೆ.

**ನಿಪ್ಪುಲು ಎಸೇದಿ(ಇಂಗಳ):** ಹಿರಿಯ ಕುಲಸ್ಥರು ಮತ್ತು ಮನೆಯವರು ಸ್ಮಶಾನಕ್ಕೆ ಹೋಗಿ ಹೆಣ ಹೂಳಿದ ಸಮಾಧಿಯ ಪಕ್ಕದಲ್ಲಿ ಕಟ್ಟಿಗೆಯಿಂದ ಕಿಚ್ಚು ಹಚ್ಚಿ ಬಿಡಾರಕ್ಕೆ ಬರುತ್ತಾರೆ. ಇದನ್ನು ನಿಪ್ಪುಲು ಎಸೇದಿ (ಇಂಗಳ) ಎನ್ನುತ್ತಾರೆ. ಹೀಗೆ ಮಾಡುವುದರಿಂದ ಶವಸಂಸ್ಕಾರದ ಮೂರುದಿನದ ಕಾರ್ಯದವರೆಗೂ ಹೆಣವು ನರಿ, ತೋಳ ಯಾವುದೇ ಪ್ರಾಣಿಗಳಿಂದ ಬಲಿಯಾಗಬಾರದು ಎಂಬ ಉದ್ದೇಶದಿಂದ ರಾತ್ರಿ ಬೆಂಕಿಯ ಕೆಂಡವನ್ನು ಹಚ್ಚಿ ಬರುತ್ತಾರೆ. ಈ ಸಂಪ್ರದಾಯ ಒಂದು ಕಾಲದಲ್ಲಿ ಅಗ್ನಿ ಸಂಸ್ಕಾರವೆಂದು ದಹನ ಕ್ರಿಯೆಎಂದು ಕರೆಯುತ್ತಿದ್ದರು.

**ಪಿಂಡಕೂಡು ಅರ್ಪಿಸುವುದು**

ಮೂರು ದಿವಸದ ಕಾರ್ಯವನ್ನು ಮುರುಗೊಳು ಅಥವಾ ಪಿಂಡಕೂಡು ಅರ್ಪಿಸುವುದು (ಪಿಂಡಪ್ರಧಾನ) ಎಂದು ಕರೆಯುತ್ತಾರೆ. ಅಂದು ಬೇಟೆಯಾಡಿಕೊಂಡು ಬಂದ ಮಾಂಸದ ಅಡುಗೆಯನ್ನು ತಯಾರಿಸಿಕೊಂಡು ಸ್ಮಶಾನದಲ್ಲಿ ಹೋಗಿ ಸಮಾಧಿಯ ತಲೆಭಾಗದಲ್ಲಿ ಕುಣಿ ತೋಡಿ ಮಾಡಿಕೊಂಡು ಬಂದ ಅಡುಗೆಯನ್ನು ಎಡಗೈಯಿಂದ ಕುಣಿಯಲ್ಲಿ ಹಾಕಿ ಮೇಲೆ ಬಂಡೆ ಇಟ್ಟು ಮುಚ್ಚುತ್ತಾರೆ. ಇದನ್ನೇ ಬುಡ್ಗ ಜಂಗಮರು ಪಿಂಡಕೂಡು ಎಂದು ಕರೆಯುತ್ತಾರೆ. ಅಂದು ರಾತ್ರಿ ದೇವತಾಕಾರ್ಯವನ್ನು ಮನೆಯಿಂದ ದೂರದ ಸ್ಥಳದಲ್ಲಿ ಹೋಗಿ ತಾತ್ಕಲಿಕವಾಗಿ ಕಲ್ಲಿನಿಂದ ಸಣ್ಣ ಗುಡಿಸಲು ಮಾಡಿ ದೀಪ ಹಚ್ಚಿ ಉತ್ತರಾಣಿ ಕಡ್ಡಿಗಳನ್ನು ಬೆಳಗಿಸಿ, ಆಕಾಶಕ್ಕೆ ತೋರಿಸಿ ಮೃತ ವ್ಯಕ್ತಿ ವೈಕುಂಠಕ್ಕೆ ಹೋದನು ಎಂದು ಹೇಳುತ್ತಾ ಮನೆಗೆ ಹೋಗುತ್ತಾರೆ. *(ಭಾ:೫.೨೩)*

**ಕಮ್ರುಂ ಪೆಟ್ಟೇದಿ:** ಮರುದಿನ ಸೂತಕ ಕಳೆಯಲು ಮಾಂಸದ ಅಂಗಡಿಯಿಂದ ಕುರಿ ತಲೆಮಾಂಸ ಮತ್ತು ಕಾಲುಗಳನ್ನು ತಂದು ಸುಟ್ಟು ಅಡುಗೆಯನ್ನು ಮಾಡಿ ನೆರೆದ ಕುಲಸ್ಥರಿಗೆ ಹಾಗೂ ಬಂಧುಬಳಗದವರಿಗೆ ಊಟಮಾಡಿಸಿ ಕಾರ್ಯಕ್ರಮವನ್ನು ಮುಕ್ತಾಯಗೊಳಿಸುವರು. ಇದನ್ನು ಕಮ್ರುಂ ಪೆಟ್ಟೇದಿ ಎಂದು ಕರೆಯುತ್ತಾರೆ.

ಇತ್ತೀಚಿನ ದಿನಗಳಲ್ಲಿ ಕೆಲವರು ಅನ್ಯ ಸಮುದಾಯಗಳ ಪ್ರಭಾವದಿಂದ ಕೊನೆಯ ೯ನೇ ದಿನದಲ್ಲಿ ಅಥವಾ ೧೧ನೇ ದಿನದಲ್ಲಿ ಹಂಪೆಗೆ ಹೋಗಿ ಅಲ್ಲಿ ರಾತ್ರಿ ನಿದ್ದೆಮಾಡಿ ಬೆಳಿಗ್ಗೆ ಹೊಳೆಯಲ್ಲಿ ಸ್ನಾನ ಮಾಡಿ ಶ್ರದ್ಧ(ಕಾರ್ಯ) ಪಂಡಿತರಿಂದ ಪಿಂಡಪ್ರಧಾನ ಮಾಡಿ ನಂತರ ವೀರುಪಾಕ್ಷೇಶ್ವರ ದೇವರಿಗೆ ರುದ್ರಾಭಿಷೇಕ ಅಥವಾ ನವಗ್ರಹ ಪೂಜೆ, ಕುಂಕುಮಾರ್ಚನಾ ಪೂಜೆ ಸಲ್ಲಿಸ ಅವರವರ ಮನೆಗಳಿಗೆ ತೆರಳುತ್ತಾರೆ. ನಂತರ ಎಲ್ಲಾ ಕ್ರಿಯೆಗಳು ಮುಗಿದ ಮರುದಿನ ಮನೆಯವರು ಕುಲಸ್ತರನ್ನು ಕರೆದುಕೊಂಡು ಎಷ್ಟೆಷ್ಟು ಖರ್ಚಾಗಿದೆ ಎಂದು ಲೆಕ್ಕಾಚಾರ ಮಾಡುತ್ತಾರೆ. ಖರ್ಚಾದ ಒಟ್ಟು ಮೊತ್ತದಲ್ಲಿ ಅಣ್ಣ ತಮ್ಮಂದಿಯರಿಗೆ ಭರಿಸುತ್ತಾರೆ.

ಬುಡ್ಗ ಜಂಗಮರಲ್ಲಿ ಮದುವೆಯಾಗದೆ ಇದ್ದ ಹೆಣ್ಣಾಗಲಿ, ಗಂಡಾಗಲಿ ಸತ್ತರೆ ಆದರೆ ಕುಣಿಯಲ್ಲಿ ಹೂಳುವಾಗ ಪದ್ಮಾಸನದಲ್ಲಿ ಕೂಡಿಸುವುದಿಲ್ಲ ಬದಲಾಗಿ ಉದ್ದ ಅಡಿ ಮುಖ ಮಾಡಿ ಮಲಗಿಸಿ ಮಣ್ಣು ಮಾಡುತ್ತಾರೆ. ಅಪ್ರಾಪ್ತ ವಯಸ್ಸಿನ ಬ್ರಹ್ಮಚಾರಿಗಳು, ಸಣ್ಣ ಮಕ್ಕಳು ಸತ್ತರೆ ಯಾವ ಶಾಸ್ತ್ರಗಳನ್ನು ಮಾಡದೆ ಚಟ್ಟವನ್ನು ಕಟ್ಟದೆ ಕೈಯಲ್ಲಿ ಬಟ್ಟೆ ಹೊದಿಸಿಕೊಂಡು ಸ್ಮಶಾನಕ್ಕೆ ಹೋಗಿ ಸಣ್ಣ ಕುಣಿ ತೋಡಿ ಮಲಗಿಸಿ ಮಣ್ಣು ಮಾಡುತ್ತಾರೆ. ಮೂರನೆಯ ದಿನ ಹಾಲು, ಹಣ್ಣು ತೆದುಕೊಂಡು ಕುಣಿಯ ಮೇಲ್ಭಾಗದಲ್ಲಿ ಸ್ವಲ್ಪ ತಗ್ಗುತೆಗೆದು ಅದರಲ್ಲಿ ಹಾಕಿ ಮೇಲೆ ಕಲ್ಲುಮುಚ್ಚಿ ಬರುವರು. ಗರ್ಭಿಣಿ ಮತ್ತು ತೊನ್ನುಇದ್ದವರು ಸತ್ತರೆ ಅವರನ್ನು ಹೂಳದೇ ಬೆಂಕಿಯಲ್ಲಿ ಹಾಕಿ ಸುಡುತ್ತಾರೆ. ಈ ರೀತಿಯಾಗಿ ಬುಡ್ಗ ಜಂಗಮರು ಶವಸಂಸ್ಕಾರದ ಆಚರಣೆಯನ್ನು ಆಚರಿಸುತ್ತಾರೆ.

**ಬುಡ್ಗ ಜಂಗಮರ ವಾರ್ಷಿಕವಾರ್ತನ ಆಚರಣೆಗಳು**

**ಬುಡ್ಗ ಜಂಗಮರ ಪಾರಂಪರಿಕ ದೈವಾರಾಧನೆ:** ಬುಡ್ಗ ಜಂಗಮರು ಪ್ರಮುಖವಾಗಿ ಶಕ್ತಿ ದೇವತೆಯ ಮಾತೃದೇವತಾಧರಕರು. "ಮಾತೃದೇವತೆಯ ಉಗಮವು ಕೃಷಿಯ ಜೊತೆಯಲ್ಲಿಯೇ ಪ್ರಾರಂಭವಾಯಿತು. ಗಂಡು ಯಾವಾಗಲು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಅಲೆಮಾರಿಯಾಗಿ ಅಲೆಯುತ್ತಿದ್ದಾಗ, ಮನೆಯ ಸಮಸ್ತ ಜವಾಬ್ದಾರಿಯು ಹೆಣ್ಣಿನದಾಗಿತ್ತು. ಸ್ತ್ರೀ ಮತ್ತು ಭೂಮಿಯ ಸಮಾನ ಗುಣಗಳಾದ ಫಲವಂತಿಕೆ, ಗರ್ಭಧರಿಸುವುದು ಇವು ಪೂಜ್ಯನೀಯ ಅಂಶಗಳಾಗಿ ಕಾಣುತ್ತವೆ. ಸಮೃದ್ಧಿಯ ಆಚರಣೆಯ ಆಚರಣೆಗಳು ಸ್ತ್ರೀ ಆರಾಧನೆಯೇ ಆಗಿವೆ. ಭೂಮಿಯ ಫಲವಂತಿಕೆ ಹೆಚ್ಚಾಗಬೇಕಾದರೆ ಅದಕ್ಕೆ ರಕ್ತವನ್ನು ಕೊಟ್ಟೊ ಅಥವಾ ಬಲಿಯನ್ನು ಕೊಡುವುದರಿಂದ ಬೆಳೆಯು ಹೆಚ್ಚಾಗುತ್ತದೆ ಎಂಬ ನಂಬಿಕೆ ಜನಪದರಲ್ಲಿದೆ"[೩] ಹೀಗಾಗಿ ಬುಡ್ಗ ಜಂಗಮರು ಮಾತೃದೇವತೆಗಳಾದ ಜಮ್ಮುಲಮ್ಮ, ಸುಂಕಲಮ್ಮ, ಗದ್ದರಾಳ ಮಾರೆಮ್ಮ, ಗೌರಸಮುದ್ರ ಮಾರೆಮ್ಮನನ್ನು ದೇವರನ್ನು ಆರಾಧಿಸುತ್ತಾರೆ.

ಬುಡ್ಗ ಜಂಗಮರು ತಾವು ಎಷ್ಟೇ ದೂರ ಬದುಕಿಗಾಗಿ ವಲಸೆ ಹೋದರೂ ಇವರು ವರ್ಷಕ್ಕೆ ಅಥವಾ ಎರಡು ವರ್ಷಕ್ಕೊಮ್ಮೆ ಮೂಲ ದೇವಸ್ಥಾನಗಳಿಗೆ ಹೋಗಿ ಕಾಯಿ, ಕರ್ಪೂರ, ಊದಿನಕಡ್ಡಿ ಕೊಟ್ಟು ಅಲ್ಲಿಂದ ಕುಂಕುಮ ಭಂಡಾರ ತೆಗೆದುಕೊಂಡು ಪೆಟ್ಟಿಗೆಯಲ್ಲಿಟ್ಟುಕೊಂಡು ಆರಾಧಿಸುವರು. ಪೆಟ್ಟಿಗೆ ದೇವರು ಎಂದರೆ ಅವರ ಕುಲ ದೇವರುಗಳಾದ ಜಮ್ಮುಲಮ್ಮ ಮತ್ತು ಸುಂಕ್ಲಮ್ಮ ದೇವರ ಕುಂಕುಮ ಭಂಡಾರವನ್ನು ಪೆಟ್ಟಿಗೆಯಲ್ಲಿಟ್ಟುಕೊಂಡು ಆರಾಧಿಸುವುದನ್ನು ಪೆಟ್ಟಿಗೆ ದೇವರುಗಳೆಂದು ಕರೆಯುತ್ತಾರೆ *(ಭಾ:೫.೨೫)*.

**ಜಮ್ಮುಲಮ್ಮ ಸುಂಕ್ಲಮ್ಮ ಪೆಟ್ಟಿಗೆ ದೇವರ ಆಚರಣೆ ಅಥವಾ ಕುಡುಂ, ಗುಗ್ಗುಳು ಪಂಡಗ (ಕಡುಬು, ಗುಗ್ಗರಿ ಹಬ್ಬ)**

ಮ್ಯಾಸ ಬೇಡರಲ್ಲಿ ಆಚರಿಸುವಂತೆ ಗುಗ್ಗರಿ ಹಬ್ಬವನ್ನು ಅಲೆಮಾರಿ ಬುಡ್ಗ ಜಂಗಮರು ವಿಶೇಷವಾಗಿ ಕುಡುಂ ಗುಗ್ಗುಳು ಪಂಡಗ (ಕಡುಬು ಗುಗ್ಗರಿ ಹಬ್ಬ)ವನ್ನು ಆಚರಿಸುತ್ತಾರೆ. ದಿನಾಂಕ ೧೧.೦೬.೨೦೧೯ ರಂದು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಈ ಹಬ್ಬಕ್ಕೆ ಸಂಬಂಧಿಸಿದಂತೆ ಮಾಹಿತಿ

ಸಂಗ್ರಹಿಸಿಕೊಳ್ಳಲಾಯಿತು. ಈ ಆಚರಣೆಯನ್ನು ಮಂಗಳವಾರ ಅಥವಾ ಶುಕ್ರವಾರದಂದು ಹೆಚ್ಚಾಗಿ ಸಂಜೆ ಸಮಯದಲ್ಲಿ ಆಚರಿಸುತ್ತಾರೆ. ಅಂದು ಮನೆಯ ಯಜಮಾನ ಅಥವಾ ಯಾರಾದರೂ ಹಿರಿಯರು ಒಂದೊಪ್ಪುತ್ತು ಇದ್ದು ಕಾರ್ಯವನ್ನು ನೆರವೇರಿಸಲಾಗುತ್ತದೆ. ಅಂದು ಸಂಜೆ ೫.೩೦ಕ್ಕೆ ಪೆಟ್ಟಿಗೆಯಲ್ಲಿ ಇಟ್ಟುಕೊಂಡಿದ್ದ ಮನೆದೇವರುಗಳಾದ ಜಮ್ಮುಲಮ್ಮ, ಸುಂಕ್ಲಮ್ಮ ದೇವರ ಬೆಳ್ಳಿಮೂರ್ತಿಗಳಿಗೆ (ಬೆಳ್ಳಿಮೀಸೆ, ಕಣ್ಣು) ನೀರಿನಿಂದ ತೊಳೆದು ಒಂದು ಪಾತ್ರ್ರೆಗೆ ಹಚ್ಚಿ, ಕುಂಕುಮ ಭಂಡಾರ ಹಚ್ಚಿ, ಬೇವಿನಸೊಪ್ಪು, ಸೇರುಪಾವು ಅಕ್ಕಿ, ಎರಡು ಕೊಬ್ಬರಿಬಟ್ಟಲು, ಎರಡು ಉತ್ತುತ್ತಿ, ಅರಿಷಿಣ, ಎಲೆಅಡಿಕೆ ದಕ್ಷಿಣೆ ಇಟ್ಟು ಕಾಯಿ ಹೊಡೆದು ಆರಾಧಿಸುತ್ತಾರೆ. *(ಭಾ:೫.೨೬-೨೭)* ಸಜ್ಜೆಯಿಂದ ತಯಾರಿಸಿದ ಕಡುಬು, ಬೇಯಿಸಿದ ಅಲಸಂದೆ ಕಾಳುಗಳು, ಬೆಲ್ಲದ ಪಾನಕನೀರು ಮತ್ತು ಹೆಂಡ ಅಥವಾ ಸರಾಯಿಯನ್ನು ವಿಶೇಷ ನೈವೇದ್ಯವನ್ನಾಗಿ ಅರ್ಪಿಸುತ್ತಾರೆ. ಕುಲಸ್ಥರು ಪಾರಂಪರಿಕ ವಾದ್ಯಮೇಳಗಳೊಂದಿಗೆ ಭಕ್ತಿಗೀತೆಗಳೊಂದಿಗೆ ಮಂಗಳ ಹಾಡುವರು.*(ಭಾ:೫.೨೮).*

**'ಒಕ್ಕಪೊದ್ದು ಚೆಲ್ಲಿಚೆದಿ' (ಒಂದೊತ್ತು ನೆರವೇರಿಸುವುದು)**

ಸುಂಕ್ಲಮ್ಮ ದೇವರ ಆಚರಣೆಯ ಸಂದರ್ಭದಲ್ಲಿ ಒಂದೊಪ್ಪುತ್ತು ಇದ್ದ ಯಜಮಾನ ಅಥವಾ ಯಜಮಾನಿ ದೇವರಿಗೆ ಸಲ್ಲಿಸಿದ ನೈವೇದ್ಯವನ್ನು ತೆಗೆದುಕೊಂಡು ಭಾಗವಹಿಸಿದ ಕುಲಸ್ಥರಿಗೆ ತಿಳಿಸಿ ಒಕ್ಕಪೊದ್ದು ಚೆಲ್ಲಿಸ್ತುನ್ನ ಅಂದರೆ ಒಂದೊಪ್ಪುತ್ತು ನೆರವೇರಿಸಿದ್ದೇನೆ ಎಂದು ಹೇಳಿ ಸೇವಿಸುತ್ತಾರೆ. ಇದನ್ನು 'ಒಕ್ಕಪೊದ್ದು ಚೆಲ್ಲಿಚೆದಿ' (ಒಂದೊತ್ತು ನೆರವೇರಿಸುವುದು) ಎಂತಲೂ ಕರೆಯುತ್ತಾರೆ. ನಂತರ ಭಾಗವಹಿಸಿದ ಸಮಸ್ತ ಕುಲಸ್ತರಿಗೆ ಕಡುಬು, ಅಲಸಂದಿ ಕಾಳು, ಬೆಲ್ಲದಪಾನಕ ಮತ್ತು ಹೆಂಡ ಸರಾಯಿ ಕೊಡುವರು.*(ಭಾ:೫.೨೯)* ಕೆಲವರು ಶಕ್ತನುಸಾರವಾಗಿ ಅವರವರ ಮನೆಮುಂದೆ ಕುರಿ ಕೋಳಿಗಳನ್ನು ಬಲಿ ನೀಡುತ್ತಾರೆ. ನಂತರ ಮರುದಿನ ಬೆಳಿಗ್ಗೆ ಮತ್ತೆ ಕುಲಸ್ಥರನ್ನು ಸೇರಿಸಿ ಭಜನೆ ಮಾಡಿಸಿ ದೇವರನ್ನು ಇಳಿಸಿ ತಮ್ಮ ಮನೆಯಲ್ಲಿ ಇಟ್ಟುಕೊಳ್ಳುವರು. ಭಾಗವಹಿಸಿದ ಸಮಸ್ತ ಕುಲಸ್ತರಿಗೆ ಟೀ(ಚಹಾ) ಮತ್ತು ಹೆಂಡ ಸರಾಯಿ ಕೊಟ್ಟು ಕಳಿಸುವರು. ದೂರದಿಂದ ಆಗಮಿಸಿದ ಬಂಧುಬಳಗಕ್ಕೆ ಬಂದುಹೋಗುವ ಬಸ್‌ಚಾರ್ಜ್ ಕೊಡುವ ಪದ್ಧತಿ ಇವರಿಲ್ಲಿದೆ. ವಿಶೇಷವಾಗಿ ಈ ರೀತಿಯ ಹಬ್ಬವನ್ನು ವರ್ಷಕ್ಕೊಮ್ಮೆ ಅಥವಾ ಎರಡು ವರ್ಷಕ್ಕೊಮ್ಮೆ ಆಚರಿಸುತ್ತಾರೆ.

**ಮಾರೆಮ್ಮ ದೇವರ ಆಚರಣೆ**

ಬುಡ್ಗ ಜಂಗಮರ ಕುಟುಂಬದಲ್ಲಿ ಮಾರೆಮ್ಮ ದೇವರ ಆಚರಣೆಯನ್ನು ವರ್ಷಕ್ಕೊಮ್ಮೆ ಅಥವಾ ಎರಡುವರ್ಷಕ್ಕೊಮ್ಮೆ ಆಚರಿಸುತ್ತಾರೆ. ಈ ಆಚರಣೆಯನ್ನು ಮಂಗಳವಾರ ಅಥವಾ ಶುಕ್ರವಾರದಂದು ಆಚರಿಸುತ್ತಾರೆ. ಅಂದು ಮನೆಯ ಯಜಮಾನ ಅಥವಾ ಯಾರಾದರೂ ಒಬ್ಬರು ಹಿರಿಯರು ಒಂದ್ಪೊತ್ತು ಇದ್ದು ಕಾರ್ಯವನ್ನು ನೆರವೇರಿಸಲಾಗುತ್ತದೆ. ಅಂದು ದೇವರಿಗೆ ಸಲ್ಲಿಸಬೇಕಾದ ನೈವೇದ್ಯ ಗಳಾದ ಅನ್ನ ಮತ್ತು ಪಲ್ಚುಮಲ್ಚು ಸಾರು (ಹುಣಸೆ ಹಣ್ಣಿನ ಹುಳಿ, ಈರುಳ್ಳಿ ಮತ್ತು ಸ್ವಲ್ಪ ಬೆಲ್ಲದಿಂದ ಮಾಡಿದ ಒಂದು ಸಾರು) ಅಡುಗೆಯನ್ನು ತಯಾರಿಸಿಕೊಳ್ಳುತ್ತಾರೆ. ನಂತರ ಒಂದು ಕುಂಭಕ್ಕೆ ಕುಂಕುಮ

ಭಂಡಾರ ಮತ್ತು ಬೇವಿನಸೊಪ್ಪು ಇಟ್ಟು ಪೂಜೆ ಮಾಡಿ, ತಯಾರಿಸಿದ ನೈವೇದ್ಯವನ್ನು ಅದರಲ್ಲಿ ಇಡುತ್ತಾರೆ. ಈ ಕುಂಭವನ್ನು ಒಂದ್ಹೊತ್ತು ಇದ್ದವರ ತಲೆಯಮೇಲೆ ಹೊತ್ತುಕೊಂಡು ಮೆರವಣಿಗೆ ಮೂಲಕ ದೇವಸ್ಥಾನಕ್ಕೆ ಹೋಗುತ್ತಾರೆ.*(ಛಾ:೫.೩೦)* ಜೊತೆಗೆ ಸೇರುಪಾವು ಅಕ್ಕಿ, ಎರಡು ಕೊಬ್ಬರಿ ಬಟ್ಲ, ಎರಡು ಉತ್ತುತ್ತಿ, ಒಳ್ಳೆಣ್ಣೆ, ಎಲೆಅಡಿಕೆ, ಸರಾಯಿ, ಕಾಯಿ, ಕಳಸ, ಹೂವಿನಹಾರ, ಬಲಿಕೊಡುವ ಕುರಿಕೋಳಿಗಳನ್ನು ತೆಗೆದುಕೊಂಡು ಹೋಗುತ್ತಾರೆ. ಮೆರವಣಿಗೆ ಸಂದರ್ಭದಲ್ಲಿ ಬಂದಿರುವ ಬಂಧುಬಳಗದವರು ಕುಂಭ ಹೊತ್ತಿರುವವರಿಗೆ ಹಣ ಮತ್ತು ಬಟ್ಟೆಗಳನ್ನು ಮುಯ್ಯಮಾಡುತ್ತಾರೆ. ದೇವಸ್ಥಾನದ ಸುತ್ತಾ ೩ ಅಥವಾ ೫ ಸುತ್ತಾ ಪ್ರದಕ್ಷಿಣೆ ಮಾಡುತ್ತಾರೆ, ಕೆಲವರು ದೀಡು ನಮಸ್ಕಾರ ಮಾಡುತ್ತಾರೆ. ನಂತರ ದೇವಸ್ಥಾನದಲ್ಲಿ ಕುಂಭವನ್ನು ಇಳಿಸಿ ದೇವರಿಗೆ ನೈವೇದ್ಯ, ಕಾಯಿ ಕರ್ಪೂರ ಕೊಟ್ಟು ಪೂಜೆ ಸಲ್ಲಿಸುತ್ತಾರೆ.

**ಜಲ್ತಾ (ವರಕೇಳುವ ಪದ್ಧತಿ)**

ಕುರಿಯನ್ನು ಬಲಿ ಕೊಡುವುದಕ್ಕೂ ಮುಂಚೆ ಕುರಿಗೆ ಕಾಲು ಮುಖ ತೊಳೆದು ಕುಂಕುಮ ಭಂಡಾರ ಹಚ್ಚಿ, ಬೇವಿನ ಸೊಪ್ಪಿನಹಾರ ಹಾಕಿ ಮತ್ತು ತಂದಿರುವ ನೈವೇದ್ಯವನ್ನು ತಿನ್ನಿಸಿ ನಮಸ್ಕರಿಸುತ್ತಾರೆ. ಕುಟುಂಬದವರು ಕುರಿಯನ್ನು ದೇವರ ಮುಂದೆ ನಿಲ್ಲಿಸಿ ನಮಗೆ ಆಯುಸ್ಸು ಆರೋಗ್ಯ ಕೊಟ್ಟು ಚೆನ್ನಾಗಿ ಕಾಪಾಡಿಕೊಂಡು ಬಾ ಎಂದು ವರವನ್ನು ಕೇಳುತ್ತಾರೆ. ಕುರಿಯು ಮೈತುಂಬಿ ತಲೆ ಅಲ್ಲಾಡಿಸಿ ಮೈ ಜಾಡಿಸಿ ಸೀನಿದರೆ' ವರ ಕೊಟ್ಟಿದ್ದಾಳೆ ಎಂದು ಭಾವಿಸುತ್ತಾರೆ. ಇದನ್ನು ಬುಡ್ಗ ಜಂಗಮರು 'ಜಲ್ತಾ' ಇಚ್ಚಿಂದಿ ಎಂದು ಕರೆಯುತ್ತಾರೆ. ಒಂದು ವೇಳೆ ವರ ಕೊಡಲು ಮೀನಾಮೇಷ ಮಾಡಿದರೆ ನಾವೇನೋ ತಪ್ಪುಮಾಡಿದ್ದೇವೆ ಎಂದು ತಿಳಿಯುತ್ತಾರೆ. ಕುಟುಂಬದ ಹಿರಿಯ ಸದಸ್ಯರೆಲ್ಲರೂ ಕುರಿಯ ಕಾಲಿಗೆ ನೀರು ಹಾಕಿ ನಮಸ್ಕರಿಸಿ ಮತ್ತೊಮ್ಮೆ ಈರೀತಿಯಾಗಿ 'ನಾವು ಮಾನವರು ತಿಳಿದು ತಿಳಿಯದೇ ತಪ್ಪು ಮಾಡಿರುತ್ತೇವೆ, ನೀವು ದೇವರುಗಳು ನಮ್ಮ ತಪ್ಪು ಒಪ್ಪುಗಳನ್ನು ಮನ್ನಿಸಿ ನಮಗೆ ಏನೂ ತೊಂದರೆ ಆಗದಂತೆ, ನೂರುಕಾಲ ಆಯುಸ್ಸು ಆರೋಗ್ಯ ಕೊಟ್ಟು, ಚೆನ್ನಾಗಿ ಕಾಪಾಡಿಕೊಂಡು ಬರ್ತಿನಿ ಎಂದು ವರಕೊಡು ಮುಂದೆ ಇದೇರೀತಿ ಪ್ರತಿವರ್ಷ ನಿನಗೆ ಬೇಟೆಯೊಂದಿಗೆ ಜಾತ್ರೆ ಮಾಡುತ್ತೇವೆ ಎಂದು ವರವನ್ನು ಕೇಳುತ್ತಾರೆ. ನಂತರ ಕುರಿ ಮೈಜಾಡಿಸಿದರೆ ದೇವರು ವರ ಕೊಟ್ಟಿದೆ ಎಂದು ತಿಳಿಯುತ್ತಾರೆ. ನಂತರ ಮೊದಲು ಕುರಿಯ ಕುತ್ತಿಗೆ ಮತ್ತು ಬಲಗಾಲನ್ನು ಕೊಯ್ಯುತ್ತಾರೆ. ನಂತರ ಕುರಿಯ ಬಾಯಿಗೆ ಕೊಯ್ದ ಬಲಗಾಲನ್ನು ಇಟ್ಟು ಮೇಲೆ ನೀರನ್ನು ಹಾಕುತ್ತಾರೆ. ನಂತರ ಎಲ್ಲರೂ ನಮಸ್ಕರಿಸಿ ಮಂಗಳಾರತಿ ಮಾಡುತ್ತಾರೆ. ಬಾಡೂಟ ತಯಾರಿಸಿ ಮೊದಲು ದೇವರಿಗೆ ಎಡೆಕೊಟ್ಟ ನಂತರ ಬಂದಂತಹ ಬಂಧುಬಳಗಕ್ಕೆ ಹೆಂಡ ಸರಾಯಿ ಕೊಟ್ಟು, ಬಾಡೂಟ ಮಾಡಿ ತಮ್ಮ ಊರುಗಳಿಗೆ ಹೋಗುತ್ತಾರೆ. ತಮ್ಮ ಬಂಧುಗಳಿಗೆ ಬಂದುಹೋಗುವ ಬಸ್‌ಚಾರ್ಜ್‌ನ್ನು ಕೊಟ್ಟು ಕಳುಸುವ ಪದ್ಧತಿಯನ್ನು ಹೊಂದಿದ್ದಾರೆ. ಈ ರೀತಿಯಾಗಿ ಬುಡ್ಗ ಜಂಗಮರು ಮಾರೆಮ್ಮ ದೇವರ ಆಚರಣೆಯನ್ನು ವಿಶೇಷವಾಗಿ ಹಾಗೂ ವಿಶಿಷ್ಟವಾಗಿ ಆಚರಿಸುತ್ತಾರೆ.

**ಚೂಸುಕುನೇದಿ(ಪಾರಂಪರಿಕ ಪ್ರೇತಾರಾಧನೆ)**

ಬುಡ್ಗ ಜಂಗಮರು ತಮ್ಮ ಧಾರ್ಮಿಕ ಜೀವನದಲ್ಲಿ ಅನೇಕ ಅಚಾರ ವಿಚಾರಗಳು, ಸಂಪ್ರದಾಯಗಳು, ಕಟ್ಟು ಪಾಡುಗಳು, ನೀತಿ ನಿಯಮಗಳು, ನಂಬಿಕೆಗಳು, ನಿಷೇಧಗಳನ್ನು ಇವುಗಳನ್ನು ನಂಬಿಕೊಂಡು ವಿಶಿಷ್ಟವಾಗಿ ಆಚರಿಸುತ್ತಾ ಪಾಲಿಸುತ್ತಾ ಬಂದಿದ್ದಾರೆ. ಅದರಲ್ಲಿ ವಿಶೇಷವಾಗಿ ಚೂಸುಕುನೇದಿ ಅಥವಾ ಪ್ರೇತಾರಾಧನೆ ಆಚರಣೆಯು ಒಂದು.

ಆದಿಮಾನವರು ಗುಡ್ಡಗಾಡು ಪ್ರದೇಶಗಳಲ್ಲಿ ಗುಹೆಗಳ್ಲಲ್ಲಿ ವಾಸಿಸುವಾಗ ಸತ್ತ ತಮ್ಮ ಹಿರಿಯರನ್ನು ಅಲ್ಲಿಯೆ ಹೂಳಿ ಬೇರೋಂದು ಪ್ರದೇಶಗಳಿಗೆ ವಲಸೆ ಹೋಗುತ್ತಿದ್ದರು. ಮೊದಲಿದ್ದ ಗುಡ್ಡಗಾಡು ಗುಹೆಗಳಲ್ಲಿ ತಮ್ಮ ಪಿತೃಗಳ ಆತ್ಮ ಇರುವುದೆಂದು ಅವುಗಳನ್ನು ಪೂಜಿಸಲಾರಂಭಿಸಿದರು. ಗುಡ್ಡಗುಹೆಗಳಲ್ಲಿ ಪಿತೃಗಳ ಆತ್ಮ ಇರುವಂತೆ ಹೊಳೆ, ಹಳ್ಳ, ನದಿ, ಗಿಡ, ಸೂರ್ಯ, ಚಂದ್ರ, ನಕ್ಷತ್ರಗಳಲ್ಲಿ ಆತ್ಮ ಇದೆ ಎಂದು ಭಾವಿಸಿ, ಕಾಡು ಮಾನವರು ಅವುಗಳನ್ನು ಪೂಜಿಸಲಾರಂಭಿಸಿದರು. "The religion of Primitive man when he was a savage was animism. The animist believed that all things whether living or nonliving had souls or Spirits. Thus he worshipped even in animate things like mountains, rivers, Oceans, Sun, Moon idols etc"[೪]. ಬುಡ್ಗ ಜಂಗಮರಲ್ಲಿ ಮರಣ ಹೊಂದಿರುವ ವ್ಯಕ್ತಿಗಳಲ್ಲಿ ಆತ್ಮಗಳು (ಪ್ರೇತಗಳು) ಗಾಳಿಯಲ್ಲಿ ಜೀವಂತವಾಗಿರುತ್ತವೆ ಎಂಬ ನಂಬಿಕೆ ಇವರಲ್ಲಿದೆ. ಇವುಗಳನ್ನು ದೈವಗಳೆಂದು ಭಾವಿಸುತ್ತಾರೆ.

**ಮುಡುಪು(ಹರಕೆ) ಕಟ್ಟುವುದು:** ಮುಡುಪು ಕಟ್ಟುವುದು ಎಂಬುದು ಬುಡ್ಗ ಜಂಗಮರ ಆಚರಣೆಗಳಲ್ಲಿ ಒಂದು. ಇದು ಕೇವಲ ಬುಡ್ಗ ಜಂಗಮರಷ್ಟೇ ಅಲ್ಲದೇ ದಕ್ಷಿಣ ಭಾರತದ ಇತರೆ ಪ್ರಾಂತ್ಯಗಳಲ್ಲಿ ಆಚರಿಸುವುದು ಕಂಡುಬರುತ್ತದೆ.

ಅನಾರೋಗ್ಯದಿಂದ ನರಳುತ್ತಿರುವ ವ್ಯಕ್ತಿಯ ಕೈಗೆ ಅಥವಾ ಕೊರಳಿಗೆ ದೈವದ ಹೆಸರಿನಲ್ಲಿ ಎರಡಾಣೆ(ಬೇಡ) ನಾಣ್ಯವನ್ನು ಕಟ್ಟುತ್ತಾರೆ. ದೈವ ಯಾವುದೇ ಇರಲಿ ಮಾಡಿಕೊಳ್ಳುವ ಹರಕೆ ಅಥವಾ ಪ್ರತಿಜ್ಞೆಯನ್ನೇ ಹರಕೆ ಅಥವಾ ಮುಡುಪು ಎಂದು ಕರೆಯುವರು. ಹರಕೆ ಕಟ್ಟಿಕೊಂಡವರು ತಮ್ಮ ಕೋರಿಕೆ ನೆರವೇರಿದರೆ ಕುರಿಕೋಳಿ ಬಲಿಕೊಡುತ್ತೇವೆಂದು ಆಣೆ ಮಾಡುವರು.

ಬಿಡಾರದಲ್ಲಿ ಯಾರಿಗಾದರೂ ಕನಸಿನಲ್ಲಿ ನನಗೆ ಹಸಿವುಯಾಗಿದೆ, ನನಗೆ ಒಂದು ಮುದ್ದೆಕೊಡಿ ಎಂದು ಕೇಳಿದರೆ, ಕುತ್ತಿಗೆ ಇಸುಕಿದಂತಾದರೆ, ಕೈ ಹಿಡಿದು ಎಳೆದಂತಾದರೆ, ಕೆಲವೊಂದು ಸಾರಿ ಸತ್ತುಹೋದ ವ್ಯಕ್ತಿ ಮಾತನಾಡಿದಂತೆ ಕೇಳಿಸಿದರೆ, ಕೆಲವುಸಾರಿ ಹೊಟ್ಟೆನೋವು ಬರುತ್ತದೆ, ಎದೆ ನೋವು ಬಂದರೆ, ಒಂದೊಂದು ಸಲ ಮನಸ್ಸು ಸ್ಥಿಮಿತ ಕಳೆದುಕೊಂಡು ಹುಚ್ಚುಚ್ಚಾಗಿ ಮಾತನಾಡುವುದು ಕಂಡುಬಂದರೆ, ಕೊನೆಗೆ ಅವರನ್ನು ಆಸ್ಪತ್ರೆಗಳಲ್ಲಿ ತೋರಿಸಿದರೂ ವಾಸಿಯಾಗದಿದ್ದರೆ ಇಂತಹ ಲಕ್ಷಣಗಳನ್ನು ದೈವದ ಲಕ್ಷಣಗಳೆಂದು, ಆತ್ಮ, ಪ್ರೇತಾ, ಗಾಳಿ ಎಂದು ಭಾವಿಸುತ್ತಾರೆ. ಇವರಿಗೆ ಯಾವುದೋ ಒಂದು ಶಕ್ತಿ ದೈವವಾಗಿ ಬಂದಿದೆಂದು ತಿಳಿಯುತ್ತಾರೆ. ಕುಲಸ್ಥರು ಯಾವ ದೇವರು,

ಯಾವ ದಿಂಡರು ಬಂದಾರೋ ಎಂದು ತಿಳಿದುಕೊಳ್ಳಲು, ಒಂದು ಬಟ್ಟೆಯ ದಾರದಲ್ಲಿ ಅರಿಷಿಣ ಹಚ್ಚಿ ಅದರಲ್ಲಿ ರೂಪಾಯಿ ನಾಣ್ಯವನ್ನು ಇಟ್ಟು ದೇವರ ಹೆಸರಿನಲ್ಲಿ ಹರಕೆಕಟ್ಟಿ ಅನಾರೋಗ್ಯದಿಂದ ನರಳುತ್ತಿರುವ ವ್ಯಕ್ತಿಯ ಬಲಗೈಗೆ ಕಟ್ಟುತ್ತಾರೆ. ಇದನ್ನು ಮುಡುಪು ಕಟ್ಟುವುದು ಎಂದು ಕರೆಯುತ್ತಾರೆ. ನಂತರ ಬಿಡಾರದ ಕುಲಸ್ಥರೆಲ್ಲರೂ ಸೇರಿ ತಮ್ಮದೇಯಾದ ರೀತಿಯಲ್ಲಿ ಶೋಧನೆ ಮಾಡಿ ಅವುಗಳಿಗೆ ಮುಡುಪು(ಹರಕೆ) ಕಟ್ಟಿಕೊಂಡು ಪರಿಹಾರ ಕಂಡುಕೊಳ್ಳುತ್ತಾರೆ.

ದೈವವನ್ನು ಕೆಲವರು ಆತ್ಮ, ಗಾಳಿ, ದೆವ್ವ, ಪ್ರೇತ, ಭೂತಗಳು ಎಂತಲೂ ಕರೆಯುತ್ತಾರೆ. ಸಮುದಾಯದ ಕುಲಸ್ಥರೆಲ್ಲರೂ ಸೇರಿ ಅನಾರೋಗ್ಯದಿಂದ ನರಳುತ್ತಿರುವ ವ್ಯಕ್ತಿಯ ಮನೆಗೆ ಹೋಗಿ ಸಮಸ್ಯೆಗೆ ಸಹಕರಿಸಿ ಶೋಧನೆಯನ್ನು ಪ್ರಾರಂಭಿಸುತ್ತಾರೆ.

ಈ ಆತ್ಮಗಳು ಭೂಮಿಯ ಮೇಲೆ ಮತ್ತು ಆಕಾಶದ ಕೆಳಗೆ ಈ ಎರಡು ಲೋಕದ ಮಧ್ಯದಲ್ಲಿ ಆತ್ಮಗಳು ತಿರುಗುತ್ತಿರುತ್ತವೆ ಎಂದು ಡಾ ಎ ಎಸ್ ಪ್ರಭಾಕರ್ ಅವರು ಹೇಳುತ್ತಾರೆ. ಈ ರೀತಿಯ ಆಗೋಚರವಾದ ಶಕ್ತಿಗಳನ್ನು ಅಲೆಮಾರಿ ಬುಡಕಟ್ಟು ಸಮುದಾಯಗಳು ಒಂದು ನಂಬಿಕೆಯಾಗಿ, ಒಂದು ತಿಳುವಳಿಕೆಯಾಗಿ, ಪರಂಪರಾಗತವಾಗಿ ಇವುಗಳನ್ನು ಆಚರಿಸಿಕೊಂಡು ತಮ್ಮ ಸಮಸ್ಯೆಗಳನ್ನು ತಾವೇ ಬಗೆಹರಿಸಿಕೊಳ್ಳುವ ಕ್ರಮಗಳನ್ನು ಆಚರಣೆಗಳ ಮೂಲಕ ಕಂಡುಕೊಂಡಿದ್ದಾರೆ.

**ಪ್ರೇತಾರಾಧನೆ ಶೋಧನೆಗೆ ಬಳಸುವ ವಸ್ತುಗಳು**

೧. ಒಂದು ರಾಗಿ ಬಿಂದಿಗೆ ಅಥವಾ ಪ್ಲಾಸ್ಟಿಕ್ ಬಿಂದಿಗೆ

೨. ಎರೆಡು ಕೌದಿಗಳು (ಬೆಡ್‌ಸೀಟ್)

೩. ಬೆಂಕಿಯ ಕೆಂಡ

೪. ಅರಿಷಿಣ ಪುಡಿ

**ಪ್ರೇತವನ್ನು ಶೋಧಿಸುವ ಕ್ರಮ:** ಈ ಆಚರಣೆಯಲ್ಲಿ ಸಮಸ್ಯೆಯನ್ನು ಹೊಂದಿರುವ ವ್ಯಕ್ತಿಯನ್ನು ಗೋಚರಶಕ್ತಿ, ಸಮಸ್ಯೆಯನ್ನು ಕೊಟ್ಟಿರುವ ಶಕ್ತಿಯನ್ನು ಅಗೋಚರವಾದ ಶಕ್ತಿಗಳೆಂದು ಬುಡ್ಗ ಜಂಗಮರು ತಿಳಿದಿರುತ್ತಾರೆ. ಇವರು ಅವುಗಳೊಂದಿಗೆ ಮೌಖಿಕವಾಗಿ ಸಂವಾದ ಮಾಡುತ್ತಾರೆ. ಸಮಸ್ಯೆ ಹೊಂದಿರುವ ವ್ಯಕ್ತಿಯ ಮನೆಯ ಮುಂಭಾಗದಲ್ಲಿ ಸಗಣಿಯಿಂದ ಅಂಗಳವನ್ನು ಸಾರಿಸಿ, ಅದರಮೇಲೆ ಬೆಂಕಿಕೆಂಡವನ್ನು ನಂತರ ಅದಕ್ಕೆ ಅರಿಷಿಣಪುಡಿ ಹಾಕುತ್ತಾರೆ. ಹೀಗೆ ಮಾಡುವುದರಿಂದ ಒಂದು ಅಗೋಚರವಾದ ಶಕ್ತಿ ಉದ್ಭವಿಸಲು ಸಹಕಾರಿಯಾಗುತ್ತದೆ. ಒಂದು ರಾಗಿಬಿಂದಿಗೆಗೆ ಅರಿಷಿಣವನ್ನು ಹಚ್ಚಿ ಸುತ್ತಮುತ್ತಲಿರುವ ದೇವರಗಳನ್ನು ನೆನೆದು, ಕುಲಸ್ಥರಿಗೆ ನಮಸ್ಕರಿಸುತ್ತಾರೆ. ಬೆಂಕಿಕೆಂಡವನ್ನು ಹಾಕಿದ ಸ್ಥಳದಲ್ಲಿ ಪೂರ್ವ ಪಶ್ಚಿಮ ಅಭಿಮುಖವಾಗಿ ಇಬ್ಬರು ವ್ಯಕ್ತಿಗಳು ಬಿಂದಿಗೆಯನ್ನು ಬಾರ್ಲಹಾಕಿ ಬಿಂದಿಗೆಯ ಕಂಟವನ್ನು ಎರಡು ಕೈಗಳಿಂದ ಕುಲುಕಿಹಿಡಿದು ಕುಳಿತುಕೊಳ್ಳುತ್ತಾರೆ. ಮತ್ತು ಉತ್ತರದಕ್ಷಿಣ ಅಭಿಮುಖವಾಗಿ ಬಿಂದಿಗೆಯನ್ನು ಹಿಡಿಯಲು ಕೌದಿಯನ್ನು ಹಿಡಿದುಕೊಳ್ಳಲು ಇಬ್ಬರು ವ್ಯಕ್ತಿಗಳು ನಿಂತಿರುತ್ತಾರೆ. ಎಲ್ಲಾರು ಶಾಂತರೀತಿಯಿಂದ ಮೌನವಾಗಿರುತ್ತಾರೆ.

**ಪ್ರೇತವನ್ನು ಶೋಧಿಸುವ ಸಂಭಾಷಣೆ**: ಕುಲದ ಹಿರಿಯ ಮುಖಂಡರಾದವರು ಬಿಂದಿಗೆಗೆ ನಮಸ್ಕರಿಸಿ ಬಿಂದಿಗೆ ಮುಂದೆ ತಮ್ಮ ಕಷ್ಟಕಾರ್ಪಣ್ಯಗಳನ್ನು ವ್ಯಕ್ತಪಡಿಸುತ್ತಾರೆ. ಇಂತಹ ಬೆಡಗಿನವರ ಮನೆಯಲ್ಲಿ ಇಂತವರು ಅನಾರೋಗ್ಯದಿಂದ ನರಳುತ್ತಿದ್ದಾರೆ ಅದಕ್ಕಾಗಿ ನೀವು ಯಾರು? ದೇವರುಗಳೋ ಅಥವಾ ದೈವನೋ(ಆತ್ಮಗಳು) ಯಾರು ಎಂದು ನಮಗೆ ಒಂದು ತಿಳಿಯುವುದಿಲ್ಲ. ನೀವು ದೇವರಾದರೆ ಇಂಟಿಕೊಂಗು(ಬಲಭಾಗಕ್ಕೆ), ಇಲ್ಲ; ಗಾಳಿದೇವರುಗಳಾದರೆ ಗರ್ರನೆ ತಿರುಗಿ ಎಡಭಾಗಕ್ಕೆ (ಕುಲಂಕೊಂಗು)ಕುಲಸ್ಥರ ಸೆರಿಗೆಗೆ ಬೀಳಬೇಕು ನಿಮ್ಮ ಪಾದಕ್ಕೆ ಶರಣು ಶರಣಾರ್ಥಿ ದಯವಿಟ್ಟು ತಿಳಿಸಿ ಎಂದು ಕೇಳಿಕೊಳ್ಳುತ್ತಾರೆ. ಆಗ ಬಿಂದಿಗೆಗೆ ಒಂದು ಅಗೋಚರವಾದ ಶಕ್ತಿಯನ್ನು ತುಂಬಿಕೊಂಡು ಗರ್ರನೆ ತಿರುಗಿ ಯಾವುದಾದರೂ ಒಂದು ಭಾಗಕ್ಕೆ ಬೀಳುತ್ತದೆ. ನೀವು ದೇವರಾದರೆ ಬಲಭಾಗಕ್ಕೆ, ಇಲ್ಲ ಗಾಳಿದೇವರಾದರೆ ಎಡಭಾಗಕ್ಕೆ ಬೀಳಬೇಕು ಎಂದು ಕೇಳಿಕೊಳ್ಳುತ್ತಾರೆ. ಬಿಂದಿಗೆ ಗರ್ರನೆ ತಿರುಗಿ ಬಲಭಾಗಕ್ಕೆ ಅಥವಾ ಎಡಭಾಗಕ್ಕೆ ಬೀಳುತ್ತದೆ. ಬಿದ್ದಂತಹ ಬಿಂದಿಗೆ ಯಾವ ಭಾಗದಲ್ಲಿ ಬಿದ್ದಿರುವುದನ್ನು ನೋಡಿ ಮುಂದಿನ ಪ್ರಶ್ನೆಯನ್ನು ಈ ರೀತಿಯಾಗಿ ಕೇಳುತ್ತಾರೆ "ಒಂದುವೇಳೆ ಹೌದಾದರೆ, ನಾವೇ ಗಾಳಿದೇವರು ಬಂದಿರುವುದು, ಬೇರೆಯಾವ ದೇವರಲ್ಲ ಎಂದು ಪ್ರಮಾಣ ಸತ್ಯವಾಗಿ ಮೂರುಬಾರಿ ಗರ್ರನೆ ತಿರುಗಿ ಬಲಭಾಗಕ್ಕೆ ಬೀಳಬೇಕು; ಇಲ್ಲಂದರೆ ಎಡಭಾಗಕ್ಕೆ ಬೀಳಬೇಕು ಎಂದು ಕೇಳುತ್ತಾರೆ. ಅದು ಗರ್ರನೆ ತಿರುಗಿ ಮೂರುಬಾರಿ ಬಲಭಾಗಕ್ಕೆ ಬಿಳುತ್ತದೆ. ಹಾಗಾದರೆ ಗಾಳಿ ದೇವರಾದರೆ ಎಷ್ಟು ಜನ ಬಂದಿದ್ದೀರಿ? ಅಷ್ಟು ಬಾರಿ ಬಲಭಾಗಕ್ಕೆ ಬೀಳಬೇಕು ಎಂದು ಕೇಳಿಕೊಂಡಾಗ ಅವರು ಮೂರುಜನ, ಅಥವಾ ಐದುಜನ ಹೀಗೆ ಎಷ್ಟು ಜನ ಬಂದಿರುತ್ತಾರೋ ಅಷ್ಟು ಬಾರಿ ಬೀಳುತ್ತದೆ. ನಂತರ ಯಾವ ದಿಕ್ಕಿನಿಂದ ಬಂದಿದ್ದೀರಿ ನಮಗೆ ಗೊತ್ತಾಗಬೇಕಲ್ವ ಎಂದು ದಿಕ್ಕುಗಳ ಹೆಸರುಗಳನ್ನು ಕೇಳುತ್ತಾರೆ. ನಂತರ ಇಂತಹ ದಿಕ್ಕಿನಿಂದ ಬಂದಿದ್ದಾರೆ ಎಂದು ತಿಳಿಸುತ್ತದೆ. ಅಗ ಮುಂದೆ ಬಂದ ದಿಕ್ಕು ಆದ ನಂತರ ಯಾವ ಊರುಗಳಿಂದ ಬಂದಿದ್ದೀರಿ ಎಂದು ಕೇಳುತ್ತಾರೆ. ಆಗ ಕುಲಸ್ಥರು ಆಯಾ ದಿಕ್ಕಿನಲ್ಲಿರುವ ನೆಲೆಸಿರುವ ಸಮುದಾಯದವರ ಊರುಗಳ ಹೆಸರುಗಳನ್ನು ಕೇಳುತ್ತಾರೆ. ಉದಾ: ಪೂರ್ವ ದಿಕ್ಕಿನಿಂದ ಬಂದರೆ ಹೊಸ್ಸಳ್ಳಿ, ಹಳೇಕೋಟೆ, ಕುರುಗೋಡು ಎಂದು ಊರುಗಳ ಹೆಸರುಗಳನ್ನು ಪ್ರಸ್ತಾಪಿಸುತ್ತಾರೆ. ಇಂತಹ ಊರಿನಿಂದ ಬಂದಿದ್ದಿವಿ ಎಂದು ಪ್ರಮಾಣ ಸತ್ಯವಾಗಿ ತಿಳಿಸುತ್ತಾರೆ. ಊರು ನಿಖರವಾದ ಮೇಲೆ ಅವರ ಬೆಡಗುಗಳನ್ನು ಕೇಳುತ್ತಾರೆ. ಉದಾ: ಅಶ್ವಿ, ಯಡವಲಿ, ಕೊಂಡಪಲ್ಲಿ, ಮೋತಿ, ರುದ್ರಾಕ್ಷಿ, ವಿಭೂತಿ ಇತ್ಯಾದಿ. ಇಂತಹ ಬೆಡಗಿನಿಂದ ಬಂದಿದ್ದೀವಿ ಎಂದು ತಿಳಿಸುತ್ತಾರೆ. ಬೆಡಗುಗಳು ನಂತರ, ನೇರವಾಗಿ ಮರಣಹೊಂದಿದವರ ಹಿರಿಯವರ ಹೆಸರುಗಳನ್ನು ಹೇಳುತ್ತಾರೆ. ನಂತರ ಇಂತವರೇ ಬಂದಿದ್ದೇವೆ ಎಂದು ತಿಳಿಸಿದಾಗ ಅವರಿಗೆ ಎಷ್ಟು ಜನ ಹೆಂಡತಿಯರು?, ಎಷ್ಟುಜನ ಮಕ್ಕಳು?, ಅಷ್ಟು ಬಾರಿ ಬಲಭಾಗಕ್ಕೆ ಬೀಳಬೇಕು ಎಂದು ಕೇಳಿಕೊಳ್ಳುತ್ತಾರೆ ಏಕೆಂದರೆ ನೆರೆದಿರುವ ಕುಲಸ್ಥರಿಗೆ ಸತ್ಯ ಮತ್ತು ನಿಖರವಾಗಿ ಗೊತ್ತಾಗಬೇಕೆಂದು ಈ ರೀತಿಯಾಗಿ ಕೇಳುತ್ತಾರೆ.

ದೈವಗಳು ಇಂತವರು ಎಂದು ಗೊತ್ತಾದ ಮೇಲೆ ನೀವು ದೊಡ್ಡವರು, ತಿಳಿದಂತವರು, ನೀವು ಮಾತಿಗೆ ಬೆಲೆ ಕೊಟ್ಟು ಬದುಕಿ ಬಾಳಿದವರು ಎಂದು ಅವರ ಗುಣಗಾನ ಮಾಡುತ್ತಾ, ಒಬ್ಬರ ಮನೆಯಿಂದ ಇನ್ನೊಬ್ಬರ ಮನೆಗೆ ಹೋಗಬಾರದಾಗಿತ್ತು ಎಂದು ಬೈದುಕೊಳ್ಳುತ್ತಾರೆ. ನೋಡಪ್ಪ

ಸ್ವಾಮಿ ನಿಮ್ಮ ಬಯಕೆಯ ಬುತ್ತಿ ಏನಿದಿಯೋ ಅದನ್ನು ನಿಮಗೆ ಕೊಡುತ್ತಿವಿ. ನಮ್ಮ ಮಗನಿಗೆ ಕೊಟ್ಟಿರುವ ಆಪತ್ತು, ಕಷ್ಟ, ರೋಗವನ್ನು ವಾಪಿಸಿಮಾಡು ಎಂದು ಕೇಳಿಕೊಳ್ಳುತ್ತಾರೆ. ಈಗ ಅವನ ಕಷ್ಟ, ಆಪತ್ತು ಎಲ್ಲಾ ಭಾರವನ್ನು ಎಳೆದುಕೊಂಡು ಅವನಿಗೆ ಈ ಕ್ಷಣದಲ್ಲಿ ಏನೂ ತೊಂದರೆ ಇಲ್ಲದಂಗೆ ಸರಿಮಾಡಿಕೊಂಡು ಬರುತ್ತೀವಿ ಎಂದು ನೆರೆದಿರುವ ಕುಲಸ್ಥರಿಗೆ ಮಾತು ಕೊಡಿ ಎಂದು ಎಂದು ಕೇಳಿಕೊಳ್ಳುತ್ತಾರೆ. ಅದೇ ರೀತಿಯಾಗಿ ಒಪ್ಪಿಕೊಂಡು ಪ್ರಮಾಣವನ್ನು ಮಾಡುತ್ತಾರೆ. ಬಂದಿರುವ ದೈವವನ್ನು ಗುರುತಿಸಿ ನೋಡಿ ಸ್ವಾಮಿ ನಾನು ಬಡವ ಬಹಳಷ್ಟು ಸಾಲಸೂಲಮಾಡಿ ಕಷ್ಟದಲ್ಲಿದಿನಿ. ಏನೋ ನನ್ನ ಕೈಲಾಗಿದಷ್ಟು ನಿನಗೆ ತುತ್ತು ಅನ್ನಸಾಂಬರು, ಬೀಡಿ ಸಿಗರೇಟ್, ಒಂದು ಬಾಟ್ಲಿ ಸರಾಯಿ, ಎಲೆ ಅಡಿಕೆ ಕೊಡುತ್ತೀನಿ ಅದನ್ನು ತಿಂದು ಸಂತೃಪ್ತಿಯಾಗಿ ನಿನ್ನ ದಾರಿ ಇಡಕೊಂಡು ನಿಮ್ಮೂರಿಗೆ ನಿಮ್ಮ ಮನೆಗೆ ಹೋಗು ಎಂದು ಕೇಳಿಕೊಳ್ಳುತ್ತಾರೆ. ಅದಕ್ಕೆ ದೈವಗಳು ಒಪ್ಪಿಕೊಂಡರೆ ಪರವಾಗಿಲ್ಲ, ಒಂದುವೇಳೆ ಸಾಲದು ಎಂದು ತೋರಿಸಿದರೆ ಕೋಳಿಯನ್ನು ಬಲಿಕೊಡುತ್ತೇವೆ ಎಂದು ಕೇಳಿಕೊಳ್ಳುತ್ತಾರೆ, ಆಗಲೂ ಸಾಲದು ಎಂದರೆ ನಾಲ್ಕು ಕಾಲಿನ ಮೇಕೆ ಕೊಡುತ್ತೇವೆ ಎಂದು ಕೇಳಿಕೊಳ್ಳುತ್ತಾರೆ, ಆಗ ದೈವಗಳು ಒಪ್ಪಿಕೊಳ್ಳುತ್ತವೆ. ಆಯಿತು ನಿನ್ನ ಕೋರಿಕೆ ಏನಿದೆಯೋ ನಿನ್ನ ಮುಡಿಪು ಮುಟ್ಟಿಸುತ್ತೇವೆ ಎಂದು ಹೇಳಿದ ನಂತರ ಕುಲಸ್ಥರು ಮತ್ತೇ ಬಿಂದಿಗೆಯನ್ನು ಪ್ರಶ್ನೆ ಮಾಡುತ್ತಾರೆ. ಇಂದಿನಿಂದ ಯಾವ ದಿನ ನಿಮ್ಮ ಜಾತ್ರೆ ಮಾಡಬೇಕು, ಅಷ್ಟು ಬಾರಿ ಬಲಭಾಗಕ್ಕೆ ಬೀಳಬೇಕು ಎಂದು ಕೇಳಿಕೊಂಡಾಗ ಅವರಿಗೆ ಸಮೀಪವಿರುವ ಬುಧವಾರ ಅಥವಾ ರವಿವಾರದದಿನ ಬರುವ ಅಷ್ಟುದಿನಗಳನ್ನು ಲೆಕ್ಕಹಾಕಿಕೊಂಡು ಬಲಭಾಗಕ್ಕೆ ಬೀಳುತ್ತದೆ. ಆ ದಿನ ಅವರ ಜಾತ್ರೆಯನ್ನು ಮಾಡಬೇಕಾಗುತ್ತದೆ. ನಂತರ ನಿಮ್ಮ ಜಾತ್ರೆ ಯಾವ ದಿಕ್ಕಿನಲ್ಲಿ ಮಾಡಬೇಕು ಎಂದು ದಿಕ್ಕನ್ನು ಕೇಳಿಕೊಂಡಾಗ ಯಾವ ದಿಕ್ಕನ್ನು ಸೂಚಿಸುತ್ತದೆಯೋ ಆ ದಿಕ್ಕಿನಲ್ಲಿ ಜಾತ್ರೆ ಮಾಡಬೇಕಾಗುತ್ತದೆ. ಆ ದಿಕ್ಕಿನಲ್ಲಿ ಗಿಡಮರ ದಟ್ಟವಾದ ಅರಣ್ಯ ಮತ್ತು ನೀರು ದೊರಕುವ ಸ್ಥಳ ಆತ್ಮಗಳಿಗೆ ತಿಳಿದಿರುತ್ತದೆ ಅಂತಹ ಜಾಗದ ದಿಕ್ಕನ್ನು ಸೂಚಿಸುತ್ತದೆ. ಬುಡ್ಗ ಜಂಗಮರ ಮೂಲ ವಾಸದ ಪರಿಕಲ್ಪನೆಯನ್ನು ಈ ಆಚರಣೆ ಮೂಲಕ ಕಂಡುಕೊಳ್ಳಬಹುದಾಗಿದೆ. ನಂತರ ಎಲ್ಲರೂ ನಮಸ್ಕಾರ ಮಾಡಿ, ಬಿಂದಿಗೆ ಹತ್ತಿರ ಬಂದು, ನೀವು ಕೇಳಿದ ಬುತ್ತಿಯನ್ನು, ಬೇಡಿಕೆಗಳನ್ನು ಈಡೇರಿಸುತ್ತೇವೆ ನಮಗೆ ಕಷ್ಟದಿಂದ ಪಾರುಮಾಡು ಎಂದು ನಮಸ್ಕರಿಸುತ್ತಾನೆ. ಮತ್ತೆ ಕುಲದ ಹಿರಿಯರು ಇನ್ನೊಂದು ಪ್ರಶ್ನೆಯನ್ನು ಕೇಳುತ್ತಾರೆ. ನೋಡಿ ದೈವಗಳೇ ನಾವು ಕೊಡುವ ಅನ್ನ ಬುತ್ತಿಯನ್ನು ನೀವು ಮನಸಾರೆ ತಿಂದು ಮತ್ತೆ ನಿಮ್ಮಮನೆಗೆ ಬರುವುದಿಲ್ಲ ಎಂದು ಮಾತುಕೊಡು ಎಂದು, ಬಿಂದಿಗೆ ಮೇಲೆ ಪಾಷಣ(ಕಲ್ಲು) ಇಟ್ಟು ಅದನ್ನು ಕೇಳುತ್ತಾರೆ. ಪಾಷಣ ಇಂಟುಕೊಂಗುಗೆ, ಬಿಂದಿಗೆ ಕುಲಂಕೊಂಗುಗೆ(ಕುಲದ ಸೆರಿಗಿಗೆ) ಬೀಳಬೇಕು ಎಂದು ಕೇಳಿಕೊಂಡಾಗ ಅದರಂತೆ ಮಾತನ್ನು ಕೊಡುತ್ತವೆ. ಕೆಲವುಕಡೆ ಪಾಷಣ ಬದಲು ಅರಿಷಿಣ ಕೊಂಬನ್ನು ಇಟ್ಟು ಪರಿಕ್ಷೀಸುತ್ತಾರೆ. ಬುಡ್ಗ ಜಂಗಮರು ಅರಿಷಿಣಕೊಂಬನ್ನು ಲಕ್ಷ್ಮೀ ಎಂದು ನಂಬುತ್ತಾರೆ. ನಂತರ ಎಲ್ಲರೂ ನಮಸ್ಕಾರ ಮಾಡಿ ಆಯಿತು ನಿಮ್ಮ ಪರೀಕ್ಷೆಯನ್ನು ನಾವು ಸಾಕುಮಾಡತ್ತೀವಿ ಇನ್ನೂ ಬಿಂದಿಗೆಯನ್ನು ಇಳಿಸುತ್ತೀವಿ ಎಂದು ಹೇಳಿ ನಮಸ್ಕರಿಸಿ ಇಳಿಸುತ್ತಾರೆ. ನಂತರ ಬಿಂದಿಗೆಯನ್ನು ಇಳಿಸಿ, ಬಂದಿರುವ ದೈವಗಳ ಹೆಸರಿನಲ್ಲಿ ಒಂದೊಂದು ಮುಡಪನ್ನು

ರೋಗಿಯ ಕೈಗೆ ಕಟ್ಟುತ್ತಾರೆ. ಎಲ್ಲರೂ ಕೈಕಾಲು ಮುಖ ತೊಳೆದುಕೊಂಡು ನೇರವಾಗಿ ಹೋಟಲ್‌ಗೆ ಹೋಗಿ ಚಹಾ ಕುಡಿಯೋರು ಚಹಾ ಕುಡಿಯುತ್ತಾರೆ, ಕೆಲವರು ಸಾರಾಯಿ ಕಡಿಯವರು ಸಾರಾಯಿ ಕುಡಿದು ಸೂತಕವನ್ನು ಕಳೆದುಕೊಳ್ಳುತ್ತಾರೆ. ಪರೀಕ್ಷೆ ಮಾಡಿದ ಸಂದರ್ಭದಲ್ಲಿ ಗತಿಸಿರುವ ಘಟನಾವಳಿಗಳನ್ನು ಅಲ್ಲಿ ಒಬ್ಬರಿಗೊಬ್ಬರು ಮೆಲುಕು ಹಾಕಿಕೊಳ್ಳುತ್ತಾರೆ. ಮುಂದೆ ಏನು ಮಾಡಬೇಕು ಹೇಗೆ ಮಾಡಬೇಕು ಎಂದೆಲ್ಲಾ ಚರ್ಚೆಗಳನ್ನು ಮಾಡುತ್ತಾರೆ. ಮತ್ತೆ ನೇರವಾಗಿ ರೋಗಿಯ ಮನೆಗೆ ಹೋಗಿ ಕೈಕಾಲು ಮುಖ ತೊಳೆದುಕೊಂಡು ನಂತರ ಅವರವರ ಮನೆಗೆ ಹೋಗುತ್ತಾರೆ. ವಿಶೇಷವಾಗಿ ಚಹಾ ಕುಡಿಯುವ ಸಂದರ್ಭದಲ್ಲಿ ಚಹಾ ಅಥವಾ ಹೆಂಡ ಸರಾಯಿಯನ್ನು ಮೊದಲು ಸ್ವಲ್ಪ ಭೂಮಿತಾಯಿಗೆ ಅರ್ಪಿಸಿ ನಂತರ ಕುಡಿಯುತ್ತಾರೆ. ಯಾವುದೇ ಊರಿಗೆ ಹೋಗುವ ಕುಲಸ್ಥನು ನೇರವಾಗಿ ಬೀಗರ ಮನೆಗೆ ಹೋಗುವಂತಿಲ್ಲ. ಹೋಟಲ್ ಅಂಗಡಿಯಲ್ಲಿ ನಿಂತು ಅಲ್ಲಿನ ಸ್ಥಳಿಯ ಕುಲಸ್ಥನನ್ನು ಕರೆಸಿಕೊಂಡು ಅವರವರ ಸ್ವತಂ ಖರ್ಚಿನಲ್ಲಿ ಚಹಾ ಅಥವಾ ಸರಾಯಿ ತೆಗೆದುಕೊಂಡು ಇಬ್ಬರು ಒಬಬ್ಬರಿಗೊಬ್ಬರು ಟೀ ಅಥವಾ ಸರಾಯಿಯನ್ನು ಮಿಶ್ರ ಮಾಡಿಕೊಂಡು ಸ್ವಲ್ಪ ಭೂಮಿತಾಯಿಗೆ ಸಮರ್ಪಿಸಿದ ನಂತರ ಕುಡಿಯುತ್ತಾರೆ. ಅಲ್ಲಿ ಊರಿಂದ ಬಂದಿರುವ ಸುದ್ದಿ ಸಮಾಚಾರಗಳನ್ನು ಒಬ್ಬರಿಗೊಬ್ಬರು ವಿನಿಮಯ ಮಾಡಿಕೊಳ್ಳುತ್ತಾರೆ. ಇದನ್ನು ಕಲ್ಚುಕುನೇದಿ ಎಂದು ಕರೆಯುತ್ತಾರೆ. ಈ ಒಂದು ಸಂಪ್ರದಾಯ ಈ ಬುಡ್ಗ ಜಂಗಮರಲ್ಲಿ ವಿಶೇಷವಾಗಿ ಚಾಚು ತಪ್ಪದೇ ಇಂದಿಗೂ ಅನುಸರಿಸುತ್ತಾ ಬರುತ್ತಿದ್ದಾರೆ.

**ಪ್ರೇತದ ದೈವಗಳಿಗೆ ಹರಕೆ ತೀರುಸುವ ಕ್ರಮ:** ಹರಕೆ ತೀರುಸುವ ದಿನದಂದು ಮಧ್ಯಾಹ್ನ ಸರಿಸುಮಾರು ಒಂದುಗಂಟೆ ಅಥವಾ ಎರಡುಗಂಟೆಗೆ ಮನೆಯಿಂದ ಎಲ್ಲಾ ಪರಿಕರವಸ್ತುಗಳನ್ನು ಮತ್ತು ಬಲಿಕೊಡುವ ಮೇಕೆ ಪ್ರಾಣಿಗಳನ್ನು ಕಟ್ಟಿಕೊಂಡು ಹಿಂದೆ ತಿರುಗಿ ನೋಡದಹಾಗೆ ಎಲ್ಲರೂ ಮೌನವಾಗಿ ಶೋಕಸ್ತರಾಗಿ ಕಾಡಿನಜಾಗಕ್ಕೆ ಹೋಗುತ್ತಾರೆ. (ಅದಕ್ಕಿಂತ ಮುಂಚೆನೇ ಕುಲದ ಹಿರಿಯ ವ್ಯಕ್ತಿಗಳು ಹೋಗಿ ಕಾಡಿನೊಳಗೆ ಹೋಗಿ ಜಾಗವನ್ನು ಎಲ್ಲಾ ಸ್ವಚ್ಚ ಮಾಡಿ ಬಂದಿರುತ್ತಾರೆ). ಹರಕೆ ತೀರುಸುವ ದಿನದಂದು ಸಮಸ್ಯೆ ಹೊಂದಿರುವ ಕುಟುಂಬದವರು ಮತ್ತು ಆ ಬಿಡಾರದ ಕುಲಸ್ತರೆಲ್ಲರೂ ಬೇರೆ ಎಲ್ಲಿಗೂ ಹೋಗುವಾಗೆ ಇಲ್ಲ, ಒಂದು ವೇಳೆ ಹೋಗಿದ್ದೇ ಆದರೆ ಏನಾದರೂ ಅನಾಹುತಗಳು ಜರಗುತ್ತವೆ ಎಂದು ನಂಬುತ್ತಾರೆ. ಕಾಡಿನೊಳಗೆ ಬಂದ ನಂತರ ಸ್ಥಳವನ್ನು ನೀರು ಹಾಕಿ ಸ್ವಚ್ಛ ಮಾಡುತ್ತಾರೆ. ಗುರುತಿಸಿಕೊಂಡ ಮೂರು ಅಥವಾ ಐದು ದೈವಗಳಿಗೆ ಅಂಬ್ರೆ (ತಂಗಡಿ)ಗಿಡದ ತೊಪ್ಪಲುಗಳಿಂದ ಚೌಕಕಾರವಾಗಿ ಪೂರ್ವದಿಕ್ಕಿನಲ್ಲಿ ಮುಖಮಾಡಿ ಸಣ್ಣಸಣ್ಣ ಮನೆಗಳನ್ನು ನಿರ್ಮಿಸುತ್ತಾರೆ. ನಂತರ ಮನೆಯ ಒಳಗೆ ಮತ್ತು ಮುಂದೆ ಸಗಣಿಯಿಂದ ನೆಲವನ್ನು ಸಾರಿಸಿ, ರಂಗೋಲಿಯನ್ನು ಹಾಕುತ್ತಾರೆ. ನಂತರ ಮನೆಯಿಂದ ತಂದಿರುವಂತಹ ವಸ್ತುಗಳನ್ನು ಜೋಡಿಸಿಕೊಂಡು ಯಾರಿಗೆ ಏನೇನು ಕೇಳಿದ್ದಾರೋ ಅವಗಳೆಲ್ಲವನ್ನು ಏಂಗಡಿಸಿಕೊಳ್ಳುತ್ತಾರೆ. *(ಛಾ:೫.೩೧)*

**ಪ್ರೇತದ ದೈವಗಳ ಹರಕೆಯ ವಸ್ತುಗಳು:** ದೈವಗಳಿಗೆ ಬೇಕಾಗುವ ಬಯಕೆಯ ಬುತ್ತಿಯಲ್ಲಿ ಮೈದಾಹಿಟ್ಟು ಅಥವಾ ಜೋಳದ ಹಿಟ್ಟು, ದೀಪದಬತ್ತಿ, ಒಳ್ಳೆಣ್ಣೆ, ಸೇರುಪಾವು ಅಕ್ಕಿ, ಎರಡು ಕೊಬ್ಬರಿಬಟ್ಟಲು, ಅರಿಷಿಣ, ಎಲೆಅಡಿಕೆ, ಹೆಂಡ ಸರಾಯಿ, ಬೀಡಿ ಸೀಗರೇಟ್, ಬೆಂಕಿಪೊಟ್ಟಣ ಇನ್ನಿತರೆ ತಿನ್ನುವ

ವಸ್ತುಗಳು ಹಾಗೂ ಬಲಿಕೊಡುವ ಮೇಕೆ ಎಲ್ಲಾವನ್ನು ಅವರವರ ಮನೆಯ ಮುಂದೆ ಇಡುತ್ತಾರೆ. ಮನೆಯೊಳಗೆ ಮೈದಾಹಿಟ್ಟುನಿಂದ ದೊಡ್ಡದಾದ ದೀಪದ ಪ್ರಾಂತಿಯನ್ನುಮಾಡಿ ಅದರೊಳಗೆ ಒಳ್ಳೆಣ್ಣೆಹಾಕಿ ದೀಪವನ್ನು ಹಚ್ಚುತ್ತಾರೆ. ಕಟ್ಟಿಗೆಗಳಿಂದ ತಾತ್ಕಲಿಕವಾಗಿ ನಿರ್ಮಿಸಿದ ಮನೆಗಳನ್ನೇ ದೈವ ಎಂದು ಪರಿಭಾಪಿಸಿ ಅವುಗಳೊಂದಿಗೆ ಗೋಚರ ಮತ್ತು ಅಗೋಚರ ಶಕ್ತಿಗಳೊಂದಿಗೆ ಮೌಖಿಕವಾಗಿ ಸಂವಾದ ಮಾಡುತ್ತಾರೆ. ಮನೆಯ ಮುಂದೆ ನೊಂದವರು ಮತ್ತು ಕುಲದ ಹಿರಿಯರೆಲ್ಲರೂ ಕೂಡಿ ಮತ್ತೊಮ್ಮೆ ವರವನ್ನು ಕೇಳಿಕೊಳ್ಳುತ್ತಾರೆ. ನೋಡಿ ಸ್ವಾಮಿ ಹಿರಿಯ ದೈವಗಳೇ ನಿಮಗೆ ಬೇಕಾದ ಎಲ್ಲಾ ತಿಂಡಿತಿನ್ನಿಸುಗಳನ್ನು ಮತ್ತು ಬೇಟೆ ಬಲಿಯನ್ನು ತಂದು ನಿಮಗೆ ಒಪ್ಪಿಸುತ್ತಿದೇವೆ, ನಿಮ್ಮ ಮಾತಿನ ಪ್ರಕಾರ ನಾವು ಚಾಚುತಪ್ಪದೇ ನಿಮ್ಮ ಮುಡಿಪ್ಪನ್ನು ಮುಟ್ಟಿಸಿದ್ದೇವೆ, ದಯವಿಟ್ಟು ನಿಮ್ಮ ಬುತ್ತಿಯನ್ನು ತಿಂದು ನೀವು ಮತ್ತೊಮ್ಮೆ ನಮ್ಮ ಕನಸ್ಸು ಮನಸ್ಸಿನಲ್ಲಿ ಬಾರದೇ ನಿಮ್ಮ ನಿಮ್ಮ ಊರುಗಳಿಗೆ ಹೋಗಿ ನಮಗೆ ತೊಂದರೆ ಇಲ್ಲದಂಗೆ ಕಾಪಾಡಿಕೊಂಡು ಬರಬೇಕು ಎಂದು ಕೇಳಿಕೊಳ್ಳುತ್ತಾರೆ. ನಂತರ ತಂದಿರುವ ಅಕ್ಕಿಯನ್ನು ಎಡಗೈಯಿಂದ ಒಂದು ಸಣ್ಣ ಪಾತ್ರೆಯಲ್ಲಿ ಹಾಕಿ ಅವರವರ ಮನೆಗಳ ಮುಂದೆ ಪ್ರತ್ಯೇಕವಾಗಿ ಒಲೆ ಹಚ್ಚಿ ಅನ್ನವನ್ನು ಮಾಡುತ್ತಾರೆ. ಒಲೆಯ ಮುಂದೆ ಸಣ್ಣ ಕುಣಿಯನ್ನು ತೆಗೆದಿರುತ್ತಾರೆ. ಏಕೆಂದರೆ ಬಲಿ ಕೊಡುವಾಗ ರಕ್ತ ಕುಣಿಯೊಳಗೆ ಬೀಳಲಿ ಎಂದು. ಮೇಕೆಗಳನ್ನು ಅವರವರ ಮನೆಗಳ ಮಂದೆ ನಿಲ್ಲಿಸಿ ಕುಲಸ್ಥರು ಆಯಾ ದೈವಗಳ ಹೆಸರಿಟ್ಟು ನೊಡಿಸ್ವಾಮಿ ಮೇಕೆಬಲಿಯನ್ನು ತಂದ್ದೀವಿ ನಮ್ಮನೆಲ್ಲಾ ಕಾಪಾಡಿಕೊಂಡು ಬರಿತ್ತೀನಿ ಎಂದು ವರಕೊಡು ಎಂದು ಕೇಳುತ್ತಾರೆ.

ಬಲಿಕೊಡುವ ಮೇಕೆಯಲ್ಲಿ ಮೈ ತುಂಬಿಕೊಂಡು ತಲೆ ಅಲ್ಲಾಡಿಸಿ ಮೈ ಜಾಡಿಸಿ ಸಿನಿದರೆ ವರಕೊಟ್ಟಿದೆ ಎಂದರ್ಥ (ಅದನ್ನು ಬುಡ್ಗ ಭಾಷೆಯಲ್ಲಿ ಜಲ್ತ ಎಂದು ಕರೆಯುತ್ತಾರೆ). ನಂತರ ಮೇಕೆಯನ್ನು ಕೊಯ್ಯುತ್ತಾರೆ. ನಂತರ ಮೇಕೆಯ ಬಲಗಾಲನ್ನು ಕೊಯ್ದು, ಮೇಕೆಯ ಬಾಯಿಯೊಳಗೆ ಇಡುತ್ತಾರೆ. ಹಾಗೇನೆ ಎಲ್ಲಾ ಮೇಕೆಗಳನ್ನು ಕೋಯ್ದು ನಂತರ ಆಚಾರದ ಪದ್ಧತಿಯಂತೆ ನೆರೆದಿರುವ ಕುಲಸ್ಥರಿಗೆ ಹೆಂಡ ಸರಾಯಿ ಕುಡಿಸುತ್ತಾರೆ. ನಂತರ ಆಯಾ ಗಾಳಿದೇವರುಗಳಿಗೆ ಬಲಿ ನೀಡಿದ ಮೇಕೆಗಳ ಚರ್ಮವನ್ನು ಬಿಡಿಸಿ ನೀರಿನಿಂದ ತೊಳೆದು ಮಾಂಸದ ಅಂಗಾಂಗಳಾದ ಕಿವಿ, ತಲೆ, ಗುಂಡಿಗೆ, ಟಿಲ್ಲಿ, ಕರಳು, ಜಟರ, ಕಣ್ಣು, ಮೆದಳು, ಕಾಲು ಎಲ್ಲಾ ಸಣ್ಣಸಣ್ಣ ತುಂಡು ಮಾಂಸವನ್ನು ಒಂದು ಪಾತ್ರೆಯಲ್ಲಿ ಹಾಕಿ, ಎಲ್ಲಾ ಗಾಳಿದೇವರ ಆಯಾ ಮನೆಯ ಪಕ್ಕದಲ್ಲಿ ಪ್ರತ್ಯೇಕವಾಗಿ ಮಾಂಸದ ಅಡುಗೆಯನ್ನು ತಯಾರಿಸಿರುತ್ತಾರೆ. ಇನ್ನೂ ಉಳಿದ ಹೆಚ್ಚಿನ ಮಾಂಸವನ್ನು ಒಂದೇಡೆ ಕೂಡಿಸಿ ಒಂದು ದೊಡ್ಡ ಪಾತ್ರೆಯಲ್ಲಿ ಬೇರೆಯೊಂದು ಒಲೆಯನ್ನು ಹಚ್ಚಿ ಅನ್ನ ಮಾಂಸದ ಅಡುಗೆಯನ್ನು ಮಾಡುತ್ತಾರೆ. ಮಾಂಸದ ಸಾಂಬರಿನಲ್ಲಿ ಉಪ್ಪುಖಾರ, ಒಳ್ಳೆಣ್ಣೆ, ಅರಿಷಿಣ ಮಾತ್ರ ಹಾಕಿ ತಯಾರಿಸುತ್ತಾರೆ. ಅದಕ್ಕೆ ಮಸಾಲೆ ಪದಾರ್ಥಗಳನ್ನು ಏನೂ ಹಾಕುವುದಿಲ್ಲ. ಅಡುಗೆಯಾದ ನಂತರ ಆಯಾ ಗಾಳಿ ದೇವರ ಮನೆಯೊಳಗೆ ಒಂದು ಎಲೆಯಲ್ಲಿ ಅನ್ನ ಮತ್ತು ಮಾಂಸದ ಸಾಂಬರೂ ಮತ್ತು ಸರಾಯಿ ಬಾಟಲಿ, ಸಿಗರೇಟ್ ಹಚ್ಚಿ ಎಡೆಯನ್ನು ಇಟ್ಟು ಮನೆಯ ಮುಂದಿನ ಪರದೆಯನ್ನು ಮುಚ್ಚುತ್ತಾರೆ. ಎಲ್ಲಾರೂ ಹತ್ತು ನಿಮಿಷಗಳ ಕಾಲ ಶಾಂತರೀತಿಯಿಂದ ಸುಮ್ಮನೆ ಮೌನವಾಗಿರುತ್ತಾರೆ. ಆಗ ಆತ್ಮಗಳು

ಊಟಮಾಡಿ ತೃಪ್ತಿ ಪಡುತ್ತವೆ ಎಂದು ನಂಬುತ್ತಾರೆ. ನಂತರ ಪರದೆ ಎತ್ತಿ ಎಡೆಯನ್ನು ಪ್ರಸಾದವೆಂದು ನೊಂದಿರುವ ವ್ಯಕ್ತಿ ಮತ್ತು ಆತನ ಕುಟುಂಬದವರು ಸೇವಿಸುತ್ತಾರೆ. ನಂತರ ಬಂದಿರುವ ಕುಲಸ್ಥರಿಗೆ ಹೆಂಡ ಸರಾಯಿ ಕೊಟ್ಟು ಊಟ ಮಾಡುತ್ತಾರೆ. ಉಳಿದಿರುವ ಮಾಂಸವನ್ನು ತೆಗೆದ ಕುಣಿಯಲ್ಲಿ ಹಾಕಿ ಮುಚ್ಚುತ್ತಾರೆ. ನಂತರ ತಾತ್ಕಲಿಕವಾಗಿ ನಿರ್ಮಿಸಿದ ಮನೆಗಳನ್ನು ಕೆಡವಿ, ಎಲ್ಲಾರೂ ಒಟ್ಟಿಗೆ ಊರಿನ ಮನೆಯೊಳಗೆ ಹೋಗುತ್ತಾರೆ. ಈ ರೀತಿಯ ಬುಡ್ಗ ಜಂಗಮರ ಸಂಸ್ಕೃತಿಯು ಆದಿಮ ಬುಡಕಟ್ಟುಗಳ ಲಕ್ಷಣವಾಗಿ ಕಂಡುಬರುತ್ತದೆ.

ಮನೆಗೆ ಹೋಗುವ ಮುಂಚೆ ನೇರವಾಗಿ ಹೋಟೆಲ್‌ಗೆ ಹೋಗಿ ಚಹಾ ಮತ್ತು ಸಾರಾಯಿಯನ್ನು ಕುಡಿದು ಅಲ್ಲಿಂದ ನೇರವಾಗಿ ಸಮಸ್ಯೆ ಇರುವ ವ್ಯಕ್ತಿಯ ಮನೆಗೆ ಹೋಗಿ ಕೈಕಾಲು ಮುಖ ತೊಳೆದುಕೊಂಡು; ಅಲ್ಲಿಂದ ಅವರವರ ಮನೆಗಳಿಗೆ ತೆರಳಿ ಹೊರಗಡೆ ಸ್ನಾನ ಮಾಡಿ ಬೇರೆ ಬಟ್ಟೆಗಳನ್ನು ಹಾಕಿಕೊಂಡು ಮನೆದೇವರನ್ನು ನಮಸ್ಕರಿಸಿ ಬಂಢಾರವನ್ನು ಅಥವಾ ವಿಭೂತಿಯನ್ನು ಹಚ್ಚಿಕೊಂಡು, ನಂತರ ಮತ್ತೆ ಹೋಟೆಲ್ ಗೆ ಹೋಗಿ ಚಹಾ ಮತ್ತು ಸರಾಯಿ ಕುಡಿದು ಬರುತ್ತಾರೆ. ಅಲ್ಲಿಗೆ ನೊಂದವನ ಕಷ್ಟಗಳು ದಿನದಿಂದ ದಿನಕ್ಕೆ ಕಡಿಮೆಯಾಗಿ ಏನೂ ಸಮಸ್ಯೆ ಇಲ್ಲದಾಗೆ ವಾಸಿಯಾಗುತ್ತಾನೆ. ಒಂದು ವೇಳೆ ಈ ಪದ್ಧತಿಯನ್ನು ನಿರಾಕರಿಸಿದರೆ ಇದರಿಂದ ಎಷ್ಟೋ ಪ್ರಾಣಗಳನ್ನು ಕಳೆದುಕೊಂಡಿರುವ ಉದಾಹರಣೆಗಳು ಇವರಲ್ಲಿ ಕಾಣಬಹುದು. ಈ ರೀತಿಯಾಗಿ ಬುಡ್ಗ ಜಂಗಮರ ದೈವಾರಾಧನೆಯ ಪದ್ಧತಿಯನ್ನು ವಿಶಿಷ್ಟವಾಗಿ ಆಚರಿಸುವುದನ್ನು ಕಾಣಬಹುದು. ಇದು ಇಂದಿನ ಜಾಗತೀಕರಣ ಪ್ರಪಂಚದ ಸಂದರ್ಭದಲ್ಲೂ ಕೂಡ ಈ ಅಲೆಮಾರಿ ಬುಡ್ಗ ಜಂಗಮರು ತಮ್ಮ ವಿಶಿಷ್ಟವಾದ ಸಂಪ್ರದಾಯ ಆಚರಣೆಗಳ ಮೂಲಕ ತಮ್ಮ ಅನನ್ಯತೆಯನ್ನು ಉಳಿಸಿಕೊಂಡು ಬಂದಿದ್ದಾರೆ.

"ಯಾವ ಸಮಾಜ ಸಂಸ್ಕೃತಿಯಲ್ಲಿ ಪ್ರತಿಯೊಂದು ಮಗು ತನ್ನ ಬಾಲ್ಯದಿಂದಲೇ ದೇವಸ್ಥಾನ, ಜಾತ್ರೆ ಉತ್ಸವಗಳಲ್ಲಿ ಪಾಲ್ಗೊಂಡು ಅಲ್ಲಿನ ಪೂಜಾರಿಯ ಮೈ ಮೇಲೆ ಅಥವಾ ಇತರರ ಮೇಲೆ ದೇವರು ಬರುವುದನ್ನು ಹಾಗೆಯೇ ಕೆಲವರ ಮೇಲೆ ದೆವ್ವ ಬಂದು ಹೋಗುವುದನ್ನು ನೋಡುತ್ತಾ ಬೆಳೆಯುತ್ತದೆ. ಆ ಸಮಾಜದ ಸಂಸ್ಕೃತಿಯಲ್ಲಿ ಮೈಮೇಲೆ ದೇವರು, ದೆವ್ವ ಬರುವುದು ಒಂದು ಸಹಜ ಸ್ವಾಭಾವಿಕ ಸಾಮಾಜಿಕ ಹಾಗೂ ನಿರೀಕ್ಷಿತ ನಡವಳಿಕೆಯಾಗಿರುತ್ತದೆ. ಇಲ್ಲಿನ ಪ್ರತಿಯೊಬ್ಬ ವ್ಯಕ್ತಿಯು ಒಂದಲ್ಲ ಒಂದು ಸಲ ತನ್ನ ಮೇಲೂ ಯಾವುದಾದರೊಂದು ದೇವರು, ದೆವ್ವ ಬರುತ್ತದೆ ಎಂದು ನಿರೀಕ್ಷಿಸತೊಡಗುತ್ತಾನೆ. ದೇವಸ್ಥಾನದಲ್ಲಿ ಗಂಟೆ, ಜಾಗಟೆ, ಚಂಡೆ ಮದ್ದಳೆಗಳು ಗದ್ದಲದ ನಡುವೆ ಅಥವಾ ಊರ ಜಾತ್ರೆಯ ಉತ್ಸವದಲ್ಲಿ ಭಕ್ತಾಧಿಗಳೆಲ್ಲ ಸೇರಿ ಭಜನೆ ಮಾಡುತ್ತಾ ಕುಣಿಯುತ್ತಿರುವ ಸಮಯದಲ್ಲಿ ಒಬ್ಬನ ಮೈಮೇಲೆ ದೇವರು ಅವಾಹನೆಯಾಗಿ ಆತ ತೂಗಾಡಲಾರಂಬಿಸಿದರೆ ದೇವರು ಬಂದಿದೆ ಎಂಬ ಸೂಚನೆ ಕೊಡತ್ತಿದ್ದಂತೆ ಅಲ್ಲಿನ ವಾತಾವರಣದಲ್ಲಿ ಈ ಸೂಚನೆಯು ವಿದ್ಯುತ್ ಸಂಚಾರವಾಗುತ್ತದೆ. ಇತರ ಸೂಚನೆಗಳನ್ನು ಸುಲಭವಾಗಿ ಸ್ವೀಕರಿಸುವ, ಅಸಮಾಧಾನ ನೋವುಗಳ ಒತ್ತಡಕ್ಕೆ ಒಳಗಾದ ವ್ಯಕ್ತಿಗಳು ದೇವರು ಆವಾಹನ ಬಂದಂತೆ ವರ್ತಿಸತೊಡಗುತ್ತಾರೆ ಎಂದು ಡಾ ಆರಿಕೇವ್ ಎಂಬ ತಜ್ಞರು ಹೇಳುತ್ತಾರೆ"[3] ಇವರ ಕುಲದೇವತೆಗಳಾದ ಜಮ್ಮುಲಮ್ಮ ಮತ್ತು ಸುಂಕ್ಲಮ್ಮ

ದೇವರ ಗುಗ್ಗರಿ ಹಬ್ಬ, ಮಾರೆಮ್ಮ ಜಾತ್ರೆ ಮತ್ತು ದೈವಾರಧನೆ(ಪ್ರೇತರಾಧನೆ) ಈ ಎಲ್ಲ ಆಚರಣೆಗಳನ್ನು ನೋಡಿದಾಗ ತಮ್ಮ ಬದುಕಿನ ಪಯಣದಲ್ಲಿ ವಸ್ತು, ಗಿಡಮರಗಳನ್ನು, ಸೂರ್ಯ ಚಂದ್ರರನ್ನು, ಆಯುಧಗಳನ್ನು, ಸಂಗೀತದ ಪರಿಕರಗಳನ್ನು, ತಮ್ಮ ಕುಲಸ್ಥರನ್ನು ದೈವ ದೈವತ್ವವನ್ನು ಕಂಡುಕೊಂಡ ಬುಡ್ಗ ಜಂಗಮರು ಈ ದೇಶದ ಮೂಲನಿವಾಸಿಗಳಾಗಿ ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಇಂದಿಗೂ ಉಳಿಸಿ ಬೆಳೆಸಿಕೊಂಡು ಅನುಸರಿಸುತ್ತಿರುವುದು ವಿಶೇಷವಾಗಿದೆ.

**ಪಾರಂಪರಿಕ 'ಬಿಡಾರು' ಆಚರಣೆ**

ಬುಡ್ಗ ಜಂಗಮ್ ಸಮುದಾಯದ ಅತ್ಯಂತ ಪ್ರಮುಖವಾಗಿ ಆಚರಿಸುವ ಹಬ್ಬವಾಗಿದೆ. ಬಿಡಾರು ಎಂದರೆ ಎರಡು ವರ್ಷಕ್ಕೊಮ್ಮೆ ನಡೆಯುವ ಒಂದು ಆಚರಣೆಯಾಗಿದೆ. ಈ ಆಚರಣೆ ಬುಡ್ಗ ಜಂಗಮ್‌ರಲ್ಲಿ ಎರಡು ವರ್ಷಗಳಿಂದ ಕುಲದಲ್ಲಿ ನಡೆದ ನ್ಯಾಯಪಂಚಾಯಿತಿಗಳಲ್ಲಿ ವಿಧಿಸಿದ ತಪ್ಪುದಂಡದ ತೆರಿಗೆಯನ್ನು ಸಮುದಾಯದ ಎಲ್ಲರೂ ಒಂದು ಕಡೆ ಸೇರಿ ಹಂಚಿಕೊಂಡು ತಿನ್ನುವುದೇ ಬಿಡಾರ ಆಚರಣೆ ಎಂದು ಕರೆಯುತ್ತಾರೆ. ಈ ಹಬ್ಬವನ್ನು ಇತ್ತೀಚಿನ ದಿನಗಳಲ್ಲಿ ಮೊಹರಂ ಹಬ್ಬದಂದು ಕೊಪ್ಪಳ ಜಿಲ್ಲೆಯ ಕುದರೆಮೋತಿ ಗ್ರಾಮದಲ್ಲಿ ಆಚರಿಸುತ್ತಿದ್ದಾರೆ. ಈ ಗ್ರಾಮಕ್ಕೆ ಹೈದರಾಬಾದ್ ಕರ್ನಾಟಕದ ಬಳ್ಳಾರಿ, ಕೊಪ್ಪಳ, ರಾಯಚೂರು, ಯಾದಗಿರಿ, ದಾವಣಗೆರೆ ಜಿಲ್ಲೆಗಳಿಂದ ಬುಡ್ಗ ಜಂಗಮರು ಬಂದು ಆಚರಿಸುತ್ತಾರೆ.

ಒಂದುಕಡೆ ಸೇರುವುದರಿಂದ ಗಂಡು-ಹೆಣ್ಣು ಮಕ್ಕಳ ಕೊಡುಕೊಳ್ಳುವಿಕೆಯ ಮದುವೆಯ ವಿಚಾರಗಳು, ಸಾಲ-ಸೂಲ ವಿನಿಮಯ ಮಾಡಿಕೊಳ್ಳುವುದು, ನ್ಯಾಯ-ಅನ್ಯಾಯಗಳ ತೀರ್ಮಾನ ಮುಂತಾದ ಸಾಮಾಜಿಕ ಹೊಂದಾಣಿಕೆಗಳು ಸಾಧ್ಯವಾಗುತ್ತದೆ. ಅಲೆದಾಟದಲ್ಲಿ ಉಂಟಾದ ವ್ಯಕ್ತಿ-ವ್ಯಕ್ತಿಗಳ, ಕುಟುಂಬ-ಕುಟುಂಬಗಳ ಜಗಳದ ಪರಿಹಾರ ಹೊಂದಾಣಿಕೆ ಸಾಧ್ಯವಾಗುತ್ತದೆ. ಮುಂದೆ ಹೋಗುವ ಮೇಳಕ್ಕೆ ಅಥವಾ ಷಂಡ್ರಕ್ಕೆ ಹೋಗಲು ಗುಂಪು ಕಟ್ಟಿಕೊಳ್ಳಲು ಒಬ್ಬರಿಗೊಬ್ಬರ ನಡುವೆ ಮಧುರ ಬಾಂಧವ್ಯ ಕಲ್ಪಿಸುವ ಸುವರ್ಣ ಸೇತುವೆಯಾಗಿದೆ. ಹೀಗೆ ಒಂದುಕಡೆ ಕುಲಬಾಂಧವರು ಕೂಡಿ ಸುಖಃ ದುಖಃಗಳನ್ನು ಹಂಚಿಕೊಂಡು ಪರಸ್ಪರ ಆಚಾರ-ವಿಚಾರಗಳಲ್ಲಿ ಭಾಗವಹಿಸುವುದರಿಂದ ಅವರ ಕೌಟುಂಬಿಕ ಸಾಮಾಜಿಕ ಬಾಂಧವ್ಯಗಳು ಉತ್ತಮಗೊಳ್ಳುತ್ತವೆ. ಅವರ ದುಡಿಮೆಯ ಶ್ರಮ ಉಪಶಮನಗೊಂಡು ಮನಸ್ಸಿಗೆ ನೆಮ್ಮದಿ, ಶಾಂತಿ-ಸಮಾಧಾನಗಳು ಲಭಿಸುತ್ತವೆ. ಒಟ್ಟಿನಲ್ಲಿ ತಂತಮ್ಮ ಬಾಂಧವ್ಯವನ್ನು ಪುನರ್ ನವೀಕರಿಸಿಕೊಳ್ಳಲು ಈ ಬಿಡಾರು ಅಥವಾ ಕಟ್ಟಾಗಳು ಪ್ರಮುಖ ಪಾತ್ರನಿರ್ವಹಿಸುತ್ತವೆ. ಒಟ್ಟಾರೆ ತಮ್ಮ ಸಮುದಾಯದ ಜನರನ್ನು ಒಂದುಕಡೆ ಸೇರುವ ಒಂದು ವ್ಯವಸ್ಥೆಯಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಅಲ್ಲಲ್ಲಿಯೇ ಪ್ರಾದೇಶಿಕ ಕಟ್ಟಾಗಳನ್ನು ಮಾಡಿಕೊಂಡು ಬಿಡಾರು ಆಚರಿಸುತ್ತಿದ್ದಾರೆ. ಈ ಬಿಡಾರಕ್ಕೆ ಪ್ರಾದೇಶಿಕ ವ್ಯಾಪ್ತಿಯಲ್ಲಿ ನೆಲೆಸಿದ ಬುಡ್ಗ ಜಂಗಮರು, ಪ್ರತಿಯೊಂದು ಕುಟುಂಬದ ಅಥವಾ ಊರಿನ ಪರವಾಗಿ ಒಬ್ಬರಾದರೂ ಈ ಬಿಡಾರಕ್ಕೆ ಹೋಗಿ ಆಚಾರವನ್ನು ತೆಗೆದುಕೊಳ್ಳಬೇಕಾಗುತ್ತದೆ.

**ಕುದಿರೆಮೋತಿ ಬಿಡಾರು ಆಚರಣೆ:** ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುದಿರೆಮೋತಿ ಗ್ರಾಮದಲ್ಲಿ ದಿನಾಂಕ: ೨೦.೯.೨೦೧೮ ರಿಂದ ೨೪.೯.೨೦೧೮ರವರೆಗೆ ಕ್ಷೇತ್ರಕಾರ್ಯ ಕೈಗೊಂಡು ಭೇಟಿ ನೀಡಿ ಮಾಹಿತಿ ಸಂಗ್ರಹಿಸಿ, ವಿಪುಲವಾದ ಛಾಯಚಿತ್ರ, ಛಾಯಗ್ರಹಣ ಮಾಡಲಾಯಿತು. ಇಲ್ಲಿ ಪ್ರತಿವರ್ಷ ನಡೆಯುವ ಹುಸೇನ್ ಬಾಷಾ ಅಲಾನಿ ಮೊಹರಂ ಹಬ್ಬದಲ್ಲಿ ಬುಡ್ಗ ಜಂಗಮರು ಎರಡು ವರ್ಷಕ್ಕೊಮ್ಮೆ ಈ ಮೊಹರಂ ಹಬ್ಬವನ್ನು ಆಚರಿಸುತ್ತಾರೆ. ಇದರ ಜೊತೆಗೆ ಬಿಡಾರ ಆಚರಣೆಯನ್ನು ವಿಭಿನ್ನವಾಗಿ ಆಚರಿಸುತ್ತಾರೆ. ದೇಶದ ನಾನಾ ಮೂಲೆಗಳಿಗೆ ಹೊಟ್ಟೆಪಾಡಿಗಾಗಿ ವಲಸೆ ಹೋದ ಅಲೆಮಾರಿ ಬುಡಕಟ್ಟು ಸಮುದಾಯಗಳಾದ ಬುಡ್ಗ ಜಂಗಮರು, ಮಾಲ ಜಂಗಮರು(ಪರ್ವತ ಮಲ್ಲಯ್ಯನವರು), ಸುಡುಗಾಡು ಸಿದ್ಧರು, ಹಾವಾಡಿಗರು, ಜಾತಿಗಾರರು, ಗೊಂದಲಿಗರು, ಸಿಂಧೋಳರು ಇತ್ಯಾದಿ ಅಲೆಮಾರಿ ಸಮುದಾಯಗಳು ಈ ಗ್ರಾಮಕ್ಕೆ ಬಂದು ಟೆಂಟ್ ಹಾಕಿ ಮೊಹರಂ ಹಬ್ಬವನ್ನು ಭಕ್ತಿ ಶ್ರದ್ಧೆಯಿಂದ ಆಚರಿಸುತ್ತಾರೆ. ವಿಶೇಷವಾಗಿ ಇಲ್ಲಿ ಬುಡ್ಗ ಜಂಗಮರು ಹೆಚ್ಚಾಗಿ ಭಾಗವಹಿಸಿ ಪ್ರಮುಖವಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಈ ಒಂದು ಗ್ರಾಮವನ್ನು ಒಂದು ಸಾಂಸ್ಕೃತಿಕ ಕೇಂದ್ರವನ್ನಾಗಿ ಮಾಡಿಕೊಂಡಿರುವ ಬುಡ್ಗ ಜಂಗಮರು ಇದನ್ನು ನ್ಯಾಯಪಂಚಾಯಿತಿ ಕೇಂದ್ರವಾಗಿ ಕುದುರೆಮೋತಿ ಬಿಡಾರು(ಕಟ್ಟಾ) ಎಂದು ಆಚರಿಸುತ್ತಾರೆ. ಅಲೆಮಾರಿಗಳ ಸುಪ್ರೀಂಕೋರ್ಟ್ ಎಂದೇ ಕುದಿರೆಮೋತಿ ಗ್ರಾಮವು ಖ್ಯಾತಿಯನ್ನು ಪಡೆದಿದೆ.

ಈ ಬಿಡಾರು ಆಚರಣೆಯಲ್ಲಿ ೨೦೧೮ರಲ್ಲಿ ಕರ್ನಾಟಕದ ನಾನಾ ಮೂಲೆಗಳಿಂದ ಬಂದ ಬುಡ್ಗ ಜಂಗಮರು ಕುದಿರೆಮೋತಿಯಿಂದ–೫೦೬ ಜನ, ದೇವಿಹಾಳ–೨೮೨, ಸಿದ್ದಾಪುರ–೪೮೭, ಹಗರಿಬೊಮ್ಮನಹಳ್ಳಿ, ಹಡಗಲಿ–೪೭೭, ಪಾಳ್ಯಂ–೩೫, ಗುತ್ತೂರು–೧೬೦, ತಿಮ್ಮನಕಟ್ಟೆ–೩೩೬, ಎಚ್ ಹೊಸಳ್ಳಿ–೮೭, ದೇವರ ಗುಡ್ಡ–೮೦, ಹಂಪಾಪಟ್ಟಣ–೧೦೪, ಹನುಮಸಾಗರ–೧೧೪, ಇಲಕಲ್ಲ್–೩೧, ಹಾನಗಲ್–೬೪, ಬಾಲೆ ಹೊಸೂರು–೭೮, ಮೆವುಂಡಿ–೪೨, ರಾಮಾಪುರ–೭೭, ಹೊಸರಿತ್ತಿ–೧೭, ಭಾಗ್ಯನಗರ–೧೧೨, ಹಲಗೇರಿ–೩೦, ಕನಕಾಪುರ–೪೯, ಮುದ್ದಿನಕೊಪ್ಪ–೪೦, ಹೊಂಕಣ–೦೯, ಮಾನ್ವಿ–೫೫, ಚಿಕ್ಕ ಬಡಿನಾಳ–೫೨, ಹೊನ್ನಳ್ಳಿ,–೧೪ ಬಲುಕುಂದ–೮೭, ಲಕ್ಷೀಶ್ವರ–೪೦, ಹರಪನಹಳ್ಳಿ–೭೦, ಕುರುಗೋಡು–೧೫, ಹಳೇಕೋಟೆ–೧೦, ಉರುಕುಂದ–೩೯, ಬಸಾಪುರ–೧೧, ಹಳೇ ದರೋಜಿ–೩೭, ತಾವರಗೇರಾ–೩೫, ರಾಂಪುರ–೧೪, ಮರಿಯಮ್ಮನಹಳ್ಳಿ–೦೫, ಮಸ್ಕಿ–೧೦, ಕುಷ್ಟಿಗಿ–೧೦ ಒಟ್ಟು ಕ್ರಮವಾಗಿ ನಲವತ್ತು ಗ್ರಾಮಗಳಿಂದ ೩೭೧೬ ಜನ ಭಾಗವಹಿಸಿದ್ದರು.

**ಕುಲದ ಆಚಾರ ಪದ್ಧತಿ:** ಆಚಾರ ಎಂದರೆ ಎರಡು ವರ್ಷಗಳಿಂದ ಕುಲಪಂಚಾಯಿತಿ ಮಾಡಿ ಸಂಗ್ರಹಿಸಿದ ಕಟ್ಟಡ (ತೆರಿಗೆ)ಯನ್ನು ಭಾಗವಹಿಸಿದ ಎಲ್ಲರಿಗೂ ಸಮವಾಗಿ ಹಂಚಿಕೊಂಡು ತಿನ್ನುವುದೇ 'ಕುಲದ ಆಚಾರ' ಎಂದು ಕರೆಯುತ್ತಾರೆ. ಈ ಪದ್ಧತಿಯನ್ನು ನೋಡುವುದೇ ಒಂದು ವಿಶೇಷವಾಗಿರುತ್ತದೆ. ಅಂದು ಜನಸಂಖ್ಯೆಯ ಅನುಗುಣವಾಗಿ ಆಡು ಅಥವಾ ಕುರಿಗಳನ್ನು ಕೊಯ್ಯುತ್ತಾರೆ. ಕುರಿ ಕೊಯ್ಯುವಾಗ ಪ್ರತಿಯೊಬ್ಬ ಕುಲಸ್ತರಿಗೆ ಮಾಹಿತಿ ನೀಡಿ ಅವರ ಅಪ್ಪಣೆ ಪಡೆದು ಕೊಯ್ಯುತ್ತಾರೆ. ದೂರದ ಊರಿನಿಂದ ಬಂದವರು ಇದನ್ನು ನೋಡಿಕೊಂಡೆ ಹೋಗಬೇಕಾಗುತ್ತದೆ. ಒಂದು ವೇಳೆ ಇದನ್ನು ನೋಡಿಕೊಂಡು ಹೋಗದಿದ್ದರೆ ಮುಂದೆ ಏನಾದರೂ ಅನಾಹುತಗಳಾಗುತ್ತವೆ ಎಂಬ ನಂಬಿಕೆ ಇವರಲ್ಲಿದೆ. ಬಲಿ

ನೀಡಿದ ಕುರಿ ಅಥವಾ ಆಡಿನ ಮಾಂಸವನ್ನು ಸ್ವಚ್ಚಗೊಳಿಸಲು ಹಾಗೂ ಪಾಲನ್ನು ಹಂಚಲು ಯಡವಲಿ ಬೆಡಗಿನವರಿಗೆ ಅಧಿಕಾರ ವಹಿಸಿರುತ್ತಾರೆ. ನಂತರ ಮಾಂಸದ ಅಂಗಾಂಗದ ಪ್ರತಿಯೊಂದು ತುಂಡುಗಳನ್ನು ಎಲ್ಲಾರಿಗೂ ಸಮವಾಗಿ ಪಾಲನ್ನು ಹಂಚಿಕೊಳ್ಳುತ್ತಾರೆ. ಮೊದಲಭಾಗ ದೇವರಭಾಗ ಎಂದು, ಎರಡನೆಭಾಗ ವಿಭೂತಿ ಬೆಡಗಿನವರಿಗೆ, ಮೂರನೆಭಾಗ ಬಿಡಾರು ನಡೆಯುವ ಕುದರೆಮೋತಿ ಗ್ರಾಮದವರಿಗೆ ಮೀಸಲಿಡುತ್ತಾರೆ. ನಂತರ ಮೊದಲಿನಿಂದ ಬಿಡಾರಕ್ಕೆ ಬಂದು ಹೋಗುತ್ತಿರುವ ಗ್ರಾಮಗಳ ಅನುಸಾರವಾಗಿ ಪಾಲನ್ನು ಹಂಚುತ್ತಾರೆ. ಇದು ಒಂದು ಬುಡ್ಗ ಜಂಗಮರಿಗೆ ದೊಡ್ಡ ಆಚರಣೆಯಾಗಿರುತ್ತದೆ. ಇದನ್ನೇ ಆಚಾರ ಎಂದು ಕರೆಯುತ್ತಾರೆ.

ಆಚಾರ ನೀಡುವಾಗ ಮತಾಂತರಗೊಂಡವರಿಗೆ ಹಾಗೂ ಕುಲ ಬಹಿಷ್ಕಾರಗೊಂಡವರಿಗೆ ಆಚಾರ ನೀಡುವುದು ನಿಷೇಧವಾಗಿರುತ್ತದೆ. ನಂತರ ತಮ್ಮ ತಮ್ಮ ಪಾಲನ್ನು ಎತ್ತಿಕೊಂಡು ಅವರವರ ಬಂಧುಬಳಗವನ್ನು ಕರೆದುಕೊಂಡು ಹೆಂಡ ಸರಾಯಿಗಳನ್ನು ಕುಡಿದು ಸಂಭ್ರಮಿಸುತ್ತಾರೆ. ಮರುದಿನ ನ್ಯಾಯ ಪಂಚಾಯಿತಿಗಳು, ಮನೆ ದೇವರು ಮಾಡುವುದು, ನಿಶ್ಚಿತಾರ್ಥ, ಮದುವೆ, ಸಾಲಶೂಲ ಪಡೆಯುವುದು, ಸಾಲ ಕೊಡುವುದು, ಮೇಳ ಕಟ್ಟುವುದು ಮುಂತಾದ ಪ್ರಕ್ರಿಯೆಗಳು ನಡೆಯುತ್ತವೆ. ನಂತರ ಹೊಟ್ಟೆಪಾಡಿಗಾಗಿ ವಲಸೆ ಹೋಗುತ್ತಾರೆ. ೨೦೧೬ನೇ ಇಸ್ವಿಯಲ್ಲಿ ೩೫ ಗ್ರಾಮಗಳಿಂದ ೩೦೬೬ ಜನ ಭಾಗಹಿಸಿದ್ದರು. ೨೦೧೮ನೇ ವರ್ಷದಲ್ಲಿ ೪೦ ಗ್ರಾಮಗಳಿಂದ ೩೭೧೬ ಜನ ಭಾಗವಹಿಸಿರುವುದನ್ನು ನೋಡಿದರೆ ವರ್ಷದಿಂದ ವರ್ಷಕ್ಕೆ ಹೆಚ್ಚಿನ ಜನಸಂಖ್ಯೆ ಈ ಆಚರಣೆಗೆ ಪಾಲ್ಗೊಳ್ಳುತ್ತಿರುವುದನ್ನು ನೋಡಬಹುದಾಗಿದೆ.

**ಆಧುನಿಕ ವಾರ್ಷಿಕಾವರ್ತನ ಆಚರಣೆಗಳು**

ಕಾಡು ಮತ್ತು ಕಾಡಂಚಿನಿಂದ ನಾಡಿಗೆ ಪ್ರವೇಶ ಪಡೆದ ಬುಡ್ಗ ಜಂಗಮರು ಇತ್ತೀಚಿನ ದಿನಗಳಲ್ಲಿ ಅನ್ಯ ಸಮುದಾಯದ ಪ್ರಭಾವದಿಂದ ಗ್ರಾಮಗಳಲ್ಲಿ ನಡೆಯುವ ಜಾತ್ರೆ, ಹಬ್ಬಹರಿದಿನಗಳನ್ನು ಮತ್ತು ಗ್ರಾಮದೇವತೆಗಳನ್ನು ಆಚರಿಸುತ್ತಿದ್ದಾರೆ. ಮೊದಲು ಇಂತಹ ಹಬ್ಬಗಳು ನಡೆಯುತ್ತಿದ ಸಂದರ್ಭದಲ್ಲಿ ಜೋಳಿಗೆ ಹಾಕಿಕೊಂಡು ಮನೆಮನೆಗೆ ಹೋಗಿ ಭಿಕ್ಷಾಟನೆ ಮಾಡುತ್ತಿದ್ದರು. ಇದೀಗ ಇವರು ಕೂಡ ಯುಗಾದಿ, ನಾಗರಪಂಚಮಿ, ಗಣೇಶನಹಬ್ಬ, ದಸರಾ, ದೀಪಾವಳಿ, ಗೌರಿಹುಣ್ಣಿಮೆ, ಸಂಕ್ರಾಂತಿ, ಹೋಳಿ, ಮೊಹರಂ, ಮತ್ತು ಸುತ್ತಮುತ್ತಲಿನ ಗ್ರಾಮಗಳಲ್ಲಿ ನಡೆಯುವ ಜಾತ್ರೆಗಳು, ಉರುಸ್‌ಗಳು, ಉತ್ಸವಗಳನ್ನು ಮಾಡುವುದನ್ನು ಕಾಣಬಹುದು.

**ಮೊಹರಂ ಹಬ್ಬ:** ಮೊಹರಂ ಆಚರಣೆಯು ಹಿಂದೂ, ಮುಸ್ಲಿಂ ಧರ್ಮಗಳ ಭಾವ್ಯಕ್ಯತೆ ಸಂಕೇತವಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬವನ್ನು ಪೀರಲ ಪಂಡಗ (ಪೀರಲ ಹಬ್ಬ) ಎಂದು ಕರೆಯುತ್ತಾರೆ. ಈ ಆಚರಣೆಯು ಹೆಚ್ಚಾಗಿ ಅಲೆಮಾರಿ ಬುಡಕಟ್ಟುಗಳು, ರೈತಾಪಿ ಕೂಲಿಕಾರ್ಮಿಕರು ಮತ್ತು ಎಲ್ಲಾ ಶೋಷಿತ ಸಮುದಾಯಗಳ ಬಹು ಪ್ರದಾನವಾಗಿ ಭಾಗವಹಿಸಿ ಆಚರಸುತ್ತಾರೆ. ಅದೇರೀತಿಯಾಗಿ ಬುಡ್ಗ ಜಂಗಮರು ಶೃದ್ಧಾ ಭಕ್ತಿಯಿಂದ ಆಚರಿಸುವುದನ್ನು ಕಾಣಬಹುದು. ಇವರು ಪ್ರತಿವರ್ಷ ಸಾಂಕೇತಿಕವಾಗಿ ಆಚರಿಸಿದರೆ, ಎರಡು ವರ್ಷಕ್ಕೊಮ್ಮೆ ವಿಜೃಂಭಣೆಯಿಂದ ಆಚರಿಸುತ್ತಾರೆ.

**ಬುಡ್ಗ ಜಂಗಮರ ನಂಬಿಕೆಗಳು**

ನಂಬಿಕೆಗಳು ಅನುಭವಾತ್ಮಕವಾದವುಗಳು. ನಂಬಿಕೆಗಳು ಜನರ ಭಾವದ ಅಭಿವ್ಯಕ್ತಿ ಎನ್ನಬಹುದು. "ನಂಬಿಕೆಗಳೆಂದರೆ ಒಂದು ಸಮಾಜದ ಜನರು ಕೆಲವೊಂದು ಕ್ರಿಯೆಗಳು ಅಥವಾ ಘಟನೆಗಳ ಬಗ್ಗೆ ಇಟ್ಟಿರುವ ವಿಶ್ವಾಸಗಳಾಗಿರುತ್ತವೆ. ಇಂತಹ ನಂಬಿಕೆಗಳು ಸತ್ಯವಾಗಿರಬಹುದು. ಇಲ್ಲದೇ ಅಸತ್ಯವಾಗಿರಬಹುದು, ಶುಭ ಶಕುನಗಳು ಮತ್ತು ಅಶುಭ ಶಕುನಗಳು ಜನರ ನಂಬಿಕೆಗಳನ್ನು ಸೂಚಿಸುತ್ತದೆ. ಹಾಗೆಯೇ ಮಾನವನ ಸಮಾಜದಲ್ಲಿನ ಧರ್ಮ ಮತ್ತು ಮಾಂತ್ರಿಕವಿದ್ಯೆ ಜನರ ನಂಬಿಕೆಗಳನ್ನು ಸೂಚಿಸುತ್ತದೆ"[೬] ನಂಬಿಕೆಯ ನೆಲೆಗಟ್ಟಿನ ಮೇಲೆ ಸಂಸ್ಕೃತಿಯು ಅಡಗಿರುತ್ತದೆ. ಇವುಗಳು ಮನುಷ್ಯನನ್ನು ನಿಯಂತ್ರಿಸುತ್ತವೆ. ಬುಡ್ಗ ಜಂಗಮರು ತಮ್ಮ ಸಮಾಜದ ವ್ಯವಸ್ಥೆಯಲ್ಲಿ ಹಲವಾರು ನಂಬಿಕೆಗಳನ್ನು ಇಟ್ಟುಕೊಂಡಿರುವುದು ಕಾಣಬಹುದು. ಈ ನಂಬಿಕೆಗಳನ್ನು ಬುಡ್ಗ ಜಂಗಮರು ತಮ್ಮ ಅಲಿಖಿತ ಸಂವಿಧಾನದಂತೆ ಪಾಲಿಸಿಕೊಂಡು ಬಂದಿದ್ದಾರೆ.

• 'ಕುಲಂ ಪಾದಂ ತಲಾ ಮೀದ' ಎಂದು ಸಮುದಾಯಕ್ಕೆ ಕುಲದೈವ ಎಂದು ನಂಬುತ್ತಾರೆ.

• ಎಲ್ಲಿಗಾದರೂ ಪ್ರಯಾಣ ಮಾಡುವಾಗ ಸೀನಿದರೆ ಒಳ್ಳೇದಾಗುವುದಿಲ್ಲ ಎಂಬುವುದು.

• ಶುಭಕಾರ್ಯಗಳಿಗೆ ಪ್ರಯಾಣ ಬೆಳೆಸಿದಾಗ ಯಾರಾದರೂ ಎದುರಿಗೆ ಸಲಿಕೆಹಾರ್ಯ ಹಿಡಿದು ಬಂದರೆ ಒಳ್ಳೇಯದಾಗುವುದಿಲ್ಲವೆಂದು ನಂಬುತ್ತಾರೆ.

• ಇವರಲ್ಲಿ ಬುಧುವಾರ ಮತ್ತು ರವಿವಾರ ಪ್ರಯಾಣ ಮಾಡಿದರೆ ಅಶುಭ ಎಂದು ನಂಬುತ್ತಾರೆ.

• ಸೋಮವಾರ ಮತ್ತು ಗುರುವಾರ, ಶುಕ್ರವಾರ ಪ್ರಯಾಣ ಮಾಡಿದರೆ ಶುಭ ಎಂದು ನಂಬುತ್ತಾರೆ.

• ಬುಡ್ಗ ಜಂಗಮರಲ್ಲಿ ಸೋಮವಾರ, ಮಂಗಳವಾರ ಮತ್ತು ಗುರುವಾರ, ಶುಕ್ರವಾರಗಳು ಶುಭಕಾರ್ಯಗಳನ್ನು ಮಾಡುವುದಕ್ಕೆ ಒಳ್ಳೇಯ ವಾರಗಳು ಎಂದು ನಂಬುತ್ತಾರೆ. ಮೇಲ್ವರ್ಗದವರಂತೆ ಸಮಯ, ಶಾಸ್ತ್ರ ನೋಡುವುದಿಲ್ಲ. ಕೇವಲ ವಾರಗಳಲ್ಲಿ ಇವರು ಒಳ್ಳೆಯದು ಕೆಟ್ಟದು ಎಂದು ನಿಶ್ಚಿಯಿಸಿ ಕಾರ್ಯಗಳನ್ನು ಮಾಡಿಕೊಳ್ಳುತ್ತಾರೆ.

• ಬುಡ್ಗ ಜಂಗಮರಲ್ಲಿ ಬಹಳ ದಿನಗಳಿಂದ ಯಾರಾದರೂ ಒಂದು ಊರಿನಿಂದ ಇನ್ನೊಂದು ತನ್ನ ಸಮುದಾಯದವರ ಊರಿಗಳಿಗೆ ಹೋದರೆ ನೇರವಾಗಿ ಹೊಟೇಲ್‌ಗೆ ಹೋಗಿ ಚಹಾ ಅಥವಾ ಹೆಂಡ, ಸರಾಯಿ ಕುಡಿದು ಮನೆಗೆ ಹೋಗುಬೇಕು. ಒಂದು ವೇಳೆ ನೇರವಾಗಿ ಅವರ ಮನೆಗಳಿಗೆ ಪ್ರವೇಸಿದರೆ ಆ ಊರಿಗೆ ಯಾರಿಗಾದರೂ ಅನಾಹುತವಾದರೆ ಆ ಸಮಸ್ಯೆಯನ್ನು ಬಂದಂತ ವ್ಯಕ್ತಿಯ ಮೇಲೆ ಅಪರಾಧ ಹೋರಿಸಿ ದಂಡವನ್ನು ಕಟ್ಟಿಸುತ್ತಾರೆ.

• ಯಾವುದೇ ಶುಭ ಅಶುಭ ಕಾರ್ಯಗಳಿಗೆ ಮೊದಲು ನೇರವಾಗಿ ಹೊಟೇಲ್‌ಗೆ ಹೋಗಿ ಚಹಾ, ಹೆಂಡ, ಸರಾಯಿ ಕುಡಿದು ಮನೆಗೆ ಹೋಗುಬೇಕು ಎನ್ನುವುದು ಇವರಲ್ಲಿ ನಿಯಮ.

• ಚಹಾ, ಹೆಂಡ, ಸರಾಯಿಗಳು ಬುಡ್ಗ ಜಂಗಮರ ಮಹತ್ವವಾದ ಮೋಕ್ಷ ನೀಡುವ ದೇವರ ನೈವೇದ್ಯ ನೀಡುವ ಪಾನೀಯಗಳಾಗಿವೆ.

• ಯಾವುದಾದರೂ ವಿಷಯಕ್ಕೆ ಸಂಬಂಧಿಸಿದ ವಿಚಾರವನ್ನು ಮಾಡುವಾಗ ಹಲ್ಲಿ ನುಡಿದರೆ ಶುಭ ಶಕುನ ಎಂದು ನಂಬುತ್ತಾರೆ.

• ಬಿಕ್ಕಳಿಕೆ ಬಂದರೆ ಯಾರೋ ನೆನೆಸುತ್ತಿದ್ದಾರೆ ಎಂದು ತಿಳಿಯುತ್ತಾರೆ.

• ಖಾಲಿ ತೊಟ್ಟಿಲನ್ನು ತೂಗಬಾರದು, ತೂಗಿದರೆ ಮಗುವಿಗೆ ಹೊಟ್ಟೆ ನೋವು ಬರುತ್ತದೆ ಎಂದು ನಂಬುತ್ತಾರೆ.

• ಶುಭ ಕಾರ್ಯಗಳಿಗೆ ಪ್ರಯಾಣ ಮಾಡುವಾಗ ಶವ ಎದುರುರಾದರೆ ಶುಭ ಶಕುನ ಅದೇ ಶವಸಂಸ್ಕಾರ ಮಾಡಿ ಜನರು ಎದುರಾದರೆ ಅಶುಭ ಶಕುನ ಎಂದು ನಂಬುತ್ತಾರೆ.

• ಮಡಿವಾಳರು (ಅಗಸರು) ತೊಳೆಯುವ ಬಟ್ಟೆಯ ಗಂಟು ಹೊತ್ತುಕೊಂಡು ಎದುರಿಗೆ ಕಂಡಾಗ ಶುಭ ಶಕುನ, ಅದೇ ತೊಳೆದ ಬಟ್ಟೆಗಳೊಂದಿಗೆ ಎದುರಾದರೆ ಅಶುಭ ಎಂದು ನಂಬುತ್ತಾರೆ.

• ಕೋರ್ಟ್ ಕಛೇರಿ, ಪೋಲಿಸ್ ಠಾಣೆಗಳ ಮೆಟ್ಟಿಲು ಹತ್ತಿಬಂದರೆ ಅದು ಶನಿ, ದರಿದ್ರ ಎಂಬ ನಂಬಿಕೆ ಇದೆ. ಅದನ್ನು ಪರಿಹರಿಸಲು ನೇರವಾಗಿ ಅಲ್ಲಿರುವ ಕುಲಸ್ತರನ್ನು ಕರೆಯಿಸಿಕೊಂಡು ಹೊಟಲ್‌ಗೆ ಹೋಗಿ ಚಹಾ, ಹೆಂಡ, ಸರಾಯಿ ಕುಡಿದು ಮನೆಗೆ ಹೋಗುತ್ತಾರೆ. ಮತ್ತು ಹಿರಿಯ ಕುಲಸ್ತರಿಗೆ ೧೦೧ ರೂಪಾಯಿ ದಂಡವನ್ನು ಕೊಟ್ಟು ಕಾಲು ಮುಗಿದು, ನಂತರ ಅವರಿಂದ ಹೆಂಡ ಮತ್ತು ಸರಾಯಿಯನ್ನು ಸಿಂಪಡಿಸಿಕೊಂಡು ತಮ್ಮ ದರಿದ್ರ, ಶನಿಯನ್ನು ಪಾವನ ಮಾಡಿಕೊಳ್ಳುತ್ತಾರೆ.

• ಹಂದಿ, ಕತ್ತೆ, ನಾಗರಹಾವು, ಕೆರೆ ಹಾವು, ಬೆಕ್ಕು, ಮೊಲ ಅಡ್ಡ ಬಂದರೆ ಅಶುಭ ಎಂದು ನಂಬುತ್ತಾರೆ.

• ಮನೆಯಲ್ಲಿ ಕಾಗೆ ಅಥವಾ ಹಂದಿ ಪ್ರವೇಶ ಮಾಡಿದರೆ ಅಶುಭ ಎಂದು ನಂಬುತ್ತಾರೆ.

• ಮನೆಯಲ್ಲಿ ಆಕಳು ಪ್ರವೇಶ ಮಾಡಿದರೆ ಅದು ಶುಭ ಎಂದು ನಂಬುತ್ತಾರೆ.

• ಕುಂಬಾರನು ಹೊಸ ಗಡಿಗೆಗಳನ್ನು ಹೊತ್ತುಕೊಂಡು ಅಡ್ಡಬಂದರೆ ಒಳ್ಳೇಯದಾಗುವುದಿಲ್ಲ.

• ವಿಧವೆ ಎದುರಿಗೆ ಬಂದರೆ ಅಶುಭ ಎಂದು ನಂಬುತ್ತಾರೆ.

• ರತ್ನಪಕ್ಷಿ, ಮುಂಗುಸಿ, ನರಿ ಮುಖ ನೋಡಿದರೆ ಶುಭ ಶಕುನ ಎಂದು ನಂಬುತ್ತಾರೆ.

• ಎಲ್ಲಿಗಾದರೂ ಪ್ರಯಾಣ ಮಾಡುವಾಗ ಕುರುಬರು ಎದರು ಬಂದರೆ ಒಳ್ಳೆಯದು, ಮತ್ತು ಮೊದಲಿಗೆ ಕುರುಬರ ಬೋಣಿಗೆಯಾದರೆ ಶುಭ ಎಂದು ನಂಬುತ್ತಾರೆ.

• ಹೆರಿಗೆಯಾದ ಮನೆಯಲ್ಲಿ ತಾಯಿ ಮಗುವು ವಾಸಿಸುವ ಗುಡಾರದ ಸುತ್ತಲೂ ಬೂದಿಯಿಂದ ಗೆರೆ ಹಾಕಿ ಪಕ್ಕದಲ್ಲಿ ಬೇವಿನ ತಪ್ಪಲು, ಕುಡುಗೋಲನ್ನು ಹಿಡುತ್ತಾರೆ. ರಾತ್ರಿ ಮಲಗುವಾಗ ಕಸಬಾರಿಗೆ ಮತ್ತು ಚಪ್ಪಲಿ, ಕರೆಅಂಚು ಇಟ್ಟು ಸುತ್ತಾ ಅಳಿಲು ಬಲೆಯನ್ನು ಕಟ್ಟುತ್ತಾರೆ. ಕಾರಣ ಭೂತಪ್ರೇತಗಳು ತಾಯಿ ಮಗುವಿನ ಹತ್ತಿರ ಬರದಂತೆ ನೋಡಿಕೊಳ್ಳುತ್ತವೆ ಎಂಬ ನಂಬಿಕೆ ಇದೆ.

• ಶವಸಂಸ್ಕಾರ ಮಾಡಿದ ಜಾಗದಲ್ಲಿ ರಾತ್ರಿ ವೇಳೆ ಬೆಂಕಿಯನ್ನು ಹಾಕಿದರೆ ಸತ್ತವರು ದೆವ್ವವಾಗುವುದಿಲ್ಲ. ಎಂಬುದು ನಂಬಿಕೆ ಇದೆ.

• ಸಮುದಾಯದಲ್ಲಿ ಯಾರಿಗಾದರೂ ಹೊಟ್ಟೆ ನೋವು ಕಂಡುಬಂದರೆ ಮತ್ತು ಎದೆನೋವು ಕಂಡು ಬಂದರೆ ಇವರಿಗೆ ದೆವ್ವ ಹಿಡಿದಿದೆ ಎಂಬುದು ಒಂದು ನಂಬಿಕೆ, ಅದರಿಂದ ಕುರಿ, ಮೇಕೆ, ಕೋಳಿ ಬಲಿ ನೀಡಿದರೆ ದೆವ್ವಗಳು ದೂರವಾಗುತ್ತವೆಂದು ನಂಬುತ್ತಾರೆ.

• ಕುಲ ಪಂಚಾಯಿತಿಯಲ್ಲಿ ಕುದಿಯುವ ಎಣ್ಣೆಯಲ್ಲಿ ಕೈಯಿಟ್ಟು ಸಾಕ್ಷಿ ಹೇಳಿದಾಗ ತಪ್ಪು ಮಾಡದಿದ್ದರೆ ಕೈ ಸುಡುವುದಿಲ್ಲ ಎಂಬುದು ಒಂದು ನಂಬಿಕೆ ಇದೆ.

• ಮುಳ್ಳಹಂದಿಯ ಮುಳ್ಳನ್ನು ಮನೆಯಲ್ಲಿ ಇಟ್ಟರೆ ಆ ಮನೆಯಲ್ಲಿ ಜಗಳಗಳು ಆಗುತ್ತವೆ ಎಂದು ತಿಳಿಯುತ್ತಾರೆ.

• ಹೆರಿಗೆಯಾದ ನಂತರ ಮಾಸವನ್ನು ಸರಿಯಾಗಿ ಹೂಳದಿದ್ದರೆ ಮಕ್ಕಳು ಹಾಲು ವಾಂತಿ ಮಾಡಿಕೊಳ್ಳುತ್ತಾರೆ ಎಂಬುದು ಒಂದು ನಂಬಿಕೆ ಇದೆ.

• ಮಾನಸಿಕವಾಗಿ ಅಸ್ತವ್ಯಸ್ಥರಾದಾಗ ಮೂರು ರಸ್ತೆಗಳು ಕೂಡುವ ರಸ್ತೆಯಲ್ಲಿ ನಿಂಬೆಹಣ್ಣು ಕೊಯ್ದು ತೆಗೆದು ಹಾಕುತ್ತಾರೆ.

• ಮಗುವಿಗೆ ಜ್ವರ ಬಂದರೆ, ವಾಂತಿಭೇದಿಯಾದರೆ ಅದು ಗುಣವಾಗಲೆಂದು ದೇವರಿಗೆ ಹರಕೆ ಕಟ್ಟಿಕೊಂಡು ಅರೆಬೆತ್ತಲೆ ಸೇವೆ, ಕುರಿ, ಕೋಳಿಗಳನ್ನು ಬಲಿ ಕೊಡುವುದಾಗಿ ಬೇಡಿಕೊಳ್ಳುತ್ತಾರೆ.

• ಈ ಸಮುದಾಯದ ಸ್ತ್ರೀ ಪುರುಷರಿಬ್ಬರಿಗೂ ಸೊಂಟನೋವು, ನಡುವು ನೋವು, ಮೊಣಕಾಲು ನೋವು ಗುಣವಾಗಲು ಬಲಗೈ ತೋಳಿನ ಭಾಗ, ಅಂಗೈ ಹಿಂಭಾಗದಲ್ಲಿ, ಸೊಂಟದ ನಡುವಿನಲ್ಲಿ ಮತ್ತು ಕಾಲಿಗೆ, ಹಣೆಗೆ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಇವೆಲ್ಲಾ ಈ ಸಮುದಾಯವು ಅನುಸರಿಸಿಕೊಂಡು ಬಂದ ನಂಬಿಕೆಗಳಾಗಿವೆ. ಇದಕ್ಕೆ ಕಾರಣ ಇವರು ಹಿಂದಿನಿಂದಲೂ ಅನುಸರಿಸಿಕೊಂಡು ಬಂದ ನಂಬಿಕೆಗಳಾಗಿವೆ ಎಂದು ಹೇಳುತ್ತಾರೆ.

ಸಮಾಜದಲ್ಲಿ ಆಚರಣೆಗಳನ್ನು ಹೊರತುಪಡಿಸಿ ಮನುಷ್ಯ ಬದುಕಲು ಸಾಧ್ಯವಿಲ್ಲ. ಹುಟ್ಟಿನ ಪೂರ್ವದಲ್ಲಿ ಮತ್ತು ಹುಟ್ಟಿನ ನಂತರ, ಬಾಲ್ಯ, ಯೌವ್ವನ, ಗೃಹಸ್ಥಾಶ್ರಮ, ಮುಪ್ಪಿನಲ್ಲಿಯೂ ಆಚರಣೆಗಳು ನಡೆಯುತ್ತವೆ. ಮನುಷ್ಯ ಸತ್ತ ನಂತರವೂ ಆಚರಣೆಗಳಿಂದ ಹೊರತಾಗಿರಲು ಸಾಧ್ಯವಿಲ್ಲ. ಬದುಕಿದಾಗಲೂ ಅಮಾವಾಸ್ಯೆ, ಹುಣ್ಣಿಮೆ, ವಾರ, ತಿಥಿ ನಕ್ಷತ್ರವೆಂತಲೂ ದಿನನಿತ್ಯ ಆಚರಣೆಯಲ್ಲಿ ತೊಡಗುತ್ತಲೇ ಇರುತ್ತಾನೆ. ಅದರಲ್ಲಿ ಮಕ್ಕಳ ನಾಮಕರಣ, ತೊಟ್ಟಿಲು ಶಾಸ್ತ್ರ, ಋತುಮತಿ ಆಚರಣೆ, ಒಸಗೆ, ಮದುವೆ, ಸೀಮಂತ, ಶವಸಂಸ್ಕಾರ ಸೇರಿದಂತೆ ಹುಟ್ಟಿನಂದ ಸಾವಿನವರೆಗೂ ಆಚರಣೆಯಲ್ಲಿ ತೊಡಗುತ್ತಾನೆ. ಆದರೆ ವಾರ್ಷಿಕಾವರ್ತನದ ಆಚರಣೆಗಳಲ್ಲಿ ಹಬ್ಬಗಳು ಮತ್ತು ಜಾತ್ರೆಗಳು ಪುನರಾವರ್ತನೆಯಾಗುತ್ತಲೇ ಇರುತ್ತವೆ. ಈ ಆಚರಣೆಗಳು ಜಡ್ಡುಗಟ್ಟಿದ ಮನಸ್ಸಿಗೆ ಒಂದು ರೀತಿಯಲ್ಲಿ ಮುದ ನೀಡುವ ನಿಟ್ಟಿನಲ್ಲಿ ಪೂರಕವಾಗಿ ಕೆಲಸ ಮಾಡುತ್ತವೆ. ಮನಸ್ಸಿನಲ್ಲಿ ಬೇಸರವನ್ನು

ಹೋಗಲಾಡಿಸುತ್ತವೆ. ಹಾಗಾಗಿ ಮನುಷ್ಯನ ಜೀವನದಲ್ಲಿ ಆಚರಣೆಗಳು ಹಾಸುಹೊಕ್ಕಾಗಿರುವುದಂತೂ ಪೂರಕವಾಗಿವೆ.

**ಬುಡ್ಗ ಜಂಗಮರ ವಿಧಿ-ನಿಷೇಧಗಳು:** ವಿಧಿ-ನಿಷೇಧಗಳು ಮಾನವನ ನಡತೆಯನ್ನು ರೂಪಿಸಲು ಸಮಾಜವನ್ನು ನಿಯಂತ್ರಿಸಲು ಸ್ಥಾಪಿಸಿಕೊಂಡಿರುವ ಕಟ್ಟುಪಾಡುಗಳೇ ವಿಧಿ-ನಿಷೇಧಗಳು ಎನ್ನಬಹುದು. ನಿಷೇಧಗಳು ಪ್ರಾಚೀನ ಸಮಾಜದ ಅಲಿಖಿತ ಕಾನೂನುಗಳು ಎಂದು ಕರೆಯಲಾಗಿದೆ. ಕೋರ್ಟ್ ಕಛೇರಿ, ಪೋಲೀಸ್ ವ್ಯವಸ್ಥೆಗಳು ಇಲ್ಲದ ಸಂದರ್ಭದಲ್ಲಿ ಸಮಾಜದ ವ್ಯವಸ್ಥೆಯನ್ನು ರೂಪಿಸುವ ಕಾನೂನು ರೀತಿಯಲ್ಲಿ ವಿಧಿ ನಿಷೇಧಗಳು ಬಳಸುತ್ತಿದ್ದರು. ಇವುಗಳು ಮಾನವ ಯಾವ ಸಂದರ್ಭದಲ್ಲಿ ಏನನ್ನು ಮಾಡಬೇಕು ಮತ್ತು ಏನನ್ನು ಮಾಡಬಾರದು ಎಂಬುವುದನ್ನು ತಿಳಿಸುತ್ತವೆ. ಇದನ್ನು ಇಂದು ಸಂಪ್ರದಾಯಗಳು, ಲೋಕರೂಢಿಗಳು, ಸಂಸ್ಕಾರಗಳು, ನಂಬಿಕೆ, ಪ್ರತೀತಿ, ಪದ್ಧತಿ ಎಂದು ಕರೆಯಲಾಗಿದೆ.

**ವಿಧಿ:** ವಿಧಿ ಎಂದರೆ ಮಾಡಲೇಬೇಕಾದ ಆಜ್ಞೆ ಅಥವಾ ಅನುಸರಿಸಲೇಬೇಕಾದ ಮಾರ್ಗ ಎಂದು ಕರೆಯುತ್ತಾರೆ. ಈ ವಿಧಿ ಎಂಬ ಪದಕ್ಕೆ ನಿಯಮ, ಆಜ್ಞೆ ಎಂದು ಕರೆಯಲಾಗುತ್ತಿದೆ. ವಿಧಿಯು ನಮ್ಮ ನಡತೆಯು ಹೀಗೆಯೇ ಇರಬೇಕೆಂದು ಹಾಗೆಯೇ ಇರಬೇಕೆಂದು ನಿಗಧಿಪಡಿಸುತ್ತವೆ. ಅದೇರೀತಿಯಾಗಿ ಸಮುದಾಯಗಳು ಅದನ್ನ ಪಾಲಿಸಿಕೊಂಡು ಬರುವುದನ್ನು ಕಾಣಬಹುದು.

**ನಿಷೇಧ:** ನಿಷೇಧ ಎಂದರೆ ಮಾಡಬಾರದು ಎಂದರ್ಥ ನೀಡುತ್ತದೆ. ಭಯ ಮತ್ತು ಭಾವನಾ ಮೂಲವಾದ ಒಂದು ನಂಬಿಕೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವುದೇ ನಿಷೇಧ. ಸಾಮಾಜಿಕ, ಧಾರ್ಮಿಕ ಪ್ರತಿಬಂಧಕವೇ ನಿಷಿದ್ಧ ಎನ್ನಲಾಗಿದೆ. ಹೀಗಾಗಿ ಲಿಖಿತ ಕಾನೂನ್ನನ್ನು ಮೀರಿಸುವಂತಹ ಶಕ್ತಿ ನಿಬಂಧನೆಯಾಗಿ ನಿಷೇಧವು ಕಾರ್ಯ ನಿರ್ವಹಿಸುತ್ತದೆ. ಮಾನವನ ತಪ್ಪುಒಪ್ಪುಗಳ ಪ್ರಜ್ಞೆ ಎಂದು ಹೇಳಬಹುದಾದ ಆತ್ಮ ಸಾಕ್ಷಿಯ ಮೇಲೆ ನಿಷೇಧವು ಬೆಳಕು ಚೆಲ್ಲುತ್ತದೆ. ಹೀಗಾಗಿ ನಿಷೇಧವನ್ನು ಉಲ್ಲಂಘಿಸಿದರೆ ಅಪರಾಧಿಯಾಗಿ ಪರಿಣಮಿಸುತ್ತಾರೆ.

ನಿಷೇಧದ ಹಿಂದೆ ಸಾಮಾಜಿಕ ನಿಯಮಗಳು ಇರುವುದರಿಂದ ನಿಷೇಧವನ್ನು ಮೀರುವುದೆಂದರೆ ಸಾಮಾಜದ ನಿಯಮಗಳನ್ನು ಉಲ್ಲಂಘಿಸಿದಂತೆ ತಿಳಿಯಲಾಗುತ್ತದೆ. ಇಂತಹ ನಿಯಮಗಳನ್ನು ಉಲ್ಲಂಘಿಸಿದರೆ ತೀವ್ರವಾದ ಶಿಕ್ಷೆಗೆ ಮತ್ತು ಬಹಿಷ್ಕಾರಕ್ಕೆ ಒಳಗಾಗುತ್ತಾರೆ. ನಂಬಿಕೆಯಲ್ಲಿ ಮೂಡಿಬಂದ ನಿಷೇಧಗಳು ರೀತಿ ರಿವಾಜುಗಳನ್ನು ರೂಪಿಸುವ ಮತ್ತು ಕಾಪಾಡುವ ಶಕ್ತಿಗಳಾಗಿವೆ. ಆದ್ದರಿಂದ ಬುಡ್ಗ ಜಂಗಮರಲ್ಲಿ ಕೆಲವು ನಿಷೇಧಗಳನ್ನು ಈ ಕೆಳಗೆ ತಿಳಿಸಲಾಗಿದೆ.

- ಅಂತರ್ ಜಾತಿ ಮತ್ತು ಪ್ರೇಮವಿವಾಹ ಆಗಬಾರದು ಎಂಬುವಂತದ್ದು ಇವರಲ್ಲಿದೆ. ಒಂದುವೇಳೆ ಆದರೆ ಕುಲಬಹಿಷ್ಕಾರ ಹಾಕುವ ಪದ್ಧತಿ ಇದೆ.
- ಹೆಣ್ಣುಮಕ್ಕಳು ಗಂಡಸರಿಗೆ ಎದುರು ಮಾತನಾಡುವಂತಿಲ್ಲ. ಗೌರವ ಕೊಡಬೇಕು.
- ಓಲಿ(ತೆರ) ಕೊಟ್ಟು ಹೆಣ್ಣನ್ನು ಮದುವೆಯಾಗಬೇಕು.
- ಒಂದೇ ಬೆಡಗಿನವರೊಂದಿಗೆ ಪರಸ್ಪರ ವಿವಾಹ ಆಗಬಾರದು.

- ಊಟದ ತಟ್ಟೆಯನ್ನು ದಾಟಬಾರದು.
- ಮಲಗಿದ ವ್ಯಕ್ತಿಯನ್ನು ದಾಟಬಾರದು.
- ಮಲಗಿದ ಹಾಸಿಗೆಯನ್ನು ದಾಟಬಾರದು.
- ಸುಳ್ಳು, ಮೋಸ ವಂಚನೆ ಮಾಡಬಾರದು.
- ಅತ್ಯಾಚಾರ, ಅನಾಚಾರ ಮಾಡಬಾರದು.
- ಕಸಬಾರಿಗೆಯನ್ನು ತುಳಿಯಬಾರದು.
- ಒಲೆಯನ್ನು ತುಳಿಯಬಾರದು.
- ಕುಲಸ್ಥನನ್ನು ಚಪ್ಪಲಿ ಹಾಕಿಕೊಂಡು ನಮಸ್ಕರಿಸಬಾರದು.
- ಮನೆಯಲ್ಲಿ ಒಡೆದ ಕನ್ನಡಿ ಇರಬಾರದು.
- ಕಸಬಾರಿಗೆ, ಪುಟ್ಟಿ, ಮೊರ, ಹೊಳ್ಳು, ಒಣಕೆ ಕಾಲಿನಿಂದ ತುಳಿಯಬಾರದು. ಮತ್ತು ಎದುರು ಬರಬಾರದು.
- ಸಮುದಾಯದಲ್ಲಿ ಏನೇ ವ್ಯಾಜ್ಯಗಳು ಬಂದರು ಕಲಕ್ಕೆ ತಿಳಿಸಬೇಕು. ಕೋರ್ಟ್ ಕಚೇರಿ, ಪೋಲಿಸ್ ಠಾಣೆಗಳ ಮೆಟ್ಟಿಲು ಅತ್ತಬಾರದು.
- ಅಮವಾಸ್ಯೆ ಮತ್ತು ಹುಣ್ಣಿಮೆದಿನದಂದು ಕ್ಷೌರ ಮಾಡಬಾರದು.
- ಬುಡ್ಗ ಜಂಗಮರಲ್ಲಿ ಬಹಳ ದಿನಗಳಿಂದ ಯಾರಾದರೂ ಒಂದು ಊರಿನಿಂದ ಇನ್ನೊಂದು ತನ್ನ ಸಮುದಾಯದವರ ಮನೆಗಳಿಗೆ ನೇರವಾಗಿ ಹೋಗಬಾರದು.
- ಮುಟ್ಟಾದವರನ್ನು ಮುಟ್ಟಬಾರದು.
- ಯಾವುದಾದರೂ ಕಾರ್ಯಗಳಿಗೆ ಮೂರು ಜನ ಒಟ್ಟಿಗೆ ಹೋಗಬಾರದು.

**ಬುಡ್ಗ ಜಂಗಮರ ಮೌಲ್ಯಗಳು ಮತ್ತು ನಿಯಮಗಳು**

ಸಾಮಾಜಿಕ ವ್ಯವಸ್ಥೆಯಲ್ಲಿ ಮೌಲ್ಯಗಳು ಮತ್ತು ನಿಯಮಗಳು ಬಹಳ ಮಹತ್ವಪೂರ್ಣವಾದ ಸಾಂಸ್ಕೃತಿಕಾಂಶಗಳಾಗಿವೆ. "ಮಾನವ ತನ್ನ ದೈನಂದಿನ ಜೀವನದಲ್ಲಿ ಕೆಲವೊಂದು ವ್ಯಕ್ತಿಗಳ ವಿಚಾರಗಳ ಮತ್ತು ವಸ್ತುಗಳ ಬಗ್ಗೆ ಸಾಮೂಹಿಕವಾಗಿ ಹೊಂದಿರುವ ಮನೋಭಾವನೆ ಮತ್ತು ಅಭಿವ್ಯಕ್ತಿಗಳೇ ಮೌಲ್ಯಗಳು"[೭] ಮೌಲ್ಯಗಳು ಸಮಾಜದಿಂದ ಸಮಾಜಕ್ಕೆ ಭಿನ್ನವಾಗಿರುತ್ತವೆ. ಬುಡ್ಗ ಜಂಗಮರಲ್ಲಿ ಮಾತು ಒಂದು ಮೌಲ್ಯವಾಗಿ ಪರಿಗಣಿಸುತ್ತಾರೆ. ಯಾರಿಗಾದರೂ ಯಾವುದಾದರೂ ವಿಷಯಕ್ಕೆ ಸಂಬಂಧಿಸಿದಂತೆ ಒಂದು ಸಾರಿ ಮಾತು ಕೊಟ್ಟರೆ ಪ್ರಾಣ ಕೊಟ್ಟಂತೆ ಪರಿಗಣಿಸುತ್ತಾರೆ ಯಾವುದೇ ಕಾರಣಕ್ಕೂ ಅಥವಾ ಆಮೀಷಕ್ಕೂ ಒಳಾಗಾಗುವುದಿಲ್ಲ. ಅವರ ಭಾಷೆಯಲ್ಲಿ 'ಮಾಟ ಇಚ್ಚಿನ ಒಕಟೆ ಪ್ರಾಣಂ ಇಚ್ಚಿನ ಒಕಟೆ' ಎಂದು 'ಇಚ್ಚಿನ ಮಾಟ ನಾಲಕ್ಯ ತಪ್ಪಕೂಡದು' ಕೊಟ್ಟ ಮಾತು ನಾಲಿಗೆ ತಪ್ಪಬಾರದು ಎಂಬ ಮೌಲ್ಯಗಳೊಂದಿಗೆ ಜೀವನವನ್ನು ಮಾಡುತ್ತಾರೆ. ಹೆಣ್ಣು ಕೊಡು ತೆಗೆದುಕೊಳ್ಳುವ ವಿಚಾರದಲ್ಲಿ ಮತ್ತು ಸಾಲದ ವ್ಯವಹಾರ ಮಾಡುವ ಸಂದರ್ಭದಲ್ಲಿ ಮಾತು ಒಂದು ಮೌಲ್ಯಗಿರುತ್ತದೆ.

ಆದ್ದರಿಂದ ಇವರು ಸಾಲದ ವ್ಯವಹಾರ ಮಾಡುವಾಗ ಯಾವುದೇ ಪ್ರಾಂಮಿಸರಿ (ಕರಾರು ಪತ್ರ) ನೋಟ್ ಅಥವಾ ಕೋರ್ಟ್ ಕಚೇರಿಗೆ ಹೋಗುವುದಿಲ್ಲ. ಅಲ್ಲಿರುವ ತಮ್ಮ ಕುಲಪೆದ್ದಲು ಮೂಖಾಂತರ ಬಾಯಿ ಮಾತಲ್ಲೆ ತಮ್ಮ ಇತ್ಯರ್ಥವನ್ನು ಮಾತಿನ ಮೂಲಕವೇ ಬಗೆಹರಿಸಿಕೊಳ್ಳುತ್ತಾರೆ.

**ನಿಯಮಗಳು:** ನಿಯಮಗಳು ಮತ್ತು ಮೌಲ್ಯಗಳು ಒಂದಕ್ಕೊಂದು ನಿಕಟವಾದ ಸಂಬಂಧವಿದೆ. ನಿಯಮಗಳು ಮಾನವನ ನೀಲಿ ನಕಾಶೆಗಳು, ಆದರ್ಶ ಮಾದರಿಗಳು ಎಂದರೆ ತಪ್ಪಗಲಾರದು. ಸಮುದಾಯದ ನಿರೀಕ್ಷೆಗಳನ್ನು ಸೂಚಿಸುತ್ತದೆ. ಸಾಮಾಜಿಕ ನಿಯಮಗಳು, ಲೋಕರೂಢಿಗಳು, ನೈತಿಕ ನಿಯಮಗಳು, ಪದ್ಧತಿಗಳು, ಕಾನೂನುಗಳು ಮುಂತಾದವುಗಳಿಂದ ಕೂಡಿವೆ. ಸಮುದಾಯದ ಸದಸ್ಯರು ಸಮಾಜದ ನಿಯಮಗಳನ್ನು ಅನುಸರಣೆ ಮಾಡುವುದರಿಂದ ಸಮಾಜದ ಮೌಲ್ಯಗಳನ್ನು ಅಂತಸ್ತನ್ನು ಕಾಪಾಡುವುದು ಸಾಧ್ಯ. ಇವುಗಳು ವ್ಯಕ್ತಿಗಳ ವರ್ತನೆ ಮತ್ತು ಅನುಸರಣೆಯ ಮೇಲೆ ನಿರ್ಧಾರವಾಗುತ್ತದೆ. ಹಾಗಾಗಿ ಬುಡ್ಗ ಜಂಗಮ ಸಮುದಾಯವು ತನ್ನದೇಯಾದ ರೀತಿ ನೀತಿ, ಮೌಲ್ಯಗಳನ್ನು ಕಾಪಾಡಿಕೊಂಡು ಬರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಅಲೆಮಾರಿ ಬುಡ್ಗ ಜಂಗಮರು ತಮ್ಮದೇಯಾದ ವಿಭಿನ್ನವಾದ ಆಚರಣೆಗಳಾದ ಹುಟ್ಟು, ನಾಮಕರಣ, ಋತುಮತಿ, ವಿವಾಹ ಆಚರಣೆ ಪದ್ಧತಿಗಳು, ಸೀಮಂತ ಕಾರ್ಯ, ಶವಸಂಸ್ಕಾರದ ಆಚರಣೆಗಳು. ದೈವಾರಾಧನೆಯಾದ ಜಮ್ಮುಲಮ್ಮ ಸುಂಕ್ಲಮ್ಮರ ಪೆಟ್ಟಿಗೆ ದೇವರ ಆಚರಣೆ, ಮಾರೆಮ್ಮ ದೇವರ ಆಚರಣೆ, ಚೂಸುಕುನೇದಿ(ಪ್ರೇತಾರಾಧನೆ), 'ಬಿಡಾರು' ಆಚರಣೆ, ನಂಬಿಕೆಗಳು, ವಿಧಿ–ನಿಷೇಧಗಳು, ಮೌಲ್ಯಗಳು ಮತ್ತು ನಿಯಮಗಳುಗಳೊಂದಿಗೆ ವಿಶಿಷ್ಟವಾದ ಸಂಪ್ರದಾಯ ಆಚರಣೆಗಳನ್ನು ಇಂದಿನ ಆಧುನಿಕ ಜಗತ್ತಿನಲ್ಲಿಯೂ ಅನುಸರಿಸುತ್ತಿದ್ದಾರೆ. ಯಾವುದೇ ಒಂದು ಸಮುದಾಯದ ಗುರುತಿಸುವಿಕೆಯಲ್ಲಿ ಆ ಸಮುದಾಯವು ಕಟ್ಟಿಕೊಂಡಿರುವ ಸಂಪ್ರದಾಯ ಆಚರಣೆಗಳು, ನಂಬಿಕೆಗಳು, ವಿಧಿ–ನಿಷೇಧಗಳು, ಮೌಲ್ಯಗಳು ಬಹುಮುಖ್ಯ ಪಾತ್ರವಹಿಸುತ್ತವೆ.

**ಆಧಾರಗಳು**


೧. ಬಾಲಗೋಪಾಲ್(ಮೂ), ಶ್ರೀಮತಿ ಎಚ್ ಎಸ್(ಅನು), ೧೯೯೮, ಪ್ರಾಚೀನ ಭಾರತದ ಚರಿತ್ರೆ, ಪು.೧೦–೧೧

೨. ಚಂದ್ರಬಾಬು ವೈ, ೨೦೧೦, ಜಾನಪದ ಕಾವಡಿ ಹಬ್ಬಗಳು ಸಾಂಸ್ಕೃತಿಕ ಅಧ್ಯಯನ, ಪು. ೧೪

೩. ಕಲವೀರ ಮನ್ವಾಚಾರ, ೨೦೦೨, ಮಾತೃದೇವತಾ ಆರಾಧನೆ, ಪು. ೬೬

೪. Kavoor A T, 1980, Gods,Demons and Spirits, Page-157

೫. ಚಂದ್ರಶೇಖರ್ ಸಿ ಆರ್, ೧೯೯೮, ದೇವರು ದೆವ್ವ ಇರುವವೆ? ಮೈಮೇಲೆ ಬರುವನೇ, ಪು. ೩೪

೬. ಕೃಷ್ಣಮೂರ್ತಿ ಕೆ ವಿ. ೨೦೧೦, ಮಾನವಶಾಸ್ತ್ರ, ಪು. ೧೪೬

೭. ಅದೇ, ಪು. ೧೪೭

# ಅಧ್ಯಾಯ ಆರು

# ಭಾಷೆ, ಸಾಹಿತ್ಯ, ಕಲೆ ಮತ್ತು ರಂಗಭೂಮಿ

ಪೀಠಿಕೆ

ಬುಡ್ಗ ಜಂಗಮರ 'ಬುಡ್ಗ' ಮರುಗು ಭಾಷೆ

ರಂಗಭೂಮಿ

ಬುಡ್ಗ ಜಂಗಮರ ರಂಗಭೂಮಿಯ ವಿಕಾಸ

ಬುರ್ರಕಥಾ

ಗಂಗಿಗೌರಿ ಕಥನಕಾವ್ಯ

ಹಗಲುವೇಷ

ಹಗಲು ವೇಷಗಾರಿಕೆಯಲ್ಲಿ ಪ್ರದರ್ಶಿಸುವ ವಿವಿಧ ಕಲೆಗಳು

ಬುಡ್ಗ ಜಂಗಮರ ರಾಮಾಯಣ

ಬುಡ್ಗ ಜಂಗಮರ ಕಲಾ ಪ್ರದರ್ಶನದ ಸ್ವರೂಪ

# ಅಧ್ಯಾಯ ಆರು

# ಭಾಷೆ, ಸಾಹಿತ್ಯ ಮತ್ತು ರಂಗಭೂಮಿ

## ಪೀಠಿಕೆ

ಒಂದು ಸಮುದಾಯದ ಸಂಸ್ಕೃತಿಯ ಮಟ್ಟವನ್ನು ಅದರ ಬೆಳವಣಿಗೆಯನ್ನು ತಿಳಿಯಬೇಕಾದರೆ ಅಲ್ಲಿ ಬೆಳೆದುಬಂದ ಹಲವು ಬಗೆಯ ಭಾಷೆ, ಮೌಖಿಕ ಸಾಹಿತ್ಯ, ಸಂಸ್ಕೃತಿ, ಕಲೆಗಳನ್ನು ಪರಾಮಾರ್ಶಿಸಿಸಬೇಕಾಗುತ್ತದೆ. ಕರ್ನಾಟಕದ ಜನತೆ, ಸಂಸ್ಕೃತಿಯ ಕೈಗನ್ನಡಿಯಾದ ಕಲೆಯು ಹಲವು ಪ್ರಕಾರಗಳನ್ನು ಅತ್ಯಂತ ಪ್ರಾಚೀನ ಕಾಲದಿಂದಲೂ ತನ್ನದೇಯಾದ ರೀತಿಯಲ್ಲಿ ಬೆಳೆಸಿಕೊಂಡು ಬಂದಿರುವುದು ಕಾಣಬಹುದು. ಮಾನವ ದಿನನಿತ್ಯ ಅನುಭವಿಸುವ ಸುಖ-ಸಂತೃಪ್ತಿ ಆನಂದಗಳೇ ಕಲೆಗೆ ಮೂಲ. ಶಾಂತಿ ಸಮೃದ್ಧಿಗಳು ಕಲೆಯನ್ನು ಬೆಳೆಸಿಕೊಂಡು ಬರುವ ಮುಖ್ಯ ಅಂಶಗಳಾಗಿವೆ. ಮಾನವ ತನ್ನ ಇಂಗಿತವನ್ನು ಮತ್ತು ತಮ್ಮ ಸಂತೋಷವನ್ನು ನರ್ತನೆಮೂಲಕ ಅಭಿವ್ಯಕ್ತಿಗೊಳಿಸುತ್ತಿದ್ದನು. ಅಲ್ಲಿಂದ ಚಿತ್ರಕಲೆ, ಮಾತು, ಭಾಷೆ ಆರಂಭ ಮಾಡಿದನು. ಮಾತುಗಳ ಬೆಳೆದಂತೆ ಭಾಷೆ, ಸಾಹಿತ್ಯ ಸೃಷ್ಟಿಯಾಯಿತು. ನಂತರ ಮಾನವನು ತನ್ನ ಕೈಗಳಿಂದ ಕಲ್ಲು, ಮರ ಮುಂತಾದ ವಾಹಕಗಳಿಂದ ತನ್ನ ಇಂಗಿತವನ್ನು ಶಿಲ್ಪರೂಪವಾಗಿ ಹೊರಪಡಿಸಲು ಕಲಿತನು. ಅದೇ ರೀತಿಯಾಗಿ ಅಲೆಮಾರಿ ಬುಡ್ಗ ಜಂಗಮರ ಭಾಷೆ, ಕಲೆ, ಸಾಹಿತ್ಯ ಮತ್ತು ರಂಗಭೂಮಿಯು ಕೂಡ ಬೆಳೆದು ಬಂದಿರುವುದು ಕಾಣಬಹುದು.

## ಬುಡ್ಗ ಜಂಗಮರ 'ಬುಡ್ಗ' ಭಾಷೆ

ಭಾಷೆಯು ಸಮಾಜದ ಸಂವಹನ ಮಾಧ್ಯಮವಾಗಿದೆ. ಪ್ರಪಂಚದಲ್ಲಿ ಸಾವಿರಾರು ಭಾಷೆಗಳು ಆಯಾ ಭೌಗೋಳಿಕ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿವೆ. ಮಾನವ ದೈನಂದಿನ ಸಾಮಾಜಿಕ ಚಟುವಟಿಕೆಗಳಲ್ಲಿ, ವೈಯಕ್ತಿಕ ಗುರಿ ಸಾಧನೆಗಳಲ್ಲಿ ಭಾಷೆಯು ಪ್ರಮುಖ ಪಾತ್ರನಿರ್ವಹಿಸುತ್ತದೆ. ವ್ಯಕ್ತಿಯು ತನ್ನ ಅನಿಸಿಕೆ, ಭಾವನೆ, ಅಭಿಪ್ರಾಯ ಅನುಭವ ಹಾಗೂ ಭೌತಿಕ ಚಟುವಟಿಕೆಗಳನ್ನು ಭಾಷೆಯ ಮೂಲಕವೇ ಅಭಿವ್ಯಕ್ತಪಡಿಸುತ್ತಾನೆ.

ಸುಮಾರು ೨೫೦೦ ವರ್ಷಗಳ ಹಿಂದೆ ದ್ರಾವಿಡ ಭಾಷೆಯಿಂದ ಬೇರೆ ಬೇರೆ ಭಾಷೆಗಳು ಹುಟ್ಟಿಕೊಂಡವು. ಅವುಗಳನ್ನು ಉತ್ತರ ದ್ರಾವಿಡ, ಮಧ್ಯದ್ರಾವಿಡ, ದಕ್ಷಿಣ ಮಧ್ಯದ್ರಾವಿಡ, ದಕ್ಷಿಣದ್ರಾವಿಡ ಎಂದು ಮುಖ್ಯವಾಗಿ ನಾಲ್ಕು ಗುಂಪುಗಳಾಗಿ ಭಾಷಾ ತಜ್ಞರು ವರ್ಗೀಕರಿಸುತ್ತಾರೆ. ತೆಲುಗು ಭಾಷೆ ದಕ್ಷಿಣ ದ್ರಾವಿಡ ಭಾಷಾಗುಂಪಿನ ಮಹತ್ವದ ಭಾಷೆ. ದ್ರಾವಿಡ ಭಾಷೆಗಳಲ್ಲಿ ತಮಿಳು ಭಾಷೆಯು ಮೊದಲನೆಯದಾದರೆ ಕನ್ನಡ ಎರಡನೇ ಪ್ರಾಚೀನ ಭಾಷೆಯಾಗಿದೆ.

ಬುಡ್ಗ ಜಂಗಮರು ತಮ್ಮದೇಯಾದ 'ಬುಡ್ಗ ಭಾಷೆ"ಯನ್ನು ಮಾತನಾಡುತ್ತಾರೆ. ಇದನ್ನು ಮರುಗು ಭಾಷೆ ಎಂತಲೂ ಕರೆಯುತ್ತಾರೆ. ಕನ್ನಡದಲ್ಲಿ ಮರಗು ಭಾಷೆಯನ್ನು ರಹಸ್ಯ ಭಾಷೆ ಅಥವಾ ಗುಪ್ತ ಭಾಷೆ ಎಂದರ್ಥ ನೀಡುತ್ತದೆ. ಈ ಮರಗು ಭಾಷೆಯನ್ನು ಅನೇಕ ಅಲೆಮಾರಿ ಬುಡಕಟ್ಟು ಸಮುದಾಯಗಳು ತಮ್ಮದೇಯಾದ ಪ್ರತ್ಯೇಕವಾದ ಭಾಷೆಯನ್ನಾಗಿ ಮಾತನಾಡುತ್ತಾರೆ. ಬುಡ್ಗ ಭಾಷೆಯು ತೆಲುಗು, ತಮಿಳು, ಮರಾಠಿ, ಕನ್ನಡ, ಸಂಸ್ಕೃತ ಮತ್ತು ಉರ್ದು ಭಾಷೆಗಳಿಂದ ಮಿಶ್ರಣವಾಗಿದೆ ಎನ್ನಬಹುದು. ಬುಡ್ಗ ಭಾಷೆಯಲ್ಲಿ ತೆಲುಗು ಭಾಷೆಯು ಅತಿ ಹೆಚ್ಚಾಗಿ ಬಳಸುವುದನ್ನು ಕಾಣಬಹುದು.

ಭಾರತದ ಅನೇಕ ತಳಸಮುದಾಯಗಳು ತುಳಿತಕ್ಕೆ ಒಳಗಾದ ಮತ್ತು ದೌರ್ಜನ್ಯಕ್ಕೆ ಒಳಗಾದ ಅನೇಕ ಸಮುದಾಯಗಳು ತಮ್ಮ ಆತ್ಮ ರಕ್ಷಣೆಗಾಗಿ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಈ ಭಾಷೆಯನ್ನು ಸೃಷ್ಟಿಸಿಕೊಂಡರು ಎಂದು ಹೇಳಬಹುದು. ಮೊದಲು ಸಂಜ್ಞೆಗಳ ಮೂಲಕ, ತನ್ನದೇಯಾದ ವಿಶೇಷ ಮೌಖಿಕ ಸಾಹಿತ್ಯದ ಮೂಲಕ ಈ ಮರುಗು ಭಾಷೆ, ಬುಡ್ಗ ಭಾಷೆಯನ್ನು ಪ್ರಾರಂಭಿಸಿದ್ದಾರೆ.

ದೇಶದ ೧೦ ಕೋಟಿಗೂ ಅಧಿಕ ಸಂಖ್ಯೆಯಲ್ಲಿರುವ ಅಲೆಮಾರಿ ಅರೆ-ಅಲೆಮಾರಿ, ಬುಡಕಟ್ಟು, ವಿಮುಕ್ತ ಬುಡುಕಟ್ಟು ಸಮುದಾಯಗಳು ಈ ದೇಶದ ಮೂಲ ನಿವಾಸಿಗಳು ಎಂದರೆ ತಪ್ಪಾಗಲಾರದು, ಈ ದೇಶಕ್ಕೆ ಆರ್ಯರು ಪ್ರವೇಶ ಪಡೆದ ನಂತರ ಈ ದೇಶದ ಸಂಪತ್ತು ಕಬಳಿಸುವ ತಮ್ಮ ಅಧಿಕಾರ ಸ್ಥಾಪಿಸುವ ಉದ್ದೇಶದಿಂದ ಇಂತಹ ಅನೇಕ ಸಮುದಾಯಗಳನ್ನು ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ಅಧ್ಯಯನಗಳನ್ನು ಮಾಡಿ ಈ ದೇಶದ ಮೂಲನಿವಾಸಿಗಳನ್ನು ಒಕ್ಕಲೆಬ್ಬಿಸಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸಲು ಪ್ರಯತ್ನಿಸಿದರು. ಇಂತಹ ಸಂದರ್ಭದಲ್ಲಿ ಮೊಟ್ಟ ಮೊದಲ ಬಾರಿಗೆ ಬ್ರಿಟಿಷರ ವಿರುದ್ಧ ಹೋರಾಡಿದಂತವರು ಅಲೆಮಾರಿ ಬುಡುಕಟ್ಟು ಸಮುದಾಯಗಳು ಎನ್ನಬಹುದು. ಕೆಲವು ಸಮದಾಯಗಳನ್ನು ಅಪರಾಧಿ ಬುಡಕಟ್ಟುಗಳು ಎಂದು ಹಣೆಬರಹ ಕಟ್ಟಿ ಸೆಂಟ್ಲ್‌ಮೆಂಟ್‌ಗಳಲ್ಲಿ ಕೂಡಿ ಹಾಕುತ್ತಿದ್ದರು. ಇವರು ಅಲೆಮಾರಿಗಳು ವಾಸಿಸುವ ನೆಲೆಗಳಿಂದ ಒಕ್ಕಲೆಬ್ಬಿಸುವಿಕೆ, ದೌರ್ಜನ್ಯ, ಕಳ್ಳತನ, ಅಪರಾಧಗಳು ಜರುಗಿದರೆ ಈ ಸಮುದಾಯಗಳ ಮೇಲೆ ಆರೋಪಿಸಿ ಅವರಿಗೆ ವಿಚಿತ್ರವಾದ ಶಿಕ್ಷೆಗಳನ್ನು ನೀಡುತ್ತಿದ್ದರು. ಅಲ್ಲಿಂದ ಕೆಲವು ಸಮುದಾಯಗಳು ತಪ್ಪಿಸಿಕೊಂಡು ಅಲೆಮಾರಿಗಳಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುತ್ತಿದ್ದರು. ಇಂತಹ ಸಂದರ್ಭದಲ್ಲಿ ಅಲೆಮಾರಿಗಳು ತಮ್ಮ ಬುದ್ಧಿವಂತಿಕೆಯಿಂದ ಅನ್ಯರಿಂದ ತಪ್ಪಿಸಿಕೊಳ್ಳಲು, ತಮ್ಮ ಆತ್ಮ ರಕ್ಷಣೆಗಾಗಿ ಸಂಜ್ಞೆ, ಸಂಕೇತಗಳ ಮೂಲಕ ಧ್ವನಿಗಳ ಮೂಲಕ ತಮ್ಮದೇಯಾದ ಮರುಗು ಭಾಷೆಯನ್ನು

ಸೃಷ್ಟಿಸಿಕೊಂಡರು. ಉದಾ: ಹಕ್ಕಿಪಿಕ್ಕಿಯವರು ವಾಗ್ರಿ ಭಾಷೆ, ಸಿದ್ದಿಯವರು ಸಿದ್ದಿ ಭಾಷೆ, ಬುಡ್ಗ ಜಂಗಮರ ಬುಡ್ಗ ಭಾಷೆ ಹೀಗೆ ಅನೇಕ ಲಿಪಿರಹಿತವಾದ ಭಾಷೆಯನ್ನು ಸಮುದಾಯಗಳು ಕಂಡುಕೊಂಡರು. ಬುಡ್ಗ ಭಾಷೆ ಬುಡ್ಗ ಜಂಗಮರ ಐಡೆಂಟಿಟಿಯನ್ನು ಕಟ್ಟಿಕೊಡುತ್ತದೆ ಎನ್ನಬಹುದು, ಆದರೆ ಇಂದು ಆಧುನಿಕ ಪ್ರಭಾವದಿಂದ ಬುಡ್ಗ ಜಂಗಮರ ಮೂಲ ಭಾಷೆ ಇಂದು ದಿನೆ ದಿನೆ ಕಣ್ಮರೆಯಾಗುತ್ತಿದೆ.

**ಕೋಷ್ಟಕ ೬.೧: ಬುಡ್ಗ ಜಂಗಮರ ಬುಡ್ಗ ಭಾಷೆಯ ವ್ಯಕ್ತಿನಾಮಪದಗಳು**

| ಬುಡ್ಗ ಭಾಷೆ | ಕನ್ನಡ ಭಾಷೆ |
|---|---|
| ಈಗಿನಗಾಡು ಅಥವಾ ಕೈಕಲಾಗಾಳು, ಕುಚ್ಚುಗಾಡು | ಪೋಲಿಸ್, ಪೋಲೀಸರು |
| ಎಗ್ಯಾಡು | ಸಮಾಜದಲ್ಲಿನ ದೊಡ್ಡ ವ್ಯಕ್ತಿ |
| ಎಲಿಗಾಡು | ಲಿಂಗಾಯತ |
| ಕಟ್ಲಗಾಳು | ಲಂಮಾಣಿ |
| ಕಡ್ಡಿಗಾಡು | ಈಡಿಗರು |
| ಕೀನಗಾಡು | ಮಾದಿಗ |
| ಕೆಂದಲಗಾಡು | ಮಡಿವಾಳ(ಅಗಸ) |
| ಕೊರಗಾಡು | ಹಜಾಮ ಕೆಲಸದವನು |
| ಕೊರವಂಜಿಗಾಡು | ಕೊರುವರು |
| ಗೊಂಟಗಾಡು | ಕೋಮಟಿ ಅಥವಾ ಶೆಟ್ಟಿ |
| ಜಿಡ್ಡಡು | ಕುರುಬ |
| ತಾಟಗಾಡು | ಬ್ರಾಹ್ಮಣ |
| ದಾರಿಗಾಡು | ಮುಸ್ಲಿಂದವನು |
| ಪರದೇಸಿ | ಅಲೆಮಾರಿ |
| ಪಿಂಕೆಲು | ಚಿಕ್ಕಮಕ್ಕಳು |
| ಪಿಟ್ಟಿಗಾಡು | ಜಂಗಮನು |
| ಪೆದ್ದಕಿತ್ತಡು | ಬ್ಯಾಗರದವನು(ಚಲುವಾದಿ) |
| ಬೊಡ್ರಾಗಾಳು | ವಡ್ಡ, ಬೋವಿ |
| ಮಸೋಕೋಟಿ | ವಯಸ್ಸಿನ ಹುಡುಗಿ |

| | |
|---|---|
| ಮಿಡಸಡು | ಕಳ್ಳ |
| ಮುತ್ತಕಾರಿ | ಮುದುಕಿ |
| ಮುತ್ತಿಗಾರಿಗಾಡು | ಮುದುಕ |
| ಮೊಬ್ಬಗಾಡು | ನಾಯಕ, ಬೇಡ |
| ವರನಗಾಡು | ಅಧಿಕಾರಿ |
| ವಲ್ಲುಗಾಡು | ಭಿಕ್ಷುಕ |
| ಶಾರಂ | ಮಹಿಳೆ |
| ಸಿರುಪೋಟಿ | ಹುಡುಗಿ |

ಬುಡ್ಗ ಜಂಗಮರು ತಮ್ಮ ಬುಡ್ಗ ಭಾಷೆಯ ಪದಗಳ ಅಂತ್ಯದಲ್ಲಿ 'ಳ್ಳು' ಅಥವಾ ಡು ಎನ್ನುವ ಪ್ರತ್ಯಯಗಳನ್ನು ಸೇರಿಸಿಕೊಂಡು ಬಹುವಚನ ರೂಪದಲ್ಲಿ ಮಾತನಾಡುತ್ತಾರೆ. ಮಂಕಾಡು ಎನ್ನುವ ಬುಡ್ಗ ಪದವು ಕನ್ನಡದಲ್ಲಿ ಕುಲಸ್ಥನಲ್ಲದ ಅನ್ಯರನ್ನು ಕರೆಯುತ್ತಾರೆ. ಮಂಕಾಳ್ಳು ಎನ್ನುವ ಪದ ಬಹುವಚನ ರೂಪ ಪಡೆಯುತ್ತದೆ. ಶಾಂತಲು ಅಥವಾ ಶ್ಯಾರಾಲು ಅಥವಾ ಮಸಿಕೊಟ್ಲು ಎಂಬ ಪದವು ಬಳ್ಳಾರಿ ಕಡೆ ಹೆಂಗಸರನ್ನು ಶಾಂತಲು ಎಂದು, ರಾಯಚೂರು ಕಡೆ ಶ್ಯಾರಾಲು ಎಂದು, ಧಾರವಾಡದ ಕಡೆ ಮಸಿಕೋಟ್ಲು ಶಾಂತಲು ಎಂದು ಕರೆಯುತ್ತಾರೆ. ಹೆಂಗಸರಿಗೆ ಗೌರವಕೊಡುವಂಥ ಸಂದರ್ಭದಲ್ಲಿ ಹೆಂಗಸರನ್ನು ಶಾಂತಲು ಎಂದು ಕರೆಯುತ್ತಾರೆ. ಭಯ ಅಥವಾ ಆಶ್ಚರ್ಯ ಪಡುವ ಸಂದರ್ಭದಲ್ಲಿ ಹೆಂಗಸರನ್ನು ಶ್ಯಾರಾಲು ಅಥವಾ ಮಸಿಕೋಟ್ಲು ಎಂದು ಕರೆಯುತ್ತಾರೆ. ಹತ್ತು ಅಥವಾ ಹನ್ನೆರಡು ವರ್ಷದ ಹೆಣ್ಣು ಹುಡುಗಿಯನ್ನು ಶಿರಪಕೋಟಿ ಎಂದು, ಇದೇ ವಯಸ್ಸಿಯನ ಗಂಡು ಹುಡುಗನನ್ನು ಶಿರಪಗಾಡು ಎಂದು ಎಳೇ ಮಕ್ಕಳನ್ನು ಪಿಂಕೆಲು ಎಂದು ಕರೆಯುತ್ತಾರೆ.

**ಕೋಷ್ಟಕ ೬.೨: ಬುಡ್ಗ ಭಾಷೆಯಲ್ಲಿ ವಸ್ತುಗಳು ಮತ್ತು ಪ್ರಾಣಿ ಪಕ್ಷಿಗಳ ನಾಮಪದಗಳು**

| ಬುಡ್ಗ ಭಾಷೆ | ಕನ್ನಡ ಭಾಷೆ |
|---|---|
| ಅವತರಿಗಾಡು, ಕುರಿಂಗಾಡು, ಮುರುಗುಂಜಾ | ಆಮೆ, ತ್ಯಾಬೆಲೆ |
| ಎಂಟುವಾ | ಮುಂಗಿಸಿ |
| ಎಂಡ್ರಕಾಯಿ | ಏಡಿ |
| ಕಾಸಿಗ್ಯಾಲು | ಬೆಕ್ಕುಗಳು |
| ಕಾಜಲು | ಮೀನು |
| ಕಾಶ್ಕಂ | ದೆವ್ವ |
| ಕುರಿಂಗಾಡು | ಆಮೆ |
| ಕೊಕ್ಕಡಾಲು | ಕೋಳಿಗಳು |

| | |
|---|---|
| ಕೋಂಡ್ರಿಗಾಡು | ಕತ್ತೆಕಿರುಬ |
| ಕೈಕಲು | ನಾಯಿಗಳು |
| ಕಂಜುಲು | ಕೌಜುಗ |
| ಒಂಕರಿಗಾಡು | ಕತ್ತೆ |
| ಗರಗಮತ್ಯ | ಪೋಲೀಸಾ ಠಾಣೆ |
| ಜಂಗಾಶ್ಕಂ | ಅಡವಿಬೆಕ್ಕು |
| ತೊಡೆಲು | ತೋಳ |
| ತೋಡ್ಸಿಗಾಡು | ಅಳಿಲು |
| ನರಿಸಿಗಾಡು | ನರಿ |
| ಪುಲ್ಲಕೋಡಿ | ನೀರುಕೋಳಿ |
| ಬಡಿಸ್ಯಾಲು | ದನಗಳು |
| ಮತ್ತೆಲು | ಮನೆಗಳು |
| ಮತ್ಯಾಕಾಶ್ಕಂ | ಬೆಕ್ಕು |
| ಮ್ಯಾಸಾಲು | ಕುರಿ, ಮೇಕೆ |
| ಮುಕ್ಕರಾಶಿಗಾಡು | ಹಂದಿ |
| ಮುಂಡ್ಲಪಂದಿ | ಅಡವಿ ಹಂದಿ |
| ಮೊಬ್ಬು ಬಡಿಸ್ಯಾಂ | ಕೋಣ |
| ಸೆತ್ತಾಲು | ಹೋಲಗಳು |
| ಸೆವಲಪೋತು | ಮೊಲ |
| ವಲಿಂಗಾಡು | ಉಡಾ |
| ಕಟ್ಟಿ ಕೆಂದಾಲು | ದೋತರ |
| ಕೆಂದಲು | ಬಟ್ಟೆಗಳು |
| ಗಾಲಂ | ಮೀನು ಹಿಡಿಯುವ ಸಾದನ |
| ಜೋಲಿಕ್ಯಾಂ | ಜೋಳಿಗೆ |
| ತೊಗಡುವಾಂ | ಅಂಗಿ, ಷರಟು |
| ದೋರ್‍ನ್ಯಾಲು | ಉರುಲುಗಳು |
| ಪಿಸಾಂ, ಪಿಸಾಲು | ಮೀನು ಹಿಡಿಯುವ ಬಲೆ |

| | |
|---|---|
| ಪಾರ್ದೀ | ಕೌಜುಗ ಹಿಡಿಯುವ ಬಲೆ |
| ಬೊಡಿಶ್ಯಾಲು | ಪಾತ್ರೆಗಳು |
| ಲಾಗು | ಡ್ರಾಯರ್, ನಿಕ್ಕರ್, ಚಡ್ಡಿ |
| ಲಾಟಲು | ಕಟ್ಟಿಗೆಗಳು |

ಇಲ್ಲಿ ದ್ರಾವಿಡ ಪದವಾದ ಕುಕ್ಕಟ ಎನ್ನುವುದು ಕೊಕ್ಕಡ ಎಂದು, ತೆಲುಗು ಪದವಾದ ಮ್ಯಾಕ ಎನ್ನುವುದು ಮ್ಯಾಸ ಆಗಿರುವುದನ್ನು ಗಮನಿಸಬಹುದು.

**ಕೋಷ್ಟಕ ೬.೩: ದವಸ ಧಾನ್ಯಗಳಿಗೆ ಸಂಬಂಧಿಸಿದ ಬುಡ್ಗ ಭಾಷೆಯ ಪದಗಳು**

| ಬುಡ್ಗ ಭಾಷೆ | ಕನ್ನಡ ಭಾಷೆ |
|---|---|
| ಗಿಂಜಲು | ಬ್ಯಾಳೆ |
| ಜೀಟಾಲು | ಜೋಳ, ನೆಲ್ಲು, ರಾಗಿ |
| ತೈಲಕೋಟಿ | ಒಳ್ಳೆಣ್ಣೆ |
| ನಲ್ಪು | ಸರಾಯಿ, ಬ್ರಾಂದಿ |
| ಪಾಣಿಸ್ಯಾಲು | ನೀರು |
| ಪುಲ್ಚು | ಸಾಂಬರು |
| ಪುಲ್ಬು | ಹುಣಸೆಹಣ್ಣು |
| ಮಿಟುಪಿಳ್ಳು | ಅಕ್ಕಿ |
| ಮೀಟಾಂ | ಉಪ್ಪು |
| ಮೆಸ್ಕು | ತಿನ್ನು |
| ಶ್ಯಾವುಡಿ | ಅನ್ನ |
| ಶ್ಯಾಕಂ | ಮಾಂಸ |
| ಸಿಲಾಲು | ಚಹಾ |
| ಸಿದಾನಂ(ಕಲ್ಲು) | ಹೆಂಡ |

**ಕೋಷ್ಟಕ ೬.೪: ಮನುಷ್ಯನ ಅಂಗಾಗಗಳಿಗೆ ಸಂಬಂಧಿಸಿದಂತೆ ಬುಡ್ಗ ಭಾಷೆಯ ಪದಗಳು**

| ಬುಡ್ಗ ಭಾಷೆ | ಕನ್ನಡ ಭಾಷೆ |
|---|---|
| ಆಸನಂ | ಹೆಣ್ಣು ಮಕ್ಕಳ ಗುಪ್ತಾಂಗ |
| ಕೊಂಕಣಂ | ಗಂಡಸರ ಗುಪ್ತಾಂಗ |
| ಕ್ಯಾತ್ವಂ, | ಗುಪ್ತಾಂಗ ಕೂದಲು |

| | |
|---|---|
| ಗೊಟ್ಯಂ, ಗುಯಂ | ಮುಗುಳಿ |
| ದಂತವಾಲು | ಹಲ್ಲು |
| ನಯನಕೋಟ್ಲು | ಕಣ್ಣು |
| ಪಾದಕಸ್ಪಾಲ್ | ಕಾಲು |
| ಪುರಸಾಲು | ಗಂಡಸರ ತೊಳ್ಡು |
| ಪೊತ್ತಿಕೋಟಿ | ಹೊಟ್ಟೆ |
| ಸಿರಿಸ್ಯಾಮ | ತಲೆ |
| ಹಸ್ತಕೋಟಿ | ಕೈಗಳು |

**ಕೋಷ್ಟಕ ೬.೫: ಕ್ರಿಯಾಪದಗಳಿಗೆ ಸಂಬಂಧಿಸಿದಂತೆ ಬುಡ್ಗ ಭಾಷೆಯ ಪದಗಳು**

| ಬುಡ್ಗ ಭಾಷೆ | ಕನ್ನಡ ಭಾಷೆ |
|---|---|
| ಇಗ್ಲಾಟಂ | ನಗುವುದು |
| ಐಕಂಜ್ಯೆ | ಬಚ್ಚಿಡು |
| ಕರಿಂಪು | ಸಾಯಿಸುವುದು |
| ಕಸಿಂಪುತಡು | ಬೈಯುವುದು |
| ಕಂಜಾಟ್ಕಂ | ಸಂಭೋಗಿಸುವುದು |
| ಗೀತಾಟ್ಕಂ | ಅಳುವುದು |
| ಗೂಸಾ | ಅವಮಾನ |
| ಜಾನ್‌ರಾ | ಬಾ |
| ದೇಪುತುನ್ನಡು | ಹೊಡಿಯುವುದು |
| ನಂಚುಂಡು | ಇರು |
| ನಿಕ್ಕು | ಹೋಗು |
| ಪತ್ರಿಕಂ | ಹೆಸರು |
| ಪಲ್ಕಾಡು | ಮಾತಾಡು |
| ಪೊಗುಡುತುನ್ನಡು | ಹೊಗುಳುವುದು |
| ಬೊಕುಡುಗಾಡು | ಸರಿಇಲ್ಲದವನು |
| ಮೆಸ್ಕಾಟಕಂ | ಕುಡಿಯೋದು |
| ವಾಲ್ಕೋ | ಕುಳಿತುಕೋ |
| ಸೌಕ | ಸುಮ್ಮನಿರು |

**ಕೋಷ್ಟಕ ೬.೬: ಹಣ ಮತ್ತು ಆಭರಣಕ್ಕೆ ಸಂಬಂಧಿಸಿದಂತೆ ಬುಡ್ಗ ಭಾಷೆಯ ಪದಗಳು**

| **ಕನ್ನಡ ಭಾಷೆ** | **ಬುಡ್ಗ ಭಾಷೆ** |
|---|---|
| ಇಪ್ಪತ್ತು ರೂಪಾಯಿ | ಇಂಸಿತಂ |
| ಎಪ್ಪತ್ತೈದು ರೂಪಾಯಿ | ಇಂಸಿತ ಪಂಚಂ |
| ಹಣ | ಕಂಚಿಕಂ |
| ನಾಲ್ಕಾಣೆ | ಗೀಟು |
| ಅರ್ಧರೂಪಾಯಿ | ಅರ್ಧಗಿಂಜ |
| ಎಪ್ಪತ್ತೈದು ಪೈಸೆ | ಮೂಡುಗೀಟ್ಲು |
| ಒಂದು ರೂಪಾಯಿ | ಗಿಂಜ |
| ಒಂದೂವರೆ | ಗಿಂಜನರ |
| ಎರಡು ರೂಪಾಯಿ | ದ್ವಯಂ ಗಿಂಜಾಲು |
| ತ್ರಿಮುಖಂ | ಮೂರು ರೂಪಾಯಿ |
| ಐದು ರೂಪಾಯಿ | ಪಂಚಗಿಂಜಾಲು |
| ಹತ್ತು ರೂಪಾಯಿ | ದಶಗಿಂಜಾಲು |
| ಮೂವತ್ತು ರೂಪಾಯಿ | ತ್ರಿಮುಖಂ |
| ನಲವತ್ತು ರೂಪಾಯಿ | ಬಸಣ್ಣ ಪಾದಂ |
| ಐವತ್ತು ರೂಪಾಯಿ | ಹಸ್ತಂ ಗಿಂಜಾಲು |
| ಅರವತ್ತು ರೂಪಾಯಿ | ಆರುತುಕ್ಕುಲು |
| ನೂರು ರೂಪಾಯಿ | ಗೌರ, ಪಿಚ್ಚ |
| ಸಾವಿರ ರೂಪಾಯಿ | ಕೋಯಿಲಂ |
| ಹತ್ತು ಸಾವಿರ ರೂಪಾಯಿ | ದಶಂ ಏರ್ಪಾಟು |
| ಒಂದು ಲಕ್ಷ ರೂಪಾಯಿ | ಒಕ ಏರ್ಪಾಟು |
| ಆಭರಣ | ಸೊಣಪಂ |
| ಬಂಗಾರ | ನೆಟ್ಟು |

ಒಟ್ಟಿನಲ್ಲಿ ಇವರ ಬುಡ್ಗ ಪದಗಳು ಇವರು ಬದುಕುವ ಪರಿಸರ ಭಾಷೆಯಲ್ಲಿ ಸೇರಿಕೊಂಡು ಬಳಕೆಯಾಗುವುದನ್ನು ಗುರುತಿಸಬಹುದಾಗಿದೆ.

**ವಾಕ್ಯಗಳು**

೧. ಮಂಕಾಡು ಜಗೆಚ್ಯಾ ನಿಕ್ಕು..

ಯಾರೋ ವ್ಯಕ್ತಿ ಬಂದ ಹೋಗು..

೨. ಸಿದಾನಂ ಮೆಸ್ಕುದಾಂ ಜಗಿರಾ..

ಹೆಂಡ ಕುಡಿಯೋಣ ಬಾ..

೩. ಮಿಡ್ಸಾಗಾಳು ಕರ್ವಟ್ಲಾ ಜಗಿವಚ್ಚಿ ಮತ್ತೆಲ ಉನ್ನ ಕಂಚಿಗೆಂ ಅಂತಾ ಅಂಡುಕೋನಿ ನಿಕ್ಕಿನರು.

ರಾತ್ರಿ ಮನೆಯಲ್ಲಿ ಕಳ್ಳರು ಬಂದು ಮನೆಯಲ್ಲಿದ್ದ ಹಣವನ್ನು ಕದ್ದುಕೊಂಡು ಹೋಗಿದ್ದಾರೆ ಎಂದು ಅರ್ಥ ನೀಡುತ್ತದೆ.

**ಗಾದೆಮಾತುಗಳು**

೧. ಕುಲಂ ವಿಡಿಚಿನ ಪಕ್ಷಿಲೇದು– ವನಂ ವಿಡಿಚಿನ ಕೋತಿ ಲೇದು

ಮಾನವ ಸಂಗ ಜೀವಿ, ಸ್ವತಂತ್ರವಾಗಿ ಜೀವಸಲಾರ ಎಂಬ ತಾತ್ವಿಕತೆಯನ್ನು ಇಲ್ಲಿ ಕಾಣಬಹುದು.

೨. ಕುಲಂ ಕುತಿಕಲ ಬಂಟಿ– ಸಮುದ್ರಂ ಮೊಕಾಳ್ಳ ಬಂಟಿ

೩. ಕುಲಂ ಕನ್ನು ಗದ್ದಕನ್ನು.

೪. ಕುರುಚುಂಟೆ ಕುಲಂ–ಲೇಸ್ತೆ ಪರದೇಶಿ

೫. ಕಂಜಿಮೆಸ್ಕೆ ಕಾರಿಗಾಡು–ದತ್ತು ಪೆಟ್ಟೆ ದಾರಿಗಾಡು

೬. ಪಾಮೇನ್ನೈನಾ ಪಟ್ಟವಚ್ಚು– ಪಚ್ಚಟಿ ಕೊಮ್ಮ ಪಟ್ಟರಾದು.

೭. ಪನಿಲೇಕ ಮಂಗಲಯ್ಯ ಮೀಸಾಲು ಕೊರಗಿಚಿನಡಂಟಾ.

ಬದುಕುವ ಕೆಲಸದಲ್ಲಿ ಮಗ್ನನಾಗುವುದು ಬಿಟ್ಟು ಸೋಮಾರಿತನದ ಕೆಲಸ ಮಾಡಬಾರದು ಎಂಬ ತಾತ್ವಿಕತೆಯನ್ನು ಇಲ್ಲಿ ಕಾಣಬಹುದು.

೮. ಅತ್ತ ಕೋಡಲಿಕ್ಕಿ ಬುದ್ದಿ ಚಪ್ಪಿ, ಅತ್ತ ರೆಕ್ಕಲಾಡಿಚ್ಚಿಂದಂಟಾ, ಅಂದರೆ ಅತ್ತೆ ಸೊಸೆಗೆ ಬುದ್ದಿಹೇಳಿ ತಾನು ತಪ್ಪುಮಾಡಿದಾಳಂತೆ ಎಂದು ಅರ್ಥ ನೀಡುತ್ತದೆ.

೯. ತನುವುಕು ನೂರೆಂಡ್ಲು–ತಗುವುಕು ವೆಳ್ಳೆಂಡ್ಲು.

ಬುಡ್ಗ ಜಂಗಮರ ಕುಲಪಂಚಾಯಿತಿ ಸಂದರ್ಭದಲ್ಲಿ ಪಂಚಾಯಿತಿ ಮಾಡಲು ಆರು ತಿಂಗಳು, ಒಂದುವರ್ಷವರೆಗೆ ವಾಯಿದೆ ಹಾಕಿಕೊಳ್ಳುವ ಪದ್ಧತಿ ಇದೆ. ತಮ್ಮದಾಗಿಸಿಕೊಳ್ಳುಲಿಕ್ಕೆ ಕಾಲಮಿತಿಯಲ್ಲಿ ನೂರು ವರ್ಷ ಆದರೆ, ಕಳಚಿಕೊಳ್ಳಲು ಸಾವಿರ ವರ್ಷ ಸಾಲದು ಎಂಬುದು ಅಭಿಪ್ರಾಯ.

**ರಂಗಭೂಮಿ**

ಅಲೆಮಾರಿ ಬುಡಕಟ್ಟು ಸಮುದಾಯಗಳ ಮುಖ್ಯ ಕಸುಬು ಕಾಡುಪ್ರಾಣಿಗಳನ್ನ ಬೇಟೆಯಾಡುವುದು. ಹಗಲೆಲ್ಲಾ ಬೇಟೆಯಲ್ಲಿ ಪ್ರಾಣಿಗಳೊಂದಿರುವ ಸೆಣಸಾಟ-ಒಡನಾಟಗಳಲ್ಲಿ ಕಳೆಯುತ್ತಿದ್ದನು. ಕತ್ತಲಾಗುತ್ತಿದ್ದಂತೆ ವಿಶ್ರಾಂತಿಗಾಗಿ ಗುಹೆಗೆ ಹಿಂದಿರುಗುತ್ತಿದ್ದನು. ಹೀಗೆ ಗುಹೆಗಳಲ್ಲಿ ವಾಸಿಸುತ್ತಿದ್ದ ಆದಿಮಾನವನಿಗೆ ತನ್ನ ಸಹಚರರೊಡನೆ ಸಂಭಾಷಿಸಲು ಸುಸಜ್ಜಿತ ಭಾಷೆಯೊಂದೂ ಆಗ ಇರಲಿಲ್ಲ. ಹಾವಭಾವ, ಆಂಗಿಕ ಚಲನೆಗಳು ಭಾಷೆಯ ಪ್ರಾರಂಭಿಕ ಹೆಜ್ಜೆಗಳಾಗಿ ಅನುಭವಗಳನ್ನು ವಿನಿಮಯವನ್ನು ಮಾಡುತ್ತಿದ್ದನು.

ಭಾಷೆಗೆ ಲಿಪಿ ಕಾಣಿಸಿಕೊಳ್ಳುವ ಪೂರ್ವದಲ್ಲಿ ಮಾನವ ಸಮಾಜದ ಎಲ್ಲಾ ವರ್ತನೆಗಳು ಮೌಖಿಕವಾಗಿ ಅಭಿವ್ಯಕ್ತಿಪಡಿಸುತ್ತಿದ್ದನು. ಮಾನವ ತಮ್ಮ ಬದುಕಿನ ಕಷ್ಟ-ಕಾರ್ಪಣ್ಯಗಳನ್ನು, ನೋವು-ನಲಿವುಗಳನ್ನು ತನ್ನ ಕಲೆಗಳ ಮೂಲಕ ಬದುಕಿನ ಸಂದರ್ಭಗಳಲ್ಲಿ ನಡೆದ ಘಟನೆಗಳನ್ನು ಹಾಡುಗಾರಿಕೆ, ಅನುಕರುಣೆ ಮೂಲಕ ಹಂಚಿಕೊಳ್ಳುತ್ತಿದ್ದನು. ಮನುಷ್ಯ ಮೂಲತಃ ಅನುಕರಣಾಜೀವಿ. ಅನುಕರಣೆ ನಾಟಕದ ಪ್ರಧಾನ ಮೂಲಾಂಶ. "ಮನುಷ್ಯನ ನಾಗರಿಕತೆಯ ಹುಟ್ಟಿನೊಂದಿಗೆ ರಂಗಭೂಮಿಯ ಚರಿತ್ರೆಯೂ ಪ್ರಾರಂಭವಾಗುತ್ತದೆ. ಹೀಗಾಗಿ ಮನುಷ್ಯನ ನಾಗರಿಕತೆಯ ಹುಟ್ಟು ರಂಗಭೂಮಿಯ ಹುಟ್ಟು ಎಂಬ ಮಾತು ಸತ್ಯ. ಗುಹೆಯಲ್ಲಿ ವಾಸಿಸುವ ಮನುಷ್ಯರಿಂದ ಹಿಡಿದು ಜಗತ್ತಿನ ಶ್ರೇಷ್ಠ ನಾಗರಿಕ ಸಮಾಜದವರೆಗೆ ನಾಟಕದ ಅನುಭವಕ್ಕೆ ತೆರೆದುಕೊಳ್ಳದ ಸಮೂಹವೇ ಇಲ್ಲವೆನ್ನಬಹುದು"[೧] ಹೀಗೆ ರಂಗಭೂಮಿಯು ನಿರಂತರವಾಗಿ ಚಲನಶೀಲತೆಯುಳ್ಳ ಸಂವಹನ ಮಾಧ್ಯಮವಾಗಿ ಉಳಿದುಕೊಂಡುಬಂದಿದೆ. ರಂಗಭೂಮಿಯು ಭಾರತದ ಆಂಧ್ರ ಪ್ರದೇಶ ಹಾಗೂ ತೆಲಂಗಾಣ ರಾಜ್ಯದಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದಿದೆ ಎನ್ನಬಹುದು.

ರಂಗಭೂಮಿಯ ಉಗಮ ಹಿಂದೆ ಇಲ್ಲಿಂದಲ್ಲೇ ಆರಂಭವಾಯಿತೆಂದು ಹೇಳುವುದು ಕಷ್ಟ, ಆದರೆ ರಂಗಭೂಮಿಯ ಇತಿಹಾಸ ತುಂಬಾ ಪ್ರಾಚೀನವಾದದ್ದು, ಮಾನವ ಯಾವಾಗ ಸೃಷ್ಟಿಯಾದನೋ ಅಂದಿನಿಂದಲೇ ರಂಗಭೂಮಿ ಪ್ರಾರಂಭವಾಯಿತು ಎನ್ನಬಹುದು. ಮನುಷ್ಯ ನಾಗರೀಕನಾಗಿ ನಡೆಸಿದ ಜೀವನ ಶೈಲಿಯಲ್ಲಿ ಕೆಲ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಅವುಗಳನ್ನು ಆಚರಣೆಗಳನ್ನಾಗಿಸಿಕೊಂಡು ಪ್ರದರ್ಶನಗಳನ್ನು ನೀಡುತ್ತಾ ಬಂದನು. ಹೀಗೆ ಪ್ರದರ್ಶನಕ್ಕೆ ಬಳಸಿಕೊಂಡ ಒಂದು ಮಾಧ್ಯಮವನ್ನು 'ರಂಗಭೂಮಿ' ಎಂದು ಹೇಳಬಹುದು.

ರಂಗಭೂಮಿ ಎನ್ನುವಂತದು ಒಂದು ದೊಡ್ಡ ಸಮುದ್ರವಿದ್ದಂತೆ, ಅದು ಒಂದು ಬಹು ವಿಸ್ತಾರವಾದ ಒಂದು ಕಲಾ ವ್ಯವಸ್ಥೆಯ ಒಂದು ಕೂಟ. ಅದರಲ್ಲಿ ಅನೇಕ ಕಲಾಪ್ರಕಾರಗಳು ಸೇರಿಕೊಳ್ಳುತ್ತವೆ. ಉದಾಹರಣೆಗೆ ರಾಗೀ ಬೀಸುವ ಹಾಡುಗಳಿಂದ ಹಿಡಿದು ಟಿವಿ, ಸಿನಿಮಾ ಪರದೆಯಲ್ಲಿ ಪ್ರದರ್ಶನಗೊಳ್ಳುವ ಎಲ್ಲಾ ಕಲೆಗಳು ರಂಗಭೂಮಿಯ ವ್ಯಾಪ್ತಿಗೆ ಒಳಪಡುತ್ತವೆ. ರಂಗಭೂಮಿ ಎಂದರೆ ಎಲ್ಲಾ ಕಲೆಗಳ ಒಟ್ಟು ಮೊತ್ತ ಎನ್ನಬಹುದಾಗಿದೆ. ಅವುಗಳನ್ನು ಕಾಲಾಂತರದಲ್ಲಿ ವಿದ್ವಾಂಸರು

ಜನಪದ ರಂಗಭೂಮಿ, ಬೀದಿ ರಂಗಭೂಮಿ, ದಲಿತ ರಂಗಭೂಮಿ, ನಾಟಕ, ರಂಗಭೂಮಿ ವೃತ್ತಿ ರಂಗಭೂಮಿ ಹಾಗೂ ಹವ್ಯಾಸಿ ರಂಗಭೂಮಿ ಮತ್ತು ಸಿನಿಮಾ ರಂಗಭೂಮಿ ಹೀಗೆ ಅನೇಕ ಕ್ಷೇತ್ರಗಳನ್ನಾಗಿ ವಿಂಗಡಿಸಿರುವುದು ಕಾಣಬಹುದು.

**ರಂಗಭೂಮಿಯ ಉಗಮಕ್ಕೆ ಕಾರಣಗಳು:** ಅಲೆಮಾರಿ ಬುಡ್ಗ ಜಂಗಮರು ಸೇರಿದಂತೆ ಬಹುತೇಕ ಅಲೆಮಾರಿ ಬುಡಕಟ್ಟು ಸಮುದಾಯಗಳು ಆಂಧ್ರ ಪ್ರದೇಶ ಹಾಗೂ ತೆಲಂಗಾಣದ ತೆಲಗು ಪ್ರದೇಶದ ನೆಲೆಯಿಂದ ಬಂದವರು. ಆಂಧ್ರ ಪ್ರದೇಶವನ್ನು ಸಾಮ್ರಾಜ್ಯಶಾಹಿ ಪ್ರಭುತ್ವ ಮತ್ತು ಜಮೀನ್ದಾರಿ ಶಕ್ತಿಗಳು ಜನರನ್ನು ಪೀಡಿಸುತ್ತಿದ್ದ ಸಂದರ್ಭದಲ್ಲಿ ಒಂದು ಕಡೆ ಬ್ರಿಟೀಷರು ತಮ್ಮ ದಬ್ಬಾಳಿಕೆಯನ್ನು ಜನರ ಮೇಲೆ ಹೇರಿದರೆ ನಿಜಾಮ ಮತ್ತೊಂದೆಡೆ ಜನರನ್ನು ಶೋಷಿಸತೊಡಗಿದನು. "ಭೂಮಾಲೀಕರು ಸಾಮಾನ್ಯ ಜನರ ಆಸ್ತಿಗಳನ್ನು ಅಕ್ರಮವಾಗಿ ಕಬಳಿಸಿ, ಅವರನ್ನು ಕೂಲಿ ಕಾರ್ಮಿಕರನ್ನಾಗಿಸಿ, ದಬ್ಬಾಳಿಕೆ ನಡೆಸುತ್ತಿದ್ದುದು ಸರ್ವೇಸಾಮಾನ್ಯವಾಗಿತ್ತು. ಜನಸಮಾನ್ಯರು ದಿನನಿತ್ಯ ದುಡಿದರೂ ಬೆಳೆದ ಫಸಲಿನಲ್ಲಿ ಪಾಲಿಗೆ ಬದಲಾಗಿ ಸಿಗುತ್ತಿದ್ದು ಅರೆ ಹೊಟ್ಟೆಯ ಊಟ ಮಾತ್ರ, ಅರೆಹೊಟ್ಟೆಯ ತಂಗಳೂಟ ಮತ್ತು ಒಂದೆರಡು ಜೊತೆ ಬಟ್ಟೆಗಳ ಸಲುವಾಗಿ ವರ್ಷವಿಡೀ ಮಾಲೀಕರ ಮನೆಗಳಲ್ಲಿ ಕೆಲಸ ಮಾಡುತ್ತಿದ್ದ ಅಮಾಯಕರು ತಮ್ಮ ಗೋಳನ್ನು ತೋಡಿಕೊಳ್ಳಲು ಯಾವುದೇ ವೇದಿಕೆ ಇರಲಿಲ್ಲ. ಪಡೆದ ಸಾಲಕ್ಕಿಂತಲೂ ಬಡ್ಡಿಯ ಹಣವೇ ಹೆಚ್ಚಾಗಿ ತಮ್ಮ ಆಸ್ತಿಪಾಸ್ತಿಗಳನ್ನು ಕಳೆದುಕೊಂಡ ಅನೇಕ ಜನರು ನಿರ್ಗತಿಕರಾದರು"[೨]. ಹೀಗೆ ಒಂದು ಕಡೆ ಬ್ರಿಟಿಷ್ ದಬ್ಬಾಳಿಕೆ, ಇನ್ನೊಂದೆಡೆ ನಿಜಾಂ ದುರಾಡಳಿತ, ಮತ್ತೊಂದೆಡೆ ಅಧಿಕಾರಶಾಹಿ ಮತ್ತು ಮೇಲ್ವರ್ಗದ ಜನರ ಶೋಷಣೆಗಳಿಂದ ಆಂಧ್ರ ಪ್ರದೇಶವು ತತ್ತರಿಸಿಹೋಗಿತ್ತು. ರಾಯಲಸೀಮ ಮತ್ತು ತೆಲಂಗಾಣ ಪ್ರಾಂತ್ಯಗಳಲ್ಲಿ ಕೆಳವರ್ಗದ ಜನರ ಶೋಷಣೆ ನಿರಂತರವಾಗಿ ಉಲ್ಬಣಗೊಳ್ಳುತ್ತಲೇ ಹೋಯಿತು. ಇಂತಹ ಸಂದರ್ಭದಲ್ಲಿ ಮೇಲ್ವರ್ಗದ ಜನರ ವಿರುದ್ಧ ಹೋರಾಡುವ ಪ್ರಬಲ ಅಸ್ತ್ರವಾಗಿ 'ತೆಲಂಗಾಣ ಸಶಸ್ತ್ರ ಹೋರಾಟ' ಪ್ರಾರಂಭವಾಯಿತು."ನಿಜಾಂಶಾಹಿಯ ನವಾಬರ ಆಡಳಿತವನ್ನು ಅಂತ್ಯಗೊಳಿಸುವುದೇ ಅಲ್ಲದೆ, ಜಹಗೀರುದಾರರು, ಇತರ ಭೂಮಾಲೀಕ ವರ್ಗದವರ ಶೋಷಣೆಯಿಂದ ಪ್ರಜೆಗಳನ್ನು ಮುಕ್ತಗೊಳಿಸುವುದು ಈ ಸಶಸ್ತ್ರ ಕ್ರಾಂತಿಯ ಪ್ರಮುಖ ಧ್ಯೇಯವಾಗಿತ್ತು. ಈ ಕ್ರಾಂತಿ ಕಾಲದಲ್ಲಿ ನಿಜಾಮನಿಗೆ ದಾಸರಾಗಿ ನಿಂತ ಜಾಗೀರುದಾರರು, ಜಮೀನುದಾರರು, ದೇಶಮುಖರು, ದೇಶಪಾಂಡೆಗಳು ಬಹಳ ಹೊಡೆತ ತಿಂದರು. ಈ ರೀತಿಯ ಹೋರಾಟವು ತೆಲಂಗಾಣದಲ್ಲಿ ಪ್ರಾರಂಭವಾಗಿ ವೇಗವಾಗಿ ರಾಜ್ಯಾದಾದ್ಯಂತ ಹರಡಿಕೊಂಡಿತ್ತು"[೩].

"ಆಂಧ್ರದಲ್ಲಿ ಬೀದಿ ನಾಟಕ ಪ್ರಾರಂಭವಾದದ್ದು ೧೯೪೦ರ ದಶಕದಲ್ಲಿ. ಅದಕ್ಕೆ ಸ್ಪಷ್ಟ ರೂಪವನ್ನು ಕೊಟ್ಟಿದ್ದು ಕಮ್ಯುನಿಸ್ಟ್ ಪಕ್ಷ, ಆಂಧ್ರದ ಕೃಷ್ಣಾ ಗೋದಾವರಿ ಜಿಲ್ಲೆಗಳಲ್ಲಿ ಪ್ರಾರಂಭದಲ್ಲಿ ಫ್ಯಾಸಿಸ್ಟ್ ವಿರೋಧಿ ಶಿಕ್ಷಣ ಶಿಬಿರಗಳು ನಡೆಯುತ್ತಿದ್ದವು. ಆಗಿನ ಕಮ್ಯುನಿಸ್ಟ್ ಪಕ್ಷ ಫ್ಯಾಸಿಸ್ಟ್ ವಿರೋಧಿ ಮತ್ತು ಸಾಮ್ರಾಜ್ಯಶಾಹಿ ವಿರೋಧಿ ಧೋರಣೆಯನ್ನು ಪ್ರಕಟಿಸಬೇಕಾಗಿತ್ತು. ಹಾಗಾಗಿ ಅಂತಹ ವಸ್ತುಗಳೇ ನಾಟಕದ ಭಾಗಗಳಾಗುತ್ತಿದ್ದವು"[೪].

"ಹಿಟ್ಲರ್ ಭಾಗವತಂ, ಬುರ್ರಕಥಾ ಅಂತಹ ಫ್ಯಾಸಿಸ್ಟ್ ವಿರೋಧಿ ವಸ್ತುವಿಗೊಂದು ಉದಾಹರಣೆ. 'ವೀದಿ ಭಾಗವತಂ' ಎಂಬ ಜನಪ್ರಿಯ ಕಲಾಪ್ರಕಾರವನ್ನು ಬಳಸಿ 'ಹಿಟ್ಲರ್ ಭಾಗವತಂ' ರೂಪಿಸಲಾಗಿತ್ತು. ಈ ಬುರ್ರಕಥೆ ಹಿಟ್ಲರ್‌ನ ಪರಾಭವದ ಕತೆಯನ್ನು ಸಾರಿ ಹೇಳುತ್ತಿತ್ತು. (ಇದನ್ನು 'ಹಿಟ್ಲರ್ ಪರಾಭವಂ' ಎಂಬ ಹೆಸರಿನಿಂದಲೂ ಕರೆಯಲಾಗುತ್ತಿತ್ತು.) ಕುತೂಹಲದ ವಿಷಯವೆಂದರೆ ಹಿಟ್ಲರ್‌ನ ಜಯ ಅಥವಾ ಪರಾಜಯವನ್ನು ಕಟ್ಟಿಕೊಂಡು ಆಂಧ್ರದ ಕೃಷ್ಣಾ ಅಥವಾ ಗೋದಾವರಿ ಜಿಲ್ಲೆಯ ರೈತರಿಗೆ ಆಗಬೇಕಾದುದ್ದೇನೂ ಇರಲಿಲ್ಲ. ಆದರೆ ಅವತ್ತು ಪ್ರಜಾನಾಟ್ಯ ಮಂಡಲಿಯ ಮಾತೃ ಸಂಸ್ಥೆಯಾದ ಕಮ್ಯುನಿಸ್ಟ್ ಪಕ್ಷದ ಫ್ಯಾಸಿಸ್ಟ್ ವಿರೋಧಿ ನೀತಿಯನ್ನು ಪ್ರಚುರಪಡಿಸಲಿಕ್ಕಾಗಿ ಅದರ ಅವಶ್ಯಕತೆ ಇತ್ತು"[೫]. ರೈತ ಕೂಲಿಕಾರ್ಮಿಕರನ್ನು ಸಂಘಟಿಸಲು ಹುತಾತ್ಮರ ಕಥೆಗಳನ್ನು ಜನರೆದುರು ಹಾಡಿ-ಪ್ರದರ್ಶಿಸಿ ಅವರನ್ನು ಒಗ್ಗೂಡಿಸುವ ಕೆಲಸವೂ ಆಗುತ್ತಿತ್ತು. ಇದಕ್ಕೆ ಮುಖ್ಯವಾಗಿ ಉಪಯೋಗವಾಗುತ್ತಿದ್ದು ಸರ್ಕಾರ ಮತ್ತು ಅದರ ಬೆಂಬಲ ಪಡೆದ ಶ್ರೀಮಂತರು. ಬಡಜನರ ಮೇಲೆ ನಡೆಸುವ ದೌರ್ಜನ್ಯ ಮತ್ತು ಅದನ್ನು ಎದುರಿಸಿ ನಿಂತ ರೈತ ವೀರರು ಕೂಡ ಇಲ್ಲಿನ ವಸ್ತುಗಳಾಗುತ್ತಿದ್ದರು. "೧೯೪೩ರ 'ಬೆಂಗಾಲ್ ಕರುವು' (ಬರಗಾಲ) ಸರ್ಕಾರದ ಆಷಾಢಭೂತಿತನವನ್ನು ಬಯಲಿಗೆಳೆದರೆ, 'ಅಲ್ಲೂರಿ ಸೀತರಾಮರಾಜು' ಬುರ್ರಕಥಾ, ಬ್ರಿಟೀಷರ ವಿರುದ್ಧ ಗಿರಿಜನರನ್ನು ಸಂಘಟಿಸಿದ ಮಹಾನ್ ಬಂಡಾಯಗಾರನ ಕಥೆ. ಈ ಕಥೆಗಳನ್ನು ಪರಿಣಾಮಕಾರಿಯಾಗಿ ಜನರೆದುರು ಪ್ರಸ್ತುತ ಪಡಿಸಿ ಜನರಲ್ಲಿ ಹೋರಾಟದ ಸ್ಫೂರ್ತಿ ತುಂಬುವ ಕೆಲಸ ನಡೆಯುತ್ತಿತ್ತು"[೬]. ಈಗಾಗಿ ರಂಗಭೂಮಿಯು ರೂಪಗೊಳ್ಳಲು ಸಾಧ್ಯವಾಯಿತು. ಒಟ್ಟಾರೆ ರಂಗಭೂಮಿಯು ಒಂದು ಸಮುದಾಯದ ಆಚರಣೆಗಳಾಗಿ ರೂಪಗೊಂಡು ಕಾಲಾಂತರದಲ್ಲಿ ವ್ಯವಸ್ಥೆಯನ್ನು ಸರಿಪಡಿಸಲು ಹಾಗೂ ಸಾಮಾಜಿಕ ನ್ಯಾಯಕ್ಕಾಗಿ ಹೋರಾಟದ ಸಂಕೇತವಾಗಿ, ದಮನಿತರ ದನಿಯಾಗಿ ರಂಗಭೂಮಿಯು ಜನ್ಮ ತಾಳಿತು ಎನ್ನಬಹುದು.

**ರಂಗಭೂಮಿಯ ವಸ್ತು ವಿಷಯ:** ರಂಗಭೂಮಿಯಲ್ಲಿ ಪರಿಸರ, ಏಳು ಸಮುದ್ರ, ಮಾಟ ಮಂತ್ರ, ಪ್ರಾಣಿಗಳು, ಗಿಡಮರಗಳು, ಅಗೋಚರ ಶಕ್ತಿಗಳು ರಾಜಮಹಾರಾಜರು, ಸೇನಾಧಿಪತಿಗಳು, ವೀರಾ ಸೇನಾನಿಗಳು, ರಾಜಕುಮಾರರು, ಮಹಾರಾಣಿಯರು, ಶ್ರೀಮಂತ ಭೂಮಾಲೀಕರು ಇವರೆಲ್ಲ ಪಾತ್ರಗಳಾಗಿ ಕಾಣಿಸಿಕೊಳ್ಳುವ ವಸ್ತು ವಿಷಯಗಳಾಗಿದ್ದವು. ಕಥಾವಸ್ತುಗಳು ಕೂಡ ಯಾರದೋ ಪ್ರೇಮಕ್ಕೆ, ಇನ್ನ್ಯಾರದೋ ದ್ವೇಷ, ಅಸೂಯೆಗೆ ಸಂಬಂಧಿಸಿದವುಗಳೇ ಆಗಿರುತ್ತಿದ್ದವು. ಚರಿತ್ರೆಯಲ್ಲಿರುವ ಮಹಾನ್ ಪ್ರೇಮ ಪುರಾಣಗಳು, ಯುದ್ಧ-ಹೋರಾಟ, ತಂತ್ರ-ಪ್ರತಿತಂತ್ರದ ಕಥೆಗಳೇ ರಂಗದ ಮೇಲೆ ಪುನರಾವರ್ತನೆಯಾಗುತ್ತಿದ್ದವು.

ಸಾಹಿತ್ಯ, ಚರಿತ್ರೆ ಜನಪರವಾಗಬೇಕು, ಪ್ರಭುಗಳನ್ನು ಸೈ ಎನಿಸಿಕೊಳ್ಳುವ ಕಲಾವಿದನಾಗಿರಬೇಕು ಎಂಬುದು ಅಶ್ವ ರಾಮಣ್ಣನವರ ಅಭಿಮತವಾಗಿತ್ತು. "ಅಲೆಮಾರಿ ರಂಗಭೂಮಿಯಲ್ಲಿ ತಮ್ಮ ಸಿಟ್ಟು, ಅಸಹನೆ, ಆಕ್ರೋಶವನ್ನು ಬಂಡವಾಳಶಾಹಿ, ಜಮೀನ್ದಾರಿ, ಸರ್ಕಾರಿ ಯಂತ್ರಾಂಗಗಳ ವಿರುದ್ಧ ವ್ಯಕ್ತಪಡಿಸುವ ಮಾಧ್ಯಮವಾಯಿತು. ಜನರ ಹಸಿವು, ಬಡತನ ನಾಟಕದ ವಸ್ತುಗಳಾಗಿ ಕಾಣಬಹುದು.

ಇಲ್ಲಿ ಪ್ರದರ್ಶಕ (Performer) ಮಾಧ್ಯಮ(Medium)ದ ಪಾತ್ರವನ್ನು ವಹಿಸುತ್ತಾನೆ. ಹಾಗೆಯೇ ಜನರ ಕಲೆ ಅವರ ಬಳಿಗೆ ಹೋಗುವಾಗ ಒಳಗೊಳ್ಳಬೇಕಾದ ವಸ್ತು, ವಿಷಯ ಮತ್ತು ಸ್ವರೂಪವನ್ನು ಮಾತ್ರ ಈ ಪ್ರದರ್ಶಕ ನಿರ್ಧರಿಸುತ್ತಾನೆ. ಉದಾ: 'ಬುರ್ರಕಥಾ' ತೆಲಂಗಾಣದ ಅತ್ಯಂತ ಜನಪ್ರಿಯ ಕಲಾ ಪ್ರಕಾರ. ೧೯೭೦ರ ದಶಕದಲ್ಲಿ ಗದ್ದರ್ ಅದನ್ನು ಪುನಃಶ್ಚೇತನ ಗೊಳಿಸುತ್ತಾರೆ. ಗದ್ದರ್ ಬುರ್ರಕಥಾ ಪ್ರಕಾರದ ಶೈಲಿಯನ್ನು, ರಾಗ, ತಾಳಗಳನ್ನು ಉಳಿಸಿಕೊಂಡರೂ ವಸ್ತು ವಿಷಯಗಳು ಹಾಗೇ ಉಳಿಯುವುದಿಲ್ಲ. 'ದೊರೆ' ನಡೆಸುವ ಶೋಷಣೆಯನ್ನು ವಿವರಿಸಲು ಗದ್ದರ್ ಬುರ್ರಕಥಾ ಬಳಸಿಕೊಳ್ಳುತ್ತಾರೆ. ಹಾಗೆಯೇ ಅದಕ್ಕೆ ಅಂತಿಮರೂಪ ನೀಡುವಾಗ ಅವರು ಮತ್ತೊಮ್ಮೆ ಸಂಪನ್ಮೂಲಕ್ಕಾಗಿ ಅರಸುವುದು ಸಮಾಜದೊಳಗಡೆಯೇ. ಬಡಜನತೆ ಬಳಸುವ ಭಾಷೆ, ಅವರ ಯೋಚನಾಲಹರಿ, ಆಡುಮಾತಿನ ಓಘ ಇಂತಹವುಗಳನ್ನು ಗಮನಿಸಿ ಅದನ್ನು ಪ್ರದರ್ಶನದಲ್ಲಿ ಅಳವಡಿಸಿಕೊಳ್ಳಲಾಗುತ್ತಿದ್ದರು"[೭] ಎಂದು ಡಾ ನಾಗೇಶ ಬೆಟ್ಟಕೋಟೆ ಅವರು ವಿವರಿಸುತ್ತಾರೆ.

ರಂಗಭೂಮಿಯ ವಿಕಾಸಕ್ಕೆ ಅನೇಕ ದುಡಿಯುವ ವರ್ಗಗಳ, ಶೋಷಿತ ಸಮುದಾಯಗಳ ಪ್ರದರ್ಶನಾತ್ಮಕ ಕಲೆಗಳು ಕಾರಣವಾಗುತ್ತವೆ. ಕರ್ನಾಟಕ ಮತ್ತು ಆಂಧ್ರದಲ್ಲಿ ಬಹುಕಾಲದಿಂದ ಬೆಳೆದುಬಂದ ವೃತ್ತಿಗಾಯಕ ಪರಂಪರೆ, ಅದರಲ್ಲಿಯೂ ಒಗ್ಗುಕಥಾ, ಬುರ್ರಕಥಾ, ಗೊಲ್ಲಸುದ್ದುಲ ಕಥಾ(ಗೊಂದಲಿಗರ ಮೇಳ), ಜಮುಕುಲಕಥಾ(ಚೌಡಿಕೆ ಮೇಳ), ತೊಗಲುಗೊಂಬೆಯಾಟ, ಪಗರಣ, ಮೂಡಲಪಾಯ ಯಕ್ಷಗಾನ(ಬಯಲಾಟ) ಇತ್ಯಾದಿ ಕಲಾಪ್ರಕಾರಗಳು 'ವೀದಿನಾಟಕಂ' ಅರ್ಥಾತ್ 'ಬೀದಿನಾಟಕಗಳಾಗಿ ರಂಗಭೂಮಿಗೆ ಕಾರಣವಾಗುತ್ತವೆ.

**ಬುರ್ರಕಥಾ:** ಬುರ್ರಕಥಾ ಎಂದರೆ ತಲೆಬುರುಡೆಯನ್ನು ಬಳಸಿ ತಂಬೂರಿಯನ್ನು ಮೀಟುತ್ತಾ ರಾಜಮಹಾರಾಜರ ಕಥಾ ವೃತ್ತಾಂತಗಳನ್ನು ಹೇಳುವ ಕಥೆಯೇ ಬುರ್ರಕಥಾ. ಬುರ್ರಕಥೆಗಳಿಗೆ ಮೂಲ ತೆಲುಗಿನ 'ವೀರ ಗಾಥಲು', ಸಮುದಾಯದ ಚರಿತ್ರೆಗಳು, ಸ್ವತಂತ್ರ್ಯ ಹೋರಾಟಗಾರರ ವಸ್ತು ವಿಷಯಗಳೇ ಮೂಲವಾಗಿ ಇಟ್ಟುಕೊಂಡು ಕುಮಾರರಾಮನ ಕಾವ್ಯ, ಕೃಷ್ಣಗೊಲ್ಲರ ಕಾವ್ಯ, ಬೊಬ್ಬಿಲಿ ನಾಗಿರೆಡ್ಡಿ ಕಾವ್ಯ, ಸ್ಯಾಸಿ ಚಿನ್ನಮ್ಮ ಕಾವ್ಯ, ಬಾಲನಾಗಮ್ಮ ಇತ್ಯಾದಿ ಕಾವ್ಯದ ಕಥೆಗಳನ್ನು ಹೇಳುವುದನ್ನು ಬುರ್ರಕಥೆಗಳೆಂದು ಕರೆಯುತ್ತಾರೆ.

**ಒಗ್ಗುಕಥಾ:** ಶಿವನ ಕೈಯಲ್ಲಿರುವ ಡಮರುವನ್ನು ತೆಲಂಗಾಣದಲ್ಲಿ ಒಗ್ಗು, ಜಗ್ಗು ಎಂದು ಕರೆಯುತ್ತಾರೆ. ತೆಲುಗು ನಿಘಂಟುಕಾರರು ಒಗ್ಗುವನ್ನು ಚರ್ಮವಾದ್ಯವೆಂದು ನಮೂದಿಸಿದ್ದಾರೆ. ಒಗ್ಗು ವಾದ್ಯವನ್ನು ಬಾರಿಸುತ್ತಾ ಮಲ್ಲಣ, ಬೀರಪ್ಪ ಅವರ ಕತೆಯನ್ನು ಹೇಳುವುದರಿಂದ ಒಗ್ಗುಕಥೆ ಎಂದು ಹೆಸರಾಯಿತು. ತೆಲಂಗಾಣ ಪ್ರಾಂತ್ಯದಲ್ಲಿ ಹೆಚ್ಚು ಪ್ರಚಲಿತವಾಗಿರುವ ಒಗ್ಗುಕಥೆಯು ಆರಾಧನಾ ಸ್ವರೂಪದ ಪ್ರದರ್ಶನ ಕಲೆ, ಈ ಕಲೆಯು ಸಂಪ್ರದಾಯ ಮತ್ತು ಮನೋರಂಜನೆ ಇವೆರಡರ ಸಮ್ಮಿಲನವಾಗಿದೆ. ಇದು ಆರಾಧನಾ ರೂಪದಲ್ಲಿ ಒಂದು ಜಾತಿಗೆ ಸೀಮಿತವಾಗಿದ್ದರೂ, ಮನೋರಂಜನೆಯಲ್ಲಿ ಜಾತ್ಯಾತೀತ ಸ್ವರೂಪವನ್ನು ಪಡೆದುಕೊಂಡಿದೆ.

**ಗೇಯಗಾನ:** ಮನುಷ್ಯನ ಅನುದಿನದ ಬದುಕಿನ ದುಃಖ ದುಃಮ್ಮಾನಗಳನ್ನು ಸುಖ ಸಂತೋಷಗಳನ್ನು ರಸಮಾಧುರವಾದ ರೀತಿಯಲ್ಲಿ ರಚಿಸಿದ ಜಾನಪದ ಸಾಹಿತ್ಯವನ್ನು ಹಾಡು ಪಾಡಿನ ಮೂಲಕ ವ್ಯಕ್ತ ಮಾಡುವುದೇ ಗೇಯಗಾನ. ಅವರವರ ಭಾವ ಅನುಭಾವದಂತೆ ಹೊರಹೊಮ್ಮುವ ಮತ್ತು ಕಥಾಗಾನದಿಂದ ಭಿನ್ನವಾದ ಹಾಡುಗಾರಿಕೆ ಮತ್ತು ಜಾನಪದರು ಆ ಪ್ರಯತ್ನವಾಗಿ ಹೇಳುವ ಹಾಡೇ ಗೇಯಗಾನ.

**ಕಥಾಗಾಯನ:** ಕಥೆಯನ್ನು ರಾಗಬದ್ಧವಾಗಿ ಹಾಡುವುದೇ ಕಥಾಗಾನ, ಇದರಲ್ಲಿ ಅಂತರ್ಭಗತವಾಗಿ ನೃತ್ಯ ಇರುತ್ತದೆ. ಕಥಾಗಾನದಲ್ಲಿ ಸಾಹಿತ್ಯಕ್ಕೆ ಇರುವ ಪ್ರಾಧಾನ್ಯತೆಯೇ ಕಥಾಗೇಯದ ಹಿನ್ನೆಲೆಗೂ ಅನ್ವಯಿಸುತ್ತದೆ. ಕಥಾಗೇಯವನ್ನು ಇಂಗ್ಲೀಷ್‌ನಲ್ಲಿ Ballad, Folk Epic Narrative Poem ಎಂದು ಕರೆಯುತ್ತಾರೆ. ಇದರಲ್ಲಿ Ballad ಎಂಬ ಹೆಸರು ಜನಪ್ರಿಯವಾಗಿದೆ. ಈ ರೀತಿಯ ಕಲೆಗಳು ಮತ್ತು ಅದರ ವರ್ಗಗಳನ್ನು ಕಲಾಪರಂಪರೆಯ ಹಿನ್ನೆಲೆ ಮತ್ತು ಚರಿತ್ರೆಯನ್ನು ವಿವರಿಸುತ್ತದೆ.

**ತೊಗಲುಗೊಂಬೆಯಾಟ:** ಈ ಕಲೆ ಸುಮಾರು ಮೂರು ಸಾವಿರ ವರ್ಷಗಳ ಇತಿಹಾಸ ಹೊಂದಿದೆ. ಈ ಕಲೆ ಸುಮಾರು ೬೪ ದೇಶಗಳಲ್ಲಿ ಕಂಡು ಬರುತ್ತದೆ ಎಂದು ವಿದ್ವಾಂಸರು ಹೇಳುತ್ತಾರೆ. ರಾಮಾಯಣ, ಮಹಾಭಾರತ ಮತ್ತು ಭಾಗವತ, ಸ್ವತಂತ್ರ ಹೋರಾಟಗಾರರ, ಐತಿಹಾಸಿಕ ವೀರ ನಾಯಕರ ಕುರಿತು ತೊಗಲು ಗೊಂಬೆಗಳ ಮೂಲಕ ಬೆಳಕು ಮತ್ತು ಪರದೆಯಲ್ಲಿ ಸಂಗೀತ ಸಾಹಿತ್ಯಗಳೊಂದಿಗೆ ಸೂತ್ರದಾರಿಗಳ ಮೂಲಕ ಪ್ರದರ್ಶನ ನೀಡುತ್ತಾ ಮಾನವೀಯ ಮೌಲ್ಯಗಳನ್ನು ತಿಳಿಸುವ ಕಲೆಯಾಗಿದೆ.

**ಪಗರಣ:** ಪ್ರಾಚೀನಕಾಲದ ಪಗರಣವು ರಂಗಭೂಮಿಯ ಮೊದಲ ಕಲಾಪ್ರದರ್ಶನ ಎಂದನ್ನೆಬಹುದು. "ಪಗರಣ'ವು ಸಂಸ್ಕೃತದ 'ಪ್ರಕರಣ' ಎಂಬ ರೂಪ ಪ್ರಕಾರವೇ ಕನ್ನಡದಲ್ಲಿ 'ಪಗರಣ'(ಹಗರಣ) ಆಗಿದೆ. ಪಗರಣದ ಕಲೆಯನ್ನು ಪ್ರದರ್ಶಿಸಲು ಇದಕ್ಕೆ ಬೀದಿಯೇ ರಂಗಮಂಟಪ. ಕಾರಹುಣ್ಣಿಮೆಯಂದು ಹಾಗೂ ಹೋಳಿ ಹುಣ್ಣಿಮೆಯ ಐದು ದಿನ ಇರುವಾಗ ವೇಷಗಳನ್ನು ಧರಿಸಿ ಹಾಡುತ್ತಾ ಕುಣಿಯುತ್ತಾ ಬೀದಿ ಬೀದಿ ಅಲೆದು ದೇವಾಲಯ ಸೇರುವರು. ಅದಕ್ಕೆ 'ಹಗರಣ' ಅನ್ನದೆ 'ಸೋಗು' ಎಂದು ಹೇಳುತ್ತಾರೆ. ಪ್ರತಿದಿನ ಸಂಜೆ ಕುದುರೆ ಸೋಗು, ರಾಯಣ್ಣನ ಸೋಗು, ಮಾಯಿ ಸೋಗು, ಗಿಡ್ಡಬಾಳ್ಯಾನ ಸೋಗು, ಗಂಡ-ಹೆಂಡತಿ ಸೋಗು, ಸಾವುಕಾರನ ಸೋಗು, ಜೋಗತೇರ ಸೋಗು, ಗೊಂದಲಿಗರ ಸೋಗು, ಮದುವೆಯ ಸೋಗು,ರಾಯಣ್ಣ ಸೋಗು, ಕುದುರೆ ಸೋಗು, ಮಾಯಿ ಸೋಗು ಇನ್ನೂ ಮುಂತಾದವು ಸೋಗುಗಳನ್ನು ಪ್ರದರ್ಶಿಸುವುದಾಗಿದೆ. ಪಾತ್ರಗಳು ವೈವಿಧ್ಯಮಯವಾಗಿರುತ್ತವೆ. "ಪ್ರಾಚೀನ ಕಾಲದ ಕವಿರಾಜಮಾರ್ಗ, ವಡ್ಡಾರಾಧನೆಗಳಲ್ಲಿ ಉಲ್ಲೇಖಿಸಿದಂತೆ ಇನ್ನೊಬ್ಬರಂತೆ, ಇನ್ನೊಂದರಂತೆ ವೇಷ ಹಾಕುವವರೆಲ್ಲ ವೇಷಗಾರರೇ. ಇವರನ್ನು ಬೀದಿ ವೇಷಗಾರರು; ವೇದಿಕೆ ವೇಷಗಾರರು ಅಥವಾ ಬೀದಿ ಆಟಗಾರರು, ಅಟ್ಟದ ಆಟಗಾರರು ಎಂದು ವರ್ಗೀಕರಿಸಬಹುದು. ಯಾವುದೇ ರೀತಿಯ ಬೀದಿ ವೇಷಗಾರರ ಅಥವಾ ಬೀದಿ ಆಟಗಾರರ ಕಲೆಗಳನ್ನೇ ನಮ್ಮ ಪ್ರಾಚೀನರು 'ಪಗರಣ' ಎಂದು"[೫] ಡಾ. ಎಂ ಎಂ ಕಲಬುರಗಿ ಅವರು ತಮ್ಮ ಮಾರ್ಗ ಸಂಪುಟದಲ್ಲಿ ವಿವರಿಸುತ್ತಾರೆ. ಈ

ಕಲೆಗಳಿಗೆ ಆಯಾ ಸಮುದಾಯದ ಆರಾಧನೆ ಮತ್ತು ಆಚರಣೆಗಳೇ ಕಾಲಾಂತರದಲ್ಲಿ ಅವುಗಳನ್ನು ಕಲೆಗಳನ್ನಾಗಿಸಿ ರಂಗಕ್ಕೆ ತರಲಾಗಿದೆ. ಮೊದಲು ಮೌಖಿಕವಾಗಿ ಪ್ರದರ್ಶನ ನೀಡುತ್ತಿದ್ದ ಕಲೆಗಳಿಗೆ ಕಾಲಾಂತರದಲ್ಲಿ ವೇಷಗಳನ್ನು ಕಟ್ಟಿ ನಾಟಕ ರೂಪದಲ್ಲಿ ಬೀದಿಯಲ್ಲಿ ಪ್ರದರ್ಶಿಸಲಾಯಿತು. ಅದೇರೀತಿಯಾಗಿ ಒಗ್ಗುಕಥಾ, ಬುರ್ರಾಕಥಾ, ಗೊಲ್ಲಸುದ್ದುಲ ಕಥಾ, ಜಮುಕುಲಕಥಾ ಈ ಕಲಾ ಪ್ರಕಾರಗಳು ಕೇವಲ ಮೌಖಿಕವಾಗಿ ಪ್ರದರ್ಶನ ನೀಡುತ್ತಿದ್ದರು. ನಂತರ ಜನರ ಅಭಿಲಾಷೆಯ ಮೇರೆಗೆ ಈ ಕಲೆಯಲ್ಲಿ ಒಳಗೊಳ್ಳುವ ವಿವಿಧ ಪಾತ್ರಗಳನ್ನು ನಾಟಕ ರೂಪದಲ್ಲಿ ವಿವಿಧ ವೇಷಗಳನ್ನು ಹಾಕಿಕೊಂಡು ಅಭಿನಯಿಸಲು ಪ್ರಾರಂಭ ಮಾಡಿದನು. ಅನಂತರದಲ್ಲಿ ಈ ಕಲೆಗಳನ್ನು ಆಧರಿಸಿ ಯಕ್ಷಗಾನ, ಕೂಚಿಪುಡಿ ನೃತ್ಯ ಇತ್ಯಾದಿ ಕಲೆಗಳನ್ನು ರೂಪಗೊಂಡವು.

**ಬಯಲಾಟ(ಮೂಡಲಪಾಯ ಯಕ್ಷಗಾನ):** ಬಯಲಾಟ ಕಲೆಯನ್ನು ಬಯಲಲ್ಲಿ  ಆಟ ಪ್ರದರ್ಶನ ಮಾಡುವುದರಿಂದ ಬಯಲಾಟ ಎಂದು ಕರೆದಿರುವುದನ್ನು ನೋಡಬಹುದು. ಈ ಕಲಾಪ್ರಕಾರವು ಅತ್ಯಂತ ವರ್ಣರಂಜಿತವಾದ ಕಲಾ ಪ್ರಕಾರ. ಗೀತ, ಸಂಗೀತ, ಅಭಿನಯಕುಣಿತ, ವೇಷಭೂಷಣ, ಮುಖವರ್ಣಿಕೆಗಳನ್ನು ಒಳಗೊಂಡ ಗ್ರಾಮೀಣ ಮನರಂಜನಾ ರಂಗರೂಪವಾಗಿದೆ. ಬಯಲು ಸೀಮೆಯಲ್ಲಿ ಮೂಡಲಪಾಯ ಯಕ್ಷಗಾನ ಎಂದು ಕರೆದರೆ ಗ್ರಾಮೀಣ ಪ್ರದೇಶದಲ್ಲಿ ಇದನ್ನು ಬಯಲಾಟ ಎಂದು ಕರೆಯುತ್ತಾರೆ. ಕರಾವಳಿ ಪ್ರದೇಶದಲ್ಲಿ ಈ ಪ್ರಕಾರವು ಪಡುವಲಪಾಯ ಯಕ್ಷಗಾನವಾಗಿ ಪ್ರಸಿದ್ಧಿಯನ್ನು ಪಡೆದಿದೆ.

**ಕೂಚಿಪುಡಿ:** ಕೂಚಿಪೂಡಿ ಭಾರತದ ಆಂಧ್ರ ಪ್ರದೇಶ ರಾಜ್ಯದ ಭಾರತೀಯ ಶಾಸ್ತ್ರೀಯ ನೃತ್ಯರೂಪ. ಈ ಕಲೆಯು ದಕ್ಷಿಣ ಭಾರತದಲ್ಲಿಯೂ ಸಹ ಈ ನೃತ್ಯವು ಜನಪ್ರಿಯವಾಗಿದೆ. ಕೂಚಿಪುಡಿ ಎಂಬುದು ಆಂಧ್ರ ಪ್ರದೇಶ ರಾಜ್ಯದ ಬಂಗಾಳಕೊಲ್ಲಿ ತೀರದಲ್ಲಿರುವ ಕೃಷ್ಣಾ ಜಿಲ್ಲೆಯ ದಿವಿ ತಾಲೂಕಿನಲ್ಲಿರುವ ಕೂಚಿಪುಡಿ ಗ್ರಾಮವೊಂದರ ಹೆಸರಾಗಿದೆ. ಅಲ್ಲಿ ನೆಲೆಸಿದ ಬ್ರಾಹ್ಮಣ ಸಮುದಾಯವು ಈ ನೃತ್ಯಕಲಾರೂಪವನ್ನು ಅಭ್ಯಸಿಸುತ್ತಿದ್ದರಿಂದ ಇದಕ್ಕೆ 'ಕೂಚಿಪೂಡಿ ನೃತ್ಯ' ಎಂದು ರೂಢಿಯಾಗಿದೆ. ಈ ನೃತ್ಯವು ಸುಮಾರು ೧೨ ಮತ್ತು ೧೩ನೇ ಶತಮಾನಗಳಲ್ಲಿ ರೂಪುಗೊಂಡು ಕಾಲಕಾಲಕ್ಕೆ ಬದಲಾಗುತ್ತಾ ಬಂದಿರುವ ಒಂದು ನೃತ್ಯ ಪದ್ಧತಿಯಾಗಿದೆ ಎಂದು ವಿದ್ವಾಂಸರು ಹೇಳುತ್ತಾರೆ.

ಚಿಂದು ಯಕ್ಷಗಾನಂ, ದಾಸರಿ ಭಾಗವತಂ, ಪಗಟಿವೇಷಂ(ಹಗಲುವೇಷ), ಬುರ್ರಕಥಾ, ಒಗ್ಗುಕಥಾ, ಜಮುಕಲಾ ಕಥಾ, ತೊಗಲುಗೊಂಬೆಯಾಟ, ಬಯಲಾಟ ಕಲೆಗಳು ಒಂದು ಕಾಲದಲ್ಲಿ ಜನಪ್ರಿಯತೆ ಪಡೆದು ರಾಜ ಆಸ್ಥಾನಗಳಲ್ಲಿ ಪೋಷಣೆ ಪಡೆದುಕೊಂಡು ರಾಜಕೀಯದಲ್ಲಿ ಸಂಚಲನ ಮೂಡಿಸಿದವು. ಈ ಕಲೆಗಳಿಂದ ಮತ್ತು ಯಕ್ಷಗಾನದಿಂದ ಕೂಚಿಪುಡಿ ನೃತ್ಯವು(ಕೂಚಿಪುಡಿ ರಾಮನಾಟಂ) ರೂಪಗೊಂಡಿದೆ ಎನ್ನಬಹುದು. ಈ ಕಲೆಗಳು ದ್ರಾವಿಡ ಪ್ರದೇಶದ ತಮಿಳು ನಾಡು, ಆಂಧ್ರ ಪ್ರದೇಶ, ಮಲೆಯಾಳಂ, ಕರ್ನಾಟಕದಲ್ಲಿ ಹೆಚ್ಚು ಪ್ರಚಾರವಾಗಿದೆ. ಮೇಲ್ವರ್ಗದವರು ಅಭಿನಯಿಸುವ ಕಲೆಯನ್ನು ಭಾಗವತ ಎಂದು, ಅಲೆಮಾರಿ ಬುಡಕಟ್ಟುಗಳ ಕಲಾಪ್ರದರ್ಶನಗಳಿಗೆ ಬೀದಿ ಭಾಗವತಂ ಎಂದು

ಕರೆಯುತ್ತಾ ಬಂದಿರುವುದು ಕಾಣಬಹುದು. ಹೀಗೆ ರಂಗಭೂಮಿಯಲ್ಲಿ ವಿವಿಧ ಪ್ರಕಾರಗಳನ್ನು ಪಾತ್ರ ಮತ್ತು ಅದರ ವಿಕಾಸವನ್ನು ಕಾಣಬಹುದು.

ರಂಗಭೂಮಿ ಬೆಳೆದು ಬಂದದ್ದು 'ಬೀದಿ'ಯಿಂದ ಎನ್ನುವುದು ಕುತೂಹಲಕಾರಿ. ಯಾಕೆಂದರೆ ಒಂದು ಅಧ್ಯಯನದ ಪ್ರಕಾರ ಸಮಾಜದಲ್ಲಿ ಶೋಷಣೆಗೆ ಒಳಗಾದವರು, ಸಮಾಜದಲ್ಲಿ ಕೀಳುಕುಲದವರು ಎಂದು ಕರೆಸಿಕೊಂಡವರು, ಅವರಿಗಾದ ಅನ್ಯಾಯ ಮತ್ತು ಶೋಷಣೆಯನ್ನು ಸಹಿಸಿಕೊಳ್ಳಲು ಆಗದ ಸ್ಥಿತಿಯನ್ನು ತಲುಪಿದಾಗ, ಪ್ರತಿಭಟನೆಯನ್ನು ನೇರವಾಗಿ ಅಲ್ಲದಿದ್ದರೂ ಅವರ ಧ್ವನಿಯನ್ನು ಕಲೆಯ ಮೂಲಕ ಪದರದರ್ಶಿಸಿ ರಂಗಭೂಮಿಯನ್ನು ಹುಟ್ಟು ಹಾಕಿದರು ಎನ್ನಬಹುದು. ಅದೇರೀತಿಯಾಗಿ ಅಲೆಮಾರಿ ಬುಡ್ಗ ಜಂಗಮರು ಅಲ್ಲಿನ ಭೌಗೋಳಿಕ ಪರಿಸರ ಮತ್ತು ಆಡಳಿತಷಾಹಿ ವರ್ಗಗಳ ವಿರುದ್ಧ ಜೀವನ ಮಾಡಬೇಕಾದ ಸಂದರ್ಭದಲ್ಲಿ ಪ್ರತಿಭಟನೆ ಅಥವಾ ರಂಗಭೂಮಿಯನ್ನು ಹಟ್ಟುಹಾಕಲು ಸಾಧ್ಯವಾಯಿತು ಎನ್ನಬಹುದು.

**ಬುಡ್ಗ ಜಂಗಮರ ರಂಗಭೂಮಿಯ ವಿಕಾಸ**

ಬುಡ್ಗ ಜಂಗಮರು ಮೂಲತಃ ಕಾಡಾಡಿಗಳು, ಕಾಡಿನಲ್ಲಿ ವಾಸಿಸುತ್ತಾ ಬೇಟೆಯಾಡುತ್ತಾ ಜೀವನ ಸಾಗಿಸಿದಂತವರು. ಹಾಗಾಗಿ ಇವರನ್ನು ಜಂಗಲ್, ಜಂಗಾಲು, ಜಂಗಂ, ಬೇಡ ಬುಡ್ಗ ಜಂಗಮರು ಎಂದು ಕರೆದಿದ್ದಾರೆ. ಇವರು ಕಾಡಿನಲ್ಲಿ ಪಡೆದುಕೊಂಡಿದ್ದ ಅನುಭವಗಳಾದ ಪ್ರಾಣಿಯ ನಡಿಗೆ, ಪ್ರಾಣಿಗಳ ಶಬ್ಧ ಮಾಡಿದ ರೀತಿ, ತಾನು ಅದನ್ನು ಬೇಟೆಯಾಡಿದ ರೀತಿ, ಅಕಸ್ಮಾತ್ ಅದು ತಪ್ಪಿಸಿಕೊಂಡ ರೀತಿ, ಅದು ಸಾಯುವಾಗ ನರಳುವಂತಹ ರೀತಿ ಇಂತಹದ್ದೆಲ್ಲ ಅವನ ಅನುಕರಣೆಯ ಭಾಗವಾಗಿತ್ತು. ಸೊರೇಕಾಯಿ, ಬುರುಡೆ ಕಾಯಿ, ಬಿದಿರಿನ ಬೊಂಬಿನಿಂದ ಸಂಗೀತದ ನಾದವನ್ನು ಕಂಡುಕೊಂಡು ಅವುಗಳಿಂದ ಬುಡ್ಗ, ಡಕ್ಕೆ, ಡೋಲಕ್, ತಂಬೂರಿ, ಕಿನ್ನರಿ ವಾದ್ಯಗಳನ್ನು ಕಂಡುಕೊಂಡನು. ವಿವಿಧ ಗಿಡ ಮರ, ಕಲ್ಲು ಬಂಡೆಗಳಿಂದ ಬಣ್ಣವನ್ನು ಕಂಡುಕೊಂಡು ಹೀಗೆ ಕಾಡು ಮತ್ತು ಕಾಡಂಚಿನಲ್ಲಿ ಬದುಕಿ ಬಾಳಿದ ಪ್ರಕೃತಿ ಪರಿಸರದ ಅನುಭವ, ಜ್ಞಾನ, ತಿಳಿವಳಿಕೆಗಳೆ ಇವರಿಗೆ ಇಂದಿನ ರಣಗಭೂಮಿ ಜೀವನಕ್ಕೆ ಆಧಾರವಾಗುತ್ತವೆ. ಹೀಗೆ ತನ್ನ ಅನುಭವವೊಂದನ್ನು ಮನುಷ್ಯ ಪುನಃ ಸೃಷ್ಟಿಸುತ್ತಿದ್ದನು. ಮುಂದೆ ಪ್ರಾಣಿಗಳ ಚರ್ಮ, ಕೊಂಬು ಇತ್ಯಾದಿಗಳನ್ನಾಧರಿಸಿ ಅದನ್ನು ಇನ್ನಷ್ಟು ಪರಿಣಾಮಕಾರಿಯಾಗಿ ಅಭಿನಯಿಸುವ ಕಲೆಯನ್ನಾಗಿಸಿಕೊಂಡನು.

ಬುಡ್ಗ ಜಂಗಮರು ಹಾಗೂ ಅನೇಕ ಅಲೆಮಾರಿ ಬುಡಕಟ್ಟು ಸಮುದಾಯಗಳು ಕಾಡು ಮತ್ತು ಕಾಡಂಚಿನಲ್ಲಿ ವಾಸಿಸುತ್ತಿದ್ದವರು. ಅವರನ್ನು ನಾಗರಿಕ ಸಮಾಜ ಏಕಾಏಕಿ ಕಾನೂನು ಕಟ್ಟಳೆಗಳಿಂದ ಇವರನ್ನು ಕಾಡಿನಿಂದ ಒಕ್ಕಲೆಬ್ಬಿಸುತ್ತಾರೆ. ಅನಿವಾರ್ಯವಾಗಿ ನಾಡಿಗೆ ಪ್ರವೇಶ ಪಡೆಯಬೇಕಾದ ಸಂದರ್ಭ ಬಂತು. ಆದರೆ ಆ ನಾಗರಿಕತೆಯು ಅತ್ಯಂತ ವೇಗವಾದ ನಾಗಲೋಟದಲ್ಲಿ ಸಾಗುತ್ತಿರುವುದನ್ನು ಕಂಡು ಮತ್ತು ಈ ನಾಡ ಬದುಕಿನ ಬಗ್ಗೆ ಏನು ಅರಿಯದ ಈ ಜನಗಳು ಒಂದೊತ್ತಿನ ಊಟಕ್ಕಾಗಿ ಪರದಾಡಬೇಕಾದ ಸಂಕಷ್ಟದ ಸ್ಥಿತಿಯನ್ನು ಎದುರಿಸುವ ಸಂದರ್ಭದಲ್ಲಿ ಅವರು ಮತ್ತೆ ಹೋಗಬೇಕಾಗಿದ್ದು

ಕಾಡು, ಕಾಡಿನ ಅಂಚಿನಲ್ಲಿ ಮತ್ತು ಗ್ರಾಮದ ಅಂಚಿನಲ್ಲಿ ಬಾಳಬೇಕಾದ ಅನಿವಾರ್ಯತೆ ಉಂಟಾಯಿತು. ಆ ಸಂದರ್ಭದಲ್ಲಿ ಅವರಿಗೆ ನೆರವಾಗಿದ್ದು ಕಾಡೊಳಗಿನ ಜ್ಞಾನಮೀಮಾಂಸೆ. ಈ ಕಾರಣಕ್ಕಾಗಿ ಬುಡ್ಗಜಂಗಮರು ಕಲೆಯನ್ನೇ ಪ್ರಧಾನವಾಗಿ ನಂಬಿ ಬದುಕುತ್ತಿರುವುದನ್ನು ಕಾಣಬಹುದು. ಹೀಗೆ ಶುರುವಾದ ರಂಗಭೂಮಿಯ ಪ್ರಾರಂಭಿಕ ಹೆಜ್ಜೆಗಳು, ಧಾರ್ಮಿಕ ಆಚರಣೆಗಳು ಪುರಾಣ ಕಥೆಗಳ, ವಾಚನಗಳ ಮೂಲಕ ಇನ್ನಷ್ಟು ಸ್ಪಷ್ಟರೂಪವನ್ನು ಪಡೆದುಕೊಳ್ಳುತ್ತಾ ಹೋದವು.

ವ್ಯವಸಾಯವನ್ನ ಕಲಿತ ಮಾನವ ನದಿ ಬಯಲುಗಳಲ್ಲಿ ನೆಲೆ ನಿಲ್ಲುತ್ತಾ ಹೋದಂತೆ ನಿರ್ದಿಷ್ಟ ಕೆಲಸಗಳನ್ನು ಮಾಡುತ್ತಾ ಬಂದನು. ಜ್ಞಾನದ ತಿಳುವಳಿಕೆಗಳನ್ನೆ ನಂಬುತ್ತಾ, ಆಚರಿಸುತ್ತಾ ಕಲೆಗಳನ್ನಾಗಿಸಿಕೊಂಡನು. ಇದು ಬಹುಶಃ ಪ್ರಾರಂಭದ ರಂಗಕ್ರಿಯೆಯೆಂದು ಹೇಳಬಹುದು. ವೀರರ ಕಥೆಗಳು, ಯುದ್ಧ ಭೂಮಿಯ ನಿರೂಪಣೆಗಳು, ಸಮುದಾಯದ ಕಥನಗಳನ್ನು ಬುರ್ರಕಥಾ ಮತ್ತು ಗಂಗಿಗೌರಿ ಕಾವ್ಯದ ಮೂಲಕ ಹೇಳುತ್ತಿದ್ದ ಬುಡ್ಗ ಜಂಗಮರು ಕಾಲಾಂತರದಲ್ಲಿ ಈ ಕಲಾಪ್ರಕಾರಗಳಿಗೆ ಯಾವುದೋ ಒಂದು ಶಕ್ತಿ ತಮ್ಮ ಧರ್ಮ ಪ್ರಚಾರ ಮಾಡಲು ಉದ್ದೇಶ ಪೂರಕವಾಗಿ ತಮ್ಮಗೆ ಬೇಕಾದ ರಾಮಾಯಣ, ಮಹಾಭಾರತ, ಭಾಗವತಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಪಠ್ಯವನ್ನು ನೀಡಿ ಪ್ರಚೋದನೆಗೊಳಿಸಿಕೊಂಡು ಪ್ರಚಾರ ಪಡೆದುಕೊಂಡಿವೆ ಎಂದು ಹೇಳಬಹುದು. ಬುಡ್ಗ ಜಂಗಮರು ಪ್ರಾರಂಭದಲ್ಲಿ ಬುರ್ರಕಥಾ, ಗಂಗಿಗೌರಿ ಕಥನ ಕಾವ್ಯ, ಚೆಕ್ಕಬೊಮ್ಮಲಾಟ, ತೊಗಲುಗೊಂಬೆಯಾಟ, ಬೀದಿ ಭಾಗವತಂ, ಪಗಟಿವೇಷಂ(ಹಗಲುವೇಷ) ಕಲೆಗಳನ್ನು ಪ್ರದರ್ಶನ ನೀಡುತ್ತಿದ್ದರು. ಇಂದು ಚೆಕ್ಕಬೊಮ್ಮಲಾಟ, ತೊಗಲುಗೊಂಬೆಯಾಟ ಕಣ್ಮರೆಯಾಗಿ ಬುರ್ರಕಥಾ, ಹಗಲುವೇಷ, ಗಂಗಿಗೌರಿ ಗೀತಾಗಾಯನ, ಜನಪದ, ಸುಗಮ, ಭಕ್ತಿ ಸಂಗೀತಗಳನ್ನು ಹಾಡುತ್ತಾ ಪ್ರದರ್ಶನ ನೀಡುವುದನ್ನು ಕಾಣಬಹುದು. ಈ ಕಲೆಗಳು ಕೂಡ ಸರಿಯಾದ ಪ್ರೋತ್ಸಾಹ ಇಲ್ಲದೇ ಅವಸಾನದ ಅಂಚಿನಲ್ಲಿರುವುದು ಕಂಡುಬರುತ್ತದೆ.

**ಬುರ್ರಕಥಾ**

ಬುಡ್ಗ ಜಂಗಮರ ಬುರ್ರಕಥಾ ಕಲಾಪ್ರಕಾರವು ಆಂಧ್ರ ಪ್ರದೇಶದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆದಂತ ಕಲಾ ಪ್ರಕಾರ. ನಮ್ಮಲ್ಲಿ ಯಕ್ಷಗಾನ, ಬಯಲಾಟಗಳಿದಂತೆ ಬುರ್ರಕಥಾ ಅಲ್ಲಿನ ಜನರ ಮನೆಯ ಮಾತಾಗಿಬಿಟ್ಟಿದೆ. ಕರ್ನಾಟಕ ರಾಜ್ಯದ ಕಲ್ಯಾಣ ಕರ್ನಾಟಕದ ಪ್ರದೇಶದಲ್ಲಿ ಬಳ್ಳಾರಿ, ಯಾದಗಿರಿ, ರಾಯಚೂರು, ಕಲಬುರಗಿ, ಕೊಪ್ಪಳ, ಬೀದರ ಮತ್ತು ಗಡಿಭಾಗದ ಚಿತ್ರದುರ್ಗ, ಕೋಲಾರ, ತುಮಕೂರು ಜಿಲ್ಲೆಯ ಈ ಭಾಗದಲ್ಲಿ ಬುರ್ರಕಥಾ ಹಾಡುವವರು ಹೆಚ್ಚಾಗಿ ಕಾಣಬಹುದಾಗಿದೆ. ಈ ಬುರ್ರಕಥಾವನ್ನು ತೆಲುಗು, ಕನ್ನಡ, ಹಿಂದಿ ಆಯಾ ಪ್ರಾದೇಶಿಕ ಭಾಷೆಗಳಲ್ಲಿ ಹಾಡುತ್ತಾರೆ. ಜನಸಾಮಾನ್ಯರಿಗೆ ನೀತಿ ಸಂದೇಶಗಳನ್ನು ನೀಡುವ ಮತ್ತು ಹಾಸ್ಯವನ್ನು ಹೊಂದಿರುವ ಕಲಾಪ್ರಕಾರ ಇದಾಗಿದೆ. ಇದು ಸಂಗೀತ, ಸಾಹಿತ್ಯ, ನೃತ್ಯ, ನಾಟಕ, ಅಭಿನಯ ಹೀಗೆ ವಿವಿಧ ಆಯಾಮಗಳನ್ನು ಹೊಂದಿರುವ ಕಲಾಪ್ರಕಾರವಾಗಿದೆ. ಹಿಂದೆ ಜನಸಾಮಾನ್ಯರಿಗೆ ಎಚ್ಚರಿಸಲು ಪ್ರಚಾರ ಮಾಡಲು ಬಳಸುವ ಏಕೈಕ ಸಾಧನವೆಂದರೆ ಬುರ್ರಕಥಾವಾಗಿತ್ತು. ಚಂಪೂ ಕಾವ್ಯದಂತೆ ಬುರ್ರಕಥನ ಕಾವ್ಯಗಳು

ಗದ್ಯ, ಪದ್ಯ ಮಿಶ್ರಿತವಾಗಿರುತ್ತವೆ. ಯಾವ ರಂಗ ಸಜ್ಜಿಕೆ ಇಲ್ಲದೆ ಬಯಲಿನಲ್ಲಿಯೇ ಪ್ರದರ್ಶನಗೊಳ್ಳುವ ಕಲಾಪ್ರಕಾರವಿದಾಗಿದೆ.

ಅನಕ್ಷರಸ್ಥ ಜನರಿಗೆ ನಾಡಿನ ಜನತೆಯ ಪರಿಚಯ, ರಾಜರ ಇತಿಹಾಸ, ಸಂಸ್ಕೃತಿಗಳನ್ನು ಪರಿಚಯಿಸುವುದು, ರಾಜಕೀಯ ಚಿಂತನೆಗಳನ್ನು ಬಿತ್ತರಿಸುವುದೇ ಬುರ್ರಕಥಾ ಕಲೆಯ ಬಹುಮುಖ್ಯ ಉದ್ದೇಶವಾಗಿದೆ. ೧೯೪೦ರಲ್ಲಿ ಆಂಧ್ರದ ಪ್ರಜಾನಾಟ್ಯ ಮಂಡಲಿಯ ಸಹಾಯದೊಂದಿಗೆ ಅಲ್ಲಿನ ಕಮ್ಯೂನಿಷ್ಟರು ಮಿಕ್ಕೆಲಿನೇನಿ ರಾಧಕೃಷ್ಣ ಮೂರ್ತಿಯವರ ಸಾರಥ್ಯದಲ್ಲಿ ನಿಜಾಮ್ ಪ್ರದೇಶದಲ್ಲಿ ನಿಜಾಮನ ವಿರುದ್ಧ ಬಂಡಾಯ ಏಳಲು ಜನರನ್ನು ಪ್ರೇರಿಪಿಸುವ ಸಲುವಾಗಿ ಬುರ್ರಕಥಾ ಕಲಾರೂಪವನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾಗಿ ತಿಳಿದು ಬರುತ್ತದೆ. ೧೯೪೨ರ ಸುಮಾರಿನಲ್ಲಿ ಆಂಧ್ರ ಪ್ರದೇಶದ ಗುಂಟೂರು ಜಿಲ್ಲೆಯಲ್ಲಿ ಪ್ರಭುತ್ವದ ಉಸ್ತುವಾರಿಯಲ್ಲೇ ಈ ಬುರ್ರಕಥಾ ಪ್ರದರ್ಶನ ಅಭಿವೃದ್ಧಿಪಡಿಸಿದಾಗಿ ತಿಳಿದುಬರುತ್ತದೆ. ಡಾ ತಂಗೀರಾಲ್ ಮತ್ತು ಸುಬ್ಬಾರವ್ ಅವರು ಜಾನಪದ ಕವಿತ್ವಂ ಎಂಬುದನ್ನು ಪ್ರಧಾನವಾಗಿರಿಸಿಕೊಂಡು ವೀರಗಾಥೆಗಳ ಅನುಕರುಣದಿಂದ ಬುರ್ರಕಥೆಗಳು ಹುಟ್ಟಿರಬಹುದು ಎಂದು ಬುರ್ರಕಥೆಗಳ ಮೂಲವನ್ನು ಹುಡುಕುವ ಪ್ರಯತ್ನ ಮಾಡಿದ್ದಾರೆ. ಭಾರತದ ಸ್ವಾಂತಂತ್ರ್ಯ ಸಂಗ್ರಾಮದ ಹೊತ್ತಿನಲ್ಲಿ ಕೆಲವು ರಾಜಕೀಯ ಪಕ್ಷಗಳು ಆಂಧ್ರ ಪ್ರದೇಶದಲ್ಲಿ ಬುರ್ರಕಥೆಯಲ್ಲಿ ಮೌಖಿಕ ಲಾವಣಿಗಳನ್ನು ಅಳವಡಿಸಿಕೊಂಡು ಆ ಮೂಲಕ ಜನತೆಗೆ ತಮ್ಮ ಆಲೋಚನೆ, ಆಶೋತ್ತರಗಳನ್ನು ಬಿತ್ತರಿಸುವ ಉದ್ದೇಶಗಳಿಗೆ ಬಳಿಸಿಕೊಂಡಿದ್ದಾರೆ ಎನ್ನುವುದು ತಿಳಿದು ಬರುತ್ತದೆ.

೧೯೬೯ರ ಶ್ರೀಕಾಕುಳಂ ಚಳುವಳಿಯ ಸಂದರ್ಭದಲ್ಲಿ ಚರಬಂಡರಾಜು ಮೊದಲಾದ ಕವಿಗಳು ಗಾಯಕರು, ಸಾಮಾಜಿಕ ಕಾರ್ಯಕರ್ತರು ಜನನಾಟ್ಯಮಂಡಳಿ ರೂಪುಗೊಳ್ಳಲು ಕಾರಣರಾದರು. ಗಟ್ಟಿಯಾದ ಸೈದ್ಧಾಂತಿಕ ನೆಲೆಗಟ್ಟಿನ ಮೇಲೆ ರೂಪುಗೊಂಡ ಜನನಾಟ್ಯಮಂಡಳಿಯ ಗದ್ದರ್ ಅವರ ಪ್ರಭಾವಶಾಲಿ ನೇತೃತ್ವದಲ್ಲಿ ಬುರ್ರಕಥಾ, ಒಗ್ಗುಕಥಾ ಮೊದಲಾದ ಜನಪರ ಕಲಾಪ್ರಕಾರಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ ಮತ್ತು ಷೇಕ್ ನಾಜೀರ್ ಎಂಬ ಕಲಾವಿದ ಬುರ್ರಕಥೆಯನ್ನು ಕಲಿತು ರಾಷ್ಟ್ರಮಟ್ಟದಲ್ಲಿ ಹೆಸರು ಪಡೆದು ಆಂಧ್ರದಲ್ಲಿ ಬುರ್ರಕಥಾ ಪಿತಾಮಹ ಎಂದೆನಿಸಿಕೊಂಡಿದ್ದಾನೆ.

ದಿ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯಲ್ಲಿ ವೆಂಕಟೇಶ ಭಯ್ಯ ಅವರು ಬರೆದ "ಬುರ್ರಕಥಾ ಲಾಸ್ ಸೀನ್ ಶಾನ್ ಪಾರ್ಟನ್ ಏಜ್" ಎಂಬ ಲೇಖನದಲ್ಲಿ "Burrakatha was once used as a medium to awaken people, especially during freedom struggle. In fact, the unsung heroes of the Chiral- Perala struggle (1912-13) were burrakatha artistes, who played a key role reviving up popular opinion against the British Raj. So much so that the British had banned the burrakatha through our Madrass Presidency. The seventh Nizam of Hyderabad too did the same in the 30s and 40s when popular opinion mounted against his rule in

the rural belt"[೯]. ಚಿರಾಲ– ಪೆರಾಲ ಸಂಘರ್ಷದಲ್ಲಿ ಬುಡ್ಗ ಜಂಗಮರ ಬುರ್ರಕಥಾ ಕಲಾವಿದರು ಪಾಲ್ಗೊಳ್ಳುವ ಮೂಲಕ ಬ್ರಿಟೀಷ್ ಸಾಮ್ರಾಜ್ಯಶಾಹಿ ವಿರುದ್ಧ ಸ್ವಾತಂತ್ರ್ಯ ಹೋರಾಟದ ಕಹಳೆ ಊದಿರುವುದನ್ನು ನೋಡಿದರೆ ಅವರ ದೇಶ ಪ್ರೇಮ ಎಂಥದ್ದೆಂಬುದು ಅರ್ಥವಾಗುತ್ತದೆ. ಅನೇಕ ರಾಜಕೀಯ ಪಕ್ಷಗಳ ಆಶ್ರಯ ಮತ್ತು ರಾಜಕಾರಣೀಯ ಆಶ್ರಯದಲ್ಲಿ ಪೋಷಣೆಗೊಂಡ ಈ ಕಲೆ ಇಂದು ತನ್ನ ಆಶ್ರಯದಾತರನ್ನು ಮತ್ತು ಜನಾಕರ್ಷಣೆಯನ್ನು ಕಳೆದುಕೊಂಡು ಸೊರಗುತ್ತಿದೆ ಎನ್ನುವುದನ್ನು ವಿವರಿಸಿದ್ದಾರೆ. ಬುರ್ರಕಥೆ ಹೇಳುವ ಬುಡ್ಗ ಜಂಗಮರು ಬ್ರಿಟೀಷ್ ಸಾಮ್ರಾಜ್ಯಶಾಹಿ ವಿರುದ್ಧ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದರು.

ಬುರ್ರಕಥಾ ಕಲಾವಿದರು ಆಯಾ ಕಾಲಘಟ್ಟಗಳ ಸಾಮಾಜಿಕ ಸಾಂಸ್ಕೃತಿಕ, ರಾಜಕೀಯ, ಸ್ಥಿತ್ಯಂತರಗಳಿಗನುಗುಣವಾಗಿ ಶೈವೇತರ ಕಥಾವಸ್ತುಗಳು, ರಾಜಕೀಯ ಕಥಾವಸ್ತುಗಳು ಜಾತ್ಯಾತೀತ ಕಥಾವಸ್ತುಗಳನ್ನು ಬುರ್ರಕಥೆಗಳಿಗೆ ಅಳವಡಿಸಿಕೊಳ್ಳುತ್ತಿದ್ದರು. ಸಾಮಾನ್ಯವಾಗಿ ಬುರ್ರಕಥಾ ಪ್ರದರ್ಶಿಸಲು ಮೂರು ಜನ ಕಲಾವಿದರಿರುತ್ತಾರೆ. ಮಧ್ಯದಲ್ಲಿರುವ ಪ್ರಧಾನ ವ್ಯಕ್ತಿಯು ತಂಬೂರಿಯನ್ನು ಭುಜದ ಮೇಲೆತ್ತಿಕೊಂಡು ತಂತಿಯನ್ನು ಮೀಟುತ್ತಾ, ಎಡಗೈಯಲ್ಲಿ ಗಗ್ಗರಿಯನ್ನು ನುಡಿಸುತ್ತಾ ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡು ಕುಣಿಯುತ್ತಾ ವಾಕ್‌ಚಾತುರ್ಯದಿಂದ ವೀರ ಮತ್ತು ರೌದ್ರರಸ ಪ್ರಧಾನವಾದ ಐತಿಹಾಸಿಕ ಕಥಾವೃತ್ತಾಂತಗಳನ್ನು ಆಯ್ಕೆ ಮಾಡಿಕೊಂಡು ನವರಸಗಳನ್ನು ಮೇಳೈಸಿ ಬುರ್ರಕಥಾವನ್ನು ಪ್ರದರ್ಶಿಸುತ್ತಾರೆ. ಉಳಿದ ಇಬ್ಬರು ಕಲಾವಿದರು ಜೊತೆಯಲ್ಲಿ ತಂದಾನ ತಾನ ತಾನ ತಂದಾನ ಎಂದು ಶೃತಿಗೊಡುತ್ತಾ ಪ್ರಶ್ನೆಗಳನ್ನು ಕೇಳುತ್ತಾ ಊಂಗುಡುತ್ತ ಮಧ್ಯದಲ್ಲಿ ಉಪಕಥೆಗಳನ್ನು ಹೇಳುತ್ತಾ, ಶ್ರೀಮಂತರ ಲೋಲುಪಟೆಯನ್ನು ಕುರಿತು ವರ್ತಮಾನ ಸಾಮಾಜಿಕ ರಾಜಕೀಯ ಸಂಗತಿಗಳನ್ನು ವಿವರಿಸುತ್ತಾ ಗುಮ್ಮಟೆಗಳನ್ನು ಅಥವಾ ಡುಮುಕಿ(ಬುಡ್ಗವಾದ್ಯ)ವನ್ನು ನುಡಿಸುತ್ತಾ ನೋಡುವ ಪ್ರೇಕ್ಷಕರ ಉತ್ಸಾಹವನ್ನು ತುಂಬುತ್ತಿರುತ್ತಾರೆ. ಬುರ್ರಕಥಾ ಹಾಡುವ ಕಲಾವಿದರ ವೇಷಭೂಷಣಗಳನ್ನು ನೋಡುವುದೇ ಒಂದು ವಿಶೇಷ. ಈ ಕಲೆಯಲ್ಲಿ ಮೂರು ಜನ ಕಲಾವಿದರಲ್ಲಿ ಒಬ್ಬ ಪ್ರಧಾನ ಗಾಯಕ/ಕಿ, ಇಬ್ಬರು ಹಿಮ್ಮೇಳನ ಗಾಯಕರು. ಮುಖ್ಯ ಕಥೆಗಾರ ಮುಖಕ್ಕೆ ಬಣ್ಣ, ತಲೆಮೇಲೆ ಬಣ್ಣ ಬಣ್ಣದ ರುಮಾಲುಗಳು, ನಡುವಿಗೆ ಟಾವಲ್‌ಗಳನ್ನು ಧರಿಸಿ, ಕಾಲಿಗೆ ಗೆಜ್ಜೆ, ಕೊರಳಿಗೆ ಮುತ್ತಿನ ಸರಗಳು ಹಾಕಿಕೊಂಡು ಆಕರ್ಷಣಿಯವಾಗಿ ಕಾಣಿಸುತ್ತಾರೆ. ಉಳಿದ ಇಬ್ಬರು ಸಾಧಾರಣ ನಿತ್ಯದ ಉಡುಪಿನಲ್ಲಿಯೇ ಇರುತ್ತಾರೆ. ಎಲ್ಲಾ ಜಾನಪದ ಕಲಾವಿದರಂತೆ ಇವರು ಕೂಡ ಕಲಾಪ್ರದರ್ಶನದ ಮುಂಚೆ ಸುತ್ತಮುತ್ತಲಿನ ಎಲ್ಲಾ ಗ್ರಾಮ ದೈವಗಳ ಸ್ಮರಣೆ ಮಾಡುವುದರ ಮೂಲಕ ಕಥೆಯನ್ನು ಪ್ರಾರಂಭಿಸುತ್ತಾರೆ.

ಬುರ್ರಕಥಾ ಎಂದರೆ ತಲೆಬುರುಡೆಯನ್ನು ಬಳಸಿ ತಂಬೂರಿಯನ್ನು ಮೀಟುತ್ತಾ ರಾಜಮಹಾರಾಜರ ಕಥಾ ವೃತ್ತಾಂತಗಳನ್ನು ಹೇಳುವ ಕಥೆಯೇ ಬುರ್ರಕಥಾ ಎಂದು ನಾಡೋಜ ಬುರ್ರಕಥಾ ದರೋಜಿ ಈರಮ್ಮ ಹೇಳುತ್ತಾರೆ. ತೆಲುಗಿನಲ್ಲಿ 'ಬುರ್ರ' ಎಂದರೆ 'ಬುರುಡೆ' ಎಂದರ್ಥ. ತಲೆಬುರುಡೆಯ ಆಕಾರದಲ್ಲಿರುವ ಅಥವಾ ಸೋರೆಕಾಯಿದದಂತಿರುವ ಸಂಗೀತವಾದ್ಯವೇ ತಂಬೂರಿ. ದುಂಡಾಗಿ ಪೊಳ್ಳಾಗಿರುವ ವಸ್ತುವನ್ನು ಬುರುಡೆ ಎಂದು ಕರೆಯುತ್ತಾರೆ. ಈ ಬುರ್ರ ತಳಭಾಗದಲ್ಲಿ ತಂತಿ

ಬಿಗಿದಿರಿವ ಸ್ಥಳ ತೆಳ್ಳಗೆ ಚಪ್ಪಟೆಯಾಗಿದ್ದು ಉಳಿದ ಭಾಗ ಗೋಳಾಕಾರವಾಗಿದ್ದು ಒಳಗೆ ಪೊಳ್ಳಾಗಿರುತ್ತದೆ. ಇದಕ್ಕೆ ಬುಡುಗ(ಗುಮ್ಮಟೆ)ಗಳನ್ನು ಉಪಯೋಗಿಸುತ್ತಾರೆ. ಈ ರೀತಿಯ ವಾದ್ಯಗಳಿಂದ ಹಾಡುವ ಕಥೆಗಳನ್ನು ಬುರ್ರಕಥೆಗಳೆಂದು ಕರೆಯುತ್ತಾರೆ.*(ಛಾ:೬.೧)* ಇವುಗಳನ್ನು ತೆಲಂಗಾಣದಲ್ಲಿ ತಂಬೂರ ಕಥೆಗಳು, ಆಂಧ್ರಪ್ರದೇಶದಲ್ಲಿ ಜಂಗಮ/ಜಂಗಂ/ಜಂಗಾಲು/ತಂದಾನ/ಬುರ್ರಕಥೆಗಳು ಎಂದು ಹೀಗೆ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಬುರ್ರ ವಾದ್ಯ ಸರಸ್ವತಿಯ ವೀಣೆ ಎಂದು ಭಾವಿಸಿ ಈ ವಾದ್ಯವನ್ನು ಬಳಸಿ ಹೇಳುವ ಕಥೆಗಳಿಗೆ ಶಾರದಾ ಕಥೆಗಳು ಎಂದೂ ಕರೆದಿದ್ದಾರೆ. ಈ ಕಥೆ ಹೇಳುವವರಿಗೆ ಶಾರದೆಯವರೆನ್ನುತ್ತಾರೆ. ಬುರ್ರಕಥೆಗಳಿಗೆ ಮೂಲ ತೆಲುಗಿನ 'ವೀರ ಗಾಥಲು' ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಬುರ್ರಕಥಾ ಒಂದು ಸಾಂಸ್ಕೃತಿಕ ಅನುಸಂಧಾನದ ಕಥೆ, ಕಥೆಗಳು ತನ್ನ ಪರಿಸರಕ್ಕೆ ತಕ್ಕಂತೆ ಸಾಂಸ್ಕೃತಿಕ ಸಂಬಂಧಗಳನ್ನು ಅಳವಡಿಸಿಕೊಂಡಿರುವುದನ್ನು ನೋಡಬಹುದಾಗಿದೆ. ಕಥೆಯ ಆಂತರ್ಯದಲ್ಲಿ ಮಾನವೀಯ ಸಂವೇದನೆಗಳು ಅನುಸಂಧಾನ ನಡೆಸುತ್ತವೆ. "ಜನಪದ ಕಥೆಕಾವ್ಯಗಳು ಸಾಹಿತ್ಯದಲ್ಲಿ ಉನ್ನತವಾದ ಸ್ಥಾನವನ್ನು ಪಡೆದಿವೆ. ಫಿನ್‌ಲ್ಯಾಂಡ. ಗ್ರೀಸ್, ಭಾರತ ಮುಂತಾದ ದೇಶಗಳ ಜನಪದ ಕಾವ್ಯಗಳು ಆ ದೇಶದ ಸಂಸ್ಕೃತಿಯ ಪ್ರತಿಬಿಂಬಿಸಿದವುಗಳಾಗಿವೆ. ಈ ಹಿನ್ನೆಲೆಯಲ್ಲಿ ಬುರ್ರಕಥೆಗಳಿಗೂ ಸಹ ಸಂಸ್ಕೃತಿ, ಪರಪಂರೆ, ಸ್ವಾಭಿಮಾನ ಮುಂತಾದ ಅಂಶಗಳನ್ನು ಒಳಗೊಂಡಿರುತ್ತವೆ. ಯಾವುದೇ ಒಂದು ಕಾವ್ಯ ಅಥವಾ ಕಥೆಯೊಳಗಿನ ವಸ್ತು. ಆ ದೇಶದ ಸಾಂಸ್ಕೃತಿಕ ಆಗು ಹೋಗುಗಳು ಮೇಲೆ ಪರಿಣಾಮ ಬೀರಬಹುದಾಗಿದೆ"[೧೦]. ಈ ರೀತಿಯಾಗಿ ಈ ಕಥೆಗಳಲ್ಲಿ ಬರುವ ಸಮಾಜದ ಒಳಹಾದಿಗಳು, ಬದುಕಿನ ಸತ್ಯಗಳು, ಮಾನವೀಯ ಸಂಬಂಧಗಳು, ಹುಟ್ಟು ಸಾವು, ಶೋಕ, ಸಂಪ್ರದಾಯ, ನಂಬಿಕೆಗಳು ಮುಂತಾದವುಗಳು ಜನತೆಯ ಮನೋಧರ್ಮವನ್ನು ಪ್ರತಿನಿಧಿಸುವ ಹಾಗೂ ಅಭಿವ್ಯಕ್ತಿಸುವ ಬಹುದೊಡ್ಡ ಮಾಧ್ಯಮವಾಗಿದೆ. ಈ ಬುರ್ರಕಥೆಗಳಲ್ಲಿ ಕಂಡುಬರುವ ಮಾನವೀಯ ಮೌಲ್ಯಗಳು, ಕತೆಯ ಕಲಾತ್ಮಕತೆ, ಭಾಷಾಂತರ ಪ್ರಕ್ರಿಯೆ ಮುಂತಾದ ಅಂಶಗಳಲ್ಲಿ ಕಲಾವಿದರು ಸಾಂಸ್ಕೃತಿಕ ತಿಳುವಳಿಕೆ, ಬೌದ್ಧಿಕ ಸಾಮರ್ಥ್ಯ ಹಾಗೂ ಅವರ ಪ್ರತಿಭೆಯ ಅಗಾಧತೆಯನ್ನು ಬುಡ್ಗ ಜಂಗಮರಲ್ಲಿ ವ್ಯಕ್ತವಾಗುತ್ತದೆ.

ಜನಪದರ ಬದುಕಿನ ಮೌಲ್ಯಗಳೇ ಮಾನವೀಯ ಮೌಲ್ಯಗಳು, ಜನಪದರ ಅಥವಾ ಕಥನಗಾರರ ಅನುಭವಗಳನ್ನು ಅವರು ಕಂಡುಂಡ ನೋವುನಲಿವುಗಳನ್ನು ಕಥೆಗಳಾಗಿ ನಿರೂಪಿಸಿದ್ದಾರೆ. ಕತೆಗಳ ಮುಖಾಂತರ ಅಲ್ಲಿನ ಸಂಸ್ಕೃತಿಯನ್ನು ಮೌಖಿಕವಾಗಿ ಅನಾವರಣಗೊಳಿಸುತ್ತಾರೆ. ಬುರ್ರಕಥೆಗಳಲ್ಲಿ ಮಾನವೀಯ ಮೌಲ್ಯಗಳಿಗೆ, ಜಾತಿಧರ್ಮವನ್ನು ಮೀರಿ ನಿಂತ ಮನುಷ್ಯತ್ವಕ್ಕೆ ಹೆಚ್ಚು ಒತ್ತುಕೊಟ್ಟಿವೆ ಎಂದರೆ ತಪ್ಪಗಲಾರದು. ರಾಜರಾಣಿಯರ ಬಂಜೆತನದ ಅಳಲು, ಮಕ್ಕಳ ಭಾಗ್ಯಕ್ಕಾಗಿ ಅನುಭವಿಸುವ ಯಾತನೆ ಹಾಗೂ ಹಂಬಲವು, ಹಾಗೆಯೇ ವಂಶೋದ್ಧಾರಕ್ಕಾಗಿ ತನ್ನ ಜೀವನವನ್ನು ಬಲಿಕೊಡುವುದು, ಅಧಿಕಾರ, ಆಸ್ತಿಗಾಗಿ, ರಾಜ್ಯಕ್ಕಾಗಿ ಅಣ್ಣಂದಿರು ತಮ್ಮನನ್ನು ಕೊಲ್ಲುವುದು, ತಮ್ಮಂದಿರು ಅಣ್ಣನ

ಮಕ್ಕಳನ್ನು ಕೊಲ್ಲುವುದಕ್ಕೆ ಅವರಲ್ಲಿ ಮೂಡಿದ ಕೆಟ್ಟ ಆಲೋಚನೆಗಳು, ದೈವ ಬಲದಿಂದ ಮತ್ತೆ ಬದುಕಿದೆ, ತಮ್ಮನು ದುರ್ಗುಣಗಳಿಂದ ಕೆಡಕನ್ನು ಬಯಸಿ ಕಣ್ಣು ಕಳೆದುಕೊಂಡಿರುವ ಕರುಣರಸದ ಪ್ರತಿಪಾದನೆ ಇವುಗಳನ್ನು ಬುರ‍್ರಕಥೆಗಳಲ್ಲಿ ಕಾಣಬಹುದಾಗಿದೆ. ಗೋಹತ್ಯೆಯಿಂದ ಇಡೀ ರಾಜನ ವಂಶವೇ ಶಾಪಕ್ಕೆ ತುತ್ತಾಗುವುದು, ಅದರ ಕರ್ಮವನ್ನು ಮಕ್ಕಳು ಅನುಭಿಸುವುದು, ಆಕಳು ಮತ್ತು ಮಾನವರ ನಡುವಿನ ಸಂಬಂಧ (ಪ್ರಾಣಿಗಳು ಮತ್ತು ಮಾನವನ ಸಂಬಂಧ) ಹಾಗೂ ಮಾನವ ಕೆಡಕನ್ನು ಮಾಡಿದಾಗ ಅದರಿಂದ ಆಗುವ ಅನಾಹುತಗಳು ಹೀಗೆ ಬುರ‍್ರಕಥೆಯಲ್ಲಿ ಮಾನವೀಯ ಮೌಲ್ಯಗಳು ವ್ಯಕ್ತಗೊಳ್ಳುತ್ತವೆ. ಇಂತಹ ಸಂಕೇತಗಳ ಮೂಲಕ ಪ್ರಕೃತಿ ಮತ್ತು ಮಾನವ ಸಂಬಂಧವು ಮೌಲ್ಯಯುವಾಗಿದ್ದನ್ನು ಕಾಣುತ್ತೇವೆ. ಮನೆಮುಂದೆ ಅಥವಾ ಹೊಲದಲ್ಲಿ ಯಾವುದೇ ಗಿಡಮರಗಳು ಒಣಗಿದರೆ ಅದು ಸಾವಿನ ಸಂಕೇತ ಎಂಬ ನಂಬಿಕೆ, ರಾಣಿಯ ಶೋಕವು ತಾಯಿ ಕರುಳಿನ ಕೂಗಾಗಿ ವ್ಯಕ್ತವಾಗುವುದು. ತಾಯಿಯು ಸತ್ತು ಹೋಗಿದ್ದರೂ ಮಕ್ಕಳ ಕಷ್ಟ ಕಂಡು ಸತ್ತ ಮಕ್ಕಳನ್ನು ಬದುಕಿಸಲು ದೈವ ಸ್ವರೂಪದಲ್ಲಿ ಬರುವಂತಹುದು ಬುರ‍್ರಕಥೆಯವರ ನಂಬಿಕೆಯ ಭಾಗವಾಗಿದೆ. ಮಲತಾಯಿಯ ಧೋರಣೆ ಮಕ್ಕಳಿಗೆ ಮಾನಸಿಕ ಹಿಂಸೆ ಕೊಡುವುದು. ಕೊನೆಗೆ ಮಕ್ಕಳನ್ನು ಕೊಲ್ಲುವುದರ ಮೂಲಕ ಸವತಿ ಮಕ್ಕಳ ಮತ್ಸರದಿಂದಾಗಿ ಮನುಷ್ಯತ್ವವು ಮೃಗತ್ವಕ್ಕೆ ಹೋಗುದನ್ನು ಸೂಚಿಸುವುದು. ಅವನೇ ಗಂಡನೆಂದು ತಿಳಿದು, ಗಂಡನ ದೇಹವನ್ನು ಹುಡುಕುತ್ತ ಹೊರಡುವುದರಲ್ಲಿ ಗಂಡ–ಹೆಂಡತಿಯ ಪವಿತ್ರ ಪ್ರೇಮವಿದೆ. ಹೆತ್ತ ತಂದೆಯನ್ನೆ ಧಿಕ್ಕರಿಸಿ ತಾನು ಇಷ್ಟಪಟ್ಟ ಗಂಡನೊಡನೆ ಹೋಗುವುದು ಸ್ತ್ರೀ ಸ್ವಾತಂತ್ರ್ಯದ ಪ್ರತೀಕವಾಗಿದೆ. ಏಳು ಜನ ರಾಣಿಯರು ಮತ್ತು ರಾಜನು ಮಕ್ಕಳ ಕೊರಗನ್ನು ನೀಗಲು ಪಡಲಾರದ ಕಷ್ಟಪಟ್ಟರೂ ಫಲಸಿಗಲಿಲ್ಲ. ಕೊನೆಗೆ ಸಾಮೂಹಿಕವಾಗಿ ವಿಷ ಕುಡಿದು ಸಾಯಲು ಮುಂದಾಗುದರಲ್ಲಿ ಸಹ ಗಂಡ–ಹೆಂಡತಿಯರ ಪ್ರೇಮ–ಮಕ್ಕಳ ಭಾಗ್ಯದ ಹಂಬಲ ಮುಂತಾದ ಅಂಶಗಳು ಬುರ‍್ರಕಥೆಯಲ್ಲಿ ಕಂಡುಬರುತ್ತವೆ.

ರಾಜನು ಧರ್ಮವನ್ನು ಹೀಯಾಳಿಸಿದ್ದರಿಂದ ಜೀವಂತ ಶವದಂತಾಗಿ ಕಷ್ಟ ಅನುಭವಿಸುತ್ತಾನೆ. ಶೈವ ವೈಷ್ಣವ ಎರಡು ಮತಗಳಿದ್ದು, ಅಲ್ಲಿ ಕಲಹ ಕಂಡುಬಂದರೂ ಕೊನೆಗೆ ಧರ್ಮಕ್ಕಿಂತ ಮಾನವೀಯತೆ ಬಹುಮುಖ್ಯ ಎಂಬ ಭಾವವು ವ್ಯಕ್ತವಾಗುತ್ತದೆ. ಬುರ‍್ರಕಥೆಗಳ ಮುಖ್ಯ ಆಶಯ ಮಾನವೀಯ ಸಂವೇದನೆಗಳೇ ಆಗಿವೆ. ಬುರ‍್ರಕಥೆಯಲ್ಲಿನ ಕಥೆಗಳು, ಘಟನೆಗಳು, ಪಾತ್ರಗಳು ಮಾನವೀಯ ನೆಲೆಯ ಸೃಷ್ಟಿಗಳಾಗಿವೆ, ಬುರ‍್ರಕಥೆಯ ಒಳಗಿನ ಲೋಕದಲ್ಲಿ ಅನೇಕ ವ್ಯಕ್ತಿಗಳು ಮಾನವೀಯ ಸಂಬಂಧಗಳ ನೆಲೆಯಲ್ಲೆಯೇ ವ್ಯವಹರಿಸುತ್ತಾರೆ. ಹಾಗೂ ಕೇಳುವವರ ಹೃದಯವನ್ನು ಮಾನವೀಯ ನೆಲೆಯಲ್ಲಿ ಕಥೆ ಮುಟ್ಟುತ್ತದೆ.

ಬುರ‍್ರಕಥೆಗಳು ಪ್ರಾದೇಶಿಕ ನೆಲೆಯಲ್ಲಿ ಬದಲಾವಣೆಗೊಳ್ಳುತ್ತವೆ. ಇಲ್ಲಿ ಕೃಷಿ, ಪ್ರಾಣಿ, ಪಕ್ಷಿ ಮತ್ತು ಜಲಚರ, ಸಸ್ಯಜಗತ್ತುಗಳ ಸಮ್ಮಿಲನದಿಂದ ಬುರ‍್ರಕಥೆಗಳು ಸಾಂದರ್ಭಿಕವಾಗಿ ವ್ಯಕ್ತವಾಗುತ್ತವೆ.

ಬುರ‍್ರಕಥೆ ಕಲಾವಿದರು ಅಥವಾ ಬುಡ್ಗ ಜಂಗಮರು ತಮ್ಮ ಕಥೆಗಳನ್ನು ಕಾವ್ಯ ಮತ್ತು ಮಹಾಕಾವ್ಯ ಎಂದು ಕರೆಯುವುದಿಲ್ಲ. ಕಥೆಯೆಂದೇ ನಾಡೋಜ ದರೋಜಿ ಈರಮ್ಮ ಅವರು ಹೇಳುತ್ತಾರೆ.

ಒಂದು ಕಥೆಯನ್ನು ದೀರ್ಘವಾಗಿ ಮತ್ತು ಸಂಕ್ಷಿಪ್ತವಾಗಿ ಹೇಳುವ ತಜ್ಞತೆ ಈ ಕಲಾವಿದರಿಗೆ ಇದೆ. ಸಂದರ್ಭಾನುಸಾರ ಕಥೆಯ ಹಾಡುವ ದಾಟಿಯನ್ನು ಬದಲಾಯಿಸಿಕೊಳ್ಳುತ್ತಾರೆ. ಪ್ರೇಕ್ಷಕರನ್ನು ಎಚ್ಚರಿಸಲು ಮಧ್ಯದಲ್ಲಿ ತಕ್ಕಂತೆ ತೋ.... ತಕ್ಕಡಧಿಗದ್ಯೆತಾ... ಓಯಿ...ಎಂದು ದೀರ್ಘವಾಗಿ ಮತ್ತು ಜೋರಾಗಿ ಹೇಳುವ ಮೂಲಕ ಪ್ರಕ್ಷೇಕರನ್ನು ತಮ್ಮತ್ತ ಸೆಳೆದುಕೊಳ್ಳುವ ತಂತ್ರಗಾರಿಕೆ ಈ ಬುರ್ರಕಥೆ ಕಲಾವಿದರಿಗೆ ಇದೆ. ಸಂದರ್ಭಾನುಸಾರವಾಗಿ ಹಾಸ್ಯ, ನಾಣ್ಣುಡಿ. ಪಾತ್ರಗಳ ವರ್ಣನೆಯು ಕಥನಗಾರನ ಪ್ರತಿಭಾಶಕ್ತಿಯನ್ನು ಪ್ರತಿಬಿಂಬಿಸುತ್ತದೆ.

ಬುರ್ರಕಥಾ ಕಲಾವಿದರು ಯುದ್ಧದ ವರ್ಣನೆಯನ್ನು ನಿರೂಪಿಸುವಾಗ ಕಲಾತ್ಮಕವಾಗಿ ಯಥಾವತ್ತಾಗಿ ಸದ್ಯ ಯುದ್ಧ ನಡೆಯುತ್ತಿದೆ ಅನ್ನೋಮಟ್ಟಿಗೆ ಪ್ರದರ್ಶನ ನೀಡುತ್ತಾರೆ. ವೀರ, ಛಲ, ಆವೇಶ, ಮುಂತಾದವುಗಳನ್ನು ಆಂಗಿಕ ಅಭಿನಯದಿಂದ ಅಭಿವ್ಯಕ್ತಿಸುತ್ತಾರೆ ದುಃಖದ ವಿಷಯವನ್ನು ನಿರೂಪಿಸುವಾಗ ರಾಣಿಯು ತನ್ನ ಮಗನನ್ನು ಕಳೆದುಕೊಂಡಾಗ, ಅಲ್ಲದೇ ರಾಜಕುಮಾರನು ತನ್ನ ಹೆಂಡತಿಯನ್ನು ಕಳೆದುಕೊಂಡು, ತನ್ನಿಂದ ದೂರವಾದ ಸಂದರ್ಭದಲ್ಲಿ ಶೋಕರಸವನ್ನೇ ಹರಿಸುತ್ತಾರೆ. ಕತೆಯ ಕೊನೆಯಲ್ಲಿ ನಾಯಕ ಅಥವಾ ನಾಯಕಿಗೆ ಜಯವನ್ನೇ ಅಭಿವ್ಯಕ್ತಿಸುತ್ತಾರೆ. ಸತ್ತ ನಾಯಕನು ಮತ್ತೆ ದೈವ ಸಂಕಲ್ಪದಿಂದ ಬದುಕುವುದು ಹೀಗೆ ಯಾವುದೇ ಸನ್ನಿವೇಷವಿರಲಿ ಅದನ್ನು ಕಲಾತ್ಮಕವಾಗಿ ನಿರೂಪಿಸುತ್ತಾರೆ, ಮತ್ತು ಕಾವ್ಯದ ಹಾಡುಗಾರಿಕೆಯ ಸಂದರ್ಭದಲ್ಲಿ ನಾಯಕ ಯುದ್ಧದಲ್ಲಿ ಮಡಿದಾಗ, ಜಯಿಸಿದಾಗ, ತೆಂಗಿನಕಾಯಿಯನ್ನು ಹೊಡೆಯುವ ಮೂಲಕ ಸಂದುಗಳನ್ನು ಗುರುತಿಸುತ್ತಾರೆ. ಹೀಗೆ ಭಾಷೆ, ಸಂಸ್ಕೃತಿಗಳ ಎಲ್ಲೆಗಳನ್ನು ಮೀರಿ ಬುರ್ರಕಥೆಗಾರರು ಹಾಗೂ ಶ್ರೋತೃಗಳಿಗೆ ಮಾನವೀಯತೆಯ ಸಂದೇಶವನ್ನು ಸಾರುತ್ತ ಪರಸ್ಪರ ಒಂದಾಗುತ್ತಾರೆ. ಭಾಷಾ ಗಡಿಗಳನ್ನು ಮೀರಿ ಸಂವಹನದ ಮೂಲಕ ಮನರಂಜನೆಯನ್ನು ಅನುಭವಿಸುತ್ತಾರೆ. ಪ್ರಾದೇಶಿಕ ಭಿನ್ನತೆಗಳನ್ನು ಮರೆತು ಬುರ್ರಕಥೆಯ ಆಶಯಗಳ ಮೂಲಕ ಭಾವಾನಾತ್ಮಕವಾಗಿ ಒಂದಾಗುವ ಪರಿ ಕಾಣಬಹುದಾಗಿದೆ.

ಬುರ್ರಕಥೆಯನ್ನು ನಿರೂಪಿಸುವ ಬುಡ್ಗ ಜಂಗಮರು ಸಮಾಜದ ಸೃಜನಶೀಲ ಪ್ರತಿಭೆಗಳಾಗಿದ್ದಾರೆ. ಸಾಮಾಜಿಕರಿಗೆ ಜೀವನ ಸಂದೇಶವನ್ನು ನೀಡುವ ವಿಸ್ಮಯಕಾರಿ ಸನ್ನಿವೇಶ ಬುರ್ರಕಥೆಗಳಲ್ಲಿದೆ. ಅದಕ್ಕಾಗಿ ನಿರ್ದಿಷ್ಟವಾದ ಜನಸಮುದಾಯವೊಂದು ಪರಂಪರಾನುಗತವಾಗಿ ಬುರ್ರಕಥೆಯನ್ನು ತಲೆಮಾರಿನಿಂದ ತಲೆಮಾರಿಗೆ ಮುಂದುವರಿಸಿಕೊಂಡು ಬಂದಿರುವುದು, ಸಮಾಜದ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವಲ್ಲಿ ಬುರ್ರಕಥೆಗಾರರು ಅಥವಾ ಬುಡ್ಗ ಜಂಗಮರ ಕೊಡುಗೆ ಅಪಾರವಿದೆ.

**ಬುರ್ರಕಥೆಯಲ್ಲಿ ಬರುವ ಕಥನ ಕಾವ್ಯಗಳು:** ಅಪರೂಪದ ರಾಜಲು ಕಥ, ಅಮರ ವೀರಡು ಮೇಘ ಮಹಾರಾಜು ಕಥ, ಅಲ್ಲಿರಾಣಿ ಕಥ, ಆಡಬಿಡ್ಡ ಶಂಕರಮ್ಮ ಕಥ, ಆರುಟ್ಲ ರಾಮಚಂದ್ರಾರೆಡ್ಡಿ ಕಥ, ಆರೆ ಮಾರಾಟಿಲ ಕಥ, ಈಡಿಗೋಳ ಸತ್ಯಮ್ಮ ಕಥ, ಎರಕುಲ ನಾಂಚಾರಿ ಕಥ, ಎಲ್ಲಮ್ಮ ಕಥ, ಏಕಚಕ್ರವರ್ತಿ ಕಥ, ಕಾಂಬೋಜರಾಜನ ಕಥ, ಕಾಟಂರಾಜುನ ಕಥ, ಕುಮಾರಾಮನ ಕಥ, ಗಾಂಧಾರಿ ಕಥ, ಸ್ಯಾಸಿ ಚಿನ್ನಮ್ಮನ ಕಥ, ದೇಶಿಂಗ ರಾಜನ ಕಥ, ನಲಚಕ್ರವರ್ತಿ ಕಥ, ನಲ್ಲತಂಗ ಮಹಾರಾಜ

ಕಥ, ನವ ಬೋಜರಾಜನ ಕಥ, ನಾಗಿರೆಡ್ಡಿ ಕಥ, ಪಂಚಪಾಂಡುವುಲ ಕಥ, ಬಂಗಾರು ತಿಮ್ಮಾರಾಜು ಕಥ, ಬಾಲ ನಾಗಮ್ಮನ  ಕಥ, ಬೊಬ್ಬಿಲಿ ಯುದ್ಧಂ ಕಥ, ಮುದ್ದು ರಾಮನ್ನ ಕಥ, ಮೈನಾವತಿ ಕಥ, ರಾಮುಲಮ್ಮ ಕಥ, ರೇಣುಗುಂಟ ರಾಮಿರೆಡ್ಡಿ ಕಥ, ಲಕ್ಷ್ಮಮ್ಮ ಕಥ, ವೀರ ಬಲವಂತ ಕಥಾ ಹೀಗೆ ಮುಂತಾದ ಐತಿಹಾಸಿಕ, ಸಾಮಾಜಿಕ ಕಥೆಗಳನ್ನು ಹೇಳುತ್ತಾರೆ. ಕಾಲಕ್ರಮೇಣವಾಗಿ ಈ ಕಲೆಯನ್ನು ಆಯಾ ಧರ್ಮ ಪ್ರಚಾರಕ್ಕಾಗಿ, ಚರಿತ್ರೆಯಲ್ಲಿ ನಡೆದಂತ ಘಟನೆಗಳನ್ನು ಮತ್ತು ಅವರ ಜೀವನ ಚರಿತ್ರೆಗಳನ್ನು ಕಥೆಯನ್ನಾಗಿ ಪರಿವರ್ತಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

ಈ ಕಲೆಯು ಕೇವಲ ಕಾಲಹರಣಕ್ಕಾಗಿ ಅಥವಾ ವಿನೋದಕ್ಕಾಗಿ ಹುಟ್ಟಿದ ಕಲೆಯಲ್ಲ. ಈ ಕಲೆ ಸಾಮಾಜಿಕ ದೃಷ್ಟಿಯಿಂದ ಹುಟ್ಟಿರುವಂತಹ ಕಲೆಯಾಗಿದೆ. ಈ ಕಲೆಯಲ್ಲಿ ಮೊದಲಿಗೆ ಪೌರಾಣಿಕ, ಜಾನಪದ ಹಾಡುಗಳು ಮಾತ್ರವೇ ಇದ್ದಿದ್ದು, ನಂತರ ದಿನಗಳಲ್ಲಿ ತನ್ನ ರೂಪವನ್ನು ಬದಲಿಸಿ, ಸಾಮಾಜಿಕ ಅಂಶಗಳು ಮಾನವೀಯ ಮೌಲ್ಯಗಳನ್ನು ಜಾಗೃತಿಗೊಳಿಸುವ ಕಲಾಪ್ರಕಾರವಾಗಿ ಹೊರಹೊಮ್ಮಿತ್ತು. ಜಾನಪದ ಕಲಾಪ್ರದರ್ಶನಗಳಲ್ಲಿ ವಿಶೇಷವಾಗಿ ಹರಿಕಥೆ, ಬುರ್ರಕಥೆ, ಗಮಕ, ತೊಗಲುಗೊಂಬೆಯಾಟ, ಕೋಲೆ ಬಸವನಾಟ, ಭಾಗವತ, ಯಕ್ಷಗಾನ, ಹಗಲುವೇಷ, ಜಂಗಂ ಕಥೆಗಳು, ಬೀದಿನಾಟಕಗಳು ಮುಂತಾದ ರಾಷ್ಟ್ರೀಯ ಪುರಾಣ ಕಾವ್ಯಗಳನ್ನು ಜನಸಾಮಾನ್ಯರಿಗೆ ಮುಟ್ಟಿಸುವ ಪರಿಣಾಮಕಾರಿ ಮಾಧ್ಯಮಗಳಾಗಿದ್ದವು. ಆದರೆ ಇಂದು ಈ ಕಲೆಗಳು ಅಂತರ್ಜಾಲ, ಸಿನಿಮಾ, ಆಧುನಿಕ ಪಬ್ ಸಂಸ್ಕೃತಿ ಮುಂತಾದವುಗಳು ಇಂದು ಮುಖ್ಯ ಪಾತ್ರವಹಿಸುವುದರಿಂದ ಈ ಪಾರಂಪರಿಕ ದೇಸಿ ಕಲೆಗಳು ನಶಿಸಿಹೋಗುವ ಹಂತದಲ್ಲಿವೆ.

ಬುರ್ರಕಥಾ ಕಲಾಪ್ರಕಾರವನ್ನು ಕರ್ನಾಟಕದಲ್ಲಿ ಹೆಚ್ಚು ಪ್ರಚಾರಗೊಳಿಸದವರು ದರೋಜಿ ಈರಮ್ಮನವರು. ಅವರು ಮೌಖಿಕ ಕಾವ್ಯಪರಂಪರೆಯ ಮಹತ್ವದ ಕೊಂಡಿಯಾಗಿ, ಬುರ್ರಕಥಾ ಪರಂಪರೆಯ ದಂತಕಥೆಯಾಗಿ ಇತಿಹಾಸ, ಐತಿಹ್ಯ, ಪುರಾಣ ಪ್ರಸಂಗಗಳನ್ನು ಜನಸಾಮಾನ್ಯರಿಗೆ ಮನ ಮುಟ್ಟುವಂತೆ ಹಾಡುವ ಜಾನಪದ ಕಾವ್ಯ ಖಜಾನೆಯಾಗಿದ್ದರು. ಅತ್ಯಂತ ಕಡುಬಡತನದಲ್ಲಿ ಹುಟ್ಟಿ ಬುರ್ರಕಥಾ ಪರಂಪರೆಯನ್ನು ಪೋಷಿಸಿಕೊಂಡು ಬಂದ ವಿರಳ ಕಲಾವಿದರಲ್ಲಿ ಒಬ್ಬರಾಗಿದ್ದವರು. ಅದ್ಭುತ ಕಂಠಸಿರಿಯನ್ನು ಹೊಂದಿರುವ ಅವರು ಹಳ್ಳಿಯಿಂದ ದಿಲ್ಲಿಯ ರಾಷ್ಟ್ರಪತಿಯವರೆಗೂ ಸೈ ಎನಿಸಿಕೊಂಡು ಬಂದಿದ್ದರು.ಕನ್ನಡ ವಿಶ್ವವಿದ್ಯಾಲಯವು ಅವರನ್ನು ಗುರುತಿಸಿ ಅವರ ಕಾವ್ಯಗಳನ್ನು ಸಂಗ್ರಹಿಸಿದರು. ಇವರಿಗೆ ನಾಡೋಜ ಗೌರವ ಪದವಿ ಹಾಗೂ ಜಾನಪದಶ್ರೀಯಂತಹ ಅನೇಕ ರಾಷ್ಟ್ರದ ಅಂತರ್ ರಾಷ್ಟ್ರೀಯ ಮಟ್ಟದ ಪ್ರಶಸ್ತಿಗಳು ನೀಡಿ ಗೌರವಿಸಿವೆ.

**ಬುರ್ರಕಥಾ ಬೊಬ್ಬಿಲಿ ನಾಗಿರೆಡ್ಡಿ ಕಥನ ಕಾವ್ಯದ ಸಾಹಿತ್ಯ**

ಗಡೆಕಲ್ಲು ನಾಗಿರೆಡ್ಡಿ
ರೆಡ್ಡಿ ಕುಲ ವಂಶದವರು..

ಗಡೆಕಲ್ಲು ಪಟ್ಟಣದಾಗ
ಯಾರು ಆಳುತ್ತಾರಮ್ಮ...॥

ಲಿಂಗಾರೆಡ್ಡಿ ಐದಾರಮ್ಮ
ತಾಯಿ ಬಾರೆ ಗೌರವಮ್ಮ..।
ನಿನಗಾಗಿ ಶರಣು ತಾಯಿ..
ಅವನ ಹೆಂಡ್ತಿ ಗೌರಮ್ಮ...
ನಿನಗಾಗಿ ಶರಣುವಮ್ಮ...॥

ಹೇ...
ಕಲ್ಲುವಳೊಗೆ ಭೀಮಲಿಂಗ
ಕರೆದ್ರೆ ಮಾತಾಡತ್ತಾನಮ್ಮ..॥
ಸತ್ತು ಸಗರುತ್ತಿನ್ಯಾಗ
ಅವರಿಗಾಗಿ ಕಂಡಾನಮ್ಮ..॥
ಮನ್ಯಾಗ ಪ್ರತ್ಯಕ್ಷವಾಗಿ ಕಂಡಾನಮ್ಮ..॥

ಲಿಂಗಾರೆಡ್ಡಿ ಮನ್ಯಾಗ
ಏನು ದೇವರು ಬಂದಾಗಾಗ್ಯೆತಿ ಅಂತಾ
ಏನ್ನನಾಗಲಿ ಮಠಕ್ಕೆ ಹೋಗಿ ಬರೋಣ..ಆ.
ಆಗಾ ಮಠಕಟ್ಟಿ ಆಗ ಒಂದು ದೇವರು
ಕಲ್ಲಿನ ಮಠ ಕಟ್ಟಿ..

ಆಗ ಒಂದು ಭೀಮಲಿಂಗ
ಸತ್ಯವೇನು ಗಡೆಕಲ್ಲು
ಗಡೆಕಲ್ಲು ಭೀಮಲಿಂಗ
ತಾವೊಂದು ಬಂದಾನಮ್ಮ

ಸತ್ತಸಗರುತ್ತಿನ್ಯಾಗ
ತಾವೊಂದು ಬಂದಾನಮ್ಮ
ಸತ್ತಸಗರುತ್ತಿನ್ಯಾಗ
ತಾವೊಂದು ಲಿಂಗಾರೆಡ್ಡಿ

ಸತ್ತಸಗರುತ್ತಿನ್ಯಾಗ ಬಂದು
ಸ್ನಾನ ಮಾಡಿಕೊಂಡು ಬಂದ
ಹಾಲಿಲಿಂದ ತೊಳೆದು
ಆಗ ಬೆಣ್ಣೆ ಬೆಳಕು ಮಾಡಿದ
ಆಗ ದಿನಾಲೂ ಪೂಜಾ..

ಆಗ ಒಂದು ದಿನ ಏನು ಮಾಡಿದ ..
ಐದು ಖರ್ಜೂರು ಹಣ್ಣು ಇಟ್ಟು
ಊದಿನಕಡ್ಡಿ ಹಚ್ಚಿ..

ಕಾಯಿಯೊಂದು ಹೊಡೆದ
ತಾವೊಂದೆ ಎಂದು ಕಾಯಿ ಹೊಡೆದ..
ಹೇ...
ಎರಡು ಕೈ ಜೋಡಿಸ್ಯಾನಮ್ಮ
ಕಾಯಿ ಒಂದೇ ಹೊಡೆದಾನಮ್ಮ ಮಗನೇ
ಹೇ ಮ್ಯಾಕಾಗಿ ಎಗ್ರಿತಮ್ಮ
ವಗಿಸಿವಳೊಗೆ ಬಿದ್ದೈತ್ತಮ್ಮ..
ಖರ್ಜೂರು ಹಣ್ಣು ಹೊಗದಾನಮ್ಮ ತಾತ
ಆಗ ಬಾರ್ಲ ಬಿದ್ದು ಮುಗಿದಾನಮ್ಮ..

**ಗಂಗಿಗೌರಿ ಕಥನಕಾವ್ಯ**

ಗಂಗಿಗೌರಿ ಕಥನ ಕಾವ್ಯವು ಬುಡ್ಗ ಜಂಗಮರ ಕಲಾಪ್ರಕಾರಗಳಲ್ಲಿ ಒಂದಾಗಿದ್ದು, ಗಂಗಿಗೌರಿ ಎಂಬ ಗೊಂಬೆಗಳನ್ನು ಕಟ್ಟಿಗೆಯಿಂದ ತಯಾರಿಸಿ ಅಲಂಕಾರ ಮಾಡಿಕೊಂಡು, ಅದನ್ನು ಕೈಯಲ್ಲಿಟ್ಟುಕೊಂಡು ತಮ್ಮ ಕಂಚಿನ ಕಂಠದಿಂದ ಕಥಾಗಾಯನ ಮಾಡುವ ಕಲೆಗೆ ಗಂಗಿಗೌರಿ ಕಥನ ಕಾವ್ಯ ಎಂದು ಕರೆಯುತ್ತಾರೆ. ಬುಡ್ಗ ಜಂಗಮರ ಮಹಿಳೆಯರು ಮನೆ ಮನೆಗೆ ಹೋಗಿ ಗಂಗಿ ಗೌರಿ ರಾಗಿ ಬೀಸುವ ಗೊಂಬೆಗಳ ಮೂಖಾಂತರ ಗಂಗಿ ಗೌರಿಯ ಸವತಿಯ ಸಂಸಾರದ ಬಿಕ್ಕಟ್ಟು, ಸಮಸ್ಯೆಗಳನ್ನು ಕುರಿತು ಹಾಡುತ್ತಾ ಸಾಂಸರಿಕ ಜೀವನದ ತಿರಳು ಬಗ್ಗೆ ವಿವರಿಸುವುದನ್ನು ಕಾಣಬಹುದು.*(ಛಾ:೬.೨)* ಆ ಕಥನಕಾವ್ಯದ ಸಾಹಿತ್ಯ ಈ ಕೆಳಗೆ ನೋಡಬಹುದು.

ಗಂಗಮ್ಮ ಗೌರಮ್ಮ ವಾದಿ ಮಾಡುವರು
ಗಂಗಮ್ಮ ಗೌರಮ್ಮ ಜೂಜನಾಡುವರು

ಯಾಕಯ್ಯ ಶಿವರಾಯ ಇಬ್ಬರು ಹೆಂಡಿರು?
ವಾದಾಡಿ ಶಿವರಾಯ ಸವತಿನೇ ತಂದ
ಹೋಗು ಬ್ಯಾಡೆಂದೆ ಹೋದಲ್ಲೋ ಶಿವನೆ

ತರಬ್ಯಾಡದ ಗಂಗೇನ ನೀನು ತಂದೀಯ
ವಾದಿಲ್ಲದ ಮನಿಯಲ್ಲಿ ವಾದಿ ತಂದೀಯ

ಇಬ್ಬರಿಗೂ ಈ ವಾದ ನೀನೇಳಲಾರೆ
ಇಬ್ಬರಿಗೂ ಜಗಳ ಹಚ್ಚಿ ನಗುತ್ತಿದ್ದೀಯ

ಗಂಗೇನನ್ನಾ ಬಿಡು ನನ್ನನ್ನು ಬಿಡು
ಆ ಮಾತಿಗಾ ಶಿವ ಏನಂಬುತ್ತಾನ

ಗಂಗಿ ಗೌರಿ ಗಾಯನವು ಕನ್ನಡ ಜನಪದ ಸಾಹಿತ್ಯದಲ್ಲಿ ಜನಪ್ರಿಯ ಕಥನಗಳಲ್ಲೊಂದು. ಇದರಲ್ಲಿ ಗಂಗೆ–ಗೌರಿಯರ ಪ್ರೀತಿ ಮುನಿಸು ಸವತಿ ಮಾತ್ಸರ್ಯ ಜಗಳಗಳು ವರ್ಣಿಸಲ್ಪಟ್ಟಿವೆ. ಪಾರ್ವತಿಯ ತಪೋನಿಷ್ಠೆಗೆ ಮನಸೋತ ಪರಮೇಶ್ವರ ಆಕೆಯನ್ನು ವಿವಾಹವಾದ ಬಳಿಕ ಪ್ರೀತಿಯಿಂದ ತನ್ನ ತೊಡೆಯಮೇಲೆ ಕೂಡಿಸಿಕೊಂಡ ಆಲಿಂಗಿಸಿಕೊಂಡನೆಂಬುದೂ; ಭಗೀರಥನ ತಪಃಫಲವಾಗಿ ಗಂಗೆ ದೇವಲೋಕದಿಂದ ಭೂಮಿಗೆ ಧುಮುಕಲಾರಂಭಿಸಿದಾಗ ಆ ವೇಗವನ್ನು ತಾಳಲು ಭೂಮಿ ಅಸಮರ್ಥಳೆಂಬುದನ್ನು ಗ್ರಹಿಸಿದ ಶಿವ ದೃಢವಾಗಿ ನಿಂತು ಆಕೆಯನ್ನು ತನ್ನ ಜಟಾಪಲಾಪದೊಂದಿಗೆ ತಾಳಿಕೊಂಡನೆಂಬುದೂ ಪುರಾಣಗಳಲ್ಲಿ ಉಲ್ಲೇಖವಿದೆ. ಗೌರಿ ಶಿವನ ಪತ್ನಿ; ಶಿವನ ಎಡತೊಡೆ ಅವಳಿಗೆ ಆಸನ. ಗಂಗೆ ಪ್ರಾಸಂಗಿಕವಾಗಿ ಬಂದವಳು. ಆದರೂ ಅವಳಿಗೆ ಶಿವನ ತಲೆಯಮೇಲೆ ಸ್ಥಾನ. ಶಿವನ ಪ್ರೇಮಕ್ಕಾಗಿ ಉಗ್ರವಾದ ತಪಸ್ಸುಮಾಡಿ ಅವನನ್ನು ವರಿಸಿ ಮದುವೆಯಾದ ಪತ್ನಿಗೆ ತನ್ನ ಸಮ್ಮುಖದಲ್ಲೆ ಅನ್ಯ ಸ್ತ್ರೀಯೊಬ್ಬಳು ತನ್ನ ಪತಿಯ ತಲೆಯಮೇಲೆ ಕುಳಿತುಕೊಳ್ಳುವಷ್ಟು ಸ್ವಾತಂತ್ರ್ಯ ಪಡೆಯುವುದು ಸಹ್ಯವಾದೀತೆ ಎಂಬ ಸ್ತ್ರೀಸ್ವಭಾವದ ದೌರ್ಬಲ್ಯವನ್ನು ಆಧಾರವಾಗಿಟ್ಟುಕೊಂಡು ಬುಡ್ಗ ಜಂಗಮರು ಹಾಗೂ ಜನಪದರು ಈ ಕೆಳಗಿನಂತೆ ಸಾಹಿತ್ಯವನ್ನು ಕಂಡು ಕೊಂಡಿದ್ದಾರೆ.

ಮೆಚ್ಚಿ ಬಂದವಳೆಲ್ಲ ಹೆಚ್ಚಾದಳೇನೋ?
ಕೂಡಿ ಕೊಂಬುವರೆಲ್ಲ ಹೆಚ್ಚಾದರೇನೋ?

ಮದುವೆ ಹೆಂಡತಿ ನಿನಗೆ ಮದ್ದಾಯಿತ್ತೇನೋ?
ಮದುವೆ ಹೆಂಡಿತಿಯೆಲ್ಲ ವಿಸಾಯಿತೇನೋ?

ಈ ಕಲಾಪ್ರಕಾರವನ್ನು ಬುಡ್ಗ ಜಂಗಮರು ಬಳಸಿಕೊಂಡ ಹಿನ್ನೆಲೆ ಮತ್ತು ವರ್ತಮಾನದ ಸ್ಥಿತಿಯನ್ನು ಗಮನಿಸಿದಾಗ ಹೈದರಾಬಾದ್ ನಿಜಾಮನ ಕಾಲದಲ್ಲಿ ಬಹುಪತ್ನಿತ್ವ ಪದ್ಧತಿಯು ಜಾರಿಯಲ್ಲಿತ್ತು, ಮತ್ತು ಇವರ ಸಮುದಾಯದಲ್ಲೆ ಅನೇಕ ಜನರು ಇಬ್ಬರು ಹೆಂಡತಿಯರನ್ನು ಮಾಡಿಕೊಂಡಿರುವ ಇರುವುದು ಕಾಣಬಹುದು. ಈ ಇಬ್ಬರ ಹೆಂಡತಿಯ ಮಾಡಿಕೊಂಡಿದ್ದವರ ಸಮಸ್ಯೆಗಳು, ಬಿಕ್ಕಟ್ಟುಗಳು, ಪ್ರತಿರೋಧಗಳು ಈ ಸಮುದಾಯದಲ್ಲಿದ್ದ ಹೆಣ್ಣುಮಕ್ಕಳು ಸ್ವತಃ ಕಣ್ಣಾರೆಕಂಡು ತಾವು ಅನುಭಿಸಿದ್ದರ ಫಲವಾಗಿ ಜನಸಾಮಾನ್ಯರಿಗೆ ಇದರ ಬಿಕ್ಕಟ್ಟು, ಸಮಸ್ಯೆಗಳನ್ನು ಹೇಗೆ ತಲುಪಿಸಬೇಕು ಎನ್ನುವ ಆಲೋಚನೆಯಲ್ಲಿ ತಮ್ಮದೇಯಾದ ಕಲಾಮಾಧ್ಯಮದ ಮೂಲಕ ಶಿವನ ಐತಿಹ್ಯ ಪುರಾಣವನ್ನು ವಸ್ತುವನ್ನಾಗಿ ವರ್ತಮಾನದ ಸಮಸ್ಯೆ ಸಂಕಷ್ಟಗಳನ್ನು ವಿಷಯವನ್ನಾಗಿಸಿಕೊಂಡು ಜನಸಾಮಾನ್ಯರಿಗೆ ಜಾಗೃತಿ ಮೂಡಿಸುತ್ತಿರುವ ಏಕೈಕ ಸಮುದಾಯವಾಗಿದೆ.

**ಹಗಲುವೇಷ**

ಹಗಲುವೇಷವು ಬುಡ್ಗ ಜಂಗಮರ ಕಲಾಪ್ರಕಾರಗಳಲ್ಲಿ ಒಂದು. ಈ ಕಲೆಯು ಬಹುದೊಡ್ಡ ಪರಂಪರೆಯನ್ನು ಹೊಂದಿದೆ ಎಂದು ಹೇಳಬಹುದು. ಈ ಕಲೆ ಬುಡ್ಗ ಜಂಗಮರಿಗೆ ಪ್ರಾಸಂಗಿಕವಾಗಿ

ಬಂದ ಕಲೆಯಾಗಿದೆ. ಈ ಕಲೆಯು ದಕ್ಕಲಿಗರ ಚಿಂದು ಯಕ್ಷಗಾನಂ, ದಾಸರಿ ಭಾಗವತಂ ಕಲೆಗಳಿಂದ ಬುಡ್ಗ ಜಂಗಮರು ಈ ಹಗಲುವೇಷ ಕಲೆಯನ್ನು ಕಂಡುಕೊಂಡಿದ್ದಾರೆ. ಈ ಪ್ರದರ್ಶನವು ಅನ್ಯ ಸಮುದಾಯದವರಂತೆ ಒಂದು ವೇದಿಕೆ ನಿರ್ಮಿಸಿ ಪ್ರದರ್ಶನ ನೀಡುತ್ತಿರಲಿಲ್ಲ. ಪ್ರತಿ ಹಳ್ಳಿಗಳಿಗೆ ಹೋಗಿ ಪ್ರತಿಯೊಂಬು ಸಮುದಾಯದ, ಪ್ರತಿಕುಟುಂಬದ ಬಡವ ಶ್ರೀಮಂತ ಎನ್ನದೇ ಜಾತಿಬೇಧವಿಲ್ಲದೇ ಪ್ರತಿಯೊಬ್ಬರ ಮನೆಯ ಅಂಗಳದಲ್ಲಿ ಪ್ರದರ್ಶನ ನೀಡುತ್ತಾರೆ. ಹಾಗಾಗಿ ಇವರನ್ನು ಬೀದಿ ಭಾಗವತದವರು ಎಂದು ಕರೆದಿದ್ದಾರೆ. ಇವರು ಹಗಲು ಹೊತ್ತಿನಲ್ಲಿ ಮಾತ್ರ ಪ್ರದರ್ಶನ ನೀಡುವುದರಿಂದ ಹಗಲುವೇಷ, ಪಗಟಿವೇಷಂ ಎಂದು ಕರೆದಿದ್ದಾರೆ. ಕಾರಣ ಕಲಾಪ್ರದರ್ಶನದಿಂದ ಬದುಕುವ ಬುಡ್ಗ ಜಂಗಮರಂತ ಇತರೆ ಅಲೆಮಾರಿ ಸಮುದಾಯಗಳು ಕೂಡ ಕಲೆಯನ್ನು ಆಧರಸಿ ಜೀವಿಸುತ್ತಿವೆ. ಹಾಗಾಗಿ ಎಲ್ಲಾ ಅಲೆಮಾರಿ ಸಮುದಾಯಗಳು ತಮ್ಮ ತಮ್ಮ ಕಲೆಯನ್ನು ಪ್ರದರ್ಶಿಸುವ ವಿಧಾನ, ಸಮಯ ಸಂದರ್ಭವನ್ನು ಹಾಗೂ ಹಳ್ಳಿಗಳನ್ನು ಹಂಚಿಕೊಂಡಿರುತ್ತಾರೆ. ಹಾಗಾಗಿ ಬುಡ್ಗ ಜಂಗಮರು ಹಗಲುಹೊತ್ತಿನಲ್ಲಿಯೇ ಪ್ರದರ್ಶನ ನೀಡುತ್ತಾರೆ ಇದರಿಂದ ಇವರ ಕಲೆಯನ್ನು ವೃತ್ತಿಯನ್ನು ಪ್ರದರ್ಶಿಸುವುದರಿಂದ ಇವರನ್ನು ಹಗಲುವೇಷದವರು ಎಂದು ಕರೆದಿದ್ದಾರೆ.

ರಾಮಾಯಣ, ಮಹಾಭಾರತ ಮತ್ತು ಭಾಗವತದಲ್ಲಿ ಬರುವ ಕೆಲವು ಸನ್ನಿವೇಷಗಳನ್ನು ಮತ್ತು ಐತಿಹಾಸಿಕ ವೀರ ಯೋದರ ಬಗ್ಗೆ ನಾಟಕಗಳನ್ನು ಕಟ್ಟಿ ಮತ್ತು ಸಮುದಾಯಗಳ ಚರಿತ್ರೆಯನ್ನು ತಿಳಿಸಲು, ಜಾತಿಗೊಂದು ವೇಷಗಳನ್ನು ಕಟ್ಟಿ ಜನಸಾಮಾನ್ಯರಿಗೆ ವಿಡಂಬನೆ ಮತ್ತು ನೀತಿ ಸಂದೇಶಗಳನ್ನು ತಿಳಿಸುವುದು ಹಗಲುವೇಷ ಕಲಾ ಪ್ರಕಾರದ ಪ್ರಮುಖ ಉದ್ದೇಶವಾಗಿದೆ. ಬುಡ್ಗ ಜಂಗಮರು ತಮ್ಮ 'ವೇಷ'ವನ್ನು 'ಪಂತು' ಕೆಲವು ಕಡೆ 'ವಾಲ್ಕಂ', 'ವೇಷಂ' ಎಂದು ಪರ್ಯಾಯ ಹೆಸರುಗಳಿಂದ ಕರೆಯುತ್ತಾರೆ.

**ಹಗಲು ವೇಷಗಾರಿಕೆಯಲ್ಲಿ ಪ್ರದರ್ಶಿಸುವ ವಿವಿಧ ರೂಪಕಗಳು**

ಬುಡ್ಗ ಜಂಗಮರು ತಮ್ಮ ಹಗಲುವೇಷಗಾರಿಕೆಯಲ್ಲಿ ಐತಿಹಾಸಿಕ ಚರಿತ್ರೆಗಳನ್ನು, ಪುರಾಣಗಳನ್ನು, ರಾಮಾಯಣ ಮಹಾಭಾರತದ ಸನ್ನಿವೇಷಗಳನ್ನು, ಸಾಮಾಜಿಕ ಸಂದರ್ಭಗಳು, ಆಡಳಿತ ವಿರೋಧಿಯ ಸನ್ನಿವೇಷಗಳನ್ನು ಮತ್ತು ಪ್ರತಿಯೊಂದು ಜಾತಿ ಸಮುದಾಯಗಳ ವೃತ್ತಾಂತಗಳನ್ನುಅನುಕರಣೆ ಮಾಡಿ ವೇಷಗಳನ್ನು ಪ್ರದರ್ಶಿಸುತ್ತಾರೆ. ಹಗಲು ವೇಷಗಾರಿಕೆಯಲ್ಲಿ ಪ್ರದರ್ಶಿಸುವ ವಿವಿಧ ವೇಷಗಳು ಈ ಕೆಳಗಿನಂತಿವೆ.

೧.ಅಗಸರ ನಂದ್ವನ ವೇಷ (ಸಾಕಲೇಷಂ), ೨. ಅತ್ತೆಸೋಸೆ ವೇಷ, ೩. ಅರ್ಧನಾರೇಶ್ವರ ವೇಷ, ೪. ಏಕತಾರಿ ಪಂತು ವೇಷ, ೫. ಕಾಸಿ ಕಾವಡಿ ವೇಷ, ೬. ಕಿರಾತಾರ್ಜುನ ವೇಷ, ೭. ಕುರುಡು ದಾಸಯ್ಯರ ವೇಷ, ೮. ಕೊಮಟಿ ವೇಷ, ೯. ಕೊಂಡಮಾಮನ ವೇಷ, ೧೦. ಕೊಜ್ಜ ವಾಲ್ಕಂ, ೧೧. ಗಾರಡಿ ವೇಷ. ೧೨. ಗೊರವಯ್ಯನ ವೇಷ, ೧೩. ಚೆಂಚರ ವೇಷ, ೧೪. ಜಂಗಮ ವೇಷ (ಶಂಖು ಜಂಗಮ ವಾಲ್ಕಂ), ೧೫. ತುಪಾಕಿರಾಮಣ್ಣನ ವೇಷ, ೧೬. ದಾನಶೂರ ಕರ್ಣ ವೇಷ,

೧೭. ದಾಸರ ವೇಷ (ದಾಸರೇಷಂ), ೧೮. ನಾಟಪಂತು ವೇಷ, ೧೯. ಫಕೀರ್ ವೇಷ, ೨೦. ಪಾರ್ವತಿ ಪರಮೇಶ್ವರ ವೇಷ, ೨೧. ಪಿಟ್ಟಲದೊರ ವೇಷಂ, ೨೨. ಪೋಟವೇಷಂ, ೨೩. ಪೊಲೀಸ್ ವೇಷ, ೨೪. ಬಾಲಸಂತು ವೇಷ, ೨೫. ಬ್ರಾಹ್ಮಣ ವೇಷ (ತಾಟಿ ವಾಲ್ಕಂ), ೨೬. ಭೀಮಾಂಜಿನೇಯ ಯುದ್ಧಂ ವೇಷ, ೨೭. ಭೀಮ ಜಟಾಸುರನ ವೇಷ, ೨೮. ಬುಡಬುಕ್ಕಲವಾಡು ವೇಷ, ೨೯. ಬೇಡರ ವೇಷ, ೩೦. ಬೊಡಮ್ಮಜ್ಜಿ (ಬೋಡಿಬಾಪನಮ್ಮ) ವೇಷ, ೩೧. ಬೈರಾಗಿ ವೇಷ, ೩೨. ಮುತ್ತಡಿ ಪಂತುವೇಷ, ೩೩. ಮೋಹಿನಿ ಭಸ್ಮಾಸುರ ವೇಷ, ೩೪. ಮಂದಲವಾಳ್ಳು ವೇಷ, ೩೫. ರಾಧ ರುಕ್ಮಣಿ ವೇಷ. ೩೬. ರಾಮರಾವಣ ಯುದ್ಧಂ, ೩೭. ವಡ್ಡರ ವೇಷ, ೩೮. ಲವಕುಶ ವೇಷ, ೩೯. ಲಂಬಾಣಿ ವೇಷ, ೪೦. ವಾಲಿ-ಸುಗ್ರೀವ ವೇಷ, ೪೧. ವಿಶ್ವಾಮಿತ್ರ ತಪೋಭಂಗ ವೇಷ, ೪೨. ಸಿದ್ಧರ ವೇಷ, ೪೩. ಸಿಂಗಿ, ಸಿಂಗುಡು-ಎರಕುಲ ವೇಷ, ೪೪. ಸುಂದೋಪಸುಂದರ ವೇಷ, ೪೫. ಶುಕ್ರಚಾರಿ ವೇಷ ಹೀಗೆ ಬುಡ್ಗ ಜಂಗಮರು ಸುಮಾರು ೪೫ ವೇಷಕ್ಕಿಂತಲೂ ಹೆಚ್ಚಿನ ವೇಷಗಳನ್ನು ಪ್ರದರ್ಶಿಸುತ್ತಾರೆ. ಜಾತಿಗೊಂದು ವೇಷ ಹಾಕಿ ಪ್ರದರ್ಶನ ನೀಡಿರುವ ನೀಡಿದ್ದಾರೆ.*(ಛಾ:೬.೩)*

ಕಾಲ ಕ್ರಮೇಣವಾಗಿ ಒಂದೊಂದು ವೇಷಗಳು ಕಣ್ಮರೆಯಾಗಿ ಇಂದು ಕೇವಲ ೬ ಅಥವಾ ೭ ಪ್ರಸಂಗಗಳು ಮಾತ್ರ ಹಳ್ಳಿಗಳಲ್ಲಿ ಪ್ರದರ್ಶನ ನೀಡುತ್ತಾರೆ. ಅದರಲ್ಲಿ ೧. ಭೀಮಾಂಜಿನೇಯ ಯುದ್ದ ಪ್ರಸಂಗ, ೨. ಮೋಹಿನಿ ಭಸ್ಮಾಸುರ ಪ್ರಸಂಗ, ೩. ಸುಂದ ಉಪಸುಂದ ಪ್ರಸಂಗ, ೪. ಭೀಮಾ ಜಟಾಸುರ ವಧೆ, ೫. ರಾಮ ಲಕ್ಷಣನ ವೇಷ, ೬. ಪೋಟವೇಷ, ೭. ಸಿದ್ದಿ ವೇಷ.

**ಬ್ರಾಹ್ಮಣ ವೇಷ:** ಈ ರೂಪಕವು ಬ್ರಾಹ್ಮಣ ಸಮುದಾಯದಲ್ಲಿರುವ ಆಚಾರ ವಿಚಾರಗಳನ್ನು ವಿಡಂಬನಾತ್ಮಕವಾಗಿ ಪ್ರದರ್ಶಿಸುತ್ತಾ ಸ್ನಾನ, ಪೂಜೆ, ಸಂಪ್ರದಾಯ, ಶ್ಲೋಕ ಮುಂತಾದ ವಿಷಯಗಳನ್ನು ಭಾಗೀರಥಿ ಪಾತ್ರದ ಮೂಲಕ ಹಾಸ್ಯವನ್ನು ಪ್ರದರ್ಶಿಸುತ್ತಾರೆ. ಹಾಸ್ಯದಲ್ಲಿ ಯಾವುದೇ ವ್ಯಕ್ತಿಗಳಿಗೆ ಅಸಹ್ಯವಾಗದಂತೆ ಕಲೆಯನ್ನು ಪ್ರದರ್ಶಿಸುತ್ತಾರೆ.

**ಬೇಡರ ವೇಷ:** ಬೇಡರ ವೇಷವನ್ನು ಜನಪದರು ಕಳ್ಳುವೇಷ, ಕೈಮುರಕ ವೇಷ, ಹುಲಿವೇಷ, ಪೋಟವೇಷ, ಸಿಂಧೂರ ಲಕ್ಷಣನ ವೇಷ ಎಂದು ಆಯಾ ಪ್ರಾದೇಶಿಕವಾಗಿ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಆಂಧ್ರದಲ್ಲಿ ಪೋತುರಾಜುಲ ವೇಷ ಎಂದು ಕರೆದರೆ ಕರ್ನಾಟಕದಲ್ಲಿ ಪೋಟವೇಷ(ಬೇಡರವೇಷ) ಎಂದು ಕರೆಯುತ್ತಾರೆ. ಬುಡ್ಗ ಜಂಗಮರು ಮೇಳಕ್ಕೆ ಹೋದಾಗ ಯಾವುದೇ ಗ್ರಾಮದಲ್ಲಿ ಮೊದಲ ದಿನ ಶ್ರೀಭೀಮಾಂಜಿನೇಯ ಯುದ್ಧ, ಎರಡನೆದಿನ ಮೋಹಿನಿ ಭಸ್ಮಾಸುರ, ಮೂರನೆದಿನ ರಾಮಲಕ್ಷ್ಮಣರ ವೇಷ ಈ ವೇಷಗಳು ಪ್ರದರ್ಶಿಸಿದ ನಂತರ ಕೊನೆಯದಾಗಿ ಪೋಟವೇಷ ಪ್ರದರ್ಶನ ನೀಡುತ್ತಾರೆ.

ಪೋಟವೇಷವನ್ನು ಪ್ರದರ್ಶಿಸುವ ವ್ಯಕ್ತಿಯ ದೇಹವು ದಪ್ಪಮುಪ್ಪವಾಗಿ ಎತ್ತರವಾಗಿರುವರು ಧರಿಸುತ್ತಾರೆ. ಈ ವೇಷದ ಮುಖವರ್ಣಿಕೆಯಲ್ಲಿ ಮುಖಕ್ಕೆ ಬೇಕಾದ ಪ್ರಮಾಣದಲ್ಲಿ ಕೈಯಲ್ಲಿ ಕೆಂಪು, ಹಳದಿ ಮತ್ತು ಬಿಳಿಬಣ್ಣಗಳನ್ನು ಕೊಬ್ಬರಿ ಎಣ್ಣೆಯಲ್ಲಿ ಮಿಶ್ರಣಮಾಡಿ ಮುಖಕ್ಕೆ ಬಳಿದುಕೊಳ್ಳುತ್ತಾನೆ. ಕಣ್ಣುಬ್ಬುಗಳಿಗೆ

ಕಪ್ಪು ಬಳಿದು, ದಪ್ಪವಾದ ಮೀಸೆ, ಗೆಜ್ಜೆ ಹೊಲಿದಿರುವ ಮೊಣಕಾಲವರೆಗಿರುವ ಕೆಂಪು ಚಡ್ಡಿ, ಸೊಂಟಕ್ಕೆ ಕಚ್ಚೆ ಕಟ್ಟಿ, ಕಾಲಿಗೆ ಗೆಜ್ಜೆ ಕಟ್ಟಿ, ಎರಡು ಕೈತೋಳಿಗೆ ದಪ್ಪನೆಯ ಕಪ್ಪು ಉಣ್ಣೆಯ ದಾರ ಕಟ್ಟಿ, ಬಲಗೈನಲ್ಲಿ ಒಂದು ಖಡ್ಗ ಹಿಡಿದಿರುತ್ತಾನೆ. ಕುತ್ತಿಗೆಯಲ್ಲಿ ಮೆಡಪೋಟು ಹೊಂದಿರುವ ಸುಮಾರು ೨೫ ಅಡಿ ಉದ್ದನೆಯ ಕಟ್ಟಿಗೆಯನ್ನು ಕಟ್ಟಿ (ಕುತ್ತಿಗೆಗೆ ಹಿಂದಿನಿಂದ ಸುತ್ತಿ ಕುತ್ತಿಗೆಯ ಬಲಭಾಗದಿಂದ ತೂರಿ ಹೊರಟಂತೆ ಕಾಣುತ್ತದೆ). ಬಾಯಿಯಲ್ಲಿ ಬೆಳ್ಳಿ ಚಾಕು ತಿವಿದುಕೊಂಡು, ಬಾಯಲ್ಲಿ ಕೆಂಪು ಬಣ್ಣ ಹಾಕಿಕೊಂಡು ಟಮಟೆಗಳ ನಾದಕ್ಕೆ ತಕ್ಕಂತೆ ಪ್ರದರ್ಶನ ನೀಡುತ್ತಾ ಮೊದಲು ಊರೊಳಗೆ ಪ್ರವೇಶ ಮಾಡುತ್ತಾ ನೇರವಾಗಿ ದೇವಸ್ಥಾನಕ್ಕೆ ಹೋಗಿ ಕೈ ಮುಗಿದು ನಂತರ ಊರಿನ ಜನ ಸೇರಿರುವ ಕಟ್ಟೆಗಳಲ್ಲಿ ದೈವಕ್ಕೆ ಕೈಮುಗಿದು ಪ್ರದರ್ಶನ ನೀಡುತ್ತಾನೆ. ನಂತರ ಪ್ರತಿಯೊಂದು ಕೇರಿಯ ಮನೆಗಳಲ್ಲಿ ಪ್ರದರ್ಶನ ನೀಡುತ್ತಾನೆ. ಕೆಲವು ಮನೆಗಳ ಮೇಲೆ ಏರಿ ಅಲ್ಲಿಂದ ಎಗರುವ ಪ್ರಸಂಗವನ್ನು ತೋರಿಸುತ್ತಾನೆ. ಅವನ ಜೊತೆಗೆ ರಾಮ ಎನ್ನುವ ಕೈಮುರಕವೇಷವನ್ನು ಹಾಕಿಕೊಂಡಿರವವನು ಲಕ್ಷ್ಮಣನಂತೆ ಪ್ರದರ್ಶನ ನೀಡುತ್ತಾನೆ. ಜೊತೆಗೆ ಇವನನ್ನು ಹಿಡಿಯಲು ಬ್ರಿಟಿಷರ ವೇಷಧರಿಸಿದ ಇಬ್ಬರು ಮೂವರು ಪೋಲಿಸರ ಪಾತ್ರಗಳು ಇವರನ್ನು ಬಂಧಿಸುವ ಪ್ರಸಂಗವನ್ನು ಪ್ರದರ್ಶಿಸುತ್ತಾರೆ. ಜೊತೆಗೆ ಅವನ ತಾಯಿ ಮತ್ತು ತಂದೆಯ ಪಾತ್ರದಲ್ಲಿ ಕಡುಪುವೇಷಂ ಹಾಕಿಕೊಂಡು ಹಾಸ್ಯಮಾಡುತ್ತಾ ಪ್ರದರ್ಶಿಸುತ್ತಾರೆ. ಈ ವೇಷದ ಕುಣಿತಕ್ಕೆ ಟಮಟೆಗಳನ್ನು ಅಂದರೆ ರಣಹಲಗೆಗಳನ್ನು ಬಳಸುತ್ತಾರೆ.

**ಜಂಗಮನ ವೇಷ:** ಈ ವೇಷವನ್ನು ಸನ್ಯಾಸಿವೇಷ, ಸಾಧುವೇಷ, ಭೈರಾಗಿವೇಷ, ಗೋಸಾಯಿವೇಷ ಎಂದು ಪ್ರಾದೇಶಿಕವಾಗಿ ಕರೆಯುತ್ತಾರೆ. ಕಾವಿ ಬಟ್ಟೆಯನ್ನು ಧರಿಸಿ, ಕೊರಳಿನಲ್ಲಿ ರುದ್ರಾಕ್ಷಿ ಹಣೆಗೆ ವಿಭೂತಿ ಇಟ್ಟುಕೊಂಡು ಕೈಯಲ್ಲಿ ಜಿಂಕೆಯ ಚರ್ಮವನ್ನು ಹಿಡಿದು, ಸೋರೆಕಾಯಿ ಕಮಂಡಲ ಹಿಡಿದು ಅಥವಾ ಏಕತಾರಿ ಹಿಡಿದು ರಾಮದಾಸ ಕೀರ್ತನೆಗಳನ್ನ ಅಥವಾ ಯಾದಗಿರಿ ನರಸಿಂಹಸ್ವಾಮಿ ಕೀರ್ತನೆಗಳನ್ನು ಹಾಡುತ್ತಾ ಪ್ರದರ್ಶನ ನೀಡುತ್ತಾರೆ.

**ತುಪಾಕಿ ರಾಮಣ್ಣನ ವೇಷ:** ಈ ವೇಷವು ಏಕವ್ಯಕ್ತಿಯ ಪ್ರದರ್ಶಿಸುವ ಕಲೆಯಾಗಿದೆ. ಖಾಕಿ ಬಟ್ಟೆಯನ್ನು ಹಾಕಿ ತಲೆಯ ಮೇಲೊಂದು ಬ್ರಿಟಿಷ್‌ರ ಟೋಪಿ ಹಾಕಿಕೊಂಡು, ಭುಜದ ಮೇಲೆ ಕಟ್ಟಿಗೆಯ ತುಪಾಕಿ ಹಿಡಿದು, ಅರ್ಧಪ್ಯಾಂಟು ಮೇಲಕ್ಕೆ ಏರಿಸಿಕೊಂಡು ತಾನು ಯುದ್ಧದಲ್ಲಿ ವೀರಯೋಧನಾಗಿ ಬಂದಿದ್ದೇನೆ. ನನಗೆ ದೊಡ್ಡ ಬಂಗ್ಲೆ ಇದೆ. ಬಂಗ್ಲೆಯ ಹತ್ತಿರ ಊರ ಜನರಿಗೆ ಊಟ ಹಾಕಿಸುವೆ. ನನ್ನಲ್ಲಿರುವ ಬಂಗಾರವನ್ನು ನಾಯಿ ಮುಟ್ಟಿದ್ದಕ್ಕೆ ಅದನ್ನು ಬಾವಿಗೆ ಬಿಸಾಡಿದೆ. ನನಗೆ ಬಹಳ ಜಮೀನಿದೆ. ನಿಮಗೆಲ್ಲರಿಗೂ ಸ್ವಲ್ಪ ಹಂಚುತ್ತೇನೆ. ನಮ್ಮ ಅತ್ತೆ ಮದುವೆ ಇದೆ. ಅದಕ್ಕೆ ಮಂತ್ರಮಹಾಶಯರು ಬರುವರು. ಅದಕ್ಕೆ ನೀವೂ ಬನ್ನಿ. ನಿಮಗೆಲ್ಲರಿಗೂ ಮನೆ ಕಟ್ಟಿಸುವೆ. ಅಕ್ಕಿ ದಾನ ಮಾಡುವೆ ಎಂದು ಹಾಸ್ಯಮಯವಾಗಿ ಜನರನ್ನು ನಗಿಸುತ್ತಾ ಪ್ರದರ್ಶನ ನೀಡುವರು. ಇಲ್ಲಿ ಬಳಸಲ್ಪಡುವ ಜಲ್ದಿ, ಜಪ್ತಿ, ಸರ್ಕಾರ, ಹುಕುಮ್, ಲಡಾಯಿ, ಉಲ್ಟಾಪಲ್ಟಾ ಮುಂತಾದ ಶಬ್ದಗಳು ಆಂಗ್ಲ ಮತ್ತು ನಿಜಾಮ್ ಆಡಳಿತದಲ್ಲಿ ಬಳಸುತ್ತಿದ ಭಾಷೆಗಳಿಂದ ಬಂದಿರುವುದು ಕಾಣಬಹುದು.

**ಬೊಡಮಜ್ಜೆ ವೇಷ:** ಈ ವೇಷಕ್ಕೆ ಮುಖಕ್ಕೆ ಕೆಂಪು ಮತ್ತು ಬಿಳಿ ಬಣ್ಣಗಳನ್ನು ಸಮಪ್ರಮಾಣಕ್ಕೆ ಬೆರೆಸಿಕೊಂಡು ಮುಖಕ್ಕೆ ಬಳಿದುಕೊಳ್ಳುವವರು. ಕಣ್ಣುಬ್ಬುಗಳಿಗೆ ಕಾಡಿಗೆ ತೀಡಿ ಹಣೆಯ ಮೇಲೊಂದು ಕಪ್ಪು ಬಣ್ಣದ ಉದ್ದನೆಯ ನಾಮ ಹಚ್ಚಿ ಕೆಂಪು ಬಣ್ಣದ ಸೀರೆಯಿಂದ ಕಚ್ಚೆ ಹಾಕಿ ಉದ್ದವಾದ ಸೆರಗಿನಿಂದ ತಲೆಯ ಕೂದಲು ಕಾಣದಂತೆ ಮುಚ್ಚಿ ಅದನ್ನು ಎರಡು ಕಿವಿಗಳ ಮೇಲಿನಿಂದ ಹಿಂದಕ್ಕೆ ತೆಗೆದುಕೊಂಡು ಭುಜದ ಮುಂಭಾಗಕ್ಕೆ ಇಳಿಬಿಟ್ಟಿರುತ್ತಾರೆ. ಕೈಯಲ್ಲಿ ಒಂದು ಚೆಂಬು ಇಟ್ಟುಕೊಂಡು ಹಾಸ್ಯಮಯವಾಗಿ ಪ್ರದರ್ಶನ ನೀಡುತ್ತಾರೆ.

**ಅರ್ಧನಾರೀಶ್ವರ ವೇಷ:** ಈ ವೇಷವನ್ನು ಒಬ್ಬನೇ ವ್ಯಕ್ತಿ ಶಿವ ಹಾಗೂ ಪಾರ್ವತಿಯ ಅರ್ಧದ ಭಾಗವನ್ನು ವೇಷ ಧರಿಸುತ್ತಾನೆ. ವೇಷ ಹಾಕುವವನ ದೇಹದ ಬಲಾರ್ಧ ಭಾಗದಲ್ಲಿ ನೀಲಿಬಣ್ಣದ ಶಿವನ ವೇಷ, ಉಳಿದ ಎಡಾರ್ಧ ಭಾಗದಲ್ಲಿ ಪಾರ್ವತಿಯ ವೇಷವನ್ನು ಧರಿಸುತ್ತಾರೆ. ತಲೆಗೂದಲನ್ನು ನೆತ್ತಿಯ ಮೇಲೆ ತುರುಬುಕಟ್ಟಿ ಅದರ ಬಲಭಾಗಕ್ಕೆ ಅರ್ಧ ಚಂದ್ರಾಕಾರದ ತಗಡನ್ನು ಸಿಕ್ಕಿಸಿಕೊಂಡು, ಎಡಭಾಗಕ್ಕೆ ಹೂವು ಮುಡಿದಿರುತ್ತಾನೆ. ಮೂಗಿನ ಕೆಳಗೆ ತುಟಿಯ ಬಲಭಾಗದ ಮೇಲೆ ಚೂಪಾದ ಕರಿಯ ಮೀಸೆ ಹಚ್ಚಿರುತ್ತಾರೆ. ತುಟಿಯ ಎಡಭಾಗದ ಮೇಲೆ ಏನೂ ಇರುವುದಿಲ್ಲ. ಮೂಗಿನ ಎಡಭಾಗದಲ್ಲಿ ಮೂಗುತಿ, ಕುತ್ತಿಗೆಯ ಬಲಭಾಗಕ್ಕೆ ಎಡೆಎತ್ತಿದ ಬಟ್ಟೆಯಿಂದ ತಯಾರಿಸಿದ ಹಾವು ಹಾಕಿಕೊಂಡಿರುತ್ತಾನೆ. ಬಲ ಮುಂಗೈಗೆ ವಿಭೂತಿ ಪಟ್ಟಿ, ಎಡ ಮುಂಗೈಗೆ ಬಳೆ, ಸೊಂಟದ ಬಲಭಾಗಕ್ಕೆ ಹುಲಿಚರ್ಮದ ಬಟ್ಟೆ, ಎಡಭಾಗಕ್ಕೆ ಸೀರೆಯ ಕಚ್ಚೆಹಾಕಿರುತ್ತಾರೆ. ತಲೆ ತುರುಬಿನಿಂದ ಬೆನ್ನಿನ ಮೇಲೆ ಬೀಳುವಂತೆ ಒಂದು ಬಣ್ಣದ ಬಟ್ಟೆ ಇಳಿಬಿಟ್ಟಿರುತ್ತಾರೆ. ಈಶ್ವರನ ಪಾತ್ರ ಮಾಡುವಾಗ ಬಟ್ಟೆಯಿಂದ ದೇಹದ ಎಡಭಾಗವನ್ನು ಮುಚ್ಚುತ್ತಾನೆ, ಪಾರ್ವತಿ ವೇಷ ಮಾಡುವಾಗ ಈಶ್ವರನ ವೇಷವನ್ನು ಮುಚ್ಚಿಕೊಳ್ಳುತ್ತಾರೆ ಹೀಗೆ ವೇಷವನ್ನು ಧರಿಸಿ ಪ್ರದರ್ಶಿಸುತ್ತಾರೆ.

**ಬಾಲಸಂತು ವೇಷ:** ಈ ವೇಷವನ್ನು ಪ್ರದರ್ಶಿಸುವವರು ತಲೆಗೆ ಕಾವಿ ಬಟ್ಟೆಯ ರುಮಾಲನ್ನು ಸುತ್ತಿ ಕಾವಿ ಬಟ್ಟೆಯ ದೋತರ, ಅಂಗಿ, ಬಣ್ಣದ ಬಣ್ಣ ಬಟ್ಟೆಗಳ ವಸ್ತ್ರವನ್ನು ಹಾಕಿಕೊಂಡು ಹೆಗಲಮೇಲೆ ಬಿದಿರಿನ ದಬ್ಬೆಗೆ ಎರಡು ಬದಿಗಳಲ್ಲಿ ಜೋಳಿಗೆಗಳನ್ನು ಹಾಕಿಕೊಂಡು ಕೈಯಲ್ಲಿ ಘಂಟೆ ಮತ್ತು ಶಂಖ ಹಿಡಿದುಕೊಂಡು, ಹಣೆಗೆ ವಿಭೂತಿ ಕುಂಕುಮ ಧರಿಸಿ ಮುಂಜಾನೆ ಐದು ಗಂಟೆಯ ಸಮಯ ಮನೆಮನೆಗೆ ಹೋಗಿ ಘಂಟೆಯನ್ನು ಬಾರಿಸುತ್ತಾ ಶಂಖವನ್ನು ಊದುತ್ತಾ ಸುತ್ತಮುತ್ತಲ್ಲಿರುವ ಗ್ರಾಮ ದೇವತೆಗಳನ್ನು ನೆನೆಯುತ್ತಾ ಚಿಕ್ಕಮಕ್ಕಳಿಗೆ "ಸಂತೋಷಂಗ ಉಂಡಾಲಿ" ಬಾಲಕರು ಬಹಳ ಸಂತೋಷವಾಗಿ ಇರಬೇಕೆಂದು ಹರಕೆ ಮಾಡಿ ಧಾರ್ಮಿಕ ಭಿಕ್ಷೆಯನ್ನು ಸ್ವೀಕರಿಸುತ್ತಾರೆ.

**ಕೊಂಡಮಾಮನ ವೇಷ:** ಕೊಂಡಮಾಮನ ವೇಷವನ್ನು ಕುರ್ರಮಾಮ ವೇಷ, ರಾಮಕೊಂಡಾಡಿಗಳ ವೇಷವೆಂತಲೂ ಕರೆಯುತ್ತಾರೆ. ತಲೆಗೆ ಕೋಳಿ ಪುಚ್ಚ, ಹಣೆಗೆ ನಾಮ, ಕೈಯಲ್ಲಿ ಏಕನಾದದ ತಂತಿಯನ್ನು ಮೀಟುತ್ತಾ ಶ್ರೀರಾಮನಾಮದಿಂದ ಹಾಡುತ್ತಾ ಭವಿಷ್ಯವನ್ನು ಹೇಳುತ್ತಾ ಧಾನ ಧರ್ಮವನ್ನು ಸ್ವೀಕರಿಸುತ್ತಾ ಪ್ರದರ್ಶನ ಮಾಡುತ್ತಾನೆ.

**ವೈರಾಗಿ ವೇಷ:** ಈ ವೇಷಕ್ಕೆ ಕಾವಿ ಬಟ್ಟೆ, ಕಾವಿ ಪೇಟಾ ಹಾಗೂ ಕೊರಳಲ್ಲಿ ರುದ್ರಾಕ್ಷಿಮಾಲೆ ಹಣೆಗೆ ವಿಭೂತಿ ಧರಿಸಿ ಕೈಯಲ್ಲಿ ಶಂಖು ಘಂಟೆ ಹಿಡಿದುಕೊಂಡು ಜೋಳಿಗೆ ಹಾಕಿಕೊಂಡು ಶಿವ, ವೀರ ಬ್ರಹ್ಮೇಂದ್ರ ಮತ್ತು ಯೋಗಿ ವೇಮನ್ನರ ತತ್ವ ಪದಗಳನ್ನು ಹಾಡುತ್ತಾ ಪ್ರದರ್ಶನ ಮಾಡುತ್ತಾರೆ. ಹೀಗೆ ಇತ್ಯಾದಿ ವೇಷಗಳನ್ನು ಪ್ರದರ್ಶನ ನೀಡಿ ದಾನಧರ್ಮಸ್ವೀಕರಿಸಿಕೊಂಡು ಜೀವಿಸುತ್ತಿದ್ದರು.

**ಬುಡ್ಗ ಜಂಗಮರ ಕಲಾ ಸಾಹಿತ್ಯ**

**ಬುಡ್ಗ ಜಂಗಮರ ರಾಮಾಯಣ:** ತ್ರೇತಾಯುಗದಲ್ಲಿ ದಶರಥ ಮಹಾರಾಜನು ತನ್ನ ಹೆಂಡತಿಗೆ ಕೊಟ್ಟ ಮಾತಿನ ಪ್ರಕಾರವಾಗಿ ಶ್ರೀರಾಮನಿಗೆ ೧೪ ವರ್ಷ ವನವಾಸಕ್ಕೆ ಹೋಗಬೇಕೆಂದು ಬಹಳ ದುಂಖದಿಂದ ಆಜ್ಞೆ ಮಾಡುತ್ತಾನೆ. ತಂದೆಯ ಮಾತಿನ ಪ್ರಕಾರವಾಗಿ ಶ್ರೀರಾಮನು ಕಾಡಿಗೆ ಹೋಗುತ್ತಾನೆ. ಕಾಡಿಗೆ ಹೋಗುವ ಸಂದರ್ಭದಲ್ಲಿ ಅವನ ಹೆಂಡತಿಯಾದ ಸೀತಾ ಮತ್ತು ತಮ್ಮನಾದ ಲಕ್ಮಣನು ಕೂಡ ರಾಮನ ಜೊತೆಯಲ್ಲಿ ಕಾಡಿಗೆ ಹೋಗುತ್ತಾರೆ. ಲಕ್ಮಣನು ಕಾಡಿನಲ್ಲಿ ಹಣ್ಣು ಹಂಪಲುಗಳನ್ನು ಹರಿಯುವ ಸಂದರ್ಭದಲ್ಲಿ ಚಂದ್ರಾಯುಧವು ಗುಡಿಗು ಮಿಂಚಿನಂತೆ ಬಂದು ಕೈಗೆ ಸಿಗುತ್ತದೆ. ಅದಕ್ಕೆ ಹದನವು ಉಂಟೋ ಇಲ್ಲವೋ ಎಂದು ಪಕ್ಕದ ಬಿದಿರು ಪೊದರೆಯನ್ನು ಸಂಹರಿಸುತ್ತಾನೆ. ಆ ಬಿದಿರು ಪೊದರೆಯಲ್ಲಿ ತಪಸ್ಸು ಗೈಯುತ್ತಿದ್ದ ಶೂರ್ಪನಖಿಯ ಮಗನಾದ ಜಂಭೂಕುಮಾರನು ಶಿವಾ ಶಿವಾ ಎಂದು ಮೃತಪಡುತ್ತಾನೆ.

ಮಗನನ್ನು ಕೊಂದ ಸುದ್ದಿಯನ್ನು ತಿಳಿದ ಶೂರ್ಪನಖಿಯು ಜೋರಾಗಿ ದುಂಖಿಸುತ್ತಾಳೆ. ಆವೇಶದಿಂದ ರಾಮಲಕ್ಮಣರನ್ನು ಕೊಲ್ಲಲು ಹೋಗುತ್ತಾಳೆ. ಇದನ್ನು ಕಂಡ ಮುನೇಶ್ವರನು ಬೇಡ ಬೇಡ ತಾಯಿ ನೀನು ಈ ರೂಪದಲ್ಲಿ ಹೋದರೆ ಅವರು ನಿನ್ನನ್ನು ಒಂದೇ ಬಾಣದಿಂದ ನಿನ್ನನು ಕೊಲ್ಲುತ್ತಾರೆ. ಈ ರೂಪವನ್ನು ಬಿಟ್ಟು ಮೋಹಿನಿ ರೂಪ ತಾಳಿ ಅವರನ್ನು ಮದುವೆಯಾಗು ನಿನಗೆ ಮುತ್ತಿನಂಥ ಮಕ್ಕಳನ್ನು ಪಡಿಯುತ್ತೀಯಾ ಎಂದು ಮುನೇಶ್ವರನು ಸಲಹೆ ನೀಡುತ್ತಾನೆ.

ಮುನೇಶ್ವರನ ಸಲಹೆಯಂತೆ ಮಾಯಾ ಶೂರ್ಪನಖಿಯು, ಮೋಹಿನಿ ರೂಪ ತಾಳಿ ಕುಣಿಯುತ್ತಾ ನಲಿಯುತ್ತಾ ರಾಮಲಕ್ಮಣರ ಬಳಿ ಹೋಗಿ, ನನ್ನನ್ನು ಮದುವೆಯಾಗು ಎಂದು ವಿನಂತಿಸಿಕೊಳ್ಳುತ್ತಾಳೆ. ಅದಕ್ಕೆ ರಾಮಲಕ್ಷ್ಮಣರು ನಿರಾಕರಿಸುತ್ತಾರೆ. ಇವಳ ಹಠವನ್ನು ತಾಳದೇ ಕೊನೆಗೆ ಲಕ್ಮಣನು ಅವಳ ಕಿವಿಮೂಗುಗಳನ್ನು ಕೊಯ್ದು ಲಂಕಾಪುರ ಪಟ್ಟಣಕ್ಕೆ ಕಳಿಸುತ್ತಾನೆ. ತಂಗಿಯ ಆಕಾರ ವಿಕಾರವನ್ನು ಕಂಡ ಅಣ್ಣತಮ್ಮಂದಿಯರಾದ ಕರದೂಷಣರು, ಕಿವಿಮೂಗುಗಳನ್ನು ಕೊಯ್ದ ಆ ರಾಮಲಕ್ಮಣರನ್ನು ಕೊಲ್ಲಲ್ಲು ಯುದ್ಧಕ್ಕೆ ಹೋಗುತ್ತಾರೆ. ಯುದ್ಧದಲ್ಲಿ ಕರದೂಷಣರಿಬ್ಬರು ಸಾಯುತ್ತಾರೆ. ನಂತರ ಶ್ರೀ ರಾಮನ ಪರಮ ಭಕ್ತ ಆಂಜನೇಯನು ರಾಮನ ಗುಣಗಾನವನ್ನು ಮಾಡುತ್ತಾ ಅವರನ್ನು ಅಯ್ಯೋಧೆಗೆ ಕರೆದುಕೊಂಡು ಹೋಗುತ್ತಾನೆ. ಶ್ರೀರಾಮನಿಗೆ ರಾಜ ಪಟ್ಟಾಭಿಷೇಕವಾಗುತ್ತದೆ. ಇದು ಅಲೆಮಾರಿ ಬುಡ್ಗ ಜಂಗಮ್ ಸಮುದಾಯದ ಕರ್ನಾಟಕ ಜಾನಪದ ಅಕಾಡೆಮಿ ಪ್ರಶಸ್ತಿ ಪುರಸ್ಕೃತರಾದ ದರೋಜಿ ಅಶ್ವರಾಮಣ್ಣವರು ಹಗಲುವೇಷ ಕಲಾಪ್ರಕಾರದಲ್ಲಿ ಹೆಣೆದಿರುವ ಕಥೆಯಾಗಿದೆ. ಶಿಷ್ಟ ಸಮಾಜವು ಈ ರಾಮಾಯಣವನ್ನು ವಿಭಿನ್ನ ರೀತಿಯಲ್ಲಿ ಕಟ್ಟಿಕೊಟ್ಟಿದ್ದಾರೆ.

**ಜಾನಪದ ಸಂಗೀತ ಗಾಯನ:** ಗುಣವಂತಿಯಾಗಿ ಬಾಳಿ ಸತ್ಕೀರ್ತಿ ಪಡೆಯಿರಮ್ಮ, ತಂಗಿ ಹೋಗಿ ಬಾರಮ್ಮ ತವರಿನ ಹೆಸರ ತಾರಮ್ಮ ಗಂಡನ ಮನೆಯ ಸೌಭಾಗ್ಯದ ಜ್ಯೋತಿಯಾಗಿ ಬೆಳಗಮ್ಮ ಎನ್ನುವ ಅನೇಕ ಜಾನಪದ ಗೀತೆಗಳನ್ನು ಹಾಡುತ್ತಾರೆ. ಹೆಣ್ಣುಮಕ್ಕಳು ಗಂಡನ ಮನೆಯಲ್ಲಿ ಹೇಗೆ ಬದುಕಿ ಬಾಳಬೇಕು, ತವರ ಮನೆಗೆ ಕೀರ್ತಿತರುವ ಬದುಕಿನ ಮೌಲ್ಯಗಳನ್ನು ತಿಳಿಸುವ ಅದ್ಭುತ ಕಲಾವಿದರಿದ್ದಾರೆ.

**ಕನ್ನಡ ನಾಡು ನುಡಿಗೆ ಸಂಬಂಧಿಸಿದ ಹಾಡಿನ ತುಣುಕು**

ನವೋದಯವಾಯಿತು ಈ ಚಲುವ ಕರ್ನಾಟಕ...
ಕವಿಕಂಡ ಕರ್ನಾಟಕ...॥
ಬಹುದಿನದಿಂದಲೂ ಹರಸುತ್ತಾ ಬಂದರೂ ಕನ್ನಡದ ಜನರು..
ಅನೇಕ ಜನರು ತಪಗೈಸಿದರು.।
ಕರ್ನಾಟಕ ಮಾತೆ ಜೈ ಕರ್ನಾಟಕ ಮಾತೆ..॥ಪ॥

**ರಂಗ ಗೀತೆ**

ಸುಗುಣಾಕರ ಬಾ ಸುಂದರ
ಸುಗುಣಾಕರ ಬಾ ಸುಂದರ..॥
ಭಾವ ಸಾಗರ ಚೆಂದಿರ ಸುಂದರ..।
ಸುಗುಣಾಕರ ಬಾ ಸುಂದರಾ
ಹಾವ ಭಾವಗಳ ನರ್ತನ ಸಾಗಿಸಿ
ಕರಗಳ ಜೋಡಿಸಿ ಬೆರಳಲೇ ನುಡಿಸೋ..॥
ನಾಟ್ಯ ನಾಟ್ಯದ ಕುಣಿಸೊ ರಮಿಸೋ
ಕಾಲು ಗೆಜ್ಜೆಗಳ ಘಲಘಲ ತೋರುತ್ತಾ..॥
ನಿಸಪಾ ದಪಪ ...।
ಸುಗುಣಾಕರ ಬಾ ಸುಂದರಾ..।
ಭಾವ ಸಾಗರ ಚೆಂದಿರ ಸುಂದರ ..॥

**ಪೌರಾಣಿಕ ಶ್ಲೋಕ**

ಶ್ರೀ ರಾಘವಂ ದಶರಥಾತ್ಮಜಂ ಅಪ್ರಮೇಯಂ
ಸೀತಾಪತಿಯಂ ರಘುಕುಲಾನ್ವಯ ರತ್ನದೀಪಂ
ಅಜಾನುಬಾಹುಂ ಅರವಿಂದ ದಳಾಯಿತಾಕ್ಷಂ ರಾಮಂ ನಿಶಾಚರಂ
ವಿನಾಶಕರಂ ನಮಾಮಿ ನಮಾಮೀ ನಮಾಮೀ

**ಕನಕ ದಾಸರ ಹಾಡು**

೧. ನಮ್ಮಮ್ಮ ಶಾರದೆ ಉಮಾ ಮಹೇಶ್ವರಿ ನಿಮ್ಮೊಳಗಿಹನ್ಯಾರಮ್ಮ ॥ ಪ ॥
ಕಮ್ಮಗೋಲನ ವೈರಿಸುತನಾದ ಸೊಂಡಿಲ
ಹೆಮ್ಮೆಯ ಗಣನಾಥನೆ ಅಮ್ಮಯ್ಯ ॥ ಪ ॥
ಮೋರೆ ಕಪ್ಪಿನ ಭಾವ ಮೊರದಗಲ ಕಿವಿಯುಳ್ಳ
ಕೋರೆ ದಾಡೆಯವನ್ಯಾರಮ್ಮ
ಮೂರು ಕಣ್ಣಿನ ಸುತ ಮುರಿದಿಟ್ಟ ಚಂದ್ರನ
ಧೀರತಗಣನಾಥನೆ ಅಮ್ಮಯ್ಯ ॥ ೧ ॥

೨. ಕುಲ ಕುಲ ಕುಲವೆಂದು
ಕುಲ ಕುಲ ಕುಲವೆಂದು ಹೊಡೆದಾಡದಿರಿ
ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ?

೩. ದಿಂಬದಲ್ಲಿರುವ ಜೀವ ಕಂಬ ಸೂತ್ರ ಗೊಂಬೆಯಂತೆ,
ಡಿಂಬದಲ್ಲಿರುವ ಜೀವ ಕಂಬ ಸೂತ್ರ ಗೊಂಬೆಯಂತೆ
ಎಂದಿಗಾದರೊಂದು ದಿನ ಸಾವು ತಪ್ಪದ್ದೊ
ಎಂದಿಗಾದರೊಂದು ದಿನ ಸಾವು ತಪ್ಪದ್ದೊ
ಹುಟ್ಟುತ್ತೇನೆ ತರಲಿಲ್ಲ, ಸಾಯುತೇನು ಒಯ್ಯಲಿಲ್ಲ
ಸುಟ್ಟು ಸುಟ್ಟು ಸುಣ್ಣದಗಳು ಆಯಿತೀ ದೇಹ.

ಹೊಟ್ಟೆ ಬಲು ಕೆಟ್ಟದೆಂದು ಎಷ್ಟು ಕಷ್ಟ ಮಾಡಿದರು

ಬಿಟ್ಟು ಹೋಗುವಾಗ ಗೇಣು ಬಟ್ಟೆ ಕಾಣರೋ

**ಬಸವಣ್ಣನವರ ವಚನ**

ತನುವ ಬೇಡಿದಡೀವೆ, ಮನವ ಬೇಡಿದಡೀವೆ,
ಧನವ ಬೇಡಿದಡೀವೆ, ನಿಮ್ಮ ಶರಣಂಗೆ.
ಎನಗೆ ಬೇಕೆಂಬ ಭಾವ ಮನದಲ್ಲಿ ಹೊಳದಡೆ
ಘನ ಮಹಿಮ, ನಿಮ್ಮ ಪಾದದಾಣೆ.
ಮನ ವಚನ ಕಾಯದಲ್ಲಿ ನೀವಲ್ಲದೆ
ಮತ್ತೊಂದನರಿದೂಡೆ ಕೂಡಲ ಸಂಗಮ ದೇವ
ಭವಘೋರದಲ್ಲಿಕ್ಕಯ್ಯ

ಹೀಗೆ ಕನ್ನಡ ನಾಡು ನುಡಿಗೆ ಸಂಬಂಧಿಸಿದ ಹಾಡುಗಳು, ಸುಗಮ ಸಂಗೀತ, ವಚನ ಸಂಗೀತ, ದಾಸರ ಕೀರ್ತನೆಗಳು, ಪೌರಾಣಿಕ ಶ್ಲೋಕಗಳು, ಭಜನೆ ಪದಗಳು, ಚಲನಚಿತ್ರ ಹಾಡುಗಳು, ರಂಗ

ಗೀತೆಗಳನ್ನು ಹಾಡುವ ಅದ್ಭುತ ಕಲಾವಿದರಿದ್ದಾರೆ. ಮತ್ತು ತಬಲಾ ವಾದನ, ಹಾರ್ಮೋನಿಯಂ ನುಡಿಸುವಿಕೆ, ತಮಟೆವಾದನ ಮಾಡುವ ಅದ್ಭುತವಾಗಿ ಸಂಗೀತವಾದ್ಯಗಳನ್ನು ನುಡಿಸುವ ಕಲಾವಿದರಿದ್ದಾರೆ.

**ಹಗಲುವೇಷ ಕಲೆಯಲ್ಲಿ ಮಹಿಳೆಯರಿಗೆ ಪ್ರವೇಶ ನಿಷೇಧ:** ಬುಡ್ಗ ಜಂಗಮರಲ್ಲಿ ಹಗಲುವೇಷ ಕಲೆಯಲ್ಲಿ ಹೆಣ್ಣು ಮಕ್ಕಳು ಪಾತ್ರವನ್ನು ನಿರ್ವಹಿಸುವುದು ಕಂಡು ಬರುವುದಿಲ್ಲ. ಎಲ್ಲಾ ಪಾತ್ರಗಳನ್ನು ಗಂಡುಮಕ್ಕಳೇ ಅಭಿನಯಿಸುತ್ತಾರೆ. ಬುಡ್ಗ ಜಂಗಮರು ಹೆಣ್ಣು ಪಾತ್ರಗಳನ್ನು ಗಂಡಸರೇ ನಿರ್ವಹಿಸಲು ಪ್ರಮುಖವಾಗಿ ಮೂರು ಕಾರಣಗಳನ್ನು ನೋಡಬಹುದಾಗಿದೆ. ಮೊದಲನೆಯದು ಆರಂಭದ ನೃತ್ಯಪ್ರದರ್ಶನದಲ್ಲಿ ಧಾರ್ಮಿಕ ಮತ್ತು ಲೌಕಿಕ ಎಂಬುದಾಗಿ ಎರಡು ವಿಧಗಳಿದ್ದು, ಧಾರ್ಮಿಕ ನೃತ್ಯ ದೇವದಾಸಿಯರಿಂದ ಅನುಷ್ಠಾನದಲಿದ್ದು, ದೇವಾಲಯಗಳಿಗೆ ಮಾತ್ರ ಪರಿಮಿತವಾಗಿತ್ತು. ಲೌಕಿಕ ನೃತ್ಯಗಳು ವೃತ್ತಿ ನರ್ತಕಿಯರಿಂದ ನಿರ್ವಹಿಸಲ್ಪಡುತ್ತಿದ್ದುವು. ಈ ವೃತ್ತಿ ನರ್ತಿಕಿಯರನ್ನು ಹಾಗೂ ದೇವದಾಸಿಗಳನ್ನು ರಾಜ ಮಹರಾಜರು ಪೋಷಿಸುತ್ತಿದ್ದರು. ಅವರನ್ನು ಬೋಗದ ವಸ್ತುಗಳನ್ನಾಗಿ ಕಾಣುತ್ತಿದ್ದರು ಎಂಬ ಕಾರಣಕ್ಕಾಗಿ ಬುಡ್ಗ ಜಂಗಮರು ಹಗಲುವೇಷ ಕಲೆಯಲ್ಲಿ ಹೆಣ್ಣು ಪಾತ್ರ ನಿರ್ವಹಿಸುವುದನ್ನು ನಿಷೇಧಿಸಿದೆ ಎನ್ನಬಹುದು.

ಎರಡನೆಯದು ಬ್ರಿಟಿಷ್ ದಬ್ಬಾಳಿಕೆ, ನಿಜಾಂ ದುರಾಡಳಿತ, ಮತ್ತೊಂದೆಡೆ ಅಧಿಕಾರಶಾಹಿ ಮತ್ತು ಮೇಲ್ವರ್ಗದ ಜನರ ಶೋಷಣೆಗಳಿಂದ, ಅತ್ಯಾಚಾರ, ಅನಚಾರಗಳು ನಡೆಯುತ್ತಿದ್ದವು. ಅಂತಹ ಸಂದರ್ಭದಲ್ಲಿ ಹೆಣ್ಣು ಬಣ್ಣ ಹಚ್ಚಿಕೊಂಡು ಬೀದಿಯಲ್ಲಿ ಪ್ರದರ್ಶನ ಮಾಡಿದಾಗ ಇವರನ್ನು ಬೋಗದ ವಸ್ತುಗಳಂತೆ ನೋಡುತ್ತಿದ್ದರಿಂದ ಬುಡ್ಗ ಜಂಗಮರಲ್ಲಿ ಹಗಲುವೇಷ ಕಲಾಪ್ರದರ್ಶನದಲ್ಲಿ ಹೆಣ್ಣು ಮಕ್ಕಳು ಪಾತ್ರ ಧರಿಸಲು ನಿಷೇಧ ಮಾಡಿದ್ದಾರೆ.

ಮೂರನೆಯದು ರಂಗದಲ್ಲಿ ಸ್ತ್ರೀಯಳನ್ನು ಕಾಣಿಸಿಕೊಳ್ಳುವುದು ಸಂಪ್ರದಾಯಸ್ಥರನ್ನು ಎದುರು ಹಾಕಿಕೊಂಡಂತೆ. ಒಂದಿಲ್ಲ ಒಂದು ರೀತಿಯ ಕಾಮ, ಪ್ರೇಮದ ಅಂಕುರಾಟಗಳು ಅನಿವಾರ್ಯ, ಬಾಲೆ ಯೌವ್ವನಾಸ್ಥಿತಿಯನ್ನು ನಂತರ ಮದುವೆಯಾಗಬೇಕಾದರೆ ಮೀನಮೇಷ ಮಾಡುವುದು ಕಂಡುಬರುತ್ತದೆ. ಒಂದುವೇಳೆ ಮದುವೆಯಾದ ಬಣ್ಣ ಹಚ್ಚಿದರೆ ಅವಳ ಪತಿ, ರಂಗದಲ್ಲಿ ಕುಣಿಯಲು ಒಪ್ಪುವುದಿಲ್ಲ ಹಾಗಾಗಿ ಹೆಣ್ಣುಮಕ್ಕಳನ್ನು ರಂಗದಲ್ಲಿ ನಟಿಸಲು ನಿಷೇಧ ಮಾಡಿಕೊಂಡಿದ್ದಾರೆ. ಹಾಗಾಗಿ ಎಲ್ಲಾ ಹೆಣ್ಣು ಪಾತ್ರಗಳನ್ನು ಗಂಡಸರೇ ನಿರ್ವಹಿಸುತ್ತಿರುವುದು ಕಂಡುಬರುತ್ತದೆ.

**ಬಣ್ಣಗಾರಿಕೆ ಹಾಗೂ ವೇಷಭೂಷಣ:** ಕಲಾವಿದರ ಬಣ್ಣಗಾರಿಕೆಗೆ ಸಂಬಂಧಿಸಿದಂತೆ ಬಣ್ಣಗಳನ್ನು ಖನಿಜ ಮತ್ತು ವನಸ್ಪತಿಗಳಿಂದ ಸಿದ್ಧಗೊಳಿಸುತ್ತಾರೆ. ಆಯಾ ಪಾತ್ರಕ್ಕೆ ತಕ್ಕಂತೆ ಅವರೇ ಸ್ವತಃ ಬಣ್ಣಗಾರಿಕೆಯನ್ನು ಮಾಡಿಕೊಳ್ಳುವರು. ವೇಷಭೂಷಣಕ್ಕೆ ಅಲಂಕಾರಿಕ ಸಾಧನಗಳು ಮತ್ತು ಹಗುರವಾದ ವಸ್ತುಗಳಿಂದ, ರಟದಟಿನ ತಗಡುಗಳಿಂದ ಹೊಳೆಯುವ ಬಣ್ಣದ ಕಾಗದಗಳಿಂದ ಹಚ್ಚಿಕೊಂಡು ವೇಷಭೂಷಣಗಳನ್ನು ಸಿದ್ದಮಾಡಿಕೊಳ್ಳುತ್ತಾರೆ. ಕಿರೀಟ ಖಡ್ಗ ಚಕ್ರ ಬಿಲ್ಲು ಬಾಣಗಳನ್ನು ತಮ್ಮ ಕಲಾಪ್ರತಿಭೆಯನ್ನು ಉಪಯೋಗಿಸಿ ತಯಾರಿಸುತ್ತಾರೆ.

**ಪ್ರದರ್ಶನದ ಸ್ವರೂಪ**: ರಂಗಭೂಮಿಯು ನಟರು ಮತ್ತು ಪ್ರೇಕ್ಷಕರ ನಡುವಿನ ನಡೆಯುವ ಒಂದು ಸಂವಹನ ಕ್ರಿಯೆಯಾಗಿದೆ. ಬುಡ್ಗ ಜಂಗಮರು ಪ್ರತಿಯೊಂದು ಮನೆಮನೆಗೆ ಹೋಗಿ, ಆ ಮನೆಯ ಒಡೆಯನಿಗೆ ನಮಸ್ಕರಿಸಿ ತಮ್ಮ ಕಲೆಯನ್ನು ಪ್ರದರ್ಶಿಸುತ್ತಾರೆ. ಬಡವ ಬಲ್ಲಿದ, ಮೇಳು ಕೀಳು ಎನ್ನದೇ ಜಾತಿಬೇಧವಿಲ್ಲದೆ ಪ್ರತಿಯೊಂದು ಮನೆಮನೆಗಳಲ್ಲಿ ಕಲೆಗಳನ್ನು ಪ್ರದರ್ಶಿಸುವ ಅನನ್ಯತೆಯನ್ನು ಹೊಂದಿದ್ದಾರೆ. ಇತಿಹಾಸದಲ್ಲಿ ರಾಜ ಮಹಾರಾಜರು ತಮ್ಮ ಸಾಮ್ರಾಜ್ಯ ವಿಸ್ತರಣೆಗಾಗಿ ರಾಜ್ಯಗಳನ್ನು, ಸಂಸ್ಥಾನಗಳನ್ನು ಹೇಗೆ ವಶಪಡಿಕೊಳ್ಳುತ್ತಿದ್ದರೋ ಹಾಗೆಯೇ ಬುಡ್ಗ ಜಂಗಮರು ಹಾಗೂ ಅಲೆಮಾರಿ ಸಮುದಾಯಗಳು ಒಂದೊಪ್ಪತ್ತಿನ ಊಟಕ್ಕಾಗಿ ವಿವಿಧ ಕಲೆಗಳನ್ನು ಆಶ್ರಯಿಸಿಕೊಂಡು ಕಲೆಯ ಪ್ರದರ್ಶನದ ಸ್ವರೂಪಗಳನ್ನು ಹಳ್ಳಿ ಗ್ರಾಮಗಳನ್ನು ಹಂಚಿಕೊಂಡಿರುತ್ತಾರೆ. ಮತ್ತು ಛಾಪಕಾಗದದಲ್ಲಿ ಕರಾರು ಮಾಡಿಕೊಂಡು ಊರಾಡಿ ಬದುಕುವಂತಹ ನಿದರ್ಶನಗಳನ್ನು ಈ ಅಲೆಮಾರಿಗಳಲ್ಲಿ ಇಂದಿಗೂ ನೋಡಬಹುದಾಗಿದೆ. *(ಛಾ: ೬.೪)* ಒಂದು ರಾಮಾಯಣದ ಸನ್ನಿವೇಶವನ್ನು ಹಂಡಿಜೋಗಿಗಳು ತನ್ನದೇ ವೇಷಭೂಷಣದೊಂದಿಗೆ ಕೇವಲ ಮೌಖಿಕವಾಗಿ ಪ್ರದರ್ಶನ ನೀಡಿದರೆ, ದಾಸರು ಆ ಸನ್ನಿವೇಶವನ್ನು ಪಾತ್ರಗಳ ಮೂಲಕ ಕೇವಲ ಊರಿನ ಮುಂದೆ ಗುಡಿಕಟ್ಟೆಗಳಲ್ಲಿ ಪ್ರದರ್ಶಿಸುತ್ತಾರೆ. ಅದೇ ದಕ್ಕಲಿಗ ಸಮುದಾಯದವರು ಚಿಂದುಯಕ್ಷಗಾನಂ ಎಂಬ ಕಲೆಯನ್ನು ಕೇವಲ ಮಾದಿಗರ ಓಣಿಯಲ್ಲಿ ಮಾತ್ರ ಪ್ರದರ್ಶನ ನೀಡುತ್ತಾರೆ. ಬುಡ್ಗ ಜಂಗಮರು ಹಗಲುವೇಷ ಕಲೆಯನ್ನು ಪ್ರತಿಯೊಂದು ಮನೆ ಮನೆಗೆ ಹೋಗಿ ಪ್ರದರ್ಶನ ನೀಡುತ್ತಾರೆ. ಒಟ್ಟಾರೆ ಬದುಕು ನೀಗಿಸಿಕೊಳ್ಳಲು ಅಲೆಮಾರಿಗಳು ಕಲೆಯನ್ನೇ ಆಶ್ರಯಿಸಿ, ಕಲೆಯನ್ನೇ ನಂಬಿ ಉಸಿರಾಗಿಸಿಕೊಂಡು ಜೀವನ ಮಾಡುತ್ತಿದ್ದರು. ಆದರೆ ಇಂದು ಈ ಕಲೆಗಳಿಗೆ ಸೂಕ್ತವಾದ ವೇದಿಕೆ ಹಾಗೂ ಸರಿಯಾದ ಪ್ರೋತ್ಸಾಹ ಇಲ್ಲದೇ ಬೀದಿ ಕಲಾವಿದರನ್ನಾಗಿ ಭಿಕ್ಷಾಟನೆಯನ್ನು ಅವಲಂಬಿಸಿ ಬದುಕಬೇಕಾದ ಸ್ಥಿತಿಯನ್ನುಂಟುಮಾಡಿದೆ.

ಜನ ಸಮುದಾಯಗಳ ಸಂಸ್ಕೃತಿಯನ್ನು ತನ್ನ ಕಲಾಪ್ರಕಾರಗಳ ಮೂಲಕ ಜನರಿಗೆ ತಲುಪಿಸುವುದು ಅಲೆಮಾರಿ ರಂಗಭೂಮಿಯ ಕಾಯಕವಾಗಿದೆ. ಅನಕ್ಷರಸ್ಥ ಜನರಿಗೆ ನಾಡಿನ ಜನತೆಯ ಪರಿಚಯ, ರಾಜರ ಇತಿಹಾಸ, ಸಂಸ್ಕೃತಿಗಳನ್ನು ಪರಿಚಯಿಸುವುದು ಅಲೆಮಾರಿ ಬುಡ್ಗ ಜಂಗಮರ ಕಲೆಯ ಮುಖ್ಯ ಉದ್ದೇಶವಾಗಿದೆ. ಬುಡ್ಗ ಜಂಗಮರ ಮಾತೃ ಭಾಷೆ ತೆಲುಗು, ಬುಡ್ಗ, ಮರುಗು ಭಾಷೆಯಾದರೂ ತನ್ನ ಎಲ್ಲಾ ನಾಟಕ, ಸಂಗೀತ ಕಲೆಗಳನ್ನು ತೆಲುಗಿನಿಂದ ಕನ್ನಡ ಭಾಷೆಗೆ ಸ್ವತಃ ತರ್ಜಿಮೆ ಮಾಡಿಕೊಂಡಿದ್ದಾರೆ ಇದು ಈ ಸಮುದಾಯಗಳ ಬಹುದೊಡ್ಡ ಕೊಡುಗೆ. ಇವರು ಬಹು ಭಾಷಿಕರು ಆಯಾ ಪ್ರದೇಶದ ಪ್ರಾದೇಶಿಕ ಭಾಷೆಗಳಲ್ಲಿಯೇ ತಮ್ಮ ಕಲಾ ಪ್ರದರ್ಶನ ನೀಡುವ ಸಾಮರ್ಥ್ಯವುಳ್ಳವರು. ಇವರು ನಿತ್ಯ ನಿರಂತರ ಕಲಾ ಸೇವೆಯನ್ನು ಮಾಡುತ್ತಾ, ಬಡವ ಶ್ರೀಮಂತ, ಮೇಲು ಕೀಳು ಎನ್ನದೇ ಪ್ರತಿಯೊಂದು ಸಮುದಾಯದ ಮನೆ ಮನೆಗೆ ಹೋಗಿ ತಮ್ಮ ತಮ್ಮ ಕಲಾಪ್ರದರ್ಶನದೊಂದಿಗೆ ಮತ್ತು ಮೌಖಿಕ ಸಾಹಿತ್ಯದೊಂದಿಗೆ ಜಾತಿ ಪರಿಕಲ್ಪನೆ, ಮಾನವೀಯ ಮೌಲ್ಯಗಳ ಪರಿಕಲ್ಪನೆಗಳು, ನೀತಿ ಸಂದೇಶಗಳನ್ನು ಅತಿ ಸೂಕ್ಷ್ಮವಾಗಿ, ಅಕ್ಷರ ಕಲಿತ ಮತ್ತು ಅಕ್ಷರ ಕಲಿಯದೇ ಇದ್ದಂತಹ ಗ್ರಾಮೀಣಪ್ರದೇಶದ ಪ್ರತಿಯೊಬ್ಬರಿಗೂ ಅರ್ಥವಾಗುವ ರೀತಿಯಲ್ಲಿ ತನ್ನ

ಕಾವ್ಯ, ಕಥನ, ನಾಟಕ, ಸಂಗೀತ, ಸಾಹಿತ್ಯಮೇಳಗಳೊಂದಿಗೆ ಜಾಗೃತಿಯನ್ನು ಮೂಡಿಸುತ್ತಿದ್ದಾರೆ. ಅಲೆಮಾರಿಗಳ ದರ್ಶನ ಈ ಸಮಾಜಕ್ಕೆ ಬಹುದೊಡ್ಡ ಕೊಡುಗೆಯನ್ನು ನೀಡುತ್ತಿವೆ.

ಸರ್ಕಾರ ಸಂಘ ಸಂಸ್ಥೆಗಳು ಬುಡ್ಗ ಜಂಗಮರ ಅಗಾಧವಾದ ಕಲೆ ಸಾಹಿತ್ಯ ಸಂಗೀತಕ್ಕೆ ಮನ್ನಣೆ ನೀಡಿ ಹಲವು ಪ್ರಶಸ್ತಿ ಪುರಸ್ಕಾರಗಳನ್ನು ಪಡೆದ ಕಲಾವಿದರಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ನಾಡೋಜ ಬುರ್ರಕಥಾ ದರೋಜಿ ಈರಮ್ಮ, ವೆಂಕಟಾಪುರದ ರುದ್ರಾಕ್ಷಲ ರಾಮಣ್ಣ, ಹಗಲುವೇಷದ ದರೋಜಿ ಅಶ್ವರಾಮಣ್ಣ, ಕೊಂಡಪಲ್ಲಿ ರಾಮಣ್ಣ, ಮಲ್ಲಿಕಾರ್ಜುನಪ್ಪ ಯಡವಲಿ, ಬುರ್ರಕಥೆ ಶಿವಮ್ಮ, ಮೋತಿ ರಾಮಣ್ಣ, ಕೊಪ್ಪಳ ಜಿಲ್ಲೆಯ ಮೀರಾಲಿ ಶಿವಲಿಂಗಪ್ಪ, ವಿಭೂತಿ ಗುಂಡಪ್ಪ, ಬುರ್ರಕಥೆ ಶಿವಮ್ಮ, ರಾಯಚೂರು ಜಿಲ್ಲೆಯ ಹಗಲುವೇಷದ ಮೋತಿ ಶಿವಲಿಂಗಪ್ಪ, ಮೋತಿ ಮಾರೇಪ್ಪ, ಯಾದಗಿರಿ ಜಿಲ್ಲೆಯ ಬುರ್ರಕಥಾ ಲಕ್ಷ್ಮೀಬಾಯಿ ರೇವಲ್, ಕಲಬುರಗಿ ಜಿಲ್ಲೆಯ ಬುರ್ರಕಥಾ ಶಂಕ್ರಮ್ಮ ಸಿರುವಾಟಿ, ಹನುಮಂತ ನ್ಯೂನ್ಯ ಹೀಗೆ ಅನೇಕ ಕಲಾವಿದರ ಸಾಧನೆಯನ್ನು ಗುರುತಿಸಿ ಸರ್ಕಾರ ಹಾಗೂ ವಿವಿಧ ಸಂಘ ಸಂಸ್ಥೆಗಳು ಪ್ರಶಸ್ತಿ ಪ್ರಶಂಸನೀಯ ಪತ್ರಗಳನ್ನು ನೀಡಿ ಗೌರವಿಸಿವೆ. ಹಂಪಿ ಕನ್ನಡ ವಿಶ್ವವಿದ್ಯಾಲಯವು ದರೋಜಿ ಈರಮ್ಮ ಅವರಿಗೆ ನಾಡೋಜ ಪದವಿಯನ್ನು ನೀಡಿ ಗೌರವಿಸಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಡಾ ಬಿ ಆರ್ ಅಂಬೇಡ್ಕರ್ ಪ್ರಶಸ್ತಿ, ಜಾನಪದಶ್ರೀ ಪ್ರಶಸ್ತಿ ಹೀಗೆ ಹಲವು ಪ್ರಶಸ್ತಿಗಳು ನೀಡಿವೆ.*(ಛಾ:೬.೫)* ಇಂತಹ ಅನೇಕ ದರೋಜಿ ಈರಮ್ಮನಂತಹ ಕಲಾವಿದರು ಬುಡ್ಗ ಜಂಗಮರಲ್ಲಿ ಸಾವಿರಾರು ಜನ ಇದ್ದಾರೆ. ಆದರೆ ಅವರನ್ನು ಬೆಳಕಿಗೆ ಗುರುತಿಸಲು ಸಾಧ್ಯವಾಗಿಲ್ಲ ಎಂದು ಹೇಳಬಹುದು. ಅಲೆಮಾರಿ ಬುಡ್ಗ ಜಂಗಮರು ರಂಗಭೂಮಿಯ ಮೂಲ ವಕ್ತಾರರಾಗಿದ್ದಾರೆ. ಸರ್ಕಾರದ ಯೋಜನೆಗಳು ಬುಡ್ಗ ಜಂಗಮರಂತಹ ಮೂಲ ಕಲಾವಿದರಿಗೆ ಸಿಗಬೇಕಾದ ಯೋಜನೆಗಳು ಇವರಿಗೆ ಸರಿಯಾದ ರೀತಿಯಲ್ಲಿ ಸಿಗುತ್ತಿಲ್ಲ. ಸರ್ಕಾರ ನಡೆಸುವ ಅನೇಕ ರಾಷ್ಟ್ರೀಯ ಅಂತರಾಷ್ಟ್ರೀಯ ಕಾರ್ಯಕ್ರಮಗಳಿಂದ ವಂಚನೆಗೊಳಗಾಗಿದ್ದಾರೆ.

ಕನ್ನಡ ಜನಪದ ರಂಗಭೂಮಿಗೆ ಪೂರಕವಾಗಿ ಬುಡ್ಗ ಜಂಗಮರು(ಹಗಲುವೇಷದವರು), ಬಹುರೂಪಿಗಳು, ಕೋಲೆಬಸವನಾಟದವರು, ಕೋತಿ ಮತ್ತು ಕರಡಿ ಕುಣಿಸುವವರು ಈ ಮೊದಲಾದ ಉಪಸಂಸ್ಕೃತಿ ಮತ್ತು ಜನರನ್ನು ನಿರ್ಲಕ್ಷಿಸುವಂತಿಲ್ಲ. ಕನ್ನಡ ಜನಪದ ರಂಗಭೂಮಿಗೆ ಇವರಿಂದಲೂ ಮಹತ್ತರ ಕೊಡುಗೆ ಇದೆ ಎಂದು ಡಾ ಕಾ ವೆಂ ಶ್ರೀನಿವಾಸಮೂರ್ತಿಯವರು ಹೇಳುತ್ತಾರೆ. ಹೀಗಾಗಿ ವಿವಿಧ ಕಲಾಪ್ರಕಾರಗಳಿಗೆ ಇರುವಂತೆ ಪ್ರತ್ಯೇಕ ಅಕಾಡೆಮಿ ಇರುವಂತೆ ಅಲೆಮಾರಿ ಹಗಲುವೇಷ ಮತ್ತು ಬುರ್ರಕಥಾ ಕಲೆಗೆ ಪ್ರತ್ಯೇಕವಾದ ಕಲಾ ಅಕಾಡೆಮಿ ಸ್ಥಾಪಿಸಿ ನಶಿಸುತ್ತಿರುವ ಕಲೆಗಳ ಪುನರುಜ್ಜೀವನಕ್ಕೆ ವಿಶೇಷ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸಬೇಕಾಗಿರುವುದು ಅಗತ್ಯತೆ ಇದೆ.

**ಆಧಾರಗಳು**

೧. ಬ್ರಾಕೆಟ್ ಜಿ ಆಸ್ಕರ್, ೧೯೯೧, ಹಿಸ್ಟರಿ ಆಫ್ ದಿ ಥಿಯೇಟರ್ ಆಲಿನ್ ಆಂಡ್ ಬೇಕನ್. ಪು. ೫೨

೨. ಮುರುಳಿ ಮನೋಹರ್ ಕೆ ಮತ್ತು ಜನಾರ್ಧನ ರಾವ್, ೧೯೮೭, ಆಂಧ್ರ ಪ್ರದೇಶದಲ್ಲಿ ಜನನಾಟ್ಯ ಮಂಡಲಿ ಚಳುವಳಿಯ ಅಧ್ಯಯನ, ಪು. ೫೫

೩. ಅದೇ, ಪು. ೬೬

೪. ಕೆ ವಿ ಆರ್, ೧೯೮೪, ಪ್ರಜಾನಾಟ್ಯ ಮಂಡಲಿ-ಜ್ಞಾಪಕಾಲು, ಪು. ೨೫

೫. ಜಯಪ್ರಭ, ೧೯೯೨, ನಾಲುಗೋ ಗೋಡ, ಪು. ೧೧೯-೧೨೦

೬. ಅದೇ, ಪು. ೧೨೧

೭. ನಾಗೇಶ್ ಬೆಟ್ಟಕೋಟೆ, ೨೦೦೨, ಬೀದಿ ರಂಗಭೂಮಿ, ಪು. ೮೭

೮. ಕಲಬುರ್ಗಿ ಎಂ ಎಂ, ೧೯೮೮, ಮಾರ್ಗ ಸಂಪುಟ ಎರಡು, ಪು. ೩೫೯

೯. Venkatesh Bayya, article: 'Burrakatah loses sheen shan patron age',The times India, 14 Jan ೨೦೧೩.

೧೦. ಮಾಣಿಕಪ್ಪ, ೨೦೧೨, ಕನ್ನಡ ತೆಲುಗು ಬುರ್ರಕತೆಗಳ ತೌಲನಿಕ ಅನುಸಂಧಾನ ಅಧ್ಯಯನ, ಪು. ೩೦೭

# ಅಧ್ಯಾಯ ಏಳು
# ಬುಡ್ಗ ಜಂಗಮ್ ಸಮುದಾಯದ ಆರ್ಥಿಕ ಜೀವನ

ಪೀಠಿಕೆ

ಪಾರಂಪರಿಕ ಕುಲಕಸುಬುಗಳು

ಕರಕುಶಲ ಕಲೆಗಳು

ಕೃಷಿ ಭೂ ಒಡೆತನ

ಆಧುನಿಕ ಕುಲಕಸುಬುಗಳು

ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವೃತ್ತಿಗಳ ಪ್ರಮಾಣ

# ಅಧ್ಯಾಯ ಏಳು

# ಬುಡ್ಗ ಜಂಗಮ್ ಸಮುದಾಯದ ಆರ್ಥಿಕ ಜೀವನ

**ಪೀಠಿಕೆ**

ಜನರ ಬೇಕುಬೇಡಿಕೆಗಳನ್ನು ಈಡೇರಿಸುವಲ್ಲಿ ಆರ್ಥಿಕತೆಯ ಮೂಲವು ಬಹುಮುಖ್ಯವಾಗುತ್ತದೆ. ಮಾನವನು ಪ್ರಾಚೀನ ಕಾಲದಿಂದಲೂ ಆಹಾರ ಸಂಗ್ರಹಣೆಗಾಗಿ ಒಂದುಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಅಲೆದಾಡುತ್ತಿದ್ದನು. ಇದು ಮನುಷ್ಯನಿಗೆ ಮಾತ್ರ ಸೀಮಿತವಾಗಿಲ್ಲ, ಪ್ರಾಣಿಪಕ್ಷಿಗಳು ಕೂಡ ತಮ್ಮ ಅನುಕೂಲವಾದ ವಾತಾವರಣವನ್ನು ಅರಸಿ ಆಹಾರ ಹುಡುಕಲು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಅಲೆಯುತ್ತಿದ್ದವು. ಬುಡ್ಗ ಜಂಗಮರು ಬೇಟೆಗಾರಿಕೆ, ಪಶುಪಾಲನೆ, ಚಾಪೆ ಹೆಣೆಯುವುದು, ಕೌದಿ ಹೊಲಿಯುವುದು, ಬುರ್ರಕಥಾ, ಗಂಗಿಗೌರಿ ಗಾಯನ, ಹಗಲುವೇಷ ಇತ್ಯಾದಿ ಕಲಾಪ್ರದರ್ಶನಗಳು ಅವರ ಆರ್ಥಿಕತೆಯ ಮೂಲ ಕಸುಬುಗಳಾಗಿದ್ದವು. ಇತ್ತೀಚಿನ ದಿನಗಳಲ್ಲಿ ಆಧುನಿಕ ಪ್ರಭಾವ ಮತ್ತು ಪರಿಣಾಮದಿಂದ ಸಣ್ಣ ಬೀದಿಯಲ್ಲಿ ಸಣ್ಣಮಟ್ಟ ವ್ಯಾಪರಗಳನ್ನು ಮಾಡಿಕೊಳ್ಳುತ್ತಾ ಆರ್ಥಿಕ ಜೀವನವನ್ನು ನಿರ್ವಹಿಸುತ್ತಿವೆ.

ಟಿವಿ, ಸಿನಿಮಾ, ಮಾಧ್ಯಮಗಳು ಇಲ್ಲದ ಕಾಲಘಟ್ಟದಲ್ಲಿ ಬುಡ್ಗ ಜಂಗಮರ ಕಲಾಪ್ರಕಾರಗಳೇ ಜನರಿಗೆ ಮಾಧ್ಯಮಗಳಾಗಿದ್ದವು. ಇಂದು ಆಧುನಿಕತೆ, ತಾಂತ್ರಿಕ ಜಗತ್ತಿನ ಪರಿಣಾಮದಿಂದ ಇವರ ಪಾರಂಪರಿಕ ಹಗಲುವೇಷ ಕಲೆ ಮತ್ತು ಬುರ್ರಕಥೆಗಳು ಈಗಿನ ಸಂದರ್ಭದಲ್ಲಿ ಮುಂದುವರೆಸುವುದು ತುಂಬಾ ಕಷ್ಟವಾಗಿದೆ. ಏಕೆಂದರೆ ಇದಕ್ಕೆ ಪರ್ಯಾಯ ಮಾರ್ಗಗಳಾದ ಟಿವಿ, ಸಿನಿಮಾ, ಮೊಬೈಲ್, ಇಂಟರ್‌ನೆಟ್‌ಗಳಿಂದ ಬಹಳಷ್ಟು ಪರ್ಯಾಯ ಮಾರ್ಗಗಳು ಬಂದಿರುವುದರಿಂದ ಬುಡ್ಗ ಜಂಗಮರ ಪಾರಂಪರಿಕ ಕಲೆಗಳಿಂದ ಬದುಕುವುದು ತುಂಬಾ ಕಷ್ಟವಾಗಿದೆ. ಬುಡ್ಗ ಜಂಗಮರು ಹೇಳುವಂತಹ ಎಲ್ಲ ಮಾಹಿತಿಗಳು ಯುಟ್ಯೂಬ್‌ನಲ್ಲಿ, ಅಂತರ್ಜಾಲದಲ್ಲಿ ಹೆಚ್ಚೆಚ್ಚವಾಗಿ ಮಾಹಿತಿಗಳು ಲಭ್ಯವಿರುವುದರಿಂದ ಇವರ ಪಾರಂಪರಿಕವಾದ ವೃತ್ತಿಗಳು ಅಳವಿನಂಚಿನಲ್ಲಿವೆ. ಹಳ್ಳಿಗಳಲ್ಲಿ ಬರಗಾಲ ಸಂಭವಿಸಿದ್ದಲ್ಲಿ, ದುಡಿಮೆಗೆ ತಕ್ಕಂತೆ ಪ್ರತಿಫಲ ಸಿಗದೇ ಇರುವ ಸಂದರ್ಭದಲ್ಲಿ ಬುಡ್ಗ ಜಂಗಮರು, ನಗರ ಪ್ರದೇಶಗಳಿಗೆ ವಲಸೆ ಹೋಗಿ ಇಬ್ಬರು ಮೂವರು ವೇಷಗಳನ್ನು ಕಟ್ಟಿಕೊಂಡು ಚಿಲ್ಲರೆ ಭಿಕ್ಷೆಯನ್ನು ಬೇಡುವುದು, ಕೆಲವರು ಆಧುನಿಕ ಕಸುಬುಗಳನ್ನು ಅವಲಂಭಿಸಿ ಸಣ್ಣಮಟ್ಟ ವ್ಯಾಪರವನ್ನು ಮಾಡುತ್ತಾ ತಮ್ಮ ಜೀವನವನ್ನು ನಿರ್ವಹಿಸುಕೊಳ್ಳುತ್ತಿದ್ದಾರೆ.

**ಬುಡ್ಗ ಜಂಗಮರ ಯಾಟ (ಬೇಟೆ)**: ಆದಿಮಾನವ ಆಹಾರಕ್ಕಾಗಿ ಪ್ರಕೃತಿಯಲ್ಲಿ ಸಿಗುವ ಗೆಡ್ಡೆ ಗೆಣಸುಗಳನ್ನು ನ್ನುತ್ತಾ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಹಸಿದ ಮಾಂಸವನ್ನು ಸೇವಿಸುತ್ತಿದ್ದನು. ಬೇಟೆಯಾಡಲು ಕಲ್ಲಿನ ಹಾಗೂ ಮರದ ಆಯುಧಗಳನ್ನು ಮತ್ತು ಕಬ್ಬಿಣದ ಆಯುಧಗಳನ್ನು ಬಳಸುತ್ತಿದ್ದನು. ನಂತರ ಸಾಕಿದ ನಾಯಿ, ಪಕ್ಷಿಗಳ ಮೂಲಕವು ಬೇಟೆಯಾಡುತ್ತಿದ್ದನು. ಅನಂತರದಲ್ಲಿ ತಂತಿ ಉರುಲು, ಬಲೆ, ಬ್ಯಾಟರಿ ಟಾರ್ಚ್ ಬಳಸಿ ಬೇಟೆಯಾಡುವುದನ್ನು ಕಾಣಬಹುದು.

ಬೇಟೆಗಾರಿಕೆಯು ನೈಪುಣ್ಯತೆಯಿಂದ ಕೂಡಿದ್ದು, ಜಾಣ್ಮೆ, ತಂತ್ರಗಳಿಂದ ಕೂಡಿರುವುದಾಗಿದೆ. ಬೇಟೆಗಾರನು ಬೇಟೆಯಾಡಲು ಪ್ರಾಣಿಗಳ ಚಲನವಲನ, ಆಹಾರ ಕ್ರಮ, ವಾಸಿಸುವ ಸ್ಥಳಗಳು, ಪೊಟರೆ, ಪೊದೆ ಮುಂತಾದವುಗಳನ್ನು ಗ್ರಹಿಸಿಕೊಂಡಿರಬೇಕು. ಸುಲಭವಾಗಿ ಸಿಲುಕಿಕೊಳ್ಳುವಂತೆ ತಂತ್ರವು ತಿಳಿದಿರಬೇಕು. ಒಂದುವೇಳೆ ಮರೆತು ಬೇಟೆಯಾಡಿದರೆ ಪ್ರಾಣಕ್ಕೆ ಅಪಾಯವಂತು ಕಟ್ಟಿಟ್ಟ ಬುತ್ತಿ. ಬೇಟೆಯಾಡಲು ಧೈರ್ಯ ಮತ್ತು ಸಾಹಸದ ಸಂಕೇತವೆಂದು ಹೇಳಬಹುದು. ಇದು ವ್ಯಕ್ತಿಯ ಸ್ಥಾನಮಾನವನ್ನು ನಿರ್ಧರಿಸುತ್ತಿತ್ತು. ಅದಕ್ಕಾಗಿ ಬುಡ್ಗ ಜಂಗಮರು ಪ್ರಾಚೀನ ಕಾಲದಿಂದಲೂ ಬೇಟೆಗಾರಿಕೆಯನ್ನು ಪಾರಂಪರಿಕ ಪ್ರವೃತ್ತಿಯನ್ನಾಗಿ ಮಾಡಿಕೊಂಡಿರುವುದು ಕಂಡುಬರುತ್ತದೆ. ಇವರು ಅಳಿಲು, ಉಡ, ಮೊಲ, ನರಿ, ಕಾಡುಬೆಕ್ಕು, ಮುಂಗಿಸಿ, ಮುಳ್ಳುಹಂದಿ, ಮೀನು, ಏಡಿ, ಆಮೆಗಳನ್ನು ಬೇಟೆಯಾಡುವುದನ್ನು ಕಾಣಬಹುದು *(ಛಾ:೭.೧)*.

**ತೋಡಿಸಿಗಾಡು ಯಾಟ (ಅಳಿಲು ಬೇಟೆ)**: ಬುಡ್ಗ ಜಂಗಮರು ಅಳಿಲು ಬೇಟೆಯನ್ನು ತೋಡಿಸಿಗಾಡು ಯಾಟ ಮತ್ತು **ಉಚ್ಚುಲು ಯಾಟ** ಎಂದು ಕರೆಯುತ್ತಾರೆ. ಅಳಿಲುಲನ್ನು ಬೇಟೆಯಾಡಲು ವಿಶೇಷವಾಗಿ ತಯಾರಿಸಿದ ಬಲೆಯಿಂದ ಹಿಡಿಯುವರು. ಬಲೆಯು ಐದಿನೈದು ಅಡಿ ಉದ್ದ ನಾಲ್ಕು ಅಡಿ ಅಗಲ ಹೊಂದಿರುತ್ತದೆ. ಮರದಲ್ಲಿರುವ ಅಳಿಲುಗಳನ್ನು ಗಮನಿಸಿ ಆ ಮರದ ಸುತ್ತಲು ಮತ್ತು ಅದು ತಪ್ಪಿಸಿಕೊಳ್ಳಲು ಅನುಕೂಲವಾಗುವಂತಹ ಪೊದರೆಗಳಲ್ಲಿ ಈ ಬಲೆಯನ್ನು ಹಾಕುವರು. ಬಲೆಯ ಎರಡು ಕೊನೆಗಳಿಗೆ ಒಂದೊಂದು ಹಗ್ಗಗಳನ್ನು ಕಟ್ಟಿರುತ್ತಾರೆ. ಬಲೆಗೆ ಅಭಿಮುಖವಾಗಿ ಮರೆಯಲ್ಲಿ ನಿಂತು ಅಳಿಲಿಗೆ ಕಲ್ಲಿನಿಂದ ಹೊಡೆದು, ಮರದಿಂದ ಕೆಳಗೆ ಇಳಿಸಿ ಬಲೆಯಕಡೆಗೆ ಓಡಿಸುವರು. ಪೊದೆಯಲ್ಲಿ ಅಡಗಿಸಿಕೊಳ್ಳಲು ಪ್ರಯತ್ನಿಸಿದ ಅಳಿಲಿನ ತಲೆ ಬಲೆಗೆ ಸಿಕ್ಕ ಒದ್ದಾಡುವಾಗ ಬೇಟೆಗಾರ ಕುತ್ತಿಗೆ ಹಿಸುಕಿ ಸಾಯಿಸುತ್ತಾನೆ. ಅಳಿಲು ದೊಡ್ಡದಾದ ಮರಕ್ಕೆ ಹತ್ತಿದಾಗ ಅಲ್ಲಿ ಅಳಿಲುಗಳಿರುವುದನ್ನು ಗಮನಿಸಿ ಮರದ ಬೊಡ್ಡೆಗೆ ಉರುಲುನ್ನು ಕಟ್ಟಿ (ಕುದುರೆ ಬಾಲದ ಕೂದಲುಗಳಿಂದ ತಯಾರಿಸಿದ ಉರುಲು) ಉರುಲಿನ ಸುತ್ತಮುತ್ತ ಹಿಟ್ಟನ್ನು ಗಿಡಕ್ಕೆ ಒತ್ತುತ್ತಾ ಹಚ್ಚುತ್ತಾರೆ. ಹೀಗೆ ಹಚ್ಚಿದ ಬಳಿಕ ದೂರದಲ್ಲಿ ಅವಿತು ಕುಳಿತುಕೊಳ್ಳುತ್ತಾರೆ. ಅಳಿಲು ಕೆಳಗೆ ಇಳಿಯುವಾಗ ಆ ಹಿಟ್ಟನ್ನು ನೋಡಿ ಕಾತುರದಿಂದ ತಿನ್ನಲು ಹೋದಾಗ ಉರುಲಿನಲ್ಲಿ ಕಾಲು, ತಲೆ ಇಲ್ಲವೆ, ದೇಹದ ಯಾವುದೇ ಒಂದು ಭಾಗ ಸಿಕ್ಕಿಕೊಂಡು ಒದ್ದಾಡುತ್ತಿರುತ್ತದೆ. ಬೇಟೆಗಾರ ಕೂಡಲೇ ಓಡಿ ಹೋಗಿ ಅದನ್ನು ಬಟ್ಟೆಯಿಂದ ಹಿಡಿಯುತ್ತಾನೆ.

**ವಲಿಂಗಾಡು ಯಾಟ (ಉಡ ಬೇಟೆ)**: ಉಡದ ಬೇಟೆಯನ್ನು ಹಗಲುಹೊತ್ತಿನಲ್ಲಿ ನಾಯಿಗಳ ಸಹಾಯದಿಂದ ಬೇಟೆಯಾಡುವರು. ಇದನ್ನು ಬುಡ್ಗ ಜಂಗಮರು ವಲಿಂಗಾಡು ಯಾಟ ಎಂದು ಕರೆಯುತ್ತಾರೆ. ಭೂಮಿಯ ಮೇಲೆ ಶಾಖ ಹೆಚ್ಚಾದಾಗ ಉಡವು ಗವಿ, ಹುತ್ತದ ಕಡೆ ಹೊರಗೆ ಹೋಗುತ್ತದೆ. ಆಗ ನಾಯಿ ಅದರ ವಾಸನೆಯನ್ನು ಹಿಡಿದು ಬೆನ್ನಟ್ಟಿ ಬೇಟೆಯಾಡುತ್ತದೆ. ಒಂದುವೇಳೆ ಕಲ್ಲು ಕುಟರೆಗಳಲ್ಲಿ ಅಡಗಿ ಕುಳಿತರೆ ಹೊಕ್ಕ ಸ್ಥಳವನ್ನು ಅಗೆಯುವನು. ಬಲಿಷ್ಠವಾದ ಉಗುರುಗಳನ್ನು ಹೊಂದಿರುವ ಉಡ ಅದು ನೆಲ ಹಿಡಿದರೆ ಹತ್ತುಜನ ಎಳೆದರೂ ಬರುವುದಿಲ್ಲ. ಅದಕ್ಕಾಗಿ ಬೇಟೆಗಾರನು ಒಂದು ಕಡ್ಡಿಯಿಂದ ಉಡದ ಮರ್ಮಾಂಗಕ್ಕೆ ಚುಚ್ಚಿದಾಗ ಅಥವಾ ಸುಣ್ಣ ಹಚ್ಚಿದಾಗ ಅದು ನೆಲವನ್ನು ಬಿಡುತ್ತದೆ. ಕೈಯಿಂದ ಉಡದ ಬಾಲವನ್ನು ಮತ್ತೊಂದು ಕೈಯಿಂದ ನಿಧಾನವಾಗಿ ಅದರ ಡುಬ್ಬದ ಮೇಲಿನಿಂದ ಸವರುತ್ತಾ ತಲೆಯನ್ನು ಗಟ್ಟಿಯಾಗಿ ಹಿಡಿಯುತ್ತಾರೆ. ಅದರ ಚರ್ಮವನ್ನು ಡಕ್ಕೆ, ಬುಡ್ಗ, ಟಮಟೆ ಇತ್ಯಾದಿ ಸಂಗೀತ ವಾದ್ಯಗಳನ್ನು ತಯಾರಿಸಿಕೊಳ್ಳುವರು.

**ಕುಂದೇಲು ಯಾಟ (ಮೊಲದ ಬೇಟೆ)**: ಮೊಲದ ಬೇಟೆಯನ್ನು ಬುಡ್ಗ ಜಂಗಮರು ಕುಂದೇಲು ಯಾಟ ಎನ್ನುವರು. ಬುಡ್ಗ ಜಂಗಮರು ಈ ಬೇಟೆಯನ್ನು ಪ್ರಧಾನವಾಗಿ ಬೇಟೆಯಾಡುತ್ತಾರೆ. ಮೊಲವು ಅತ್ಯಂತ ಚುರುಕಾದ ಪ್ರಾಣಿಯಾಗಿದ್ದು, ಮನುಷ್ಯನ ಮತ್ತು ಪ್ರಾಣಿಗಳ ದೂರದ ಶಬ್ದ ಮತ್ತು ವಾಸನೆಯನ್ನು ಅತೀ ಸೂಕ್ಷ್ಮವಾಗಿ ಗ್ರಹಿಸಬಲ್ಲದು. ಮೊಲದ ಬಲೆಯು ರೇಷ್ಮೆ ದಾರದಿಂದ ತಯಾರಿಸಿದ್ದು ಇದು ಮೂವತ್ತು ಅಡಿ ಉದ್ದ, ಆರು ಅಡಿ ಅಗಲ ಹೊಂದಿರುತ್ತದೆ. ಚಿಕ್ಕ ಮತ್ತು ದೊಡ್ಡ ಮೊಲಗಳು ಸಿಕ್ಕಿ ಹಾಕಿಕೊಳ್ಳುವಷ್ಟು ಚಿಕ್ಕಚಿಕ್ಕ ಮನೆಗಳನ್ನು ಹೊಂದಿರುತ್ತದೆ. ಮೊಲಗಳು ವಾಸವಾಗಿರುವ ಪ್ರದೇಶವನ್ನು ಗುರುತಿಸಿಕೊಂಡು ಆಯಾಕಟ್ಟಿನ ಜಾಗದಲ್ಲೇ ಬಲೆ ಕಟ್ಟುವ ವ್ಯವಸ್ಥೆ ಮಾಡಿರುತ್ತಾರೆ. ಬಲೆಯ ಎರಡು ಕಡೆಗೂ ಕಬ್ಬಿಣದ ಗೂಟಗಳಿರುತ್ತವೆ. ಬಲೆಯ ನಡುವಿನ ಭಾಗದಲ್ಲಿ ಕಟ್ಟಿಗೆಗಳನ್ನು ನೆಟ್ಟು ಬಲೆ ನೇರವಾಗಿ ನಿಲ್ಲುವಂತೆ ಮಾಡುತ್ತಾರೆ. ಬಲೆಯ ಎರಡು ಕಡೆಗೂ ಹತ್ತು ಅಡಿಗಳ ದೂರದಲ್ಲಿ ಬೇಟೆಗಾರರು ಮರೆಯಾಗಿ ಕುಳಿತುಕೊಳ್ಳುತ್ತಾರೆ, ವ್ಯವಸ್ಥಿತವಾಗಿ ಎರಡು ಕಡೆಯಿಂದ ಎಳೆಂಟು ಜನರು ಶಬ್ಧಮಾಡುತ್ತಾ ಜಾಲಾಡಿಸುತ್ತಾರೆ. ಮೊಲಗಳು ಇದ್ದರೆ ಬಲೆಗೆ ಬೀಳುತ್ತವೆ. ಆಗ ಬೇಟೆಗಾರ ಕಟ್ಟಿಗೆಯಿಂದ ಹೊಡೆದು ಸಾಯಿಸುತ್ತಾನೆ. ಇದನ್ನು ಇನ್ನೊಂದು ಅರ್ಥದಲ್ಲಿ **ಜೋಪ್ಯಾಟ** ಎಂದು ಕರೆಯುತ್ತಾರೆ. ಜೋಪ್ಯಾಟ ಎಂದರೆ ಗಿಡಮರ, ಪೊಟರೆಗಳಲ್ಲಿ ಅಡಗಿದ ಮೊಲವನ್ನು ಹಿಡಿಯಲು ಅದು ತಪ್ಪಿಸಿಕೊಳ್ಳುವ ಸ್ಥಳದಲ್ಲಿ ಬಲೆ ಕಟ್ಟಿ ಒಂದುಕಡೆಯಿಂದ ಗಿಡಮರಗಳನ್ನು ಜಾಲಾಡಿಸುವುದನ್ನು ಜೋಪ್ಯಾಟ ಎಂದು ಕರೆಯತ್ತಾರೆ.

**ನರಿಸಿಗ್ಯಾಡು ಯಾಟ (ನರಿ ಬೇಟೆ)**: ನರಿ ಬೇಟೆಯನ್ನು ಬುಡ್ಗ ಜಂಗಮರು ನರಿಸಿಗ್ಯಾಡು ಯಾಟ ಅಥವಾ **ನಕ್ಕಲ್ಯಾಟ** ಎನ್ನುತ್ತಾರೆ. ನರಿಯು ಹೆಚ್ಚಾಗಿ ಕಬ್ಬು ಬೆಳೆಯುವ ಪ್ರದೇಶದಲ್ಲಿ ಹಾಗೂ ದಟ್ಟವಾದ ಅರಣ್ಯ ಪ್ರದೇಶಗಳಲ್ಲಿ ಕಾಣಿಸಿಕೊಳ್ಳುತ್ತದೆ. ಇದು ರಾತ್ರಿಯ ವೇಳೆ ಹೊಟ್ಟೆ ತುಂಬ ತಿಂದು ಕೂಗು ಹಾಕುತ್ತದೆ. ಇದನ್ನು ಕೇಳಿ ಬೇಟೆಗಾರನು ಬೆಳಗಿನ ಜಾವ ನಾಲ್ಕೈದು ಜನ ಸೇರಿ ನರಿ ಕೂಗಿದ ಜಾಗಕ್ಕೆ ಬೇಟೆ ನಾಯಿಗಳೊಂದಿಗೆ ಹೋಗಿ ನಾಯಿಗಳು ಪತ್ತೆ ಹಚ್ಚಲು ಬಿಡುತ್ತಾರೆ. ನಾಯಿ ವಾಸನೆಯಿಂದ

ಚಡಪಡಿಸುತ್ತಿರುವಾಗ ಇಲ್ಲಿ ನರಿ ಇದೆ ಎಂದು ತಿಳಿದು ಬಲೆ ಕಟ್ಟುತ್ತಾರೆ. ಇಬ್ಬರು ವ್ಯಕ್ತಿಗಳು ಬಲೆಕಟ್ಟದ ಮೂಲೆಯ ಆಕಡೆ ಇಕಡೆ ಮರೆಯಲ್ಲಿ ಕುಳಿತು ವೀಕ್ಷಣೆ ಮಾಡುತ್ತಾರೆ. ಉಳಿದ ಜನರು ನಾಯಿಗಳ ಬಿಟ್ಟು ಒಂದುಕಡೆಯಿಂದ ಜೋರಾಗಿ ಕೆಕೆ ಶಬ್ಧ ಹಾಕುತ್ತಾ ಜಾಲಾಡಿಸುತ್ತಾ ಬರುತ್ತಾರೆ. ಶಬ್ಧ ಕೇಳಿದ ನರಿ ಓಡಿಹೋಗಲು ಪ್ರಯತ್ನಿಸಿ ಬಲೆಗೆ ಬೀಳುತ್ತದೆ. ನಂತರ ಬಲೆಗೆ ಬಿದ್ದ ನರಿಯನ್ನು ಕಂಡು ಮರೆಯಲ್ಲಿದ್ದ ಇಬ್ಬರು ಓಡಿ ಬಂದು ಕಟ್ಟಿಗೆಯಿಂದ ಸಾಯಿಸುತ್ತಾರೆ.

**ಜಂಗ್ಯಾಸಿಗಂ ಯಾಟ (ಕಾಡುಬೆಕ್ಕು ಬೇಟೆ):** ಕಾಡುಬೆಕ್ಕು ಬೇಟೆಯನ್ನು ಬುಡ್ಗ ಜಂಗಮರು ಜಂಗಾಸಿಗಮು ಯಾಟ ಎನ್ನುತ್ತಾರೆ. ಕಾಡುಬೆಕ್ಕು ಹೆಚ್ಚಾಗಿ ರಾತ್ರಿಯ ವೇಳೆಯಲ್ಲಿ ಬಯಲಲ್ಲೆ ತಿರುಗಾಡುತ್ತದೆ. ಇದನ್ನು ಹೆಜ್ಜೆಯ ಗುರುತುಗಳಿಂದ ಗಮನಿಸಿ ಇಂತಹ ಪ್ರಾಣಿಯ ಹೆಜ್ಜೆ ಎಂದು ಬುಡ್ಗ ಜಂಗಮರು ಕಂಡುಹಿಡಿಯುತ್ತಾರೆ. ಕಾಣಿಸಿಕೊಂಡ ಹೆಜ್ಜೆಗುರುತುಗಳಿಂದ ಅಂದಾಜಿನ ಮೇಲೆ ಈ ಪೊದರೆಯಲ್ಲಿ ಕಾಡುಬೆಕ್ಕು ಇರಬಹುದು ಎಂದು ತಿಳಿದು ಒಂದು ಕಡೆ ಬಲೆ ಕಟ್ಟಿ ಬೇಟೆಯಾಡುತ್ತಾರೆ.

**ಎಂಟುವ ಯಾಟ (ಮುಂಗಿಸಿ ಬೇಟೆ):** ಮುಂಗಿಸಿ ಬೇಟೆಯನ್ನು ಬುಡ್ಗ ಜಂಗಮರು ಎಂಟುವ ಯಾಟ ಎನ್ನುತ್ತಾರೆ. ಮುಂಗುಸಿಗಳು ಹೆಚ್ಚಾಗಿ ಕಬ್ಬಿನ ದಡದಲ್ಲಿ ಅಥವಾ ಹಳ್ಳದ ಪೊದರೆಗಳಲ್ಲಿ ಇಲ್ಲವೇ ನದಿಯ ತೀರಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಇದನ್ನು ಒಬ್ಬರೆ ಹೋಗಿ ಬೇಟೆಯಾಡಬಹುದು. ಬೇಟೆಗಾರನು ಮುಂಗಿಸಿ ಓಡಾಡುವ ಸ್ಥಳಗಳಲ್ಲಿ ಹೋಗಿ ಹೆಜ್ಜೆಗಳಿಂದ ಗುರುತಿಸಿ ಇಂತಹ ಸ್ಥಳಕ್ಕೆ ಹೋಗಿದೆ ಎಂದು ತಿಳಿದು ಸಂಜೆ ಸಮಯದಲ್ಲಿ ಬೋನು ಇಟ್ಟು ಬರುತ್ತಾರೆ. ಆ ಬೋನಿಗೆ ಮೀನು ಇಲ್ಲವೇ ಕೋಳಿ ಮಾಂಸವನ್ನು ಹಾಕಿ ಬರುತ್ತಾರೆ. ಬೋನಿನ ಬಲೆ ಕಾಣದಂತೆ ಕಸ ಕಡ್ಡಿಗಳಿಂದ ಮುಚ್ಚಿ ಸುತ್ತಲು ಮೀನಿನ ಅಥವಾ ಮಾಂಸದ ನೀರನ್ನು ಚೆಲ್ಲುತ್ತಾರೆ. ಆ ವಾಸನೆಯಿಂದ ಮುಂಗುಸಿ ಎಲ್ಲಿದ್ದರೂ ಆ ಕಡೆಗೆ ಬಂದು ಬೋನಿನಲ್ಲಿರುವ ಮಾಂಸದ ತುಂಡನ್ನು ತಿನ್ನಲು ಹೋಗಿ ಬೋನಿಗೆ ಬೀಳುತ್ತದೆ. ನಂತರ ಬೇಟೆಗಾರರು ೨-೩ ತಾಸುಗಳ ನಂತರ ಅಥವಾ ಬೆಳಿಗ್ಗೆ ಒಮ್ಮೆ ಸಾಯಂಕಾಲ ಒಮ್ಮೆ ಹೀಗೆ ದಿನಕ್ಕೆ ಎರಡು ಬಾರಿಯಂತೆ ನೋಡಲು ಬಂದಾಗ ಬೋನಿನಲ್ಲಿ ಬಿದ್ದ ಮುಂಗುಸಿಯನ್ನು ಹಿಡಿದು ತರುತ್ತಾನೆ. ಮತ್ತು ಅದರ ಕೂದಲನ್ನು ಮೇಕಪ್ ಮಾಡಿಕೊಳ್ಳುವ ಬ್ರಸ್ ಗಳನ್ನು ತಯಾರಿಸಲು ಬಳಸುತ್ತಾರೆ.

**ಏದುವ ಯಾಟ (ಮುಳ್ಳುಹಂದಿ ಬೇಟೆ):** ಮುಳ್ಳು ಹಂದಿಯು ಹಂದಿ ಪ್ರಭೇದಗಳಲ್ಲಿ ಒಂದಾಗಿದ್ದು ಇದನ್ನು ಬುಡ್ಗ ಜಂಗಮರು ಏದುವ ಯಾಟ ಎನ್ನುತ್ತಾರೆ. ಮುಳ್ಳು ಹಂದಿಗೆ ಮೈ ತುಂಬಾ ಮುಳ್ಳುಗಳನ್ನು ಹೊಂದಿದ್ದು, ದೈವದತ್ತವಾಗಿ ಬಂದಿರುವ ಮುಳ್ಳುಗಳಿಂದ ತನ್ನನ್ನು ತಾನು ರಕ್ಷಣೆ ಮಾಡಿಕೊಳ್ಳುವುದು. ತಲೆಯು ತುಂಬಾ ಸೂಕ್ಷ್ಮ ಮತ್ತು ಚಿಕ್ಕದಾಗಿದ್ದು, ತನ್ನ ಗಟ್ಟಿಯಾದ ಮುಳ್ಳುಗಳನ್ನು ಬಾಣಗಳಂತೆ ಮನುಷ್ಯನ ಅಥವಾ ಇತರೆ ಪ್ರಾಣಿಗಳಿಗೆ ಬಿಡುತ್ತಾ ತನಗೆ ಬಂದ ಆಪತ್ತಿನಿಂದ ಪಾರಾಗುತ್ತದೆ. ಈ ಜ್ಞಾನವನ್ನು ತಿಳಿದ ಬೇಟೆಗಾರ ಈ ಪ್ರಾಣಿ ಆಹಾರಕ್ಕಾಗಿ ರೈತರ ಹೊಲಗದ್ದೆಗಳಿಗೆ ಬಂದು ಹೋಗುವ ಜಾಡನ್ನು ಒಂದು ದಿನ ಮುಂಚಿತವಾಗಿ ಕಂಡುಹಿಡಿದು ಕುಂದೇಟುವಲ (ಮೊಲ ಹಿಡಿಯುವ

ದಾರದ ಬಲೆ) ಅಡ್ಡಾಲಾಗಿ ಕಟ್ಟುತ್ತಾರೆ. ಆ ಪ್ರಾಣಿಯು ಬಲೆಯಲ್ಲಿ ಬೀಳಲು ಶಬ್ಧ ಮಾಡುತ್ತಾನೆ. ಅದು ಆಕಸ್ಮಿಕವಾಗಿ ಶಬ್ದಕ್ಕೆ ಓಡಿ ಹೋಗಿ ಬಲೆಯಲ್ಲಿ ಬೀಳುತ್ತದೆ. ಬಿದ್ದ ನಂತರ ಅದನ್ನು ಹೊಡೆದು ತಂದು ಮುಳ್ಳುಗಳನ್ನು ತೆಗೆದು ಅದರ ಹೊಟ್ಟೆಯನ್ನು ಔಷಧಕ್ಕಾಗಿ ತೆಗೆದಿಟ್ಟು ಉಳಿದೆಲ್ಲ ಮಾಂಸ ಆಹಾರವಾಗಿ ಉಪಯೋಗಿಸುತ್ತಾರೆ.

**ಚಾಪ್ಲಾಟ (ಮೀನುಗಾರಿಕೆ):** ಬುಡ್ಗ ಜಂಗಮರು ಮೀನನ್ನು **ಕಾಜಲು ಮತ್ತು ಚಾಪ್ಲು** ಎಂದು ಕರೆಯುತ್ತಾರೆ. ಸಣ್ಣಸಣ್ಣ ಹಳ್ಳಕೊಳ್ಳದಲ್ಲಿ, ಕಾಲುವೆ, ನದಿ, ಕೆರೆ ಇತ್ಯಾದಿ ನೀರು ಇರುವ ಜಾಗದಲ್ಲಿ ಬಲೆಯಿಂದ ಮೀನನ್ನು ಹಿಡಿಯುವುರು. ಮೀನಿನ ಬಲೆಯು ರೇಷ್ಮೆದಾರ ಮತ್ತು ಕಾಟನ್‌ದಾರಗಳಿಂದ ತಯಾರಿಸಿರುತ್ತಾರೆ. ಇದಕ್ಕೆ ಕಳ್ಳಿಗಿಡದ ಬೆಂಡು, ಮತ್ತು ಕೆಳಗೆ ಕಬ್ಬಿಣದ ಸೀಸಗಳನ್ನು ಬಳಸುತ್ತಾರೆ. ಬಲೆಯು ಎರಡುವರೆ ಅಡಿ ಅಗಲ, ನಲವತ್ತಾರಿದ ನೂರು ಅಡಿ ಉದ್ದ ಇರುತ್ತದೆ. ಚಿಕ್ಕ ಬಲೆ ಎರಡುವರೆ ಅಡಿ ಅಗಲ, ಇಪ್ಪತ್ತೈದು ಅಡಿ ಉದ್ದ ಇರುತ್ತದೆ. ದೊಡ್ಡ ಬಲೆಯನ್ನು ನದಿ, ಹೊಳೆ, ಕೆರೆಗಳಲ್ಲಿ ಹಾಕಿ ಮೀನುಗಳನ್ನು ಹಿಡಿದರೆ, ಚಿಕ್ಕ ಬಲೆ ಮಡಗು, ಹಳ್ಳಗಳಲ್ಲಿ ಹಾಕಿ ಮೀನುಗಳನ್ನು ಹಿಡಿಯುತ್ತಾರೆ. ನದಿಹೊಳೆ, ಕೆರೆಗಳಲ್ಲಿ ಬಲೆಯನ್ನು ಇಬ್ಬರು ಹಿಡಿದುಕೊಂಡು ಸಾವಕಾಶವಾಗಿ ಮುಂದಕ್ಕೆ ಸಾಗುತ್ತಾ ಬರುತ್ತಾರೆ. ಅವರ ಎದುರಿನಿಂದ ಕೆಲವರು ನೀರಿನಲ್ಲಿ ಕಟ್ಟಿಗೆಯನ್ನು ಬೆತ್ತದಿಂದ ಶಬ್ದ ಮಾಡುತ್ತಾ ಬರುತ್ತಾರೆ, ಹೀಗಾಗಿ ಮೀನುಗಳು ಸಿಕ್ಕು ಹಾಕಿಕೊಳ್ಳುತ್ತವೆ. ಬಲೆಯಿಂದ ಮೀನುಗಳು ಹೊರಗೆ ಹೋಗದಂತೆ ಚಿಕ್ಕಚಿಕ್ಕ ಕಣ್ಣುಗಳಂತೆ ಮನೆಗಳನ್ನು ಮಾಡಿರುತ್ತಾರೆ. ಹೆಚ್ಚಾಗಿ ರೇಷ್ಮೆದಾರವನ್ನು ಉಪಯೋಗಿಸಿರುವುದರಿಂದ ಬೇಗ ಹಾಳಾಗದೆ ಬಹಳಷ್ಟು ವರ್ಷಗಳು ಬಾಳಿಕೆಗೆ ಬರುತ್ತವೆ.

**ಯಂಡ್ರಕಾಯ ಯಾಟ (ಏಡಿ ಬೇಟೆ):** ಬುಡ್ಗ ಜಂಗಮರು ಏಡಿಯನ್ನು ಯಂಡ್ರಕಾಯ ಎನ್ನುತ್ತಾರೆ. ಇದನ್ನು ಒಂದು ಉದ್ದವಾದ ಕಟ್ಟಿಗೆಯ ಗಳಕ್ಕೆ ದಾರವನ್ನು ಕಟ್ಟಿ ಅದರ ತುದಿಯಲ್ಲಿ ಕಬ್ಬಿಣದ ತಂತಿಯನ್ನು ಬಿಗಿದು ಅದಕ್ಕೆ ಮಾಂಸದ ತುಂಡನ್ನು ಕಟ್ಟಿ ನೀರಿನಲ್ಲಿ ಬಿಡುತ್ತಾರೆ. ಏಡಿ ಅದನ್ನು ತಿನ್ನಲು ಬಂದು ಹಿಡಿಯುವಾಗ ದಾರ ಅಲುಗಾಡುತ್ತದೆ ಆಗ ನಿಧಾನವಾಗಿ ಹೊರತೆಗೆದು ಕೈಯಿಂದ ಹಿಡಿಯುತ್ತಾರೆ. ರಾತ್ರಿಯ ವೇಳೆಯಲ್ಲಿ ಬೆಂಕಿಯ ದಿವಟಿಗೆ (ದೀಪ) ಹಿಡಿದು ಹಳ್ಳದ ದಂಡೆ ಅಥವಾ ಏಡಿಗಳಿರುವ ನೀರಿನ ದಡದಲ್ಲಿ ನೋಡುತ್ತ ಹೋದಾಗ ಬೆಂಕಿಗೆ ಏಡಿಯ ಕಣ್ಣುಗಳು ಕಾಣದಂತಾಗಿ ಅಲ್ಲಿ ಕುಳಿತಾಗ ಕೈಯಲ್ಲಿನ ಕುಡುಗೋಲು ಇಲ್ಲವೆ ಚಾಕುವಿನಿಂದ ಹೊಡೆದು ಹಿಡಿಯುತ್ತಾರೆ.

**ಕುರಿಂಗಾಡು ಯಾಟ (ಆಮೆ ಬೇಟೆ):** ಬುಡ್ಗ ಜಂಗಮರು ಆಮೆಯನ್ನು ಕುರಿಂಗಾಡು ಎಂದು ಕರೆಯುತ್ತಾರೆ. ಇದನ್ನು ನದಿ, ಹಳ್ಳ, ಕೊಳ್ಳ ಮತ್ತು ಕೆರೆಯ ದಡದಲ್ಲಿ ಆಮೆ ಇರುವುದನ್ನು ಕಂಡು ಬೇಟೆಯಾಡುತ್ತಾರೆ. ಆಮೆಗಳು ಕೆಸರಿನಲ್ಲಿ ಅಡಗಿರುತ್ತವೆ. ಒಂದು ನಾಲ್ಕು ಅಡಿ ಉದ್ದನೆಯ ಕಬ್ಬಿಣದ ಸಲಾಕೆಗೆ ಕಟ್ಟಿಗೆ ಹಿಡಿಕೆ ಮಾಡಿ ಬೆಳಗಿನ ಜಾವ ನದಿ, ಹಳ್ಳ, ಮತ್ತು ಕೆರೆಗಳಿಗೆ ಹೋಗಿ ಕೆಸರಿನಲ್ಲಿ ಸಲಾಕೆ ಚುಚ್ಚುತ್ತಾ ಬೇಟೆಯಾಡುತ್ತಾರೆ. ಚುಚ್ಚುವಾಗ ಆಮೆ ಅಡಗಿರುವ ಸ್ಥಳದಲ್ಲಿ ಡೊಕ್ಕೆಂದು ಶಬ್ದ ಬಂದಾಗ, ಆ ಶಬ್ದ ಬಂದ ಸ್ಥಳದಲ್ಲಿ ಮೇಲೆ ಕಾಲಿಟ್ಟು ಅಲುಗಾಡಿಸಿ ನೋಡಿದಾಗ ಮೇಲ್ಭಾಗ

ನುಣುಪಾಗಿ ಕಂಡರೆ ಆಮೆ ಇದೆ ಎಂದು ತಿಳಿದು ಅದನ್ನು ಹಿಡಿದು ಚೀಲದಲ್ಲಿ ಹಾಕಿಕೊಳ್ಳುತ್ತಾರೆ. ಬೇಟೆಯಾಡಿದ ಆಮೆಗಳನ್ನು ಹಳ್ಳದ ಬದಿಯ ಅಡವಿಯಲ್ಲಿ ಬೆಂಕಿಯಲ್ಲಿ ಅಂಗಾತವಾಗಿ ಹಾಕಿ ಹಿಂಭಾಗವನ್ನು ಸುಡುತ್ತಾರೆ. ಆಗ ಅದು ಬೆಂಕಿಯ ಜ್ವಾಲೆಗೆ ಹೆದರಿ ತಲೆಯನ್ನು ಹೊರಗೆ ತೆಗೆಯತ್ತದೆ. ಆಗ ಅದರ ತಲೆಯನ್ನು ಹಿಡಿದು ಶಿರಕ್ಕೆ ಹೊಡೆದು ಸಾಯಿಸುತ್ತಾರೆ. ನಂತರ ಸುಟ್ಟು, ಸ್ವಚ್ಚಮಾಡಿಕೊಂಡು ಮನೆಗೆ ತೆಗೆದುಕೊಂಡು ಹೋಗುತ್ತಾರೆ.

ಬುಡ್ಗ ಜಂಗಮರು ಪ್ರಾಣಿಗಳನಲ್ಲದೆ ಹಕ್ಕಿ, ಪಕ್ಷಿಗಳನ್ನು ಹಿಡಿದು ತಿನ್ನುವುದನ್ನು ರೂಢಿಸಿಕೊಂಡಿದ್ದಾರೆ. ಉದಾ: ಕೌಜುಗ, ರತ್ನಪಕ್ಷಿ, ನೀರುಕೋಳಿ, ಪಾರಿವಾಳ ಇತ್ಯಾದಿ.

**ಕಮುಜು ಯಾಟ(ಕೌಜಗ ಬೇಟೆ)**: ಬುಡ್ಗ ಜಂಗಮರು ಈ ಬೇಟೆಯನ್ನು ಕಮುಜು ಯಾಟ ಮತ್ತು ಪಾರ್ಧಿಯಾಟ ಎಂದು ಕರೆಯುತ್ತಾರೆ. ಪಾರ್ಧಿ ಎನ್ನುವುದು ಈ ಸಮುದಾಯವು ಕೌಜಗ ಬೇಟೆಗಾಗಿ ಬಳಸುವ ಒಂದು ಉಪಕರಣ. ಕೌಜಗದ ಮಾಂಸವು ಗಟ್ಟಿ ಮತ್ತು ಸತ್ವಯುತವಾದ ಆಹಾರ ಎಂಬ ನಂಬಿಕೆಯನ್ನು ಹೊಂದಿ ಬೆಳಿಗ್ಗೆ ಮತ್ತು ಸಾಯಂಕಾಲ ನಿತ್ಯವು ಬೇಟೆಗೆ ಹೋಗುವುದನ್ನು ಕಾಣಬಹುದು. ಇದು ಅವರ ಅಚ್ಚುಮೆಚ್ಚಿನ ಬೇಟೆಯಾಗಿದೆ. ಒಂದು ಅಥವಾ ಎರಡು ಕೌಜಗ ಮರಿಗಳನ್ನು ಹಿಡಿದು ಅವುಗಳನ್ನು ಒಂದು ಪ್ರತ್ಯೇಕವಾದ ಬುಟ್ಟಿಯಲ್ಲಿ ಹಾಕಿಕೊಂಡು ಬೇಟೆಯಾಡಲು ಸಾಕುತ್ತಾರೆ. ಸಾಕಿದ ಕೌಜಗದ ಶಬ್ದದಿಂದ ಬೇಟೆಯಾಡುವುದನ್ನು ಬುಡ್ಗ ಜಂಗಮರಲ್ಲಿ ಕಾಣಬಹುದು. ಕೌಜಗ ಬೇಟೆಗೆಂದು ಹೋದಾಗ ಒಂದು ಪಾರ್ಧಿ ಮತ್ತು ಸಾಕಿದ ಕೌಜಗದ ಬುಟ್ಟಿಯನ್ನು ತೆಗೆದುಕೊಂಡು ಅಡವಿಗೆ ಹೋಗುತ್ತಾರೆ*(ಅನುಬಂಧ ೬: ಛಾಚಿ:೪.೫).* ಸಾಕಿದ ಕೌಜಗವನ್ನು ಕಾಣದಂತೆ ಮರೆಮಾಡಿ ಅಡವಿಯಲ್ಲಿರುವ ಕೌಜಗಗಳು ಇರುವುದನ್ನು ಕಂಡುಕೊಳ್ಳುತ್ತಾರೆ. ಕೆಲವೊಮ್ಮೆ ಕೆಲವು ಸ್ಥಳಗಳಲ್ಲಿ ಕಸ ಕಡ್ಡಿಗಳನ್ನು ಕಿತ್ತಿರುವುದನ್ನು ಮತ್ತು ಅಗತಾನೆ ತಿರುಗಾಡಿದ ಹೆಜ್ಜೆಗಳ ಗುರುತಿನ ಮೇಲೆ ಕೌಜಗ ಬಲೆ ಹಾಕಿ ಸಾಕಿದ ಕೌಜಗವನ್ನು ಬಲೆಯ ಈಚೆಗೆ ಒಂದು ಪುಟ್ಟ ಗಿಡಕ್ಕೆ ತೂಗು ಬಿಟ್ಟು ಸ್ವಲ್ಪ ದೂರದಲ್ಲಿ ಅವಿತುಕೊಂಡು ಕುಳಿತು ಸಿಳ್ಳೆ-ಹಾಕುತ್ತಾರೆ. ಸಾಕಿದ ಕೌಜುಗ ಕೂಗಿದ ನಂತರ ಅಡವಿ ಕೌಜಗ ಜಗಳಕ್ಕೆಂದು ರೋಷದಿಂದ ಬಂದಾಗ ಆಗ ಬಲೆಯಲ್ಲಿ ಸಿಕ್ಕಿ ಬೀಳುತ್ತದೆ. ಒಂದು ವೇಳೆ ಈ ರೀತಿಯಾಗಿ ಕೌಜಗ ಬೀಳದಿದ್ದರೆ, ಹೊಲದ ಮಧ್ಯಭಾಗದಲ್ಲಿ ಇಲ್ಲವೆ ಪೊದರೆಗಳ ಮಧ್ಯದಲ್ಲಿ ಹಾಕಿ ಆ ಕಡೆಯಿಂದ ಈ ಕಡೆಯಿಂದ ಬೆದರಿಸಿ ಬಲೆಯ ಕಡೆ ತಿರುವಿ ಹಿಡಿಯುತ್ತಾರೆ. ಇದೇರೀತಿಯಾಗಿ ನೀರುಕೋಳಿ ಮತ್ತು ಪಾರಿವಾಳಗಳನ್ನು ಇದೇ ಪಾರ್ಧಿಯಿಂದಲೇ ಹಿಡಿಯುವುದನ್ನು ಕಾಣಬಹುದು.

**ಪುಲ್ಲಾಕೋಡಿ ಯಾಟ (ನೀರುಕೋಳಿ ಬೇಟೆ)**: ನೀರುಕೋಳಿಯನ್ನು ಬುಡ್ಗ ಜಂಗಮರು ಪುಲ್ಲಾಕೋಡಿ ಎಂದು ಕರೆಯುತ್ತಾರೆ. ಈ ಪಕ್ಷಿ ಹೊಳೆ ಹಳ್ಳದ ದಂಡೆಯಲ್ಲಿ ನೀರಿರುವ ಪ್ರದೇಶಗಳ ಕಡೆಗಳಲ್ಲಿ ಕಾಣಿಸುತ್ತವೆ. ಇವುಗಳಿರುವ ಪ್ರದೇಶಗಳಿಗೆ ಹೋಗಿ ನೀರಿನ ಅಕ್ಕಪಕ್ಕದಲ್ಲಿ ಪಾರ್ಧಿ ಬಲೆ ಹಾಕಿ ಕುಳಿತುಕೊಳ್ಳುತ್ತಾರೆ. ಮತ್ತು ಅದರ ಅನುಕರಣೆಗಾಗಿ ತಾವೇ ತಯಾರಿಸಿದ ರಬ್ಬಲಿನ ಸೀಟಿಯನ್ನು ಉಪಯೋಗಿಸಿ ಸಿಳ್ಳು (ಸೀಟಿ) ಹಾಕಿ ನೀರುಕೋಳಿ ಹೊರಬರುವಂತೆ ಮಾಡಿ ಬಲೆಗೆ ಬೀಳಿಸುತ್ತಾರೆ.

ಇಲ್ಲವೆ ಅವು ಇರುವ ಸ್ಥಳವನ್ನು ಗಮನಿಸಿ ಊರುಗೋಲಿನ ಉರುಲನ್ನು (ಉಚ್ಚುಲು) ಚುಚ್ಚುತ್ತಾರೆ. ಅಲ್ಲಿಯೇ ಮೇಯಲು ಬಂದಾಗ ಆ ಉರುಲಿಗೆ ನೀರುಕೋಳಿ ಸಿಕ್ಕಿಕೊಳ್ಳುತ್ತದೆ.ಆಗ ಅದನ್ನು ಬಿಡಿಸಿ ಒಂದು ಚೀಲದಲ್ಲಿ ಹಾಕಿಕೊಳ್ಳುತ್ತಾರೆ. ಕೆಲವು ಸಂದರ್ಭಗಳಲ್ಲಿ ಬೇಟೆಗಾರಿಕೆಯು ಮಾನವನಿಗೆ ಆಪತ್ತು ತರುವ ಸನ್ನಿವೇಷಗಳು ಎದುರಾಗುತ್ತವೆ. ನೀರುಕೋಳಿ, ಕೌಜುಗ ಹಿಡಿಯುವ ಸಂದರ್ಭದಲ್ಲಿ ಕೆಲವು ವಿಷ ಜಂತುಗಳ ಸರ್ಪಗಳು ಬಲೆಗೆ ಸಿಕ್ಕಿಕೊಂಡಾಗ ಅದನ್ನು ಬಿಡಿಸಲು ಹೋದಾಗ ಅನಿರಿಕ್ಷಿತವಾಗಿ ಸತ್ತಿರುವ ಉದಾಹರಣೆಗಳು ಬುಡ್ಗ ಜಂಗಮರಲ್ಲಿವೆ.

**ಅಡವಿ ಪಾರಿವಾಳ (ರತ್ನಪಕ್ಷಿ):** ಹಕ್ಕಿಗಳಲ್ಲಿ ಅಡವಿ ಪಾರಿವಾಳವು ಆಹಾರ ಮತ್ತು ಆರೋಗ್ಯಕ್ಕಾಗಿ ಮಹತ್ವ ಪಡೆದುಕೊಂಡಿದೆ. ಇದರ ಮಾಂಸವು ರೋಗ ನಿರೋಧಕ ಶಕ್ತಿಯನ್ನು ಹೊಂದಿದೆ. ಇದನ್ನು ಬುಡ್ಗ ಜಂಗಮರು **ಜಮಡಕಾಗಿ** ಎಂದು ಕರೆಯುತ್ತಾರೆ. ಇದರ ರಕ್ತವನ್ನು ಪಾರ್ಶ್ವವಾಯು ಮತ್ತು ವಾಯುವಿಗೆ ಉಪಯೋಗಿಸುತ್ತಾರೆ. ಇದನ್ನು ಬೇಟೆಯಾಡಲು ಪ್ರತ್ಯೇಕವಾಗಿ ಹೋಗುವುದಿಲ್ಲ. ಕೌಜಗ, ನೀರುಕೋಳಿ ಬೇಟೆಗಾಗಿ ಹೋಗುವಾಗ ಅನಿರಿಕ್ಷಿತವಾಗಿ ಕಂಡುಬಂದಾಗ ಮಾತ್ರ ಪಾರ್ಧಿ ಬಲೆ ಹಾಕಿ ಹಿಡಿಯಲು ಪ್ರಯತ್ನಿಸುತ್ತಾರೆ.

ಬುಡ್ಗ ಜಂಗಮರು ಹೀಗೆ ಅಡವಿಯಲ್ಲಿ ಬೇಟೆಯಾಡಿಕೊಂಡು ತಮ್ಮ ಆಹಾರವನ್ನು ಪೂರೈಸಿಕೊಂಡು ತಮ್ಮ ಜೀವನವನ್ನು ಕಳೆಯುತ್ತಿದ್ದರು. ಆದರೆ ಇಂದು ಬೇಟೆಗಾರಿಕೆ ನಿಷೇಧ ಕಾಯ್ದೆಯಿಂದ ಬುಡ್ಗ ಜಂಗಮರು ಬೇಟೆಯಾಡುವುದನ್ನು ನಿಲ್ಲಿಸಿ ಕುರಿಕೋಳಿಗಳನ್ನು ಸಾಕುತ್ತಾ ಅವುಗಳನ್ನು ಭಕ್ಷಿಸುತ್ತಾ ಜೀವನ ಮಾಡುತ್ತಿದ್ದಾರೆ.

**ಪಶುಪಾಲನೆ**

ಅಲೆಮಾರಿ ಬುಡಕಟ್ಟು ಸಮುದಾಯಗಳು ಬೇಟೆ ಮತ್ತು ಪಶುಪಾಲನೆಯಿಂದಲೇ ತಮ್ಮ ಜೀವನವನ್ನು ನಿರ್ವಹಿಸುತ್ತಿದ್ದರು. ರಾಜರುಗಳ ಆಳ್ವಿಕೆಯ ಕಾಲಘಟ್ಟದಲ್ಲಿ ಸೈನಿಕ ವೃತ್ತಿ, ಗೂಢಾಚಾರಿಗಳಾಗಿ, ಪ್ರದರ್ಶನ ಕಲೆಗಳ ಮೂಲಕ ಮನರಂಜನೆ ನೀಡಿ ಕೃಷಿ ಪ್ರಧಾನ ವರ್ಗಗಳನ್ನು ಅವಲಂಬಿಸಿ ಬದುಕಿದ್ದು ಕಾಣಬಹುದು. ಇವರ ಪ್ರಾಮಾಣಿಕತೆ ಮತ್ತು ಮಾನವೀಯ ಮೌಲ್ಯಗಳನ್ನು ಹಾಗೂ ನೀತಿಸಂದೇಶಗಳು, ಕಲೆಯ ಪ್ರದರ್ಶನ, ಸಂಗೀತವನ್ನು ಮನರಂಜನೆಯನ್ನು ಮೆಚ್ಚಿ ರಾಜ ಮಹಾರಾಜರು ದನ ಕರಗಳನ್ನು, ಕುರಿಕೋಳಿಗಳು, ಭೂಮಿಗಳನ್ನು ಇನಾಮು ನೀಡುತ್ತಿದ್ದರು. ಆದರೆ ಅಲೆಮಾರಿ ಕಲಾ ಸಮುದಾಯಗಳು ಕೇವಲ ಒಂದ್ಹೊತ್ತಿನ ಊಟಕ್ಕೆ ಮಾತ್ರ ಆಲೋಚಿಸುತ್ತದ್ದರು. ಭವಿಷ್ಯದ ಜೀವನದ ಬಗ್ಗೆ ಆಲೋಚಿಸದೇ ನಿತ್ಯ ಅಲೆಮಾರಿಗಳಾಗಿ ಅಲೆಯುತ್ತಾ ರಾಜ ಮಹಾರಾಜರು ಕೊಟ್ಟ ಇನಾಮು ಭೂಮಿಗಳನ್ನು ಮರೆತು ಹೋಗುತ್ತಿದ್ದರು. ಕೇವಲ ಪ್ರಾಣಿಪಕ್ಷಿಗಳನ್ನು ಸಾಕುತ್ತಾ ಬೇಟೆಯಾಡುತ್ತಾ ಕಲೆಯನ್ನು ಪ್ರದರ್ಶನ ನೀಡುತ್ತಾ ಜೀವನವನ್ನು ಸಾಗಿಸುತ್ತಿದ್ದರು. ಅಲೆಮಾರಿ ಬುಡ್ಗ ಜಂಗಮರು ಅಂದು ಒಂಟೆ, ಕುದುರೆ, ಆಕಳು, ದನ, ಎಮ್ಮೆ, ಕುರಿ ಮೇಕೆ, ಕೋಳಿ, ಕೌಜುಗ, ಗಿಳಿ ಇತ್ಯಾದಿ ಪ್ರಾಣಿಪಕ್ಷಿಗಳನ್ನು ಸಾಕುತ್ತಾ ಅದರಿಂದ ಉತ್ಪನ್ನವಾಗುವ ಹಾಲು, ಮೊಸರು, ಬೆಣ್ಣೆ ಇತ್ಯಾದಿ ಉತ್ಪನ್ನಗಳನ್ನು

ಸೇವಿಸುತ್ತಾ ಮತ್ತು ದಾನಧರ್ಮ ಮಾಡುತ್ತಾ ಜೀವನ ಮಾಡುತ್ತಿದ್ದರು. ಇಂದು ನವನಾಗರೀಕತೆ ನಾಹಲೋಟದತ್ತ ಸಾಗುತ್ತಿರುವುದರಿಂದ ಅನೇಕ ಕಾರ್ಖಾನೆಗಳು, ಕಟ್ಟಡಗಳು ನಿರ್ಮಾಣದಿಂದ ಹಚ್ಚಹಸಿರಿನ ಪರಿಸರವು ನಾಶವಾಗಿ ಜಾನುವಾರುಗಳಿಗೆ ಮೇವು ಇಲ್ಲದೇ ನೀರು ಇಲ್ಲದೇ ನರಳಾಡುತ್ತಿದ್ದರಿಂದ ಪಶುಪಾಲನೆಯನ್ನು ಹಂತ ಹಂತವಾಗಿ ಕಡಿಮೆಯಾಗಿ ಆಧುನಿಕ ಕಸುಬುಗಳನ್ನು ಅನಿವಾರ್ಯವಾಗಿ ಅವಲಂಬಿಸಿದರು. ಆದರೂ ಪ್ರಸ್ತುತ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರು ಕೆಲವು ಸಾಕುಪ್ರಾಣಿಪಕ್ಷಿಗಳನ್ನು ಸಾಕುತ್ತಿರುವುದು ಕಂಡುಬರುತ್ತಿದೆ.

**ಕೋಷ್ಟಕ ೭.೧: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಪಶುಸಂಪತ್ತುಗಳ ವಿವರ**

| **ಪಶುಸಂಪತ್ತು** | ಎತ್ತು | ಆಕಳು | ಕುರಿಗಳು | ಮೇಕೆ | ಕೋಳಿ | ಕೌಜುಗ | ನಾಯಿ | ಇತರೆ |
|---|---|---|---|---|---|---|---|---|
| **ಸಂಖ್ಯೆ** | ೪ | ೧೮ | ೧೮೦ | ೧೬೫ | ೧,೫೫೫ | ೧೦ | ೯೫ | ೨೫ |
| | **ಒಟ್ಟು** | | | | | | | **೨೦೫೨** |

ಈ ಮೇಲಿನ ಕೋಷ್ಟಕದಲ್ಲಿ ಬುಡ್ಗ ಜಂಗಮರು ಸಾಕುವ ಪ್ರಾಣಿಪಕ್ಷಿಗಳನ್ನು ಕುರಿತು ವಿವರಿಸಲಾಗಿದೆ. ೪ ಎತ್ತುಗಳು, ೧೮ ಆಕಳು, ೧೮೦ ಕುರಿ, ೧೬೫ ಮೇಕೆ, ೧,೫೫೫ ಕೋಳಿ, ೯೫ ನಾಯಿ, ೧೦ ಕೌಜುಗಗಳನ್ನು ಸಾಕುತ್ತಿರುವುದು ಕಾಣಬಹುದು. ನಾಯಿ ಮತ್ತು ಕೋಳಿಗಳನ್ನು ಬುಡ್ಗ ಜಂಗಮರ ನೆಲೆಗಳ ಪ್ರತಿಯೊಂದು ಮನೆಯಲ್ಲಿ ಕನಿಷ್ಠ ೫ ರಿಂದ ೧೦ ಕೋಳಿಗಳಾದರೂ ಸಾಕುವುದನ್ನು ಕಾಣಬಹುದು. ಆಕಳು ಮತ್ತು ಎತ್ತುಗಳನ್ನು ಸಿರುಗುಪ್ಪ ತಾಲೂಕಿನ ಹಳೇಕೋಟೆ ಮತ್ತು ಬಲಕುಂದಿಯಲ್ಲಿ ಸಾಕುವುದನ್ನು ಕಾಣಬಹುದು. ಇನ್ನೂ ಕುರಿ ಮೇಕೆಗಳನ್ನು ಹರಪನಹಳ್ಳಿ, ಹಗರಿಬೊಮ್ಮನಹಳ್ಳಿ, ಹಳೆಕೋಟೆ, ಬಲಕುಂದಿ ಗ್ರಾಮದಲ್ಲಿ ಒಂದು ಉಪವೃತ್ತಿಯಾಗಿ ಕೆಲವು ಕುಟುಂಬಗಳು ಸಾಕುತ್ತಿದ್ದಾರೆ. ಕೌಜಗಗಳನ್ನು ಮತ್ತು ನಾಯಿಗಳನ್ನು ಸಣ್ಣಪುಟ್ಟ ಕಾಡು ಪ್ರಾಣಿಗಳನ್ನು ಬೇಟೆಯಾಡಲು ಸಾಕಿಕೊಂಡಿರುವುದು ಕಾಣಬಹುದು.

**ಬುರ್ರಕಥಾ ಪ್ರದರ್ಶನ:** ಈ ಬುರ್ರಕಥಾ ಕಲಾಪ್ರಕಾರವು ಬುಡ್ಗ ಜಂಗಮರ ಪ್ರಮುಖ ಪಾರಂಪರಿಕ ಕುಲಕಸುಬುಗಳಲ್ಲಿ ಒಂದು. ಈ ಕಥೆಯನ್ನು ಹೆಣ್ಣು ಮತ್ತು ಗಂಡು ಇಬ್ಬರು ಈ ಕಲೆಯನ್ನು ಪ್ರದರ್ಶಿಸುತ್ತಾರೆ. ಈ ಕಥೆಗೆ ತಂಬೂರಿ, ಡುಮುಕಿ(ಬುಡುಗ) ನುಡಿಸುತ್ತಾ ಹೆಗಲಮೇಲೆ ಜೋಳಿಗೆ ಹಾಕಿಕೊಂಡು ಮನೆಮನೆಗೆ ಹೋಗಿ ಕುಮರಾರಾಮನ ಕಾವ್ಯ, ಕೃಷ್ಣಗೊಲ್ಲರ ಕಾವ್ಯ, ಬೊಬ್ಬಿಲಿ ನಾಗಿರೆಡ್ಡಿ ಕಾವ್ಯ, ಸ್ಯಾಸಿ ಚಿನ್ನಮ್ಮ ಕಾವ್ಯ, ಬಾಲನಾಗಮ್ಮ ಕಾವ್ಯದ ಇತ್ಯಾದಿ ಕಥೆ ಕಾವ್ಯಗಳನ್ನು ಹಾಡುತ್ತಾ ದವಸ ಧಾನ್ಯಗಳನ್ನು ದಾನಧರ್ಮವಾಗಿ ಪಡೆದು ತಮ್ಮ ಆರ್ಥಿಕ ಜೀವನವನ್ನು ಪೂರೈಸಿಕೊಳ್ಳುತ್ತಾರೆ.

**ಗಂಗಿಗೌರಿ ಗಾಯನ ಮೇಳ:** ಗಂಗಿಗೌರಿ ಗಾಯನ ಮೇಳವು ಬುಡ್ಗ ಜಂಗಮರ ಪಾರಂಪರಿಕ ಕಲಾಪ್ರಕಾರಗಳಲ್ಲಿ ಒಂದಾಗಿದ್ದು, ಈ ಸಮುದಾಯದ ಹೆಣ್ಣು ಮಕ್ಕಳು ಮನೆ ಮನೆಗೆ ಗಂಗಿಗೌರಿ ರಾಗಿ ಬೀಸುವ ಗೊಂಬೆಗಳ ಮೂಖಾಂತರ ಗಂಗಿಗೌರಿಯ ಸವತಿಯ ಸಂಸಾರದ ಬಾಳನ್ನು

ಕುರಿತು ಹಾಡುತ್ತಾ ಅದರಿಂದ ಕಾಳುಕಡಿಗಳನ್ನು ದಾನಪಡೆದು ಪಡೆದು ತಮ್ಮ ಆರ್ಥಿಕ ಜೀವನವನ್ನು ಪೂರೈಸಿಕೊಳ್ಳುತ್ತಾರೆ.

**ಹಗಲುವೇಷ ಪ್ರದರ್ಶನ:** ಹಗಲುವೇಷ ಕಲೆಯು ಬುಡ್ಗ ಜಂಗಮರ ಪಾರಂಪರಿಕ ಕುಲಕಸುಬುಗಳಲ್ಲಿ ಒಂದಾಗಿದೆ. ಹಗಲುವೇಷವೆಂದರೆ ರಾಮಾಯಣ, ಮಹಾಭಾರತ ಮತ್ತು ಭಾಗವತದಲ್ಲಿ ಬರುವ ಕೆಲವು ಸನ್ನಿವೇಷಗಳನ್ನು ಮತ್ತು ಐತಿಹಾಸಿಕ ವೀರ ಯೋದರ ಬಗ್ಗೆ ನಾಟಕಗಳನ್ನು ಕಟ್ಟಿ ಮತ್ತು ಸಮುದಾಯಗಳ ಚರಿತ್ರೆಯನ್ನು ತಿಳಿಸಲು ಜಾತಿಗೊಂದು ವೇಷಗಳನ್ನು ಕಟ್ಟಿ ಸಂಗೀತ ಮತ್ತು ಟಮಟೆ ತಾಳ ಮೇಳ, ವಿವಿಧ ವೇಷಭೂಷಣಗಳೊಂದಿಗೆ ಜನಸಾಮಾನ್ಯರಿಗೆ ವಿಡಂಬನೆ ಮತ್ತು ನೀತಿ ಸಂದೇಶಗಳನ್ನು ತಿಳಿಸುತ್ತಾರೆ.

ಬುಡ್ಗ ಜಂಗಮರು ಆಯಾ ಪ್ರದೇಶದ ಸುತ್ತಮುತ್ತಲಿನ ಗ್ರಾಮಗಳನ್ನು ಊರಾಡಲು ಒಬ್ಬೊಬ್ಬರಿಗೆ ಇಂತಿಷ್ಟು ಗ್ರಾಮಗಳೆಂದು ಭಾಗ ಹಂಚಿಕೊಂಡು ಕರಾರು ಮಾಡಿಕೊಂಡಿತ್ತಾರೆ. ನಂತರ ಗ್ರಾಮಗಳನ್ನು ಹೊಂದಿರುವ ಹತ್ತು ಹನ್ನೇರೆಡು ಜನ ಸೇರಿ ಒಂದು ಮೇಳವನ್ನು ಕಟ್ಟಿಕೊಂಡು, ಕುಟುಂಬ ಸಮೇತ ಸರಕು ಸರಂಜಾಮುಗಳನ್ನು ಹಾಗೂ ಕುರಿ ಮೇಕೆ, ಅಸು, ನಾಯಿ, ಕೋಳಿಗಳನ್ನು, ಮಕ್ಕಳು ಮರಿಗಳನ್ನು ಕಟ್ಟಿಕೊಂಡು ಹೋಗುತ್ತಾರೆ. ಹಿಂದಿನ ಕಾಲದಲ್ಲಿ ಕುದುರೆ ಹಾಗೂ ಒಂಟೆಗಳನ್ನು ಸಾಕುತ್ತಾ ಅದರಮೇಲೆ ಸರಕು ಸರಂಜಾಮಗಳನ್ನು ಕಟ್ಟಿಕೊಂಡು ಬರಿಗಾಲಲ್ಲೆ ನಡೆದು ಬೆಟ್ಟಗುಡ್ಡಗಳನ್ನು ದಾಟಿಕೊಂಡು ಅಲೆಮಾರಿಯಾಗಿ ಅಲೆದಾಡುತ್ತಿದ್ದನು. ಹೀಗೆ ಊರ ಹೊರಗಿನ ಬಯಲು ಪ್ರದೇಶದಲ್ಲಿ ಸ್ವಚ್ಚ ಮಾಡಿಕೊಂಡು ಬಿಡಾರಹೂಡುತ್ತಾರೆ. ಮರುದಿನ ಬೆಳಿಗ್ಗೆ ಊರಿನ ಗೌಡನಿಗೆ ಅಥವಾ ಹಿರಿಯ ಮುಖಂಡನಿಗೆ ನಮಸ್ಕಾರ ಮಾಡಿ ಪ್ರತಿದಿನ ದಿನಕ್ಕೊಂದು ಪ್ರಸಂಗದಂತೆ ಐದುಆರು ರೂಪಕಗಳನ್ನು ಬಡವ ಶ್ರಿಮಂತ ಎಂಬ ಬೇದಭಾವವಿಲ್ಲದೆ ಪ್ರತಿ ಓಣಿಯಲ್ಲಿ ಮನೆ ಮನೆಗೆ ತೆರಳಿ ಅವರ ಅಂಗಳದ ಮುಂದೆ ತಮ್ಮ ಕಲೆಯನ್ನು ಪ್ರದರ್ಶಿಸಿ ಕೊನೆದಿನಗಳಲ್ಲಿ ಪ್ರತಿ ಮನೆಗೆ ಹೋಗಿ ಪಟ್ಟಿಎತ್ತಿ(ಚಂದಾ) ದಾನ ಧರ್ಮವನ್ನು ಪಡೆದುಕೊಂಡು ತಮ್ಮ ಜೀವನವನ್ನು ಸಾಗಿಸುತ್ತಾರೆ. ಹೀಗೆ ಒಂದೂರಿನಲ್ಲಿ ೧೫ ರಿಂದ ೨೦ ದಿನಗಳವರೆಗೆ ಇದ್ದು ಮತ್ತೊಂದು ಊರಿಗೆ ಹೋಗುತ್ತಾರೆ. ಹೀಗೆ ತಮ್ಮ ತಮ್ಮ ಕಲಾಪ್ರದರ್ಶನಗಳ ಮೂಲಕ ತಮ್ಮ ಆರ್ಥೀಕ ಜೀವನವನ್ನು ಪೂರೈಸಿಕೋಳ್ಳುತ್ತಾರೆ.

**ಕರಕುಶಲ ಕಲೆಗಳು**

ಕೈಯನ್ನು ಜಾಣತನದಿಂದ ಬಳಸಿ ಕಲಾತ್ಮಕ ಕೌಶಲ್ಯವನ್ನು ಪ್ರದರ್ಶಿಸುವ ಕಲೆಯನ್ನು ಕರಕುಶಲಕಲೆಗಳು ಎಂದು ಕರೆಯುತ್ತೇವೆ. ಒಂದು ಸಮುದಾಯದ ಒಳಪದರವನ್ನು ಮತ್ತು ನಡವಳಿಕೆಯ ಸಂಕೀರ್ಣತೆಯನ್ನು ಬಹು ಸೂಕ್ಷ್ಮವಾಗಿ ತೋರಿಸುವಲ್ಲಿ ಜನಪದ ಕುಶಲಕಲೆಗಳ ಪಾತ್ರ ಬಹುಪ್ರಮುಖವಾದುದು. ಒಂದು ಜನಾಂಗದ ಆಚರಣೆ, ನಂಬಿಕೆ, ಸಂಪ್ರದಾಯ ಮುಂತಾದವುಗಳ ಅಧ್ಯಯನ ಮಾಡುವ ಮಾನವ ಸಮಾಜಶಾಸ್ತ್ರಜ್ಞರು ಒಂದು ಸಮುದಾಯ ತನ್ನ ಹೊಟ್ಟೆಯಲ್ಲಿ ಅರಗಿಸಿಕೊಂಡಿರುವ ಒಳಪದರವಾದ ಕುಶಲಕಲೆಗಳನ್ನು ಅಭ್ಯಾಸ ಮಾಡದಿದ್ದರೆ ಸತ್ಯ ಶೋಧನೆಯಾಗದು, ಬಹುಮುಖಗಳ ಪರಿಚಯವಾಗದು.

ಹಾಗಾಗಿ ಈ ಸಮುದಾಯದ ಕುಶಲಕಲೆಗಳನ್ನು ಗಮನಿಸಬೇಕಾಗಿದೆ. ಬುಡ್ಗ ಜಂಗಮ್ ಸಮುದಾಯದ ಕರಕುಶಲ ಕಲೆಗಳಾದ ಚಾಪೆ ಹೆಣೆಯುವುದು, ಕೌದಿ ಹೊಲಿಯುವುದು, ಬೇಟೆಯ ಉಪಕರಣಗಳು ಹಾಗೂ ಬಲೆ ನೇಯುವುದು, ಕಲಾಪ್ರದರ್ಶನದ ವಾದ್ಯ ಮತ್ತು ವೇಷ ಭೂಷಣಗಳನ್ನು ತಯಾರಿಸುವುದು ಇತ್ಯಾದಿ ಕರಕುಶಲ ಕಲೆಗಳು ತಮ್ಮ ಆರ್ಥಿಕ ಮೂಲಗಳಿಗೆ ಸಹಾಯವಾಗುವುದು ಕಾಣಬಹುದು.

**ಚಾಪೆ ಹೆಣೆಯುವುದು:** ಚಾಪೆ ಹೆಣೆಯುವುದು ಗೃಹ ಕೈಗಾರಿಕೆಗಳಲ್ಲಿ ಒಂದು. ಭಾರತದ ಆದಿವಾಸಿ ಸಮುದಾಯಗಳಲ್ಲಿ ಹೆಚ್ಚಾಗಿ ಈ ಗುಡಿ ಕೈಗಾರಿಕೆಯನ್ನು ಅವಲಂಬಿಸಿದ್ದಾರೆ. ಈ ವೃತ್ತಿಯಿಂದಲೇ ತಮ್ಮ ಜೀವನವನ್ನು ನಿರ್ವಹಿಸುತ್ತಿದ್ದರು. ಚಾಪೆ ಹೆಣೆಯುವುದು ಬಡವರಿಗೆ ಆದಿವಾಸಿ, ಅಲೆಮಾರಿ ತಳ ಸಮುದಾಯಗಳಿಗೆ ಪ್ರಮುಖವಾದ ಉದ್ಯಮವಾಗಿದ್ದು ಆದುದರಿಂದಲೇ ತಮ್ಮ ಜೀವನ ನಿರ್ವಹಿಸಿಕೊಂಡು ಹೋಗುತ್ತಾರೆ. ಈ ಕಲೆಯು ಬುಡ್ಗ ಜಂಗಮರ ಉಪವೃತ್ತಿಗಳಲ್ಲಿ ಒಂದಾಗಿದೆ, ಇವರಲ್ಲಿ ಪುರುಷರು ಹಗಲುಹೊತ್ತಿನಲ್ಲಿ ಮುಂಜಾನೆ ಸಮಯದಲ್ಲಿ ಕಲಾಪ್ರದರ್ಶನ ಮಾಡಲು ಹೋದರೆ, ಹೆಂಗಸರು ಮುಂಜಾನೆ ಗಂಗಿಗೌರಿ, ಬುರ್ರಕಥಾ ತಂಬೂರಿ ಇಡಿದುಕೊಂಡು ಭಿಕ್ಷಾಟನೆಗೆ ಹೋಗುತ್ತಾರೆ. ಬೆಳ್ಳಿಗ್ಗೆ ಹನ್ನೊಂದು ಅಥವಾ ಹನ್ನೇರೆಡು ಗಂಟೆಯೊಳಗೆ ಕಲಾಪ್ರದರ್ಶನ ಮುಗಿಸಿಕೊಳ್ಳುತ್ತಾರೆ. ನಂತರ ಮಧ್ಯಾಹ್ನ ಸಮಯದಲ್ಲಿ ಗಂಡಸರು ಈಚಲು ಮರದ ಹಸಿ ಗರಿಗಳನ್ನು ತರುತ್ತಾರೆ. ಹೆಂಗಸರು ಇದನ್ನು ಖಾಲಿ ಸಮಯದಲ್ಲಿ ಮನೆಯಲ್ಲಿದ್ದು ಚಾಪೆ ಹೆಣೆಯುವಲ್ಲಿ ತೊಡಗುತ್ತಾರೆ. *(ಭಾ: ೭.೨).* ಗರಿ ಹಸಿವಾಗಿರುವಾಗಲೇ ಅದರ ತುದಿಗೆ ಚಿಕ್ಕಕೋಲಿನಿಂದ ಬಡಿದು ಮುಳ್ಳುಗಳನ್ನು ಉದುರಿಸಿ ಹೊತ್ತುಕೊಂಡು ತರುತ್ತಾರೆ, ತಕ್ಷಣವೇ ಗರಿಗಳನ್ನು ಸೀಳುತ್ತಾರೆ. ಅಲ್ಲದೆ ನಾಲ್ಕು ದಿವಸ ಗರಿಗಳನ್ನು ಬಿಸಿಲಿಗೆ ಒಣಗಿಸುತ್ತಾರೆ, ಆಮೇಲೆ ಬಿಡಿ ಗರಿಗಳನ್ನು ಎರಡು ದಿವಸ ನೀರಿನಲ್ಲಿ ನೆನಸಿ ಹದಮಾಡಲಾಗುತ್ತದೆ. ಹೆಚ್ಚಾಗಿ ಬುಡ್ಗ ಜಂಮರಲ್ಲಿ ಹೆಂಗಸರು ಚಾಪೆ ಹೆಣಿಕೆಯಲ್ಲಿ ತೊಡಗುತ್ತಾರೆ. ಅವರು ತಯಾರಿಸಿದ ಚಾಪೆ ನಾಲ್ಕುಮೊಳ ಉದ್ದ ಎರಡುವರೆಮೊಳ ಅಗಲ ಹೊಂದಿರುತ್ತದೆ. ನಾಲ್ಕು ಇಂಚಿನ ಅಗಲವಿರುವ ಹತ್ತೊಂಭತ್ತು ಗೆರೆಗಳಿಂದ ಕೂಡಿರುತ್ತದೆ. ಮೊದಲಿಗೆ ಚಾಪೆಯ ಉದ್ದಕ್ಕೆ ಸಂಬಂಧಿಸಿದಂತೆ ಬಿಡಿ ಗರಿಗಳನ್ನು ಒಂದೊಂದಕ್ಕೆ ಒಳಗೆ ಸೇರಿಸುತ್ತ ಮೇಲೆ ಕೆಳಗೆ ಬಾಗಿಸುತ್ತ ಹೆಣೆಯುತ್ತಾ ಸಾಗುತ್ತಾರೆ. ಹೀಗೆ ತಯಾರಿಸಿದ ಚಾಪೆಗಳನ್ನು ಸಮೀಪದ ಸಂತೆಗೆ ಹೋಗಿ, ಐದು, ಒಂಭತ್ತು ಮತ್ತು ಹತ್ತು ರೂಪಾಯಿಗೆ ಮಾರಾಟ ಮಾಡಿ ನಿತ್ಯೋಪಜೀವನಕ್ಕೆ ಬೇಕಾಗುವ ಪದಾರ್ಥಗಳನ್ನು ಕೊಂಡುಕೊಳ್ಳುತ್ತಿದ್ದರು. ಈ ಕಲೆಯು ಕೊರಚ ಕೊರಮ ಸಮುದಾಯಲ್ಲಿ ಪ್ರಮುಖ ವೃತ್ತಿಯಾಗಿ ಚಾಪೆ ಹೆಣೆಯುವ, ಕಸಬಾರಿಗೆ ತಯಾರಿಸುವ ಕಲೆಯನ್ನು ಕಾಣಬಹುದಾಗಿದೆ. ಆದರೆ ಈಗ ಆಧುನಿಕವಾಗಿ ಪ್ಲಾಸ್ಟಿಕ್ ಇನ್ನಿತರೆಗಳಿಂದ ಈಚಲುಮರದ ಚಾಪೆಗಳನ್ನು ಬಳಸುವುದು ಕಡಿಮೆಯಾಗಿದರಿಂದ ಈಗ ಚಾಪೆ ಹೆಣೆಯುವ ಕಲೆಯು ಕಡಿಮೆಯಾಗಿದೆ.

**ಗುಡಾರ (ಟೆಂಟ್)ಗಳನ್ನು ಹೊಲೆಯುವಕಲೆ:** ಊರಾಡಿಕೊಂಡು ಬಂದ ಹಳೆಯ ಕಾಟನ್ ಸೀರೆಬಟ್ಟೆಗಳಿಂದ ಒಂಭತ್ತರಿಂದ ಹನ್ನೊಂದು ಅಡಿ ಅಗಲ ಮತ್ತು ಉದ್ದವಿರುವ ಡೇರೆಯನ್ನು

ತಯಾರಿಸುತ್ತಾರೆ. ಬಟ್ಟೆಯನ್ನು ನೆಲದ ಮೇಲೆ ಹಾಸಿ, ಆ ಬಟ್ಟೆ ಮುದುರಿ ಹೋಗದಂತೆ ನಾಲ್ಕು ಮೂಲೆಗಳಿಗೂ ಕಲ್ಲು ಇಟ್ಟು ತುಂಡು ತುಂಡು ಬಟ್ಟೆಗಳನ್ನು ಹಾಕಿ ನಂತರ ಅದರ ಮೇಲೆ ಉದ್ದವಾದ ಸೀರೆಗಳನ್ನು ಹಾಕಿ ದಾರದಿಂದ ಹೊಲೆಯುತ್ತಾರೆ. ಕೌದಿಯ ನಾಲ್ಕು ಮೂಲೆಗೆ ಸುತ್ತಾ ಹಗ್ಗ ಕಟ್ಟಿರುತ್ತಾರೆ. ಏಕೆಂದರೆ ಈ ಹಗ್ಗದ ಸಹಾಯದಿಂದ ತಮ್ಮ ಗುಡಿಸಲನ್ನು ಬಿಗಿಯಾಗಿ ಕಟ್ಟುವಲ್ಲಿ ಸಹಾಯಕವಾಗುತ್ತವೆ. ಜೊತೆಗೆ ನಾಲ್ಕು ಮೂಲೆಯ ಅಂಚಿಗೆ ಚಿಕ್ಕ ಚಿಕ್ಕ ಹಗ್ಗಗಳಿರುತ್ತವೆ. ಈ ಹಗ್ಗಗಳು ಗುಡಿಸಲಿನ ನಾಲ್ಕು ಮೂಲೆಗೆ ಹೊಡೆದ ಕಬ್ಬಿಣದ ಗೂಟಗಳಿಗೆ ಬಿಗಿಯಾಗಿ ಕಟ್ಟಲು ಸಹಕಾರಿಯಾಗುತ್ತವೆ. ಹೀಗೆ ಈ ಗುಡಾರದ ಕೌದಿಹೊಲಿಯುವ ಕಲೆಯನ್ನು ಬುಡ್ಗ ಜಂಗಮರಲ್ಲಿ ಗಂಡಸರು ಮತ್ತು ಹೆಂಗಸರು ಕಲಿತ್ತಿದ್ದಾರೆ.

**ಕೌದಿ ಹೊಲಿಯುವುದು:** ಅಲೆಮಾರಿ ಬುಡ್ಗ ಜಂಮರಲ್ಲಿ ವಿಶೇಷವಾಗಿ ಹೆಂಗಸರು ಕೌದಿಯನ್ನು ಹೊಲಿಯುತ್ತಾರೆ. ಇದನ್ನು ಚಿಕ್ಕ ಸೂಜಿಯಿಂದ ಹೊಲೆಯುವರು. ಅರ್ಧ ಇಂಚಿಗೆ ಒಂದರಂತೆ ದಾರಗಳಿಂದ ಹೊಲಿಗೆ ಹಾಕುತ್ತಾರೆ. ಮಧ್ಯದಲ್ಲಿ ತಮಗೆ ಇಷ್ಟವಾದ ಚಿತ್ರಗಳನ್ನು ಬಿಡಿಸುತ್ತಾರೆ. ಮಧ್ಯಭಾಗದಿಂದ ಕೌದಿಯ ಕೊನೆಯ ಅಂಚಿನವರೆಗೂ ವಿಶಿಷ್ಟ ರೀತಿಯಲ್ಲಿ ಹೊಲಿಗೆ ಹಾಕುತ್ತಾರೆ. ಮೊದಲ ನಾಲ್ಕು ಮೂಲೆಯಲ್ಲಿ ಸುತ್ತಾ ಹೊಲಿದ ನಂತರ ಹಂತಹಂತವಾಗಿ ಕೌದಿಯ ಎಲ್ಲ ಭಾಗಗಳಲ್ಲಿ ಸುತ್ತಾ ಹೊಲಿಯುತ್ತಾರೆ. ಇದನ್ನು ಬಿಡುವಿನ ಸಮಯದಲ್ಲಿ ಕೌದಿಯನ್ನು ಹೊಲಿಯುತ್ತಾರೆ.

**ಜೋಳಿಗೆ ಹೊಲಿಯುವುದು:** ಭಿಕ್ಷಾವೃತ್ತಿಗಳಾದ ಬುಡ್ಗ ಜಂಗಮರು ತಮ್ಮ ಜೋಳಿಗೆಯನ್ನು ತಾವೇ ಹೊಲಿದುಕೊಳ್ಳುತ್ತಾರೆ. ಇದನ್ನು ರಾಸಾಯನಿಕ ಗೊಬ್ಬರದ ಚೀಲಗಳು, ಅಥವಾ ಕಾಟನ್ ಬಟ್ಟೆಗಳಿಂದ ತಯಾರಿಸುತ್ತಾರೆ. ಬಟ್ಟೆಯನ್ನು ತೆಗೆದುಕೊಂಡು ಎರಡು ಅಡಿ ಇರುವಂತೆ ಕತ್ತರಿಸುತ್ತಾರೆ, ಅದರಲ್ಲಿ ಒಂದು ಜೋಳಿಗೆಯನ್ನು ಮೂರು ಅಥವಾ ನಾಲ್ಕು ಪದರ(ಅರ) ಒಳಭಾಗಗಳಾಗಿ ವಿಂಗಡಿಸಿ ಜೋಳಿಗೆಯನ್ನು ಹೊಲಿಯುತ್ತಾರೆ. ಏಕೆಂದರೆ ದಾನಧರ್ಮ ನೀಡಿಸಿಕೊಳ್ಳುವಾಗ ಒಂದರಲ್ಲಿ ಅಕ್ಕಿ, ಇನ್ನೊಂದರಲ್ಲಿ ಜೋಳ, ಮತ್ತೊಂದರಲ್ಲಿ ಗೋಧಿ ಹೀಗೆ ಭಾಗಗಳಾಗಿ ವಿಂಗಡಿಸಿಕೊಳ್ಳುತ್ತಾರೆ.

**ಬೇಟೆಯ ಉಪಕರಣಗಳ ಕರಕುಶಲ ಕಲೆಗಳು**

**ಬಲೆ ನೇಯುವುದು:** ಕಲಾ ಪ್ರದರ್ಶನವೇ ಬುಡ್ಗ ಜಂಗಮರ ಮೂಲ ವೃತ್ತಿಯಾಗಿ ಹಳ್ಳಿ ಹಳ್ಳಿಗಳಿಗೆ ಹೋಗಿ ಕಲಾ ಪ್ರದರ್ಶನ ನೀಡುತ್ತಾ ಅದರ ಜೊತೆಜೊತೆಗೆ ಕಲಾಪ್ರದರ್ಶನಕ್ಕೆ ಬೇಕಾಗುವ ವಾದ್ಯಗಳು, ವೇಷಭೂಷಣಗಳ ತಯಾರಿಸುವುದು, ಕೌದಿ ಹೊಲಿಯುವುದು, ಚಾಪೆ ಹೆಣೆಯುವುದು, ಚಿತ್ರಬಿಡಿಸುವುದು ಮುಂತಾದ ಕರಕುಶಲಕಲೆಗಳ ಜೊತೆಗೆ ಬೇಟೆಯಾಡುವ ಬಲೆಗಳನ್ನು ತಯಾರಿಸುವ ಕಲೆಯನ್ನು ಸಹ ಹೊಂದಿದ್ದಾರೆ.

ಬುಡ್ಗ ಜಂಗಮರು ಬಲೆಗಳನ್ನು ನೇಯುವಲ್ಲಿ ತುಂಬಾ ನಿಪುಣರು. ಇವರು ನೇಯುವ ಬಲೆಗಳಲ್ಲಿ ೧)ಕಾಸಲ ವಲ ಅಥವಾ ಚಾಪಲವಲ (ಮೀನಿನ ಬಲೆ), ೨) ಕಮ್ಜು ಪಾರ್ಧಿ (ಕವುಜಗದ ಬಲೆ), ೩) ಕುಂದೇಲುವಲ (ಮೊಲದ ಬಲೆ), ೪) ತೋಡಿಸಿಗಾಡು ವಲ (ಅಳಿಲು ಬಲೆ), ೫) ಪಾರಿವಾಳ.

ಉತ್ತುತ್ತಿ ಪಕ್ಷಿಗಳ ಬಲೆ ಎಂದು ವಿಂಗಡಿಸಬಹುದಾಗಿದೆ. ಮತ್ತು ಆಮೆ, ಕಾಡುಹಂದಿ, ನರಿ ತೋಳ ಹಿಡಿಯುವ ಆಯುಧಗಳ ಕತ್ತಿ ಬಲೆಗಳು ಸಹ ಸ್ವತ ತಾವೇ ತಯಾರಿಸಿಕೊಳ್ಳುತ್ತಾರೆ.

**ಕಾಸಲು ವಲ ಅಥವಾ ಚಾಪ್ಲವಲ ಕಟ್ಟೆದಿ (ಮೀನಿನ ಬಲೆ ನೇಯುವುದು)**: ಮೀನು ಹಿಡಿಯುವ ಬಲೆಯನ್ನು ರೇಷ್ಮೆದಾರ ಮತ್ತು ಕಾಟನ್‌ದಾರಗಳಿಂದ ನೇಯುತ್ತಾರೆ. ಇದಕ್ಕೆ ಕಳ್ಳಿಗಿಡದ ಬೆಂಡು, ಮತ್ತು ಕೆಳಗೆ ಕಬ್ಬಿಣದ ಸೀಸಗಳನ್ನು ಬಳಸುತ್ತಾರೆ. ಎರಡುವರೆ ಅಡಿ ಅಗಲ, ನಲವತ್ತಾರಿದ ನೂರು ಅಡಿ ಉದ್ದ ಇರುತ್ತದೆ. ಚಿಕ್ಕ ಬಲೆ ಎರಡುವರೆ ಅಡಿ ಅಗಲ, ಇಪ್ಪತ್ತೈದು ಅಡಿ ಉದ್ದ ಇರುತ್ತದೆ. ದೊಡ್ಡ ಬಲೆಯನ್ನು ನದಿ, ಹೊಳೆ, ಕೆರೆಗಳಲ್ಲಿ ಹಾಕಿ ಮೀನುಗಳನ್ನು ಹಿಡಿದರೆ, ಚಿಕ್ಕ ಬಲೆ ಮಡಗು, ಹಳ್ಳಗಳಲ್ಲಿ ಹಾಕಿ ಮೀನುಗಳನ್ನು ಹಿಡಿಯುತ್ತಾರೆ. ಬಲೆಯಿಂದ ಮೀನುಗಳು ಹೊರಗೆ ಹೋಗದಂತೆ ಚಿಕ್ಕಚಿಕ್ಕಕಣ್ಣುಗಳಂತೆ ಮನೆಗಳನ್ನು ಮಾಡಿರುತ್ತಾರೆ. ಹೆಚ್ಚಾಗಿ ರೇಷ್ಮೆದಾರವನ್ನು ಉಪಯೋಗಿಸಿರುವುದರಿಂದ ಬೇಗ ಹಾಳಾಗದೆ ಬಹಳಷ್ಟು ವರ್ಷಗಳು ಬಾಳಿಕೆಗೆ ಬರುತ್ತವೆ.

**ಕುಂದೇಲು ವಲ (ಮೊಲದ ಬಲೆ)**: ಈ ಬಲೆಯನ್ನು ಗಂಡಸರು ತಯಾರಿಸುತ್ತಾರೆ. ಮೊಲದ ಬಲೆಯು ರೇಷ್ಮೆ ದಾರದಿಂದ ತಯಾರಿಸುತ್ತಾರೆ. ಇದು ಮೂವತ್ತು ಅಡಿ ಉದ್ದ, ಆರು ಅಡಿ ಅಗಲ ಹೊಂದಿರುತ್ತದೆ. ಚಿಕ್ಕ ಮತ್ತು ದೊಡ್ಡ ಮೊಲಗಳು ಸಿಕ್ಕಿ ಹಾಕಿಕೊಳ್ಳುವಷ್ಟು ಬಲೆಯನ್ನು ಹೆಣೆದಿರುತ್ತಾರೆ. ಬಲೆಯ ಎರಡು ಕೊನೆಗಳಿಗೆ ಒಂದೊಂದು ಹಗ್ಗಗಳನ್ನು ಕಟ್ಟಿರುತ್ತಾರೆ. ಮತ್ತು ಬಲೆ ಹಾಕುವಾಗ ಎರಡು ಕಡೆಗೂ ಮೊಲದ ಬಲೆಗೆ ಇರುವಂತೆ ಎರಡು ಕಬ್ಬಿಣದ ಗೂಟಗಳಿರುತ್ತವೆ.

**ತೋಡಿಸಿಗಾಡು ವಲ (ಅಳಿಲು ಬಲೆ)**: ಈ ಬಲೆ ರೇಷ್ಮೆ ದಾರದಿಂದ ಮಾಡಿರುತ್ತಾರೆ. ಇದು ಅತಿ ಸಣ್ಣ ಸಣ್ಣ ಮನೆಗಳಿಂದ ಕೂಡಿರುತ್ತದೆ. ಯಾವುದೇ ಕಾರಣಕ್ಕೂ ಇದರಲ್ಲಿ ಸಿಕ್ಕಿಬಿದ್ದ ಅಳಿಲು ಹೊರಗೆ ಹೋಗದಂತೆ ಹೊಲೆದಿರುತ್ತಾರೆ. ಈ ಬಲೆ ಆರು ಅಡಿ ಉದ್ದ ಎರಡುವರೆ ಅಡಿ ಅಗಲ ಹೊಂದಿರುತ್ತದೆ. ಬಲೆಯ ಎರಡು ಕೊನೆಗಳಿಗೆ ಒಂದೊಂದು ಹಗ್ಗಗಳನ್ನು ಕಟ್ಟಿರುತ್ತಾರೆ. ಮತ್ತು ಬಲೆ ಹಾಕುವಾಗ ಎರಡು ಕಡೆಗೂ ಮೊಲದ ಬಲೆಗೆ ಇರುವಂತೆ ಎರಡು ಕಬ್ಬಿಣದ ಗೂಟಗಳಿರುತ್ತವೆ. ಗಿಡ, ಮರ, ಚಿಕ್ಕಚಿಕ್ಕ ಬೆಟ್ಟಗುಡ್ಡಗಳ ಹತ್ತಿರ ಈ ಬಲೆಯನ್ನು ಹಾಕಿ ಅಳಿಲುಗಳನ್ನು ಹಿಡಿಯುತ್ತಾರೆ.

**ಎಂಟುವ ವಲ (ಉಡ ಹಿಡಿಯುವ ಬಲೆ)**: ಈ ಬಲೆಯನ್ನು ಹೊಲದಲ್ಲಿ ಬೆಳೆಯುವ ಒಂದು ಬಳ್ಳಿಯಿಂದ ತಯಾರಿಸುತ್ತಾರೆ, ಬಳ್ಳಿ ಹಸಿ ಇರುವಾಗಲೇ, ಕತ್ತರಿಸಿ ತಂದು ಉಡುವಿನ ಕತ್ತಿಗೆಯ ಆಕಾರಕ್ಕೆ ಇರುವಷ್ಟು ಗೋಲಾಕೃತಿಯಲ್ಲಿ ಸುತ್ತಿ ಹಾಕಿ ರಚಿಸುತ್ತಾರೆ. ಗೋಲಾದ ಒಳಗಡೆ ಕುದುರೆಯ ಬಾಲದ ಉದ್ದಾದ ಕೂದಲಿನಿಂದ ಉರುಲು ಹಾಕುವ ವ್ಯವಸ್ಥೆ ಮಾಡುತ್ತಾರೆ. ಉಡ ವಾಸಿಸುವ ಗುಡ್ಡ, ಕಲ್ಲುಗಳ ಪೊದರುಗಳಲ್ಲಿ ನೋಡಿ ಅದರ ಮೇಲಿನ ಭಾಗದಲ್ಲಿ ಈ ಬಲೆಯನ್ನು ಕಬ್ಬಿಣಗಳ ಗೂಟಕ್ಕೆ ಕಟ್ಟಿಬರುವ ರೂಢಿ ಅವರಲ್ಲಿದೆ. ಇದು ಗಿಡದಬಳ್ಳಿ ಇರಬಹುದೆಂದು ತಿಳಿದು ಊಡ ಹೊರಗೆ ಬರುವಾಗ ಈ ಶೂಲದಲ್ಲಿ ಸಿಕ್ಕಿ ಹಾಕಿಕೊಳ್ಳುತ್ತದೆ. ಉಡ ಚಿಕ್ಕದಿದ್ದರೆ, ಉರುಲು ನಡುವಿನ ಭಾಗದಲ್ಲಿ ಉಡ ದೊಡ್ಡದಿದ್ದರೆ ಅದರ ಕುತ್ತಿಗೆಗೆ ಉರಲು ಬೀಳುತ್ತದೆ. ಬಲೆಯ ಎರಡೂ ಕಡೆಗೂ

ಎರಡು ಕಬ್ಬಿಣದ ಗೂಟಗಳು ಇರುವುದರಿಂದ ಸಿಕ್ಕಿಕೊಂಡ ಉಡ ಮತ್ತು ಬಲೆ ಯಾವ ಕಡೆಗೂ ಹೋಗುವುದಿಲ್ಲ. ಮರುದಿವಸ ಹೋಗಿ ಎರಡು ತರುವ ಪದ್ಧತಿ ಬುಡ್ಗ ಜಂಗಮರಲ್ಲಿದೆ.

**ಕಮ್ಜು ಪಾರ್ಥಿ (ಕವುಜುಗ ಹಿಡಿಯುವ ಬಲೆ):** ಒಂದು ಇಂಚು ಅಗಲ ಹದಿನೈದು ಇಂಚು ಉದ್ದವಾಗಿರುವ ಹಲವು ಬಿದಿರು ಕಡ್ಡಿಗಳಿಂದ ಈ ಬಲೆ ತಯಾರಿಸುತ್ತಾರೆ. ಒಂದೊಂದು ಇಂಚು ಅಂತರವಿರುವಂತೆ ಈ ಬಿದಿರು ಕಡ್ಡಿಗಳನ್ನು ಬಿಗಿಯಾಗಿ ರೇಷ್ಮೇದಾರಗಳಿಂದ ತಳುಕು ಹಾಕಿರುತ್ತಾರೆ. ಒಂದೊಂದು ಮನೆಯನ್ನು ಬಿಗಿದ ದಾರದ ನಡುವೆ ಕುದುರೆ ಬಾಲದ ಕೂದಲುನಿಂದ ತಯಾರು ಮಾಡಿರುವ ಉರುಲು(ಶೂಲ) ಮೇಲ್ಭಾಗದಿಂದ ಬಿಗಿಯಾಗಿ ಕಟ್ಟಿರುತ್ತಾರೆ. ಕಟ್ಟಿದ ಉರುಲು ಮೇಲಿನ ಭಾಗದ ಎರಡು ಭಾಗದಲ್ಲಿ ಕೂದಲಿನಿಂದ ಎಳೆದು ದಾರದೊಳಗೆ ಈ ಉರುಲು ಅಗಲವಾಗಿ ಸೇರಿಸುತ್ತಾರೆ. ಸೆಟೆದು ನಿಂತಿರುವ ಉರುಲು(ಶೂಲ) ಕವುಜಗದ ಕೊರಳಿಗೆ ಬೀಳುವಂತೆ ಕಲಾತ್ಮಕವಾಗಿ ಹೆಣೆದಿರುತ್ತಾರೆ. ಈ ರೀತಿಯಾಗಿ ರಚನೆ ಮಾಡಿರುವ ಕವುಜಗದ ಬಲೆಗೆ ಮೂವತ್ತೆರಡರಿಂದ ಐವತ್ತು ಗೂಟಗಳಿರುತ್ತವೆ. ಎರಡೆರಡು ಗೂಟದ ನಡುವೆ ಐದೈದು ಮನೆಗಳಿರುತ್ತವೆ. ಹೀಗಾಗಿ ನೂರರಿಂದ ಎರಡು ನೂರು ಚಿಕ್ಕಚಿಕ್ಕ ಮನೆಗಳು ಕೂಡಿರುತ್ತವೆ. ಹೀಗೆ ರಚನೆ ಮಾಡಿದ ಕವುಜಗದ ಬಲೆ ಸುಮಾರು ವರ್ಷಗಳ ಕಾಲ ಬಾಳಿಕೆ ಬರುತ್ತದೆ.

**ವಾದ್ಯಗಳು ಮತ್ತು ವೇಷಭೂಷಣಗಳ ಕರಕುಶಲ ಕಲೆಗಳು**

ಅಲೆಮಾರಿ ಬುಡ್ಗ ಜಂಗಮರ ಪ್ರಮುಖ ಕುಲಕಸುಬು ಕಲೆ. ಇವರ ಕಲೆಗಳಾದ ಬುರ್ರಕಥಾಮೇಳ, ಗಂಗಿಗೌರಿಮೇಳ, ಹಗಲುವೇಷ ಕಲೆಗಳಲ್ಲಿ ಬಳಸುವ ಪ್ರಮುಖ ವಾದ್ಯಗಳಾದ ತಂಬೂರಿ, ಬುಡ್ಗ(ಡುಮುಕಿ), ಗಗ್ಗರಿವಾದ್ಯ, ಗಂಗಿಗೌರಿ ಗಾಯನ ಗೊಂಬೆ, ಡಿಕ್ಕಿ, ತಾಳ, ರಾಗಮಾಲ, ಡೋಲಕ್, ತಬಲಾ, ಹಾರ್ಮೋನಿಯಂ ಇತ್ಯಾದಿ ವಾದ್ಯವನ್ನು ಬಳಸುತ್ತಾರೆ. ಕೆಲವು ವಾದ್ಯಗಳನ್ನು ಸ್ವತಃ ಅವರೇ ತಯಾರಿಸಿಕೊಳ್ಳುತ್ತಾರೆ. ಇವುಗಳು ಹಿತ್ತಾಳೆಯಿಂದ, ಕಟ್ಟಿಗೆಯಿಂದ ಮಣ್ಣಿನ ಮಡಿಕೆಯಿಂದ, ಸೊರೆಕಾಯಿ ಬುರಡೆಯಿಂದ ವಾದ್ಯಗಳನ್ನು ತಯಾರಿಸಿಕೊಳ್ಳುತ್ತಾರೆ. ಅವುಗಳ ಮೇಲೆ ಬಣ್ಣ ಬಣ್ಣವಾದ ಚಿತ್ತಾರಗಳು ಅಲಂಕೃತವಾಗಿರುತ್ತವೆ. ಉತ್ತರ ಕನ್ನಡ ಜಿಲ್ಲೆಯ ಶಿರಸಿ, ಕುಮಟ, ಅಂಕೋಲಗಳಲ್ಲಿರುವ ಗುಮ್ಮಟೆ ಎಂಬ ವಾದ್ಯ ಈ ಬುರ್ರಕಥೆಗಳಲ್ಲಿ ಬಳಸುವ ಬುಡ್ಗ ವಾದ್ಯಕ್ಕೆ ಹೋಲುತ್ತದೆ. ಇದನ್ನು ನುಡಿಸುತ್ತಾ ಹಾಡು ಹೇಳುವ ಪದ್ಧತಿ ಇದೆ. ಗುಮ್ಮಟೆ ಸಾಮಾನ್ಯವಾಗಿ ಹಿತ್ತಾಳೆಯದ್ದಾಗಿದರೆ ಬುರ್ರ ಎನ್ನುವುದು ಮಡಿಕೆಯದೇ ಆಗಿರುತ್ತದೆ. ಅದೇರೀತಿಯಾಗಿ ಕೋಲಾರದ ಭಾಗಗಳಲ್ಲಿ ಪ್ರಚಲಿತವಿರುವ ಕೇಳಿಕೆ, ಕರಪಾಲಮೇಳವು ಬುರ್ರಕಥೆಯನ್ನು ಹೋಲುತ್ತದೆ. ಇಲ್ಲೂ ಕೂಡ ಮೂರು ಜನ ನರ್ತಿಸುವವರಿದ್ದು ಮುಖ್ಯ ಗಾಯಕ ತಂಬೂರಿಯ ಬದಲು ತಾಳ ಹಿಡಿದಿರುತ್ತಾನೆ. ಉಳಿದಿಬ್ಬರು ಗುಮ್ಮಟೆಗಳನ್ನು ಅಥವಾ ಡಪ್ಪು ಬಳಸುತ್ತಾರೆ, ಹಾರ್ಮೋನಿಯಂ, ತಾಳ, ಚಿಟಿಕೆ ಇವೆಲ್ಲವೂ ಕೂಡ ಸ್ವತಂ ಕಲಾವಿದರೇ ತಯಾರಿಸಿಕೊಳ್ಳುತ್ತಾರೆ. ಚರ್ಮವಾದ್ಯಗಳಿಗೆ ಸಂಬಂಧಿಸಿದ ತಬಲ, ಡಕ್ಕ, ತಪ್ಪಡಿ, ಡಿಕ್ಕಿ ವಾದ್ಯಗಳನ್ನು ತಯಾರಿಸುವ ಕಲೆಗಾರಿಕೆ ಬುಡ್ಗಜಂಗಮರಲ್ಲಿದೆ.

### ಹಗಲುವೇಷದ ಪ್ರದರ್ಶನದ ಕರಕುಶಲ ಕಲೆಗಳು

ಬುಡ್ಗ ಜಂಗಮರು ತಮ್ಮ ಹಗಲುವೇಷದ ಕಲೆಯಲ್ಲಿ ಪೌರಾಣಿಕ ನಾಟಕಗಳಿಗೆ ಸಂಬಂಧಿಸಿದ ಕೀರಿಟ, ಎದೆಪಟ್ಟಿ, ಸೊಂಟಪಟ್ಟಿ, ಗಧೆ, ಬಿಲ್ಲುಗಳು, ಖಡ್ಗಗಳು, ಕವಡೆಸರಗಳು, ಮುತ್ತಿನ ಸರಗಳು, ವಿಗ್‌ಗಳು, ಮುಖವಾಡಗಳು, ವಿವಿಧ ವೇಷಭೂಷಣಗಳನ್ನು ತಮ್ಮದೇಯಾದ ಕೌಶಲ್ಯದೊಂದಿಗೆ ಕಟ್ಟಿಗೆ ಹಾಗೂ ತಗುಡು ಅಥವಾ ರಟ್ಟಿನಿಂದ ಕೀರಿಟ ಮುಂತಾದ ಪರಿಕರಗಳನ್ನು ತಯಾರಿಸಿಕೊಳ್ಳುವ ಕರಕುಶಲ ಕಲೆಗಳನ್ನು ಹೊಂದಿದ್ದಾರೆ.

### ಬಣ್ಣಗಾರಿಕೆ (ಪ್ರಸಾಧನ)ಯಲ್ಲಿ ಕರಕುಶಲ ಕಲೆಗಳು

ಇವರಲ್ಲಿ ಸ್ತ್ರೀಪಾತ್ರ, ಪುರುಷಪಾತ್ರಗಳಿಗೆ ಸಂಬಂಧಿಸಿದ ಬಣ್ಣಗಾರಿಕೆ ಕಲೆಯನ್ನು ಸ್ವತಃ ತಾವೇ ಕೈಗಳಿಂದ ಯಾರ ಸಹಾಯವಿಲ್ಲದೇ ಬಣ್ಣ ಹಾಕಿಕೊಳ್ಳುತ್ತಾರೆ. ಪಾತ್ರಕ್ಕೆ ತಕ್ಕಂತೆ ವೇಷಭೂಷಣ ಧರಿಸುವಲ್ಲಿ ಅತ್ಯಂತ ಅದ್ಭುತವಾದ ಪ್ರಸಾಧನ ಕಲೆ ಬುಡ್ಗ ಜಂಗಮರಲ್ಲಿ ಕಾಣುತ್ತೇವೆ.

### ಕೃಷಿ ಭೂ ಒಡೆತನ

ಬುಡ್ಗ ಜಂಗಮರ ವೃತ್ತಿಯು ಅಲೆಮಾರಿತನದಿಂದ ಕೂಡಿರುವುದರಿಂದ ಅವರು ಒಂದು ಕಡೆ ನೆಲೆನಿಲ್ಲದ ಕಾರಣ ಹಾಗೂ ಯಾವುದೇ ನಿಶ್ಚಿತ ಭೂಮಿ ಇಲ್ಲದೆ ಇರುವುದರಿಂದ ಕೃಷಿಗೆ ಹೆಚ್ಚು ಪ್ರಾಧ್ಯಾನತೆ ನೀಡಿರುವುದು ಕಂಡುಬರುವುದಿಲ್ಲ. ಇವರಲ್ಲಿ ಕೆಲವರು ಸ್ವಂತ ಸ್ಥಿರಾಸ್ಥಿ (ಮನೆ ಮತ್ತು ಜಮೀನು) ಹೊಂದಿರುವವರು ಮಳೆಗಾಲದ ಹಲವು ದಿನಗಳು ಸ್ವಂತ ಸ್ಥಳಗಳಲ್ಲಿದ್ದು ಭೂಮಿ ಉಳುಮೆ ಹಾಗೂ ಕೃಷಿ ಕೆಲಸಗಳನ್ನು ನಿರ್ವಹಿಸಲು ಮನೆಯಲ್ಲಿ ಯಾರಾದರೊಬ್ಬರನ್ನು ಬಿಟ್ಟು ಉಳಿದವರು ವಲಸೆ(ಷಂಡ್ರಾ) ಹೋಗುವ ಪದ್ಧತಿಯು ರೂಢಿಯಲ್ಲಿರುವುದು ಕಾಣಬಹುದು.

**ಕೋಷ್ಟಕ ೭.೨: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಕುಟುಂಬಗಳ ಭೂಹಿಡುವಳಿಯ ವಿವರ**

| ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಕುಟುಂಬಗಳ ಭೂಹಿಡುವಳಿ | | |
|---|---|---|
| | **ಕುಟುಂಬಗಳ ಸಂಖ್ಯೆ** | **ಶೇಕಡಾ** |
| ಭೂರಹಿತರು | ೬೯೯ | ೮೧.೯ |
| ಒಣಭೂಮಿ | ೧೭ | ೧.೯ |
| ನೀರಾವರಿ | ೧೩೮ | ೧೬.೨ |
| **ಒಟ್ಟು ಕುಟುಂಬಗಳು** | **೮೫೪** | **೧೦೦** |
| **ಭೂಮಿಯ ಅಂತರ** | **ಕುಟುಂಬಗಳ ಸಂಖ್ಯೆ** | **ಶೇಕಡಾ** |
| ೦.೫-೨.೫೦ | ೧೨೫ | ೧೪.೫ |
| ೨.೫೧-೫ | ೨೩ | ೨.೬ |

| | | |
|---|---|---|
| ೫.೧-೧೦ | ೭ | ೦.೮ |
| ೧೦.೧-೨೫ | ೦ | ೦ |
| ೨೫ರ ಮೇಲ್ಪಟ್ಟು | ೦ | ೦ |
| ಭೂರಹಿತರು | ೬೯೯ | ೮೧.೯ |
| **ಒಟ್ಟು** | **೮೫೪** | ೧೦೦ |

**ವೃತ್ತಚಿತ್ರ ೭.೧: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಕುಟುಂಬಗಳ ಭೂಹಿಡುವಳಿ**




ಮೇಲಿನ ವೃತ್ತಚಿತ್ರವು ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಭೂಹಿಡುವಳಿಯ ಕ್ರಮವನ್ನು ವಿವರಿಸಲಾಗಿದೆ. ಕೋಷ್ಟಕದ ಅನ್ವಯ ಸಮುದಾಯದ ಕುಟುಂಬಗಳ ಭೂಹಿಡುವಳಿದಾರರ ಪ್ರಮಾಣ ಮತ್ತು ಭೂರಹಿತರ ಪ್ರಮಾಣವನ್ನು ಕುರಿತು ವಿಶ್ಲೇಷಿಸಲಾಗಿದೆ. ಶೇ ೧೦೦ರಲ್ಲಿ ೮೨% ಭೂರಹಿತರಿರುವುದು ಕಂಡುಬರುತ್ತದೆ. ಉಳಿದ ೧೬% ನೀರಾವರಿ ಭೂಮಿ ಹೊಂದಿದ್ದು, ೨% ಮಾತ್ರ ಒಣಭೂಮಿ ಹೊಂದಿರುವುದು ಕಂಡುಬರುತ್ತದೆ. ಇದರಲ್ಲಿ ಹಳೇಕೋಟೆ, ಬಲುಕುಂದಿ, ಹಳೇದರೋಜಿ ಗ್ರಾಮದಲ್ಲಿ ಮಾತ್ರ ಸ್ವತಂ ಭೂಮಿಯನ್ನು ಹೊಂದಿರುವವರು ಕಂಡುಬರುತ್ತದೆ. ೮೨% ಕುಟುಂಬಗಳಿಗೆ ಭೂಮಿ ಇಲ್ಲದೆ ನಿತ್ಯ ನಿರಂತರವಾಗಿ ಅಲೆಮಾರಿಗಳಾಗಿ ಅಲೆಯುತ್ತಿರುವುದು ಕಾಣಬಹುದು.

**ಆಧುನಿಕ ಕಸುಬುಗಳು**

ಕೊಡೆ ವ್ಯಾಪಾರ

ಸ್ಟೀಲ್, ಸಿಲ್ವರ್, ಪ್ಲಾಸ್ಟಿಕ್ ವ್ಯಾಪಾರ

ಸ್ಟೇಷನರಿ ಸಾಮಾನು ವ್ಯಾಪಾರ

ಸಾಬೂನು ವ್ಯಾಪಾರ

ಸಣ್ಣ ಕೈಗಾರಿಕೆ

ರೋಡ್‌ಗೋಲ್ಡ್, ಮುತ್ತಿನಸರದ ವ್ಯಾಪಾರ

ಗ್ಯಾಸ್ ಮಿಕ್ಸಿ ರಿಪೇರಿ

ಪೆನಾಯಿಲ್ ವ್ಯಾಪಾರ

ಎಲ್‌ಈಡಿ ಬಲ್ಪ್ ವ್ಯಾಪಾರ ಮತ್ತು ಇತರೆ *(ಛಾ: ೭.೩)*

**ಕೊಡ ವ್ಯಾಪಾರ:** ಈ ವ್ಯಾಪಾರವನ್ನು ಬುಡ್ಗ ಜಂಗಮರು ಕೊಡ ತಯಾರಿಸುವ ಕಾರ್ಖಾನೆಯಿಂದ ಸಾಲ ಪಡೆದು ಊರಲ್ಲಿ ಭುಜದ ಮೇಲೆ ಕಾವಡಿ ದಬ್ಬೆಯಲ್ಲಿ ಹಾಕಿಕೊಂಡು ಅಥವಾ ವಾಹನದ ಮೇಲೆ ಹಾಕಿಕೊಂಡು ಬೀದಿಬದಿಯಲ್ಲಿ ಸದಾ ಅಲೆಯುತ್ತಾ ವ್ಯಾಪಾರ ಮಾಡುವರು. ಒಂದು ಕೊಡ ಮಾರಿದರೆ ೦೩ ರೂಪಾಯಿ ಅಥವಾ ಐದು ರೂಪಾಯಿ ಮಾತ್ರ ಲಾಭ ಸಿಗುತ್ತದೆ. ಎಲ್ಲಾ ಕೊಡ ಮಾರಿದ ಮೇಲೆ ಪಡೆದ ಸಾಲವನ್ನು ಕೊಟ್ಟು ಉಳಿದ ಅಲ್ಪ ಸ್ವಲ್ಪ ಹಣದಲ್ಲಿ ಜೀವನ ಮಾಡುವರು.

**ಸ್ಟೀಲ್, ಸಿಲ್ವರ್, ಪ್ಲಾಸ್ಟಿಕ್ ವ್ಯಾಪಾರ:** ಈ ವ್ಯಾಪಾರವನ್ನು ದೊಡ್ಡ ದೊಡ್ಡ ನಗರ ಪಟ್ಟಣಗಳಿಗೆ ಹೋಗಿ ಸಾಲ ಸೂಲ ಮಾಡಿಕೊಂಡು ಸ್ಟೀಲ್, ಸಿಲ್ವರ್, ಪ್ಲಾಸ್ಟಿಕ್ ಸಾಮಾನುಗಳನ್ನು ತಂದು, ತಲೆಮೇಲೆ ಹೊತ್ತುಕೊಂಡು ಕೆಲವರು ವಾಹನಗಳ ಮೇಲೆ ಹಾಕಿಕೊಂಡು ಮನೆಮನೆಗೆ ತೆರಳಿ ಮಾರುತ್ತಾರೆ. ಒಂದು ಸಾಮಾನಿಗೆ ೦೩ ರೂಪಾಯಿ ಅಥವಾ ಐದು ರೂಪಾಯಿ ಮಾತ್ರ ಲಾಭ ಸಿಗುತ್ತದೆ.

**ಸ್ಟೇಷನರಿ ಸಾಮಾನು ವ್ಯಾಪಾರ:** ಈ ವ್ಯಾಪಾರವನ್ನು ಮುಂಬೈನಿಂದ ಓರ್ಸಲ್ ತಂದು ಮನೆಯಲ್ಲಿ ಸಕ್ರಮವಾಗಿ ಮಾಡಿಕೊಂಡು ಹಳ್ಳಿ ಮತ್ತು ನಗರಗಳಿಗೆ ಹೋಗಿ ಬೀದಿಯಲ್ಲಿ ತಿರುಗಿ ಮಾರುತ್ತಾರೆ. ಒಂದು ವಸ್ತುವಿಗೆ ೦೩ ರೂಪಾಯಿ ಅಥವಾ ಐದು ರೂಪಾಯಿ ಮಾತ್ರ ಲಾಭ ಸಿಗುತ್ತದೆ.

**ಸಾಬೂನು ವ್ಯಾಪಾರ:** ಬಂಡವಾಳಶಾಹಿಗಳು ಬಟ್ಟೆ ತೊಳೆಯುವ ಸಾಬೂನುಗಳನ್ನು ಮತ್ತು ಪುಡಿಯನ್ನು ನೆರೆಯ ರಾಜ್ಯದಿಂದ ಲಾರಿಗಳಲ್ಲಿ ತಂದು ಇವರ ನೆಲೆಗಳಿಗೆ ತಂದು ಹಾಕುತ್ತಾರೆ. ಊರಲ್ಲಿ ೧೦೦ ರೂಪಾಯಿಗೆ ೫ ಸಾಬೂನು, ಒಂದು ಪುಡಿ ಪ್ಯಾಕೇಟ್ ಕೊಟ್ಟು ಬರುತ್ತಾರೆ. ಇದರಲ್ಲಿ ಕೇವಲ ಐದು ರೂಪಾಯಿ ಮಾತ್ರ ಲಾಭ ಸಿಗುತ್ತದೆ.

**ಸಣ್ಣ ಕೈಗಾರಿಕೆ:** ಬುಡ್ಗ ಜಂಗಮರ ಕೆಲವು ವ್ಯಕ್ತಿಗಳು ಸಣ್ಣಪುಟ್ಟ ಬಟ್ಟೆ, ಸೀರೆ, ಕೊಡ ವ್ಯಾಪಾರದ ಅಂಗಡಿಗಳನ್ನು ಮಾಡಿಕೊಂಡು ಜೀವನ ಮಾಡುತ್ತಿದ್ದಾರೆ.

**ರೋಡ್‌ಗೋಲ್ಡ್, ಮುತ್ತಿನಸರದ ವ್ಯಾಪಾರ:** ಈ ವ್ಯಾಪಾರವನ್ನು ಮುಂಬೈನಿಂದ ಓರ್ಸಲ್ ತಂದು ಹಳ್ಳಿ ಮತ್ತು ನಗರಗಳಿಗೆ ಹೋಗಿ ಬೀದಿಯಲ್ಲಿ ತಿರುಗಿ ಮಾರುತ್ತಾರೆ. ಒಂದು ವಸ್ತುವಿಗೆ ೦೩ ರೂಪಾಯಿ ಅಥವಾ ಐದು ರೂಪಾಯಿ ಮಾತ್ರ ಲಾಭ ಸಿಗುತ್ತದೆ.

**ಗ್ಯಾಸ್ ಮಿಕ್ಸಿ ರಿಪೇರಿ:** ಈ ಕೆಲಸವನ್ನು ಕೆಲವರು ಅನ್ಯ ಸಮುದಾಯದ ವ್ಯಕ್ತಿಗಳಿಂದ ಕಲಿತುಕೊಂಡು ಸಣ್ಣಪುಟ್ಟ ಗ್ಯಾಸ್ ಸ್ಟವ್, ಮಿಕ್ಸಿ, ಫ್ಯಾನ್‌ಗಳನ್ನು ರೀಪೇರಿ ಮಾಡಿ ಜೀವನ ಸಾಗಿಸುತ್ತಿದ್ದಾರೆ.

**ಪೆನಾಯಿಲ್ ವ್ಯಾಪಾರ:** ಈ ವ್ಯಾಪಾರವನ್ನು ಬುಡ್ಗ ಜಂಗಮರು ದೂರದ ನಗರ ಪಟ್ಟಣಗಳಿಂದ ಕೆಮಿಕಲ್ ಮತ್ತು ಅದಕ್ಕೆ ಸಂಬಂಧಿಸಿದ ವಸ್ತುಗಳನ್ನು ತಂದು ತಾವೇ ಮನೆಯಲ್ಲಿ ಸಿದ್ಧಪಡಿಸಿಕೊಂಡು ಹಳ್ಳಿಗಳಲ್ಲಿ ಹೋಗಿ ವ್ಯಾಪಾರ ಮಾಡಿ ಬರುತ್ತಾರೆ. ಒಂದು ಬಾಟ್ಲಿಗೆ ೩ ರಿಂದ ಐದು ರೂಪಾಯಿಗಳು ಮಾತ್ರ ಲಾಭ ಸಿಗುತ್ತದೆ.

**ಎಲ್‌ಈಡಿ ಬಲ್ಪ್ ವ್ಯಾಪಾರ:** ಈ ವ್ಯಾಪಾರವನ್ನು ಬುಡ್ಗ ಜಂಗಮರು ದೂರದ ನಗರ ಪಟ್ಟಣಗಳಿಂದ ತಂದು ಹಳ್ಳಿ, ನಗರಗಳ ಬೀದಿಯಲ್ಲಿ ಹೋಗಿ ೧೦೦ ರೂಪಾಯಿಗೆ ೩ ಅಥವಾ ೪ ಬಲ್ಬುಗಳನ್ನು ಕೊಟ್ಟು ಮಾರುತ್ತಾರೆ. ಇದರಲ್ಲಿ ೩ ರಿಂದ ಐದು ರೂಪಾಯಿಗಳು ಮಾತ್ರ ಲಾಭ ಸಿಗುತ್ತದೆ.

**ಬುಡ್ಗ ಜಂಗಮರ ವೃತ್ತಿಗಳ ಪ್ರಮಾಣ**

ಬೇಟೆಯೇ ಮೂಲಾಧಾರವಾಗಿರುವ ಇವರಿಗೆ ಬೇಟೆ ನಿಷೇಧ ಕಾಯ್ದೆ ಇವರ ಮೇಲೆ ಗುರುತರವಾದ ಪರಿಣಾಮ ಬೀರಿತು. ಬಹುತೇಕ ಕುಟುಂಬಗಳು ಕಾಡಿನ ಪ್ರಾಣಿಪಕ್ಷಿಗಳನ್ನು ನಂಬಿದ ಇವರು ಬೇಟೆಯಿಲ್ಲದೆ ಕಂಗಾಲಾಗಿ ನಾಡಿನತ್ತ ಆಹಾರಕ್ಕಾಗಿ ಮುಖಮಾಡಿದ್ದಾರೆ. ಕಲೆಯನ್ನೆ ನಂಬಿದ ಬುಡ್ಗ ಜಂಗಮರು ಪ್ಲಾಸ್ಟಿಕ್ ವ್ಯಾಪಾರ, ಬಟ್ಟೆ ವ್ಯಾಪಾರ, ಕ್ಯಾಲೆಂಡರ್, ಪ್ರಿಂಟಿಂಗ್ ಪೋಟೊಗಳ ವ್ಯಾಪಾರ ಇತರೆ ಅನ್ಯ ವೃತ್ತಿಗಳನ್ನು ಅವಲಂಬಿಸಿದ್ದಾರೆ.

ಆದರೆ ನಾಡಿನಲ್ಲಿ ಕಲೆಗಳನ್ನು ಪ್ರದರ್ಶಿಸಿ ಜೀವನ ಸಾಗಿಸಬೇಕೆಂದರೆ ದೂರದರ್ಶನ ಹಾಗೂ ಮಾಧ್ಯಮಗಳ ಪ್ರಭಾವದಿಂದ ಅನ್ಯರಿಂದ ಈ ಕಲೆಗಳಿಗೆ ಮಾನ್ಯತೆ ಸಿಗದೆ ತಿರಸ್ಕರಿಸಲ್ಪಟ್ಟವು. ಇದರಿಂದ ಆರ್ಥಿಕವಾಗಿ ಕುಟುಂಬ ನಿರ್ವಹಣೆ ತುಂಬ ಕಷ್ಟಕರವಾಗಿದ್ದರಿಂದ ಬೀದಿಗಿಳಿದು ಭೀಕ್ಷಾಟನೆ ಮಾಡತೊಡಗಿದರು. ಭಿಕ್ಷಾಟನೆಯು ಕೂಡಾ ಕಾನೂನಿನ ಪ್ರಕಾರ ಅಪರಾಧವಾಗಿದೆ ಇದರಿಂದ ಮತ್ತಷ್ಟು ಜೀವನ ಕಷ್ಟಕರವಾಗಿದೆ. ಅತ್ತ ಆಧುನಿಕ ತಂತ್ರಗಾರಿಕೆ ಪರಿಚಯವಿಲ್ಲದೆ ಇತ್ತ ಕಲಾ ಭಿಕ್ಷಾಟನೆಗೆ ಮಾನ್ಯತೆ ಇಲ್ಲದೆ ಕಾಡು–ನಾಡು ಎರಡನ್ನು ಕಳೆದುಕೊಂಡ ಇವರು ವಿನಾಶದ ಅಂಚಿನಲ್ಲಿದ್ದು ಇವರ ಸ್ಥಿತಿ ಗಂಭೀರವಾಗಿದೆ. ಇವರನ್ನು ನೀರಿನಲ್ಲಿದ್ದ ಮೀನನ್ನು ದಡಕ್ಕೆ ಎಸದಂತಾಗಿದೆ. ಈಗ ಇದನ್ನರಿತ ಈ ಸಮುದಾಯ ಬದುಕಬೇಕು ಜೀವಿಸಬೇಕು ಎಂದು ಸರ್ಕಾರದತ್ತ ಮುಖಮಾಡಿದ್ದಾರೆ.

ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಜೀವನಾಧಾರ ವೃತ್ತಿಗಳು

ಕೋಷ್ಟಕ ೭.೩: ಬುಡ್ಗ ಜಂಗಮರ ಜೀವನಾಧಾರ ವೃತ್ತಿಗಳವಾರು ಜನಸಂಖ್ಯೆ ವಿವರ

| ಜೀವನಾಧಾರ ವೃತ್ತಿಗಳು | ಗಂಡು | ಹೆಣ್ಣು | ವೃತ್ತಿಗಳ ಸಂಖ್ಯೆ | ಶೇಕಡಾ |
|---|---|---|---|---|
| ಹಗಲುವೇಷ | ೧೮೩ | ೦ | ೧೮೩ | ೧೧.೫ |
| ಬುರ್ರಕಥಾ | ೭ | ೧೭ | ೨೪ | ೧.೫ |
| ಗಂಗಿಗೌರಿ ಗಾಯನ | ೦ | ೧೯ | ೧೯ | ೦.೫ |
| ಧಾರ್ಮಿಕ ಭಿಕ್ಷಾಟನೆ | ೪೨ | ೫೭ | ೯೯ | ೬.೩ |
| ಮೀನುಗಾರಿಕೆ | ೨೮ | ೦ | ೨೮ | ೧.೮ |
| ಕೃಷಿ | ೪೦ | ೩೭ | ೭೭ | ೫.೦ |
| ಕೃಷಿಕೂಲಿ | ೩೧ | ೪೨ | ೭೩ | ೪.೫ |
| ಬಟ್ಟೆ ವ್ಯಾಪಾರ | ೨೫೩ | ೩೪೭ | ೬೦೦ | ೩೮.೦ |
| ಕೊಡ ವ್ಯಾಪಾರ | ೮೨ | ೪೪ | ೧೨೬ | ೮.೦ |
| ಸ್ಟೀಲ್, ಸಿಲ್ವರ್, ಪ್ಲಾಸ್ಟಿಕ್ ವ್ಯಾಪಾರ | ೨೦ | ೧೧ | ೩೧ | ೨.೦ |
| ಸ್ಟೇಷನರಿ ಸಾಮಾನು ವ್ಯಾಪಾರ | ೪೬ | ೧೧೮ | ೧೬೪ | ೧೦.೪ |
| ಸಾಬೂನು ವ್ಯಾಪಾರ | ೮೧ | ೦ | ೮೧ | ೫.೧ |
| ಸಣ್ಣ ಕೈಗಾರಿಕೆ | ೧೩ | ೦ | ೧೩ | ೦.೮ |
| ರೋಡ್‌ಗೋಲ್ಡ್, ಮುತ್ತಿನಸರದ ವ್ಯಾಪಾರ | ೦ | ೧೩ | ೧೩ | ೦.೮ |
| ಗ್ಯಾಸ್ ಮಿಕ್ಸಿ ರಿಪೇರಿ | ೧೪ | ೦ | ೧೪ | ೧.೦ |
| ಪೆನಾಯಿಲ್ ವ್ಯಾಪಾರ | ೧೩ | ೦ | ೧೩ | ೦.೮ |
| ಎಲ್‌ಈಡಿ ಬಲ್ಪ್ ವ್ಯಾಪಾರ | ೧೨ | ೦ | ೧೨ | ೦.೮ |
| ಸರ್ಕಾರಿ ನೌಕರಿ | ೪ | ೦ | ೪ | ೦.೩ |
| ಖಾಸಗಿ ನೌಕರಿ | ೧೨ | ೧ | ೧೩ | ೦.೯ |
| | ೮೮೧ | ೭೦೬ | ೧೫೮೭ | ೧೦೦ |

ವೃತ್ತ ಚಿತ್ರ ೭.೨: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಜೀವಾನಾಧಾರ ವೃತ್ತಿಗಳವಾರು ಜನಸಂಖ್ಯೆಯ ವೃತ್ತ ಚಿತ್ರ




ಇಂದಿನ ಸಮಾಜದಲ್ಲಿ ವ್ಯಕ್ತಿಯ ಅಥವಾ ಕುಟುಂಬದ ಸ್ಥಾನಮಾನವನ್ನು ಆರ್ಥಿಕತೆಯ ಮೇಲೆ ನಿರ್ಧರಿತವಾಗಿರುತ್ತದೆ. ಅಂದಿನ ಸಮಾಜದಲ್ಲಿ ವರ್ಣಾಶ್ರಮ ವ್ಯವಸ್ಥೆಯ ಮೇಲೆ ವ್ಯಕ್ತಿಯು ನಿರ್ವಹಿಸುವ ವೃತ್ತಿಗಳ ಆಧಾರಿತವಾಗಿ ಸಾಮಾಜಿಕ ಸ್ಥಾನಮಾನಗಳು ನಿರ್ಧರಿತವಾಗುತ್ತಿದ್ದವು. ವೃತ್ತಿಗಳು ಜಾತಿಗಳಾದಾಗ ಕೆಲವು ಸಮುದಾಯಗಳಿಗೆ ಕಳಂಕಿತವಾಗಿ ಮತ್ತು ಶೋಷಣೆಗೆ ಒಳಪಡಿಸಿದರೆ, ಕೆಲವು ವೃತ್ತಿಗಳು ಸಮಾಜದಲ್ಲಿ ಮೇಲ್ಮಟ್ಟ ಸ್ಥಾನಮಾನ ಪಡೆದಿರುವುದು ಕಾಣಬಹುದು. ಆದರೆ ಆ ವೃತ್ತಿಗಳು ಜೀವನಾಧಾರ ವೃತ್ತಿಗಳಾಗಿ ಅನಿವಾರ್ಯತೆಯಾಗಿ ಪರಿಣಮಿಸಿರುವುದು ಅಲೆಮಾರಿ ಬುಡ್ಗ ಜಂಗಮರಲ್ಲಿ ಕಾಣಬಹುದು. ಅನಿವಾರ್ಯತೆಯು ಈ ಸಮುದಾಯದ ಆರ್ಥಿಕತೆಯಾಗಿ ರೂಪಗೊಂಡಿದೆ ಎನ್ನಬಹುದು. ಸಮುದಾಯದ ಆರ್ಥಿಕತೆಯನ್ನು ನಿರ್ಧರಿಸುವಲ್ಲಿ ಸಮುದಾಯದ ವೃತ್ತಿಗಳು ಮತ್ತು ಪರ್ಯಾಯ ವೃತ್ತಿಗಳು ಪ್ರಮುಖ ಪಾತ್ರ ನಿರ್ವಹಿಸುತ್ತವೆ. ಈ ಪರ್ಯಾಯ ವೃತ್ತಿಗಳು ಮತ್ತೊಂದು ಸಮುದಾಯದಿಂದ ಎರವಲಾಗಿ ಪಡೆದಿರುವುದು ಕಾಣಬಹುದು. ಒಂದು ಸಮುದಾಯದ ಪಾರಂಪರಿಕ ವೃತ್ತಿ ಒಂದು ಕಾಲಮಾನದಲ್ಲಿ ಉನ್ನತ ಸ್ಥಾನಮಾನ ಅಥವಾ ಮಾನ್ಯತೆ ಪಡೆದರೆ ಅದೇ ವೃತ್ತಿ ಮತ್ತೊಂದು ಕಾಲಘಟ್ಟದಲ್ಲಿ ತಳಮಟ್ಟಕ್ಕೆ ಬಂದಿರುವುದನ್ನು ಸಹ ಕಾಣಬಹುದು.

ಹಾಗಾಗಿ ವೃತ್ತಿಗಳ ಅನುಸರಣೆ ಸಹಜವಾಗಿಯೇ ಮುಂದುವರಿಸಿಕೊಂಡು ಪಾರಂಪರಿಕ ವೃತ್ತಿಗಳು ಮಾಯಾವಾಗಿ ಪರ್ಯಾಯ ವೃತ್ತಿಗಳು ಹುಟ್ಟಿಕೊಂಡಿರುವುದು ಕಾಣಬಹುದು. ಅದೇ ರೀತಿಯಾಗಿ ಬುಡ್ಗ ಜಂಗಮರಲ್ಲಿ ಪಾರಂಪರಿಕ ವೃತ್ತಿಗಳಾದ ಹಗಲುವೇಷಗಾರಿಕೆ ವೃತ್ತಿಯಲ್ಲಿ ೧೮೩ ಜನ, ಬುರ್ರಕಥಾ ಕಾವ್ಯ ಪ್ರದರ್ಶನದಲ್ಲಿ ೨೪ ಜನ, ಗಂಗಿಗೌರಿ ವೃತ್ತಿ ಗಾಯನ ಮೇಳದಲ್ಲಿ ೧೯ ಜನ ಮತ್ತು ಧಾರ್ಮಿಕ ಭಿಕ್ಷಾಟನೆಯಲ್ಲಿ ೯೯ ಜನರಿರುವುದು ಕಾಣಬಹುದು. ಪ್ರಸ್ತುತ ಪಾರಂಪರಿಕ ವೃತ್ತಿಯಾದ ಹಗಲುವೇಷ ಕಲೆಯನ್ನು ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ ತಾಲೂಕಿನ ಕುಡತಿನಿ, ಸಂಡೂರು ತಾಲೂಕಿನ ಸಂಡೂರು ಮತ್ತು ಹಳೇದರೋಜಿ, ಸಿರುಗುಪ್ಪ ತಾಲೂಕಿನ ಬಲುಕುಂದಿ ಮತ್ತು ಹಳೇಕೋಟೆ, ಕಂಪ್ಲಿ ತಾಲೂಕಿನ ಸೋಮಲಾಪುರ, ಹರಪನಹಳ್ಳಿ ತಾಲೂಕಿನಲ್ಲಿ ಆಶ್ರಯ ಕಾಲೋನಿ, ಹಗರಿಬೊಮ್ಮನಹಳ್ಳಿ ತಾಲೂಕಿನ ಸಿದ್ದೇಶ್ವರ ನಗರದ ಬುಡ್ಗ ಜಂಗಮ ಕಾಲೋನಿಗಳಲ್ಲಿ ಹೆಚ್ಚಾಗಿ ಹಗಲುವೇಷ ಕಲೆಯನ್ನು ಪ್ರದರ್ಶಿಸುವರು ಮತ್ತು ಕಲೆಯನ್ನು ನಂಬಿ ಮೇಳಗಳನ್ನು ಕಟ್ಟಿಕೊಂಡು ಹಳ್ಳಿಗಳಲ್ಲಿ ಊರಾಡುವುದನ್ನು ಕಾಣಬಹುದು. ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಹಗಲುವೇಷದ ಮೇಳಗಳು ಅಥವಾ ಕಲಾ ಸಂಘಗಳನ್ನು ನೋಡಿದಾಗ ಬಳ್ಳಾರಿ ತಾಲೂಕಿನ ಗುಡಾರ ನಗರದಲ್ಲಿ ಮೂರು, ಬಲುಕುಂದಿಯಲ್ಲಿ ಎರಡು, ಹಳೇಕೋಟೆಯಲ್ಲಿ ಒಂದು, ಕುಡುತಿನಿಯಲ್ಲಿ ನಾಲ್ಕು, ಕಂಪ್ಲಿ ತಾಲೂಕಿನ ಸೋಮಲಾಪುರದಲ್ಲಿ ಒಂದು, ಸಂಡೂರು ತಾಲೂಕಿನ ಸಂಡೂರಿನಲ್ಲಿ ಒಂದು, ಹಳೇ ದರೋಜಿಯಲ್ಲಿ ಐದು, ಹೊಸಪೇಟೆ ತಾಲೂಕಿನ ಹೊಸಪೇಟೆಯಲ್ಲಿ ಒಂದು, ವೆಂಕಟಾಪುರದಲ್ಲಿ ಒಂದು, ಹಗರಿಬೊಮ್ಮನಹಳ್ಳಿಯಲ್ಲಿ ನಾಲ್ಕು, ಹರಪನಹಳ್ಳಿಯಲ್ಲಿ ಎರಡು ಕಲಾ ಸಂಘಗಳನ್ನು ಕಾಣಬಹುದು. ಈ ಕಲಾ ಸಂಘಗಳು ಎಂಟರಿಂದ ಹತ್ತು ಜನ ಸೇರಿಕೊಂಡು ತಮ್ಮ ಭಾಗಕ್ಕೆ ಬಂದ ಹಳ್ಳಿಗಳಿಗೆ ಹೋಗಿ ದಿನಕ್ಕೊಂದು ಕಲಾಪ್ರಸಂಗಗಳನ್ನು ಪ್ರದರ್ಶಿಸಿ ಅದರಂತೆ ನಾಕೈದು ಪ್ರದರ್ಶನಗಳನ್ನು ಮಾಡಿ ಕೊನೆಗೆ ಪಟ್ಟಿ ಎತ್ತುವ ಮೂಲಕ ದಾನಧರ್ಮ ಸ್ವೀಕರಿಸಿ ಜೀವನ ಮಾಡುವುದು ಕಾಣಬಹುದು. ಈ ರೀತಿ ಈ ಕಲೆಯನ್ನು ಅವಲಂಬಿಸಿ ಬಳ್ಳಾರಿ ಜಿಲ್ಲೆಯಲ್ಲಿ ಶೇಕಡಾ ೧೧.೫ ಜನ ಬದುಕುತ್ತಿರುವುದು ಅಧ್ಯಯನದ ಸಮೀಕ್ಷೆಯ ಮೂಲಕ ಕಾಣಬಹುದಾಗಿದೆ. ಬುರ್ರಕಥಾ ಕಲೆಯು ಹೆಚ್ಚಾಗಿ ಮಹಿಳೆಯರು ನಿರ್ವಹಿಸುವುದು ಕಾಣಬಹುದು ಅಲ್ಲಲ್ಲಿ ಪುರುಷರು ಬುರ್ರಕಥಾವನ್ನು ಪ್ರದರ್ಶಿಸುವುದು ಕಾಣಬಹುದು. ಈ ಬುರ್ರಕಥೆಯನ್ನು ಸಂಡೂರು ತಾಲೂಕಿನ ಹಳೇದರೋಜಿಯಲ್ಲಿ ಒಂದು ತಂಡ, ಕಂಪ್ಲಿ ತಾಲೂಕಿನ ಸೋಮಲಾಪುರದಲ್ಲಿ ಎರಡು ತಂಡ, ಬಳ್ಳಾರಿಯ ಕಾಕರ್ಲತೋಟದಲ್ಲಿ ಎರಡು ತಂಡ, ಹೊಸಪೇಟೆಯಲ್ಲಿ ಎರಡು ತಂಡ ಈ ಬುರ್ರಕಥೆಯನ್ನು ಪ್ರದರ್ಶಿಸಿ ಜೀವನ ಮಾಡುತ್ತಿರುವುದು ಶೇಕಡಾ ೧.೫ ಜನ ಕಂಡುಬರುತ್ತಾರೆ. ಗಂಗಿಗೌರಿ ಗಾಯನ ವೃತ್ತಿಯನ್ನು ಹಳೇದರೋಜಿ, ಕುಡತಿನಿ, ಸೋಮಲಾಪುರದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇದನ್ನು ಶೇಕಡಾ ೦.೫ ಜನ ಇದನ್ನು ನಂಬಿ ಜೀವನ ಮಾಡುತ್ತಿರುವುದು ಕಾಣಬಹುದು. ಆಧುನಿಕ ವೃತ್ತಿಗಳನ್ನು ತಿಳಿಯದ ಅಸಾಯಕ ಕೆಲವು ಜನರು ಜೋಳಿಗೆ ಹಾಕಿಕೊಂಡು ಒಬ್ಬೊಬ್ಬರಾಗಿ ಹಾರ್ಮೋನಿಯಂ, ಬಾಲಸಂತವೇಷ ಇತರೆ ವೇಷಗಳನ್ನು ಹಾಕಿಕೊಂಡು ಧಾರ್ಮಿಕ ಭಿಕ್ಷಾಟನೆಯನ್ನು ಮಾಡುತ್ತಾ ಜೀವನ ಮಾಡುವುದನ್ನು ಕಾಣಬಹುದು. ಇದನ್ನು ಶೇಕಡಾ ೬.೩

ಜನ ಈ ವೃತ್ತಿಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಈ ಪಾರಂಪರಿಕ ವೃತ್ತಿಗಳು ಕೇವಲ ಸಮುದಾಯದ ಜೀವನವೊಂದೆ ನಿರ್ವಹಿಸುತ್ತಿರಲಿಲ್ಲ ಜೊತೆಗೆ ಸಮಾಜಕ್ಕೆ ಮಾನವೀಯ ಮೌಲ್ಯಗಳು ಮತ್ತು ನೀತಿ ಸಂದೇಶಗಳನ್ನು ನೀಡುತ್ತಾ ಸಮಾಜಕ್ಕೆ ದರ್ಶನವನ್ನು ಕೊಡುತ್ತಿದ್ದರು.

ಈ ಪಾರಂಪರಿಕ ವೃತ್ತಿಗಳು ಭಿಕ್ಷಾಟನೆ ಕಾಯ್ದೆ ನಿಷೇಧದಿಂದ ಇಳಿಮುಖವಾಗಿ ಅನಿವಾರ್ಯವಾಗಿ ಆಧುನಿಕ ಕಸುಬುಗಳಿಗೆ ಜೋತು ಬೀಳುವಂತೆ ಮಾಡಿದೆ. ಜೀವನ ನಿರ್ವಹಿಸಲು ಪಾರ್ಯಾಯ ವೃತ್ತಿಗಳು ಉಪ ಜೀವನಕ್ಕೆ ಸಹಕಾರಿಯಾಗಿ ಮತ್ತು ಅನಿವಾರ್ಯವಾಗಿರುವುದು ಕಾಣಬಹುದು. ಮೀನುಗಾರಿಕೆಯಲ್ಲಿ ೨೮ ಜನ ಮೀನು ಹಿಡಿಯುವ ವೃತ್ತಿಯನ್ನು ಕಾಣಬಹುದು. ಅದರಲ್ಲಿ ಹಳೇದರೋಜಿ, ಸೋಮಲಾಪುರ, ಕುಡಿತಿನಿ, ವೆಂಕಟಾಪುರ ಗ್ರಾಮದಲ್ಲಿ ಹೆಚ್ಚಾಗಿ ಇರುವುದನ್ನು ಕಾಣಬಹುದು. ಬುಡ್ಗ ಜಂಗಮರು ಸಿರುಗುಪ್ಪ ತಾಲೂಕಿನ ಹಳೇಕೋಟೆ ಮತ್ತು ಬಲುಕುಂದಿ, ಸಂಡೂರು ತಾಲೂಕಿನ ಹಳೆದರೋಜಿ, ಕಂಪ್ಲಿ ತಾಲೂಕಿನ ಸೋಮಲಾಪುರದಲ್ಲಿ ಕೃಷಿಯಲ್ಲಿ ೭೭ ಜನ, ಕೃಷಿಭೂಮಿ ಇಲ್ಲದ ೭೩ ಜನ ಕೃಷಿಕೂಲಿಯನ್ನು ಮಾಡಿಕೊಂಡು ಬದುಕುತ್ತಿರುವುದು ಕಾಣಬಹುದು. ೬೦೦ ಜನ ಅಂದರೆ ಶೇಕಡಾ ೩೮ ಜನ ಸೀರೆ, ನೈಟಿ, ಡ್ರಸ್ ಸೇರಿ ಬಟ್ಟೆವ್ಯಾಪಾರವನ್ನು ಅವಲಂಬಿಸಿ ಜೀವನ ಮಾಡುತ್ತಿರುವುದು ಕಾಣಬಹುದು. ಈ ವೃತ್ತಿಯು ಪುರುಷರು ಮತ್ತು ಮಹಿಳೆಯರು ಬಟ್ಟೆ ಗಂಟನ್ನು ಭುಜದ ಮೇಲೆ ಮತ್ತು ತಲೆಮೇಲೆ ಎತ್ತಿಕೊಂಡು ಗ್ರಾಮೀಣ ಮತ್ತು ನಗರ ಪ್ರದೇಶಗಳಿಗೆ ಹೋಗಿ ಬೀದಿಬೀದಿಯಲ್ಲಿ ಸುತ್ತಿ ಬಟ್ಟೆವ್ಯಾಪಾರ ಮಾಡುವುದನ್ನು ಕಾಣಬಹುದು. ಇತ್ತೀಚಿನ ದಿನಗಳಲ್ಲಿ ದ್ವಿಚಕ್ರ ಅಥವಾ ಸಣ್ಣ ನಾಲ್ಕು ಚಕ್ರವಾಹನದಲ್ಲಿ ವ್ಯಾಪಾರ ಮಾಡುವುದುನ್ನು ಅಲ್ಲಲ್ಲಿ ಕಾಣಬಹುದು. ಈ ವೃತ್ತಿಯು ಬುಡ್ಗ ಜಂಗಮ ಸಮುದಾಯದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕೊಡ ವ್ಯಾಪಾರ ೧೨೬ ಜನ,  ಸ್ಟೇಷನರಿ ಸಾಮಾನು ವ್ಯಾಪಾರ ೧೬೪ ಜನ, ಸ್ಟೀಲ್ ಸಿಲ್ವರ್ ಪ್ಲಾಸ್ಟಿಕ್ ಪಾತ್ರೆಗಳ ವ್ಯಾಪಾರ ೩೧ ಜನ, ಸಾಬೂನು ವ್ಯಾಪಾರ ೮೧ ಜನ, ರೋಡ್ ಗೋಲ್ಡ್ ಮುತ್ತಿನ ಸರ ವ್ಯಾಪಾರ ೧೩ ಜನ, ಗ್ಯಾಸ್ ಮಿಕ್ಸರಿ ರಿಪೇರಿ ೧೪ ಜನ, ಶೌಚಾಲಯಕ್ಕೆ ಬಳಸುವ ಪೆನಾಯಿಲ್ ವ್ಯಾಪಾರ ೧೩ ಜನ, ಎಲ್‌ಈಡಿ ಬಲ್ಪು ವ್ಯಾಪಾರ ೧೨ ಜನ, ಸಣ್ಣ ಕೈಗಾರಿಕೆಯಲ್ಲಿ ೧೩ ಜನ, ಸ್ವತಂತ್ರ ಭಾರದಲ್ಲಿ ಸಂವಿಧಾನ ರೂಪಿತವಾಗಿ ೭೦ ವರ್ಷಗಳಾದರೂ ಬುಡ್ಗ ಜಂಗಮರಲ್ಲಿ ಸರ್ಕಾರಿ ಕೆಲಸದಲ್ಲಿ ಕೇವಲ ೪ ಜನ ಮಾತ್ರ ಕಾಣಬಹುದು. ಖಾಸಗಿ ಕೆಲಸದಲ್ಲಿ ೧೩ ಜನ ಕೆಲಸ ಮಾಡುವುದನ್ನು ಕಾಣಬಹುದು. ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಪ್ರತಿಯೊಂದು ನೆಲೆಗಳಲ್ಲಿ ಅವರ ಪಾರಂಪರಿಕ ವೃತ್ತಿಗಳಿಗೆ ಅಂದು ಸಿಗುತ್ತಿದ್ದ ಪ್ರೋತ್ಸಾಹ ಮನ್ನಣೆ ಇಂದು  ಆಧುನಿಕತೆ ಹಾಗೂ ತಾಂತ್ರಿಕತೆಯಿಂದ ಕಡಿಮೆಯಾಗಿ ಅನ್ಯ ಕಸುಬುಗಳಾದ ಬಟ್ಟೆ ವ್ಯಾಪಾರ, ಸ್ಟೇಷನರಿ ವ್ಯಾಪಾರ ಮತ್ತು ಕೊಡ ವ್ಯಾಪಾರ ಮಾಡುವುದು ಹೆಚ್ಚಾಗಿ ಕಂಡುಬರುತ್ತದೆ. ಇಂದಿನ ಇವರ ಆಧುನಿಕ ವೃತ್ತಿಗಳಿಗೆ ಸರ್ಕಾರವು ವಿಶೇಷವಾದ ಸಾಲಸೌಲಭ್ಯ ಮತ್ತು ಧನಸಹಾಯ ನೀಡುವ ಮುಖೇನ ಪ್ರೋತ್ಸಾಹಿಸಿದಾಗ ಮಾತ್ರ ಬುಡ್ಗ ಜಂಗಮರ ಆರ್ಥಿಕತೆಯನ್ನು ಸುಧಾರಿಸಬಹುದಾಗಿದೆ.

## ಅಧ್ಯಾಯ ಎಂಟು
## ಬುಡ್ಗ ಜಂಗಮ್ ಸಮುದಾಯದ ಶೈಕ್ಷಣಿಕ ಮತ್ತು ರಾಜಕೀಯ ಸ್ಥಿತಿಗತಿ

ಪೀಠಿಕೆ

ಬುಡ್ಗ ಜಂಗಮರ ಲಿಂಗವಾರು ಸಾಕ್ಷರತೆ ಪ್ರಮಾಣ

ಬುಡ್ಗ ಜಂಗಮರ ಲಿಂಗವಾರು ಶೈಕ್ಷಣಿಕ ಸ್ಥಿತಿಗತಿ

ಬುಡ್ಗ ಜಂಗಮರ ಗುರುತಿನ ಚೀಟಿ ಸೌಲಭ್ಯಗಳ ವಿವರ

ಬುಡ್ಗ ಜಂಗಮರು ಸರ್ಕಾರಿ ಸೌಲಭ್ಯ ಪಡೆಯುವ ಅರ್ಹ ಫಲಾನುಭವಿಗಳ ಸ್ಥಿತಿಗತಿ

ಬುಡ್ಗ ಜಂಗಮ್ ಸಮುದಾಯದ ಒಳಾಡಳಿತ ವ್ಯವಸ್ಥೆ

ಬುಡ್ಗ ಜಂಗಮ್ ಸಮುದಾಯದ ಪಾರಂಪರಿಕ ಕುಲಪಂಚಾಯಿತಿ

ಬುಡ್ಗ ಜಂಗಮ್ ಸಮುದಾಯದ ಬಿಡಾರ(ಕಟ್ಟೆಮನೆ)ಗಳು

ಬುಡ್ಗ ಜಂಗಮ್ ಸಮುದಾಯದ ಪ್ರಸ್ತುತ ರಾಜಕೀಯ ಸ್ಥಿತಿಗತಿ

# ಅಧ್ಯಾಯ ಎಂಟು

# ಶೈಕ್ಷಣಿಕ ಮತ್ತು ರಾಜಕೀಯ ಸ್ಥಿತಿ

**ಪೀಠಿಕೆ**

ಮನುಷ್ಯನ ಮೂಲಭೂತವಾದ ಅವಶ್ಯಕತೆಗಳಲ್ಲಿ ಶಿಕ್ಷಣವು ಪ್ರಮುಖ ಪಾತ್ರನಿರ್ವಹಿಸುತ್ತದೆ. ಮನುಷ್ಯನ ಸಾಮಾಜಿಕ ಜೀವನ ನಿರ್ವಹಣೆಗೆ ಶಿಕ್ಷಣವು ಅನಿವಾರ್ಯವಾಗುತ್ತದೆ. ಶಿಕ್ಷಣವು ಪ್ರತಿಯೊಂದು ಸಮುದಾಯದ ಪರಿವರ್ತನೆಯನ್ನು ಸೂಚಿಸುವ ಸಾಧನವಾಗಿದೆ. ಆಧುನಿಕ ಸಮಾಜದಲ್ಲಿ ಆಹಾರ ಬಟ್ಟೆ, ವಸತಿಗಳಂತೆ ಶಿಕ್ಷಣವು ಸಹ ಅನಿವಾರ್ಯವಾಗಿದೆ ಎಂದು ಹೇಳಬಹುದು. ಸ್ವತಂತ್ರ ಭಾರತದಲ್ಲಿ ೨೨ ಅನುಸೂಚಿತ ಭಾಷೆಗಳನ್ನು ಸಂವಿಧಾನದಲ್ಲಿ ಅಳವಡಿಸಿ ಅವುಗಳ ಮೂಲಕ ಶಿಕ್ಷಣಕ್ರಮವನ್ನು ಜಾರಿಗೊಳಿಸಲಾಯಿತು. ಅಂತೆಯೇ ಭಾರತ ಸರ್ಕಾರವು ಸಂವಿಧಾನದ ೪ನೇ ಪರಿಚ್ಛೇದದ ನಿರ್ದೇಶಕ ಸೂತ್ರಗಳಂತೆ ೪೫ನೇ ವಿಧಿಯ ಪ್ರಕಾರ ೬ ರಿಂದ ೧೪ ವರ್ಷ ವಯಸ್ಸಿನ ಎಲ್ಲಾ ಮಕ್ಕಳಿಗೆ ಉಚಿತ ಹಾಗೂ ಕಡ್ಡಾಯ ಶಿಕ್ಷಣ ಒದಗಿಸಲು ಒಂದು ಯೋಜನೆಯನ್ನು ರೂಪಿಸಿರುವುದು ಮತ್ತು ವಯಸ್ಕರ ಶಿಕ್ಷಣಕ್ರಮಕ್ಕೂ ಆದ್ಯತೆ ನೀಡಲಾಯಿತು. ಆದರೆ ಭಾರತದ ಜಾತಿವ್ಯವಸ್ಥೆಯು ಅನೇಕ ಸಮುದಾಯಗಳನ್ನು ಶೋಷಣೆಗೆ ತಳಮಟ್ಟಕ್ಕೆ ತಲುಪಿಸಲಾಯಿತು. ಇಂತಹ ಶೋಷಿತ ಸಮುದಾಯಗಳ ಅಭಿವೃದ್ಧಿಯಾಗಬೇಕಾದರೆ ಶಿಕ್ಷಣದಿಂದ ಮಾತ್ರ ಸಾಧ್ಯ ಎಂದು ಅಂಬೇಡ್ಕರ್ ರವರು ಶಿಕ್ಷಣ, ಸಂಘಟನೆ, ಹೋರಾಟ ಎಂಬ ಪರಿಕಲ್ಪನೆಯನ್ನು ತಳಸಮುದಾಯಗಳಿಗೆ ನೀಡಿ ಅವರ ಅಭಿವೃದ್ಧಿಗೆ ಸಹಕಾರ ನೀಡಲು ಕಾರಣೀಭೂತರಾದರು. ಅಂಬೇಡ್ಕರ್ ರವರ ಈ ಚಿಂತನೆಯಿಂದ ರೂಪಿತವಾದ ಭಾರತೀಯ ಸಂವಿಧಾನವು ಹಿಂದುಳಿದ, ಅಲ್ಪಸಂಖ್ಯಾತ, ಶೋಷಿತ ವರ್ಗಗಳಿಗೆ ವಿಶೇಷ ಸವಲತ್ತುಗಳನ್ನು ನೀಡಿತು. ಸಂವಿಧಾನಬದ್ಧ ಹಕ್ಕುಗಳನ್ನು ಪಡೆಯುವ ಮತ್ತು ಕೇಳುವ ಶಕ್ತಿ ಸಮುದಾಯಗಳಲ್ಲಿ ಬರಬೇಕಾದರೆ ಅದು ಶಿಕ್ಷಣದಿಂದ ಮಾತ್ರ ಸಾಧ್ಯ. ಆ ಹಿನ್ನೆಲೆಯಲ್ಲಿ ಪ್ರಕೃತಿ ಮತ್ತು ಸಮಾಜದ ಜ್ಞಾನವನ್ನು ಆಧರಸಿ, ಔಪಚಾರಿಕ ಶಿಕ್ಷಣದಿಂದ ದೂರವಿದ್ದ ಅಲೆಮಾರಿ ಬುಡ್ಗ ಜಂಗಮ್ ಸಮುದಾಯವು ಶೈಕ್ಷಣಿಕವಾಗಿ ಮುಂದುವರಿಯಲು ಪ್ರಯತ್ನಿಸುತ್ತಿದೆ. ಇವರ ಶೈಕ್ಷಣಿಕ ಪ್ರಗತಿಯು ದಿನೇ ದಿನೇ ಅಧಿಕವಾಗುತ್ತಿದ್ದು, ಜ್ಞಾನಸಂಪಾದನೆಗಾಗಿ ಶಿಕ್ಷಣ, ಇಂದು ಉದ್ಯೋಗಕ್ಕಾಗಿ

ಎಂಬಂತೆ ರೂಪಿತವಾಗಿದೆ. ಭಾರತದ ಶೈಕ್ಷಣಿಕ ರಚನೆಯನ್ನು ಪೂರ್ವಪ್ರಾಥಮಿಕ, ಪ್ರಾಥಮಿಕ, ಪ್ರೌಢಶಾಲೆ, ಪದವಿಪೂರ್ವ, ಪದವಿ, ವೃತ್ತಿಶಿಕ್ಷಣ ಎಂಬ ಹಂತಗಳಲ್ಲಿ ವರ್ಗೀಕರಿಸಿಲಾಗಿದೆ. ಈ ಕೆಳಗೆ ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಸಾಕ್ಷರತೆ ಪರಮಾಣವನ್ನು ಈ ಕೆಳಗೆ ವಿವರಿಸಲಾಗಿದೆ.

**ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಲಿಂಗವಾರು ಸಾಕ್ಷರತೆ ಪ್ರಮಾಣ**

**ಕೋಷ್ಟಕ ೮.೧: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಲಿಂಗವಾರು ಸಾಕ್ಷರತೆ ಪ್ರಮಾಣ**

| | ಪುರುಷರು | ಶೇಕಡಾ | ಮಹಿಳೆಯರು | ಶೇಕಡಾ | ಒಟ್ಟು | ಶೇಕಡಾ |
|---|---|---|---|---|---|---|
| ಸಾಕ್ಷರಕ್ಕೆ ಅರ್ಹರು | ೧೪೫೩ | ೫೨.೫ | ೧೩೦೯ | ೪೭.೫ | ೨,೭೬೨ | ೧೦೦ |
| ಸಾಕ್ಷರರು | ೮೧೩ | ೨೯.೪ | ೪೫೯ | ೧೬.೬ | ೧,೨೭೨ | ೪೬.೦ |
| ಅನಕ್ಷರಸ್ಥರು | ೬೪೦ | ೨೩.೧ | ೮೫೦ | ೩೦.೯ | ೧೪೯೦ | ೫೪.೦ |

ಮೇಲಿನ ಕೋಷ್ಟಕದಲ್ಲಿ ಸಾಕ್ಷರರ ಲಿಂಗವಾರು ಪ್ರಮಾಣ ಪುರುಷರು ಶೇ ೨೯.೪ ಮಹಿಳೆಯರು ಶೇ ೧೬.೬ ಜನ ಸಾಕ್ಷರರಾಗಿದ್ದಾರೆ. ಅನಕ್ಷರಸ್ಥರ ಲಿಂಗವಾರು ಪ್ರಮಾಣ ಪುರುಷರು ಶೇ ೨೩.೧, ಮಹಿಳೆಯರು ಶೇ ೩೦.೯ ಜನ ಅನಕ್ಷರಸ್ಥರಾಗಿದ್ದಾರೆ. ಇಲ್ಲಿ ಪುರುಷರಿಗಿಂತ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಅನಕ್ಷರಸ್ಥರಾಗಿದ್ದಾರೆ.

**ವೃತ್ತ ಚಿತ್ರ ೮.೧: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಸಾಕ್ಷರತೆ ಪ್ರಮಾಣದ ವೃತ್ತ ಚಿತ್ರ**



ಕೋಷ್ಟಕ ೮.೨: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಲಿಂಗವಾರು ಶೈಕ್ಷಣಿಕ ಸ್ಥಿತಿಗತಿ

| ಶೈಕ್ಷಣಿಕ ಸ್ಥಿತಿಗತಿ | ಪುರುಷರು | ಶೇಕಡಾ | ಮಹಿಳೆಯರು | ಶೇಕಡಾ | ಒಟ್ಟು | ಶೇಕಡಾ |
|---|---|---|---|---|---|---|
| ಅನಕ್ಷರಸ್ಥರು | ೬೪೦ | ೨೩.೨ | ೮೫೦ | ೩೦.೮ | ೧೪೯೦ | ೫೪.೦ |
| ಪ್ರಾಥಮಿಕ | ೫೪೭ | ೧೯.೮ | ೩೫೭ | ೧೩.೦ | ೯೦೪ | ೩೨.೮ |
| ಫ್ರೌಢಶಾಲೆ | ೧೬೭ | ೬.೦ | ೮೫ | ೩.೧ | ೨೫೨ | ೯.೧ |
| ಎಸ್ಎಸ್ಎಲ್‌ಸಿ/ ಐಟಿಐ | ೫೪ | ೧.೯ | ೧೪ | ೦.೫ | ೬೮ | ೨.೪ |
| ಪದವಿ | ೪೧ | ೧.೪ | ೩ | ೦.೧ | ೪೪ | ೧.೫ |
| ಸ್ನಾತಕೋತ್ತರ ಪದವಿ | ೩ | ೦.೧ | ೦ | ೦ | ೩ | ೦.೧ |
| ವೃತ್ತಿಶಿಕ್ಷಣ (ಪಿಎಚ್ ಡಿ) | ೧ | ೦.೦೩ | ೦ | ೦ | ೧ | ೦.೧ |
| ಒಟ್ಟು | ೧೪೫೩ | ೫೨.೫ | ೧೩೦೯ | ೪೭.೫ | ೨೭೬೨ | ೧೦೦ |

ಮೇಲಿನ ಕೋಷ್ಟಕ ಪ್ರಕಾರವಾಗಿ ಬುಡ್ಗ ಜಂಗಮರಲ್ಲಿ ಒಟ್ಟು ೩೪೭೦ ಜನಸಂಖ್ಯೆ ಹೊಂದಿದ್ದು, ೦-೫ ವಯೋಮಾನದ ಪ್ರಮಾಣವನ್ನು ಹೊಂದಿರುವ ಮಕ್ಕಳನ್ನು ಬಿಟ್ಟು ಉಳಿದ ವಯೋಮಾನದ ಪ್ರಮಾಣದಲ್ಲಿ ನೋಡಿದಾಗ ಸಾಕ್ಷರಕ್ಕೆ ಅರ್ಹರಾದವರು ಪುರುಷರು ೧೪೫೩, ಮಹಿಳೆಯರು ೧೩೦೯, ಒಟ್ಟು ೨೭೬೨ ಜನ ಅರ್ಹರಿದ್ದಾರೆ. ಇದರಲ್ಲಿ ಲಿಂಗವಾರು ಸಾಕ್ಷರತೆ ಶೇಕಡಾ ೪೬ ಜನರು ಸಾಕ್ಷರರು, ಶೇಕಡಾ ೫೪ ಅನಕ್ಷರಸ್ಥರು ಹೊಂದಿರುವುದು ಕಾಣಬಹುದು.

ಲಂಬ ಚಿತ್ರ ೮.೧: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಲಿಂಗವಾರು ಶೈಕ್ಷಣಿಕ ಸ್ಥಿತಿಯ ಲಂಬ ಚಿತ್ರ



ಸಾಕ್ಷರರ ಲಿಂಗವಾರು ಶೈಕ್ಷಣಿಕ ಸ್ಥಿತಿಯನ್ನು ಗಮನಿಸಿದಾಗ ಪ್ರಾಥಮಿಕ ಶಿಕ್ಷಣಕ್ಕೆ ಪುರುಷರು ಶೇ ೧೯.೮ ಮಹಿಳೆಯರು ೧೩.೦, ಪ್ರೌಢ ಶಿಕ್ಷಣಕ್ಕೆ ಪುರುಷರು ಶೇ ೬.೦, ಮಹಿಳೆಯರು ಕೇವಲ ಶೇ ೩.೧, ಪದವಿಪೂರ್ವ ಶಿಕ್ಷಣಕ್ಕೆ ಪುರುಷರು ಶೇ ೧.೯, ಮಹಿಳೆಯರು ಶೇ ೦.೫, ಪದವಿ ಶಿಕ್ಷಣಕ್ಕೆ ಪುರುಷರು ಕೇವಲ ಶೇ ೧.೪, ಮಹಿಳೆಯರು ಶೇ ೦.೧, ಸ್ನಾತಕೋತ್ತರ ಪದವಿ ಶಿಕ್ಷಣಕ್ಕೆ ಪುರುಷರು ಶೇ ೦.೧ ಮಹಿಳೆಯರು ಶೇ ೦, ವೃತ್ತಿ ಶಿಕ್ಷಣಕ್ಕೆ ಪುರುಷರು ಒಬ್ಬರೇ ಮಾತ್ರ ಶಿಕ್ಷಣ ಪಡೆಯುತ್ತಿರುವುದು ಕಂಡುಬರುತ್ತದೆ. ಉಳಿದಂತೆ ಶೇ ೫೪% ಜನರು ಅನಕ್ಷರಸ್ಥರಾಗಿದ್ದಾರೆ. ಇವರಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಮಾಧ್ಯಮಿಕ ಶಿಕ್ಷಣಕ್ಕೆ ಮಾತ್ರ ಪ್ರವೇಶ ಪಡೆದು ಅಲ್ಲಿಗೆ ಶಾಲೆಯನ್ನು ಅರ್ಧದಲ್ಲಿಯೇ ಬಿಟ್ಟಿರುವುದು ಕಂಡುಬರುತ್ತದೆ. ಕಾರಣವನ್ನು ಕೇಳಿದಾಗ ಮನೆಯಲ್ಲಿ ಬಡತನ ಮತ್ತು ಹಸಿವು ನಮ್ಮನ್ನು ಕಾಡುತ್ತಿದೆ ಹಾಗಾಗಿ ಶಾಲೆಗೆ ಬಿಟ್ಟು ಹಗಲುವೇಷ ಮತ್ತು ಇತರೆ ಅನ್ಯ ವೃತ್ತಿಯಲ್ಲಿ ತೊಡಗಿಸಿಕೊಂಡಿದ್ದೇವೆ ಎನ್ನುವ ಮಾಹಿತಿಯನ್ನು ನೀಡುತ್ತಾರೆ. ಈ ಕಾರಣವನ್ನು ಪರಿಶೀಲಿಸಿದಾಗ ಬಹುಮುಖ್ಯವಾಗಿ ಈ ಸಮುದಾಯಕ್ಕೆ ನೆಲೆ ಮತ್ತು ನೆಲ ಇಲ್ಲದೆ ಅಲೆದಾಡುತ್ತಿರುವುದು ಕಂಡುಬರುತ್ತಿದೆ. ಬುಡ್ಗ ಜಂಗಮರಲ್ಲಿ ಮಹಿಳೆಯರ ಶಿಕ್ಷಣವಂತು ತೀರ ಕಡಿಮೆ ಇರುವುದು ಕಂಡುಬರುತ್ತದೆ. ಹೆಣ್ಣು ಮಕ್ಕಳು ಎಷ್ಟು ಓದಿದರೂ ಗಂಡನ ಮನೆಯಲ್ಲಿ ಮುಸುರಿ ತಿಕ್ಕುವುದು ತಪ್ಪುವುದಿಲ್ಲ ಎಂಬ ತಿಳುವಳಿಕೆಯಿಂದ ಮತ್ತು ಹೆಣ್ಣು ಮಕ್ಕಳು ಋತುಮತಿಯಾದ ತಕ್ಷಣ ಮದುವೆ ಮಾಡಿಕೊಡುವುದರಿಂದ ಇವರ ಶಿಕ್ಷಣ ಪ್ರಮಾಣ ತೀರ ಕಡಿಮೆಯಾಗಿರುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಹೊಸತಲೆಮಾರಿನವರು ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡುತ್ತಿರುವ ಫಲವಾಗಿ ಶೇಕಡಾ ೪೭.೫ ಜನ ಹೆಣ್ಣು ಮಕ್ಕಳು ಶಿಕ್ಷಣ ಪಡೆಯುತ್ತಿದ್ದಾರೆ. ಭಾರತ ಮತ್ತು ಕರ್ನಾಟಕ ಸರ್ಕಾರಗಳು ಅನೇಕ ಯೋಜನೆಗಳನ್ನು ರೂಪಿಸಿ ಶೈಕ್ಷಣಿಕ ಮಟ್ಟ ಸುಧಾರಿಸಲು ಪ್ರಯತ್ನಿಸಿದರೂ ಸಮುದಾಯದ ಶೈಕ್ಷಣಿಕ ಪ್ರಗತಿ ಇನ್ನೂ ಸಾಧ್ಯವಾಗಿಲ್ಲ. ಕಾರಣ ಇವರ ಮಾತೃ ಭಾಷೆ ತೆಲುಗು ಮತ್ತು ಮರಗು ಭಾಷಿಕರಾಗಿರುವುದರಿಂದ ಮತ್ತು ಅವರ ಪಾರಂಪರಿಕ ಆಹಾರದ ಕೊರತೆ, ಬಡತನ ಮತ್ತು ಶೈಕ್ಷಣಿಕ ಅರಿವಿನ ಕೊರತೆಯನ್ನು ಕಾಣಬಹುದು. ಇವರ ಮಾತೃಭಾಷೆ ಮತ್ತು ಮೂಲಭೂತ ಆಹಾರ ಮತ್ತು ಕುಟುಂಬಕ್ಕೆ ಆರ್ಥಿಕ ಸಮಸ್ಯೆಯನ್ನು ಕಾಡುತ್ತಿರುವುದರಿಂದ ಇವರ ಶೈಕ್ಷಣಿಕ ಪ್ರಗತಿ ಕುಂಟಿತವಾಗಿರುವುದು ಕಾಣಬಹುದು. ಭಾರತ ಮತ್ತು ಕರ್ನಾಟಕ ಸರ್ಕಾರವು ದಕ್ಷಿಣ ಕರ್ನಾಟಕದ ಬುಡಕಟ್ಟು ಸಮುದಾಯಗಳ ವಿಧ್ಯಾರ್ಥಿಗಳಿಗೆ ಮಾತೃಭಾಷೆಯಲ್ಲಿ ಶಿಕ್ಷಣ ಮತ್ತು ಪಠ್ಯಕ್ರಮ ನೀಡಿದಂತೆ ಬುಡ್ಗ ಜಂಗಮರಿಗೆ ವಿಶೇಷವಾದ ಯೋಜನೆಗಳು ರೂಪಿಸಿದಾಗ ಮಾತ್ರ ಇವರ ಶೈಕ್ಷಣಿಕ ಪ್ರಗತಿಯನ್ನು ಕಾಣಬಹುದಾಗಿದೆ. ಒಟ್ಟಾರೆಯಾಗಿ ಬುಡ್ಗ ಜಂಗಮರ ಶೈಕ್ಷಣಿಕ ವ್ಯವಸ್ಥೆಯನ್ನು ಗಮನಿಸಿದಾಗ ಈ ಸಮುದಾಯದವರಲ್ಲಿ ಅನಕ್ಷರಸ್ಥರ ಸಂಖ್ಯೆ ಹೆಚ್ಚು ಕಂಡುಬರುತ್ತದೆ. ಈ ಸಮುದಾಯದವರು ಶೈಕ್ಷಣಿಕವಾಗಿ ಹಿಂದುಳಿಯಲು ಇವರ ಆರ್ಥಿಕ ಸಮಸ್ಯೆ, ಬಡತನ, ಬಾಲ್ಯವಿವಾಹ ಪದ್ಧತಿ, ಬಹುಪತ್ನಿತ್ವ ಪದ್ಧತಿ ಮತ್ತು ಅಲೆಮಾರಿತನದ ಜೀವನವೇ ಪ್ರಮುಖ ಕಾರಣವಾಗಿದೆ. ಇವರಿಗೆ ನಿರ್ದಿಷ್ಟ ನೆಲೆ ಇಲ್ಲದಿರುವುದು ಒಂದು ಪ್ರಮುಖವಾದ ಕಾರಣವಾಗಿದೆ. ಈ ಸಮುದಾಯದ ಹಿರಿಯ ನಾಗರಿಕರಿಗೂ ಸ್ತ್ರೀ–ಪುರುಷರಿಗೂ

ಶಿಕ್ಷಣದ ಅರಿವೆ ಇಲ್ಲದಂತಾಗಿದೆ. ಈ ಸಮುದಾಯದ ಹಿರಿಯರು ತಮ್ಮ ಹೊಟ್ಟೆಪಾಡಿಗಾಗಿ ಪಾರಂಪರಿಕ ವೃತ್ತಿ ಭಿಕ್ಷೆ ಬೇಡಲು ಊರೂರು-ಹಳ್ಳಿ-ಪಟ್ಟಣಗಳಿಗೆ ಅಲೆದಾಡುತ್ತಿದ್ದರಿಂದ ತಮ್ಮ ಮಕ್ಕಳಿಗೂ ಸಹ ಶಿಕ್ಷಣವನ್ನು ಕೊಡಿಸಲು ಮುಂದಾಗಿಲ್ಲ. ಇತ್ತೀಚಿನ ದಿನಗಳಲ್ಲಿ ಕೆಲವರು ಮಾತ್ರ ಪ್ರಾಥಮಿಕ ಮತ್ತು ಪ್ರೌಢಶಾಲೆ ಹಂತದ ಶಿಕ್ಷಣವನ್ನು ಪಡೆದುಕೊಂಡಿದ್ದಾರೆ. ಬಹಳಷ್ಟು ಮಕ್ಕಳು ಅನಕ್ಷರಸ್ಥರಾಗಿಯೇ ಉಳಿದಿದ್ದಾರೆ. ಈ ಸಮುದಾಯದವರಲ್ಲಿ ಒಟ್ಟಾರೆಯಾಗಿ ಕರ್ನಾಟಕದಲ್ಲಿ ಹುಡಿಕಿದರೆ ಕೇವಲ ಐದಾರುಜನ ಮಾತ್ರ ಸರ್ಕಾರಿ ಕೆಲಸದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ ಉಳಿದಂತೆ ಎಲ್ಲರೂ ನಿರುದ್ಯೋಗಿಗಳಾಗಿದ್ದಾರೆ. ಅಲ್ಪಸ್ವಲ್ಪ ಓದಿದವರು ಶಾಲೆ ಬಿಟ್ಟು ವೇಷ ಹಾಕಲು, ಬೀದಿ ವ್ಯಾಪಾರ ಮಾಡಲು, ತಂದೆ ತಾಯಿಗೆ ಆಸರೆಯಾಗಲು ಸಣ್ಣ ವಯಸ್ಸಿನಲ್ಲಿಯೇ ಮದುವೆ ಮಾಡಿಕೊಂಡು ತಮ್ಮ ಜೀವನವನ್ನು ಮಾಡುತ್ತಿದ್ದಾರೆ ಹೀಗಾಗಿ ಈ ಸಮುದಾಯದಲ್ಲಿ ಬಹಳಷ್ಟು ಜನರು ಶೈಕ್ಷಣಿಕವಾಗಿ ಹಿಂದುಳಿಯಲು ಇವರಿಗೆ ನಿಶ್ಚಿತ ಆರ್ಥಿಕ ಮೂಲಗಳು ಇಲ್ಲದಿರುವುದು ಪ್ರಮುಖ ಕಾರಣವಾಗಿದೆ.

**ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಗುರುತಿನ ಚೀಟಿ ಸೌಲಭ್ಯಗಳ ವಿವರ**

**ಕೋಷ್ಟಕ ೮.೩: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಗುರುತಿನ ಚೀಟಿ ಸೌಲಭ್ಯಗಳ ವಿವರ**

| **ಗುರುತಿನ ಸೌಲಭ್ಯಗಳನ್ನು ಪಡೆಯುವ ಅರ್ಹ ಕುಟುಂಬಗಳ ಸಂಖ್ಯೆ** | | **ಗುರುತಿನ ಸೌಲಭ್ಯಗಳನ್ನು ಪಡೆದ ಒಟ್ಟು ಕುಟುಂಬಗಳ ಸಂಖ್ಯೆ** | **ಶೇಕಡಾ** |
|---|---|---|---|
| ಪಡಿತರ ಚೀಟಿ | ೮೫೪ | ೭೫೪ | ೮೮.೨ |
| ಉದ್ಯೋಗ ಖಾತ್ರಿ ಪುಸ್ತಕ | ೮೫೪ | ೨೩೧ | ೨೭.೦ |
| **ಗುರುತಿನ ಸೌಲಭ್ಯಗಳನ್ನು ಪಡೆಯುವ ಅರ್ಹ ಜನಸಂಖ್ಯೆ** | | **ಗುರುತಿನ ಸೌಲಭ್ಯಗಳನ್ನು ಪಡೆದ ಒಟ್ಟು ಜನಸಂಖ್ಯೆ** | **ಶೇಕಡಾ** |
| ಮತದಾನದ ಚೀಟಿ | ೧೮೪೪ | ೧೭೪೦ | ೯೪.೩ |
| ಆಧಾರ್ ಕಾರ್ಡ್ | ೩೪೭೦ | ೨೮೩೬ | ೮೧.೭ |
| ಜಾತಿ ಪ್ರಮಾಣ ಪತ್ರ | ೩೪೭೦ | ೨೯೬೦ | ೮೫.೩ |

ಈ ಮೇಲಿನ ಕೋಷ್ಟಕವು ಕರ್ನಾಟಕ ಸರ್ಕಾರ ಬಡವರಿಗಾಗಿ ನ್ಯಾಯಬೆಲೆ ಅಂಗಡಿಗಳನ್ನು ತೆರೆದು ರಿಯಾಯಿತಿ ದರದಲ್ಲಿ ದವಸ ಧಾನ್ಯಗಳನ್ನು ನೀಡಿ ಸಹಕರಿಸುತ್ತಿದೆ. ಈ ಯೋಜನೆಯನ್ನು ಪಡೆಯಲು ಜನತೆಯ ಆರ್ಥಿಕತೆಯ ಅನುಗುಣವಾಗಿ ಎಪಿಎಲ್, ಬಿಪಿಎಲ್, ಅಂತ್ಯೋದಯ ಪಡಿತರ ಚೀಟಿಗಳನ್ನು ನೀಡುತ್ತಿದೆ. ಪ್ರಸ್ತುವಾಗಿ ಅನ್ನಭಾಗ್ಯ ಯೋಜನೆಯಡಿಯಲ್ಲಿ ೧ ರೂಪಾಯಿ ಕೆಜಿ ಅಕ್ಕಿ ನೀಡುತ್ತಾ ಬಡ ಜನರ ಹಸಿವನ್ನು ನೀಗಿಸುತ್ತಿದೆ. ಈ ಪಡಿತರ ಚೀಟಿಗಳನ್ನು ಅಲೆಮಾರಿ ಬುಡ್ಗ ಜಂಗಮರು ಶೇಕಡಾ ೮೮.೨ ರಷ್ಟು ಜನರು ಪಡೆದಿದ್ದಾರೆ. ಮಹಾತ್ಮಗಾಂಧಿ ರಾಷ್ಟ್ರೀಯ

ಉದ್ಯೋಗ ಖಾತ್ರಿ ಯೋಜನೆಯ ಮೂಲಕ ಕೇಂದ್ರ ಸರ್ಕಾರವು ದುಡಿಯುವ ವರ್ಗಗಳಿಗೆ ವರ್ಷದಲ್ಲಿ ಇಂತಿಷ್ಟು ದಿನವೆಂದು ಕೆಲಸ ನೀಡುವುದರ ಮೂಲಕ ಗ್ರಾಮೀಣ ಪ್ರದೇಶದ ಜನರ ಬದುಕಿನಲ್ಲಿ ನೆರವಾಗುತ್ತಿದೆ. ಈ ಯೋಜನೆಯ ಸೌಲಭ್ಯ ಪಡೆಯಲು ಜಾಬ್ ಕಾರ್ಡ್ ಎಂಬ ಪತ್ರವನ್ನು ನೀಡುತ್ತಿದ್ದು, ಈ ಕಾರ್ಡ್‌ಗಳು ಹೊಂದಿದ್ದವರು ಕೆಲಸ ಮಾಡಿ ಯೋಗ್ಯ ಕೂಲಿ ಪಡೆಯಬಹುದು. ಇಂತಹ ಕಾರ್ಡ್‌ಗಳನ್ನು ಬುಡ್ಗ ಜಂಗಮರು ಶೇಕಡಾ ೨೭ ಜನರು ಮಾತ್ರ ಪಡೆದಿರುತ್ತಾರೆ. ಉಳಿದ ಜನರು ಇದರ ಬಗ್ಗೆ ಅರಿವು ಇಲ್ಲದೆ ಹಗಲುವೇಷ ಮತ್ತು ಬೀದಿ ವ್ಯಾಪಾರ ಮಾಡುತ್ತಾ ಜೀವನ ಸಾಗುಸುತ್ತಿರುವುದು ಕಾಣಬಹುದು.

ಭಾರತ ದೇಶವು ಪ್ರಜಾಪ್ರಭುತ್ವದ ರಾಷ್ಟ್ರವಾಗಿದ್ದು, ಆಡಳಿತ ವ್ಯವಸ್ಥೆಯಲ್ಲಿ ಆಡಳಿತ ಸುಗಮವಾಗಲು ವಿಕೇಂದ್ರೀಕರಣಗೊಂಡಿರುವುದು ಕಾಣಬಹುದು. ರಾಜ್ಯಗಳ ಒಕ್ಕೂಟ ವ್ಯವಸ್ಥೆಯಲ್ಲಿ ಭಾರತವು ಲಿಖಿತ ಸಂವಿಧಾನದ ಮೂಲಕ ಆಡಳಿತವನ್ನು ನಿರ್ವಹಿಸುತ್ತಿದೆ. ಕೇಂದ್ರ, ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳೆಂಬ ವಿಭಾಗೀಕರಣದ ಮೂಲಕ ಪ್ರಜಾಪ್ರತಿನಿಧಿಗಳು ಮತ್ತು ಸಲಹಾ ವರ್ಗಗಳಿಂದ ಆಡಳಿತಯಂತ್ರ ಮುನ್ನಡೆಯುತ್ತಿರುವುದು ಕಾಣಬಹುದಾಗಿದೆ. ಈ ವಿಕೇಂದ್ರಿಕರಣದ ಆಡಳಿತವನ್ನು ನಗರ ಮತ್ತು ಗ್ರಾಮೀಣ ಸ್ಥಳೀಯ ಸರ್ಕಾರಗಳ ಮೂಲಕ, ನಗರ ಪ್ರದೇಶಗಳಲ್ಲಿ ಬೃಹತ್ ಮಹಾನಗರ ಪಾಲಿಕೆ, ಮಹಾನಗರ ಪಾಲಿಕೆ, ನಗರಸಭೆ, ಪುರಸಭೆ, ಪಟ್ಟಣ ಪಂಚಾಯಿತಿ ಎಂದು, ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯಿತಿ, ತಾಲೂಕು ಪಂಚಾಯಿತಿ, ಗ್ರಾಮ ಪಂಚಾಯಿತಿ ಎಂದು ಅಧಿಕಾರ ವಿಕೇಂದ್ರಿಕರಣಗೊಂಡಿರುವುದು ಕಾಣಬಹುದು. ಇದರಂತೆ ಶಾಸಕರು, ಸಂಸದರು, ಮುಖ್ಯಮಂತ್ರಿ, ಪ್ರಧಾನಮಂತ್ರಿಗಳು ಆಡಳಿತವನ್ನು ನಡೆಸುವರು. ಇವರನ್ನು ಆಯ್ಕೆ ಮಾಡುವಲ್ಲಿ ಪ್ರಜಾಪ್ರಭುತ್ವ ಪ್ರಮುಖ ಪಾತ್ರನಿರ್ವಹಿಸುತ್ತದೆ. ಈ ದೇಶದ ಪೌರತ್ವವನ್ನು ಪಡೆಯಲು ಮತ್ತು ಪೌರತ್ವ ಮಂಜೂರಾಗಲೂ ಅರ್ಹತೆ ಮತ್ತು ಕೆಲವು ಮಾನದಂಡಗಳನ್ನು ಜಾರಿಗೆ ತಂದಿರುವುದು ಕಾಣಬಹುದು. ದೇಶದ ಪೌರತ್ವ ಪಡೆಯಲು ಅರ್ಹತೆ ಅನುಸಾರವಾಗಿ ಸ್ಥಳೀಯವಾಗಿ ಮತದಾರ ಚೀಟಿಗಳನ್ನು ನೀಡುತ್ತದೆ. ಮತದಾನದ ಜೊತೆಗೆ ಇತರೆ ಆರ್ಥಿಕ, ರಾಜಕೀಯ, ಶೈಕ್ಷಣಿಕ ಸೌಲಭ್ಯ ಪಡೆಯಲು ಸಹಾಯಕವಾಗುತ್ತದೆ. ಇಂತಹ ಮತದಾನ ಚೀಟಿಗಳನ್ನು ಬುಡ್ಗ ಜಂಗಮರು ಶೇಕಡಾ ೯೪.೩ ಜನರು ಪಡೆದಿರುತ್ತಾರೆ. ಇದಕ್ಕೆ ಪೂರಕವಾಗಿ ಕೇಂದ್ರ ಸರ್ಕಾರ ಆಧಾರ್ ಕಾರ್ಡ್ ಗುರುತಿನ ಚೀಟಿಯನ್ನು ನೀಡುತ್ತಿದ್ದು ಶೇಕಡಾ ೮೧.೭ ಜನರು ಪಡೆದಿರುತ್ತಾರೆ.

ಭಾರತ ಸರ್ಕಾರವು ಅಸ್ಪೃಶ್ಯತೆಯ ನಿರ್ಮೂಲನೆ, ಅಸಮಾನತೆ ಮತ್ತು ಶೋಷಣೆಯನ್ನು ನಿವಾರಿಸಲು ಶೈಕ್ಷಣಿಕ ಮತ್ತು ಸಾಂಸ್ಕೃತಿಕ ರಕ್ಷಣೆಗಳನ್ನು, ರಾಜಕೀಯ ರಕ್ಷಣೆಗಳನ್ನು, ಸೇವಾ ರಕ್ಷಣೆಗಳನ್ನು ಹಾಗೂ ಉನ್ನತ ವ್ಯಾಸಂಗ ಮತ್ತು ಹುದ್ದೆಗಳಲ್ಲಿ ಸೇರಲು ಮುಖ್ಯವಾಹಿನಿಗೆ ಸೇರದವರನ್ನು ಅಭಿವೃದ್ಧಿಯನ್ನು ಕಾಣಲೆಂದೇ ಮೀಸಲಾತಿ ವ್ಯವಸ್ಥೆಯನ್ನು ಜಾರಿಮಾಡಲಾಗಿದೆ ಎಂದು ಹೇಳಬಹುದು. ಭಾರತದ ಸಂವಿಧಾನದ ಅನುಚ್ಛೇದ ೩೪೧/೩೪೨ರ ಪ್ರಕಾರ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ

ಎಂದು ಅನುಸೂಚಿತ ಜಾತಿ ಮತ್ತು ಬುಡಕಟ್ಟು ಎಂದು ಆದೇಶಿಸಿ ೧೦೧ ಜಾತಿಗಳನ್ನು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ, ೫೦ ಬುಡಕಟ್ಟುಗಳನ್ನು ಪರಿಶಿಷ್ಟ ಪಂಗಡಗಳ ಮೀಸಲಾತಿ ಪಟ್ಟಿಯಲ್ಲಿ ಸೇರಸಲ್ಪಟ್ಟಿದೆ. ಬುಡ್ಗ ಜಂಗಮ್ ಸಮುದಾಯವನ್ನು ಪರಿಶಿಷ್ಟ ಜಾತಿಯ ಕ್ರಸಂ ೧೯ರಲ್ಲಿ ಪಟ್ಟಿಯಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್ ಎಂದು ದಾಖಲಾಗಿದೆ. ಮೀಸಲಾತಿ ಪಡೆಯಲು ಅರ್ಹ ಅಭ್ಯರ್ಥಿಗಳಿಗೆ ಜಾತಿಪ್ರಮಾಣ ಪತ್ರಗಳನ್ನು ನೀಡುತ್ತಿದ್ದು ಅದರಲ್ಲಿ ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರು ಶೇಕಡಾ ೮೫.೩ ರಷ್ಟು ಜಾತಿಪ್ರಮಾಣ ಪತ್ರಗಳನ್ನು ಪಡೆಯುತ್ತಿರುವುದು ಕಾಣಬಹುದು. ಉಳಿದ ಶೇಕಡಾ ೧೪.೭ ರಷ್ಟು ಜನರು ಅಲೆಮಾರಿತನದ ಬದುಕಿನಿಂದ ಮತ್ತು ಅಧಿಕಾರಿಗಳ ಕಿರಿಕಿರಿಯಿಂದ ಜಾತಿಪ್ರಮಾಣ ಪತ್ರಗಳು ಪಡೆದುಕೊಂಡಿರುವುದಿಲ್ಲ.

**ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಮೂಲಭೂತ ಸೌಲಭ್ಯಗಳ ವಿವರ**

**ಕೋಷ್ಟಕ ೮.೪: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಮೂಲಭೂತ ಸೌಲಭ್ಯಗಳ ವಿವರ**

| ಸೌಲಭ್ಯಗಳು | ಕುಟುಂಬಗಳ ಸಂಖ್ಯೆ | ಶೇಕಡಾ |
|---|---|---|
| ವಿದ್ಯುತ್ ಸೌಲಭ್ಯ | ४६೨ | ೫४.೦ |
| ಭಾಗ್ಯಜ್ಯೋತಿ | ೧೫४ | ೧೮.೦ |
| ಗ್ಯಾಸ್ ಸಿಲಿಂಡರ್ ಒಲೆ | ೫೭೮ | ೬೮.೦ |
| ನಲ್ಲಿ | ೧೯೨ | ೨೨.४ |
| ಶೌಚಾಲಯ | ೩೦೧ | ೩೫.೨ |
| ಸ್ನಾನ ಗೃಹ | ೩४೨ | ४೦.೦ |
| ದೂರದರ್ಶನ (ಟಿವಿ) | ४೫೦ | ೫೨.೬ |
| ಸೌಲಭ್ಯಗಳ ವಿವರ | ಜನಸಂಖ್ಯೆ | ಶೇಕಡಾ |
| ಸೈಕಲ್/ ಮೋಟಾರ್ ಬೈಕ್/ ಜೀಪು/ ಕಾರು | ೭೫೦ | ೨೧.೬ |
| ಮೊಬೈಲ್ ಬಳಕೆ | ೧೨೩೦ | ೩೫.४ |

ಅಲೆಮಾರಿ ಬುಡ್ಗ ಜಂಗಮರು ಗುಡಾರ, ಗುಡಿಸಲು, ಟಿನ್, ಆರ್‌ಸಿಸಿ, ಜನತಾ ಮತ್ತು ಬಾಡಿಗೆ ಮನೆಗಳಲ್ಲಿ ವಸತಿಮಾಡುತ್ತಿರುವುದು ಕಾಣಬಹುದು. ಈ ಹಿನ್ನೆಲೆಯಲ್ಲಿ ಆಶ್ರಯ ಪಡೆದ ವಸತಿಗಳಲ್ಲಿ

ಇರಬಹುದಾದ ಮೂಲಭೂತ ಸೌಲಭ್ಯಗಳನ್ನು ತಿಳಿಯುವುದು ಪ್ರಮುಖವಾಗಿದೆ. ಇಂದು ಮಾನವ ಆಧುನಿಕ ಮತ್ತು ಯಾಂತ್ರೀಕರಣ, ಜಾಗತೀಕರಣ, ಡಿಜಿಟಲ್ ಯುಗದ ಜೀವನದ ಬದುಕಿಗೆ ಒಳಗಾಗಿರುವಾಗ, ಅಲೆಮಾರಿ ಬುಡ್ಗ ಜಂಗಮರು ಹೇಗೆ ಆಧುನೀಕರಣದ ಕಡೆ ಮುಖಮಾಡಿವೆ ಎಂಬುದನ್ನು ತಿಳಿಯಲು ಮನೆಯಲ್ಲಿ ಬಳಸುವ ಮೂಲಭೂತ ಸೌಲಭ್ಯಗಳು ನೆರವಾಗುತ್ತವೆ. ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ್ ಸಮುದಾಯದಲ್ಲಿ ಒಟ್ಟು ೮೫೪ ಕುಟುಂಬಗಳು, ೩೪೭೦ ಜನಸಂಖ್ಯೆಯಲ್ಲಿ ವಿದ್ಯುತ್ ಸೌಲಭ್ಯ ಪಡೆದಿರುವ ಕುಟುಂಬಗಳ ಸಂಖ್ಯೆ ಶೇಕಡಾ ಪ್ರಮಾಣ ೫೪ ಇದೆ. ಇದರಲ್ಲಿ ಶೇಕಡಾ ೧೮ ಕುಟುಂಬಗಳು ಭಾಗ್ಯಜ್ಯೋತಿ ವಿದ್ಯುತ್ ಸೌಲಭ್ಯವನ್ನು ಪಡೆದಿದ್ದಾರೆ. ನಗರದ ಪ್ರದೇಶಗಳಲ್ಲಿ ಮತ್ತು ಅರಣ್ಯ ಪ್ರದೇಶದ ಹತ್ತಿರದಲ್ಲಿ ಇರುವ ಶೇಕಡಾ ೬೮ ಕುಟುಂಬಗಳು ಮಾತ್ರ ಗ್ಯಾಸ್ ಸಿಲಿಂಡರ್ ಒಲೆಯನ್ನು ಬಳಸುತ್ತಿದ್ದಾರೆ. ಉಳಿದವರು ಒಣಗಿದ ಮುಳ್ಳಿನ ಕಟ್ಟಿಗೆ ಮತ್ತು ತೆಂಗಿನ ಚಿಪ್ಪುಗಳನ್ನು ಉರವಲಾಗಿ ಬಳಸುತ್ತಿದ್ದಾರೆ. ಆರ್ ಸಿಸಿ ಮನೆಗಳು, ಮಾಳಿಗೆ ಮನೆಗಳು ಹೊಂದಿರುವ ಹಾಗೂ ಬಾಡಿಗೆ ಮನೆಗಳಲ್ಲಿ ವಾಸ ಮಾಡುವ ಕುಡುತಿನಿ, ಹಳೇದರೋಜಿ, ಕಾಕರ್ಲತೋಟ, ಹೊಸಪೇಟೆಗಳಲ್ಲಿ ಈ ಸಮುದಾಯವು ಶೇಕಡಾ ೨೨.೪ ಕುಟುಂಬಗಳು ಖಾಸಗಿ ನಲ್ಲಿಗಳನ್ನು ಹಾಕಿಕೊಂಡಿರುವುದು ಕಾಣಬಹುದು. ಇದರ ಜೊತೆಗೆ ಶೇಕಡಾ ೩೫.೨ ಕುಟುಂಬಗಳು ಶೌಚಾಲಯ, ಶೇಕಡಾ ೪೦.೦ ಕುಟುಂಬಗಳು ಸ್ನಾನ ಗೃಹಗಳನ್ನು ನಿರ್ಮಿಸಿಕೊಂಡಿದ್ದಾರೆ. ಶೇಕಡಾ ೫೨.೬ ಕುಟುಂಬಗಳು ದೂರದರ್ಶನ(ಟಿವಿ)ಯನ್ನು ಹೊಂದಿದ್ದಾರೆ. ಆದರೆ ಅಂದು ಕಡಿಮೆ ಬೆಲೆಯಲ್ಲಿ ಡಿಸ್ ಆಂಟೆನಾಗಳು ದೊರಕುತ್ತಿದ್ದರಿಂದ ಟಿವಿಗಳನ್ನು ನೋಡುತ್ತಿದ್ದರು ಆದರೆ ಇಂದು ದಿನೇ ದಿನೇ ಬೆಲೆಗಳು ಹೆಚ್ಚುತ್ತಿರುವುದರಿಂದ ಮತ್ತು ಜಿ ಎಸ್ ಟಿ ಹಾಕುತ್ತಿದ್ದರಿಂದ ತಿಂಗಳ ಮಾಸಿಕ ರಿಚಾರ್ಜ್ ಮಾಡಲು ಆಗದೇ ಮನೆಯಲ್ಲಿ ಖಾಲಿ ಟಿವಿಗಳನ್ನು ಹೊಂದಿರುವುದು ಕಾಣಬಹುದು. ಇತ್ತೀಚಿನ ದಿನಗಳಲ್ಲಿ ಆಧುನಿಕ ಕಸುಬುಗಳನ್ನು ಅವಲಂಬಿಸಿರುವುದರಿಂದ ಗ್ರಾಮೀಣ ಮತ್ತು ನಗರ ಪ್ರದೇಶಗಳಿಗೆ ಹೋಗಿ ಬೀದಿ ವ್ಯಾಪಾರ ಮಾಡುವ ಕಾರಣದಿಂದ ಶೇಕಡಾ ೨೧.೬ ರಷ್ಟು ಸೈಕಲ್/ ಮೋಟಾರ್ ಬೈಕ್/ ಜೀಪು/ ಕಾರುಗಳನ್ನು ಸಾಲ ಸೂಲ ಮಾಡಿ ಖರೀದಿಸಿಕೊಂಡಿರುವುದು ಕಾಣಬಹುದು. ಇಂದಿನ ಪ್ರಪಂಚದಲ್ಲಿ ಜಗತ್ತಿನ ಯಾವ ಮೂಲೆಯಲ್ಲಿದ್ದರೂ ಕಂಡುಕೊಳ್ಳುಬಹುದಾದ ಅಥವಾ ಕೇಳಿಸಿಕೊಳ್ಳಬಹುದಾದ ಮತ್ತು ನೋಡಿಕೊಳ್ಳಬಹುದಾದ ಮಾಧ್ಯಮವೆಂದರೆ ಮೊಬೈಲ್. ಮೊಬೈಲ್ ಇಲ್ಲದೇ ಯಾವ ವ್ಯಕ್ತಿಯು ಇಲ್ಲ. ಅಲೆಮಾರಿ ಬುಡ್ಗ ಜಂಗಮರಲ್ಲಿ ಶೇಕಡಾ ೩೫.೪ ರಷ್ಟು ಜನರಿಗೆ ಮೊಬೈಲ್ ಇರುವುದನ್ನು ಕಾಣಬಹುದು. ಒಟ್ಟಾರೆ ಜಾಗತೀಕರಣದ ಪ್ರಭಾವದಿಂದ ಮೇಲಿನ ಎಲ್ಲಾ ವಸ್ತುಗಳು ಅವರವರ ಆರ್ಥಿಕ ಸದೃಢತೆಯ ಮೇಲೆ ಮತ್ತು ಸಾಲಮಾಡಿ ಕೊಂಡು ಜೀವನ ಮಾಡುತ್ತಿರುವುದು ಕಾಣಬಹುದು. ಒಟ್ಟಾರೆ ಬುಡ್ಗ ಜಂಗಮ್ ಸಮುದಾಯವು ಆಧುನಿಕತೆಗೆ ಮತ್ತು ಜಾಗತೀಕರಣಕ್ಕೆ ಒಗ್ಗಿಕೊಳ್ಳುತ್ತಿರುವುದು ಕಾಣಬಹುದು.

**ಕೋಷ್ಟಕ ೮.೫: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರು ಸರ್ಕಾರಿ ಸೌಲಭ್ಯ ಪಡೆಯುವ ಅರ್ಹ ಫಲಾನುಭವಿಗಳ ಸ್ಥಿತಿಗತಿ**

| ಸೌಲಭ್ಯಗಳು | ಸರ್ಕಾರಿ ಸೌಲಭ್ಯ ಪಡೆಯುವ ಅರ್ಹ ಫಲಾನುಭವಿಗಳ ಒಟ್ಟು ಜನಸಂಖ್ಯೆ ಮತ್ತು ಶೇಕಡಾವಾರು. | | | ಸರ್ಕಾರಿ ಸೌಲಭ್ಯ ಪಡೆಯುತ್ತಿರುವ ಜನಸಂಖ್ಯೆ ಮತ್ತು ಶೇಕಡಾವಾರು. | | | | ಸರ್ಕಾರಿ ಸೌಲಭ್ಯ ಪಡೆಯದೇ ಇರುವ ಶೇಕಡಾವಾರು. |
|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಶೇಕಡಾ | ಶೇಕಡಾ |
| ಕಲಾವಿದರ ಮಶಾಸನ | ೨೩೨ | ೯೩ | ೩೨೫ | ೨೩ | ೪ | ೨೭ | ೮.೩ | ೯೧.೭ |
| ವಿಧವೆ ವೇತನ | – | ೮೧ | ೮೧ | – | ೫೬ | ೫೬ | ೬೯.೧ | ೩೦.೯ |
| ವೃದ್ಧಾಪ್ಯ ವೇತನ | ೧೦೩ | ೧೩೮ | ೨೪೧ | ೩೫ | ೪೫ | ೮೦ | ೩೩.೧ | ೬೬.೯ |
| ಅಂಗವಿಕಲರ ಮಶಾಸನ | ೨೫ | ೮ | ೩೩ | ೨ | ೨ | ೪ | ೧೨.೧ | ೮೭.೯ |

ಈ ಮೇಲಿನ ಕೋಷ್ಟಕವು ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರು ಸರ್ಕಾರಿ ಸೌಲಭ್ಯಗಳನ್ನು ಪಡೆಯುವ ಅರ್ಹ ಫಲಾನುಭವಿಗಳ ಚಿತ್ರಣವನ್ನು ಅಧ್ಯಯನ ಕ್ಷೇತ್ರಕಾರ್ಯದಿಂದ ವಿವರಿಸಲಾಗಿದೆ. ಬುಡ್ಗ ಜಂಗಮರು ಬಹುಮುಖ್ಯವಾಗಿ ಕಲೆಯನ್ನು ಆಧರಸಿ ಕಲೆಯನ್ನೇ ನಂಬಿ ಜೀವಿಸಿದಂತ ಇವರು ಹುಟ್ಟು ಕಲಾವಿದರಾಗಿ ಪಾರಂಪರಿಕವಾಗಿ ಹಗಲುವೇಷ, ಬುರ್ರಕಥಾ, ಗಂಗಿಗೌರಿ ಗಾಯನ ಮೇಳ ಇತ್ಯಾದಿ ಕಲೆ ಸಂಗೀತವನ್ನು ಹಾಡುವ ಮತ್ತು ಪ್ರದರ್ಶಿಸುವ ದೇಶದ ಕಲೆ ಮತ್ತು ಸಂಸ್ಕೃತಿ ಉಳಿಸಿಬೆಳೆಸುವಲ್ಲಿ ಪ್ರಮುಖವಾದ ಪಾತ್ರನಿರ್ವಹಿಸುತ್ತಾರೆ. ಈ ಸಮುದಾಯದ ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ಜನಸಂಖ್ಯೆ ೩೪೭೦ರಲ್ಲಿ ೩೨೫ ಜನ ಕಲಾವಿದರಿದ್ದು, ಅನೇಕ ಸಂಘ ಸಂಸ್ಥೆ ಮತ್ತು ಮೇಳಗಳನ್ನು ಕಟ್ಟಿಕೊಂಡು ಗ್ರಾಮಗ್ರಾಮಗಳಲ್ಲಿ ನಗರ ಪಟ್ಟಣಗಳಲ್ಲಿ ಸಂಚರಿಸಿ ಹಗಲುವೇಷ ಬುರ್ರಕಥಾ, ಗಂಗಿಗೌರಿ ಗಾಯನ ಇತ್ಯಾದಿ ಕಲೆಗಳನ್ನು ಪ್ರದರ್ಶಿಸುತ್ತಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹಿರಿಯ ಕಲಾವಿದರಿಗೆ ಆರ್ಥಿಕವಾಗಿ ಸಹಾಯವಾಗಲೆಂದು ಕಲಾವಿದರ ಮಶಾಸನವನ್ನು ನೀಡುತ್ತಿದೆ. ಕಲಾವಿದರ ಮಸಾಶನ ಪಡೆಯಲು ೨೫ ವರ್ಷ ಕಲಾಸೇವೆ ಮತ್ತು ಕನಿಷ್ಠ ೬೦ ವರ್ಷ ಮೇಲ್ಪಟ್ಟು ವಯಸ್ಸು ಇರಬೇಕೆಂದು ನಿಯಮ ಮಾಡಿದೆ. ಎಲ್ಲಾ ಕಲಾವಿದರಿಗೆ ಅನ್ವಯಿಸುವಂತೆ ನಿಯಮವನ್ನು ಈ ಕಲಾವಿದರಿಗೆ ನಿಯಮವನ್ನು ಮಾಡಲಾಗಿದೆ. ಬಹುತೇಕ ಎಲ್ಲಾ ಕಲಾವಿದರು ಹವ್ಯಾಸಿ ಕಲಾವಿದರಿದ್ದು, ಕಲೆಯನ್ನು ಪ್ರವೃತ್ತಿಯಾಗಿ ಮಾಡುತ್ತಿರುವುದು ಕಂಡುಬರುತ್ತದೆ. ಆದರೆ ಬುಡ್ಗ ಜಂಗಮರು ಕಲೆಯನ್ನೇ

ಉಸಿರಾಗಿಸಿಕೊಂಡು ಜೀವನವಾಡುತ್ತಾ ಅದನ್ನೇ ಒಂದು ವೃತ್ತಿಯಾಗಿ ಪಾರಂಪರಿಕವಾಗಿ ಮುಂದುವರಿಸಿಕೊಳ್ಳುತ್ತಾ ಬರುತ್ತಿದ್ದಾರೆ. ಇಂತವರಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕೊಡಮಾಡುವ ಕಲಾವಿದರ ಮಾಸಾಶನದ ವಯಸ್ಸಿನ ಮಿತಿ ೬೦ ವರ್ಷ ಮೇಲ್ಪಟ್ಟ ಇದ್ದವರಿಗೆ ಕೊಡುವ ಕಲಾವಿದರ ಮಾಸಶನವು ಈ ಕಲಾವಿದರಿಗೆ ಉಪಯೋಗವಾಗುವುದಿಲ್ಲ. ಇವರು ೬೦ ವರ್ಷ ದಾಟಿದ ನಂತರ ಮಸಾಶನಕ್ಕೆ ಅರ್ಜಿ ಸಲ್ಲಿಸಿದರೂ ಉಪಯೋಗವಾಗುವುದಿಲ್ಲ. ಆ ಮಾಸಶವು ಅವರು ಸತ್ತ ನಂತರ ಇಲಾಖೆಯಿಂದ ಆದೇಶ ಕಾಫಿ ಬರುವುದು ಕಾಣಬಹುದಾಗಿದೆ. ಹುಟ್ಟು ಕಲಾವಿದರಾದ ಇವರು ಕಲೆಯನ್ನೇ ನಂಬಿ, ಕಲೆಯನ್ನೇ ಉಸಿರಾಗಿಸಿಕೊಂಡು ಜೀವಿಸುವ ಇವರು ಎಲ್ಲಾ ಕಲಾವಿದರಂತೆ ಅಲ್ಲ ಇವರು ವಿಶೇಷ ಮತ್ತು ವಿಶಿಷ್ಟ ಕಲಾವಿದರಿರುವುದರಿಂದ ಇವರಿಗೆ ಈ ನಿಯಮದಿಂದ ಸಡಿಲಿಕೆ ನೀಡಿ ಸರಳವಾಗಿ ಮಾಸಶನ ಮತ್ತು ಸೌಲಭ್ಯಗಳು ಸಿಗುವಂತೆ ಆಗಬೇಕಿದೆ. ಬಹುತೇಕ ಬುಡ್ಗ ಜಂಗಮ ಸಮುದಾಯದ ಕಲಾವಿದರಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸೌಲಭ್ಯಗಳ ಅರಿವು ಇಲ್ಲದಾಗಿದೆ. ಇತ್ತೀಚಿನ ದಿನಗಳಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಗುರುತಿಸುವಿಕೆಯಿಂದ ಮತ್ತು ಬಳ್ಳಾರಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿವೃತ್ತ ಸಾಹಯಕ ನಿರ್ದೇಶಕರಾದ ಚೋರುನೂರು ಕೊಟ್ರಪ್ಪ ಅವರ ಸಹಕಾರದೊಂದಿಗೆ ಕೇವಲ ೨೭ ಜನ ಅಂದರೆ ಶೇಕಡಾ ೮.೩ ಕಲಾವಿದರಿಗೆ ಮಾತ್ರ ಕಲಾವಿದರ ಮಸಾಶನ ಪಡೆಯುತ್ತಿರುವುದು ಕಂಡುಬರುತ್ತಿದೆ. ನಂತರ ಕಳೆದ ಹತ್ತು ಹದಿನೈದು ವರ್ಷಗಳಿಂದ ಈ ಕಲಾವಿದರನ್ನು ಸರಿಯಾಗಿ ಗುರುತಿಸದೇ ಹಾಗೂ ಪ್ರೋತ್ಸಾಹಿಸದೇ ಕಲಾವಿದರ ಯಾವುದೇ ಸೌಲಭ್ಯವಿಲ್ಲದೇ ಕಾರಣ ಆರ್ಥಿಕ ಸಂಕಷ್ಟದಲ್ಲಿರುವುದು ಕಂಡುಬರುತ್ತದೆ. ಇಂತಹ ವೃತ್ತಿಮೂಲ ಸಮುದಾಯದ ಕಲಾವಿದರಿಗೆ ವಯಸ್ಸಿನ ಮಿತಿ ಮತ್ತು ನಿಯಮವನ್ನು ಸಡಿಲಗೊಳಿಸಿ ಕಲಾವಿದರ ಮಶಾಸನವನ್ನು ನೀಡಬೇಕಾಗಿದೆ. ಅದರಲ್ಲಿ ಬುಡ್ಗ ಜಂಗಮರಲ್ಲಿ ಈಗಾಗಲೆ ಸಾವನ್ನಪ್ಪಿದ ಕಲಾವಿದರ ವಯಸ್ಸಿನ ಆಯುಷ್ಯ ಕೇವಲ ೬೦ರಿಂದ ೭೦ ಇರುವುದರಿಂದ ಈ ನಿಯಮವನ್ನು ಸಡಿಲಗೊಳಿಸಿ ಅವರ ಪ್ರತಿಭೆ ಮತ್ತು ಕಲಾಸೇವೆಯನ್ನು ಪರಿಗಣಿಸಿ ಸರಳವಾಗಿ ಮಸಾಶನ ನೀಡುವಂತೆ ಆಗಬೇಕು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕಲಾವಿದರು ಮಾಸಾಶನ ಪಡೆಯಲು ಕನಿಷ್ಟ ೨೫ ವರ್ಷಗಳ ಕಲಾಸೇವೆ ಮಾಡಿರುವ ದಾಖಲೆಗಳನ್ನು ಕೇಳುತ್ತಿರುವುದು ಇವರಿಗೆ ದೊಡ್ಡ ಸಮಸ್ಯೆಯಾಗಿದೆ. ಇವರು ನಿತ್ಯ ಅಲೆಮಾರಿಗಳಾಗಿ ಊರೂರು ಅಲೆದು ಹಳ್ಳಿಗಳಲ್ಲಿ ಕಲಾಪ್ರದರ್ಶನ ನೀಡುತ್ತಿರುವುದರಿಂದ ಇವರಲ್ಲಿ ಯಾವುದೇ ರೀತಿಯ ದಾಖಲೆಗಳು ಇರುವುದಿಲ್ಲ. ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕೆಲವು ಕಾರ್ಯಕ್ರಮಗಳು ಇವರಿಗೆ ಸಿಗದೇ ಉಳ್ಳವರ ಹಾಗೂ ಪ್ರಭಾವಿಗಳ ಪಾಲುಗುತ್ತಿರುವುದರಿಂದ ವಂಚನೆಗೊಳಗಾಗಿ ಈ ಕಲಾವಿದರಿಗೆ ಸರ್ಕಾರ ನೀಡುವ ಪ್ರಮಾಣಪತ್ರಗಳು ಮತ್ತು ದಾಖಲೆಗಳು ಇಲ್ಲದಾಗಿದೆ. ಎಲ್ಲೋ ಒಬ್ಬರಿಬ್ಬರಿಗೆ ಮಾತ್ರ ಅವರಿವರ ಸಹಕಾರದಿಂದ ಬೆರಳಣಿಕೆಯಷ್ಟು ಕಲಾವಿದರಿಗೆ ಮಾತ್ರ ಕಾರ್ಯಕ್ರಮ ಮತ್ತು ಕಲಾವಿದರ ಮಾಸಾಶನ ಸಿಕ್ಕಿದ್ದು ಬಿಟ್ಟರೆ ಉಳಿದಂತಹ ಕಲಾವಿದರಿಗೆ ಯಾವುದೇ ಸೌಲಭ್ಯವಿಲ್ಲದೆ ಕಷ್ಟಕರವಾದ ಜೀವನ ಮಾಡುತ್ತಿದ್ದಾರೆ. ಇಂತಹ ಕಲಾವಿದರಿಗೆ ಸಾಮಾಜಿಕ ನ್ಯಾಯದಡಿಯಲ್ಲಿ ನಿತ್ಯಾ ನಿರಂತರವಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳು ಮತ್ತು ಇವರಿಗೆ ಸಿಗಬೇಕಾದ

ಕಲಾಗೌರವಗಳನ್ನು ನೀಡಿ ಪ್ರೋತ್ಸಾಹಿಸಬೇಕಿದೆ. ಇಂತಹ ವೃತ್ತಿಮೂಲ ಕಲಾವಿದರನ್ನು ಉಳಿಸಿ ಬೆಳೆಸುವಲ್ಲಿ ಸರ್ಕಾರ ಮತ್ತು ಸಂಘಸಂಸ್ಥೆಗಳ ಪಾತ್ರ ಬಹುಮುಖ್ಯವಾಗಿದೆ ಎಂದೇಹೇಳಬಹುದು.

ಅಧ್ಯಯನದ ಸಮೀಕ್ಷೆಯ ಪ್ರಕಾರ ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರಲ್ಲಿ ೧೧ ಜನ ಪುರುಷರು ಮತ್ತು ೮೧ ಜನ ಮಹಿಳೆಯರು ವಿಧವೆಯಾರಾಗಿದ್ದು ಕಂಡುಬರುತ್ತಿದೆ. ಅಕಾಲಿಕ ಮರಣ, ಅತಿಯಾದ ಕುಡಿತ ಹಾಗೂ ಬಹುಬೇಗ ಅನೇಕ ರೋಗಗಳಿಗೆ ತುತ್ತಾಗಿ ಅದನ್ನು ಪರಿಹರಿಸಿಕೊಳ್ಳಲಾಗದೇ ಸಾವಿಗೆ ಶರಣಾಗಿರುವುದು ಕಂಡುಬರತ್ತದೆ. ಅದಲ್ಲದೆ ಆರ್ಥಿಕತೆ ಹಾಗೂ ಆರೋಗ್ಯ ಸೌಲಭ್ಯಗಳು ದೊರೆಯದೇ ಪುರುಷರು ಅಧಿಕವಾಗಿ ಮರಣಕ್ಕೆ ಒಳಗಾಗುತ್ತಿರುವುದರಿಂದ ವಿಧವೆಯರ ಪ್ರಮಾಣ ಅಧಿಕವಾಗಿದೆ. ಅವರ ಪಾರಂಪರಿಕ ಪೌಷ್ಟಿಕ ಆಹಾರಗಳಾದ ಹುಣಸೆಹಣ್ಣಿನ ಚಿಗುರು ಸೊಪ್ಪು, ಹುಣಿಸೆಕಾಯಿ ಚಟ್ನಿ, ಪುಂಡೆಪಲ್ಲೆ, ನವಣೆ, ರಾಗಿ, ಸಜ್ಜೆ, ಜೋಳ, ಅಡವಿಯ ಸಣ್ಣಪುಟ್ಟಪ್ರಾಣಿಪಕ್ಷಿಗಳ ಬೇಟೆಯಾಡಿ ತಿನ್ನವುದು ಇವರ ಪಾರಂಪರಿಕ ಆಹಾರವಾಗಿತ್ತು. ಅದರ ಬದಲಾಗಿ ಇಂದು ಎಲ್ಲಾ ರಾಸಾಯನಿಕ ಗೊಬ್ಬರಹಾಕಿ ಬೆಳೆದಂತ ದವಸಧಾನ್ಯಗಳಿಂದ ಕೂಡಿದಂತ ತಯಾರಿಸಿದ ಆಹಾರವನ್ನು ಸೇವಿಸುತ್ತಿರುವುದರಿಂದ ಒಟ್ಟಾರೆಯಾಗಿ ಇವರು ತಿನ್ನುವ ಆಹಾರಕ್ರಮ ಬದಲಾಗಿ ಬಹುಬೇಗ ಮರಣವನ್ನುಪ್ಪುತ್ತಿರುವುದು ಕಾಣಬಹುದು. ಇದರಿಂದಾಗಿ ಮರಣ ಪ್ರಮಾಣ ಪುರುಷರಲ್ಲಿ ಅಧಿಕವಾಗಿದ್ದು ವಿಧವೆಯರ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತಿದೆ. ಸರ್ಕಾರವು ಮದುವೆಯಾದ ನಂತರ ಗಂಡ ಮರಣವಾದ ನಂತರ ಅವರ ಜೀವನ ನಿರ್ಗತಿಕವಾಗಬಾರದು ಎಂದು ಅರ್ಹ ಅಭ್ಯರ್ಥಿಗಳಿಗೆ ವಿಧವಾ ವೇತನ ನೀಡಿ ಆರ್ಥಿಕ ಸಹಾಯಮಾಡುತ್ತಿದೆ. ಬುಡ್ಗ ಜಂಗಮರಲ್ಲಿ ೮೧ ಜನ ಮಹಿಳೆಯರು ವಿಧವೆಯಾರಾಗಿದ್ದಾರೆ. ಕೇವಲ ೫೬ ಜನ ಅಂದರೆ ಶೇಕಡಾ ೬೬.೯ ಮಹಿಳೆಯರು ಮಾತ್ರ ಸರ್ಕಾರದ ವಿಧವಾವೇತನವನ್ನು ಪಡೆಯುತ್ತಿದ್ದಾರೆ. ಉಳಿದವರಿಗೆ ಈ ಯೋಜನೆಯನ್ನು ಪಡೆಯುವ ಅರಿವು ಇಲ್ಲದೇ ಮತ್ತು ಕೆಲವು ಜನರು ಅರ್ಜಿ ಸಲ್ಲಿಸಿದರೂ ಅಧಿಕಾರಿಗಳ ನಿರ್ಲಕ್ಷತೆಯಿಂದ ವಂಚಿತರಾಗಿರುವುದು ಕಾಣಬಹುದು.

ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ ಸಮುದಾಯದಲ್ಲಿ ಒಟ್ಟು ೩೪೭೦ ಜನಸಂಖ್ಯೆಯಲ್ಲಿ ೬೦ ವರ್ಷ ಮೇಲ್ಪಟ್ಟ ಪುರುಷರು ೧೦೩, ಮಹಿಳೆಯರು ೧೩೮ ಜನ ವಯೋವೃದ್ಧರಿವುದು ಕಾಣಬಹುದು. ಅದರಲ್ಲಿ ೩೫ ಜನ ಪುರುಷರು, ೪೫ ಜನ ಮಹಿಳೆಯರು ಒಟ್ಟು ಶೇಕಡಾ ೩೩.೧ ಮಾತ್ರ ಸರ್ಕಾರದ ಕಂದಾಯ ಇಲಾಖೆಯ ವೃದ್ಧಾಪ್ಯ ವೇತನವನ್ನು ಪಡೆಯುತ್ತಿರುವುದು ಕಾಣಬಹುದು. ಉಳಿದ ಜನರಿಗೆ ಅಕ್ಷರಜ್ಞಾನವಿಲ್ಲದೇ ಸರಿಯಾದ ಯೋಜನೆಯ ಬಗ್ಗೆ ತಿಳುವಳಿಕೆ ಇಲ್ಲದೇ ಮತ್ತು ಕೆಲವರು ಅರ್ಜಿ ಸಲ್ಲಿಸಿದರೂ ಅಧಿಕಾರಿಗಳ ವಿಳಂಬನೆಯಿಂದ ಪಡೆಯಲು ಸಾಧ್ಯವಾಗದಿರುವುದು ಕಂಡುಬರುತ್ತದೆ.

ಅಧ್ಯಯನದ ಸಮೀಕ್ಷೆಯ ಪ್ರಕಾರ ೨೫ ಜನ ಪುರುಷರು, ೮ ಜನ ಮಹಿಳೆಯರು ಅಂಗವಿಕಲರಿರುವುದು ಕಾಣಬಹುದು. ಅದರಲ್ಲಿ ಮಾನಸಿಕ ಕಾಯಿಲೆ ಹೊಂದಿರುವವರು ಬಳ್ಳಾರಿಯ ಹಗರಿಬೊಮ್ಮನಹಳ್ಳಿಯ ಬುಡ್ಗ ಜಂಗಮ್ ಕಾಲೋನಿಯಲ್ಲಿ ಕಾಣಬಹುದು. ಉಳಿದಂತೆ ದೈಹಿಕ

ವಿಕಲರಾದವರು ಕಂಡುಬರುತ್ತಾರೆ. ಪೋಲಿಯೋ ಲಿಸಿಕೆ ಮತ್ತು ಪೌಷ್ಟಿಕ ಆಹಾರದ ಕೊರತೆಯಿಂದ ಈ ಸಮಸ್ಯೆಗಳನ್ನು ಕಾಣಬಹುದು. ಅಂಗವಿಕಲ ಮಾಸಾಶನವನ್ನು ಪುರುಷರು ಇಬ್ಬರು, ಮಹಿಳೆಯರು ಇಬ್ಬರು ಮಾತ್ರ ಈ ಸೌಲಭ್ಯವನ್ನು ಪಡೆಯುತ್ತಿದ್ದಾರೆ.

**ಬುಡ್ಗ ಜಂಗಮ್ ಸಮುದಾಯದ ಒಳಾಡಳಿತ ವ್ಯವಸ್ಥೆ**

ಈ ಸಮುದಾಯವು ಒಂದು ಸ್ವಜಾತಿ ಸಮುದಾಯವಾಗಿದ್ದು, ತನ್ನದೇಯಾದ ಒಳಾಡಳಿತ ವ್ಯವಸ್ಥೆಯನ್ನು ರೂಪಿಸಿಕೊಂಡು ಸಮುದಾಯದ ಅಸ್ತಿತ್ವವನ್ನು ಕಾಪಾಡಿಕೊಂಡು ಹೋಗುವಲ್ಲಿ ಶ್ರಮಿಸುತ್ತಿದೆ. ಇವರಲ್ಲಿ ಅಧಿಕಾರಿ ವರ್ಗ, ಅನುಯಾಯಿ ವರ್ಗ ಎರಡು ವರ್ಗಗಳಿವೆ. ಹಲವು ಕುಟುಂಬಗಳು ನೆಲೆಸಿರುವ ವಿವಿಧ ನೆಲೆಗಳಿಗೆ ಒಂದೊಂದು ಆಡಳಿತ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ. ಅದರಲ್ಲಿ ನ್ಯಾಯಧೀಶ(ನ್ಯಾಯಗಾರ), ಮಹಾಂತುಗಾರ (ತಳವಾರಿ), ಗಣಾಚಾರಿ ಎಂಬ ಅಧಿಕಾರಿ ವರ್ಗವಿದೆ. ಇಡೀ ಸಮಾಜವೇ ಇದನ್ನು ಪಾಲಿಸುತ್ತದೆ. ನ್ಯಾಯಗಾರ, ಮಹಾಂತುಗಾರ, ಗಣಾಚಾರಿಯವರು ಈ ಸಮಾಜದ ಕಾವಲುಗಾರರು. ಇವರಿಂದ ಸಮುದಾಯದ ನಿಯಮ, ಸಿದ್ಧಾಂತಗಳು ಮತ್ತು ಧರ್ಮ ರಕ್ಷಿಸುವ ಕಾರ್ಯ ನಡೆಯುತ್ತದೆ.

**ನ್ಯಾಯಗಾರ:** ಸಮುದಾಯದ ಮುಖಂಡನಾಗಿರುತ್ತಾನೆ. ಅವನೇ ಅದರ ಕುಲಪುರೋಹಿತ. ಇವನನ್ನು ಕಟ್ಟೆಮನೆಯವರು ಎಂಬ ಹೆಸರಿನಿಂದಲೂ ಗುರುತಿಸುತ್ತಾರೆ. ನ್ಯಾಯ ತೀರ್ಮಾನಿಸುವವನು ಸಾಮಾನ್ಯಾವಾಗಿ ವಿಭೂತಿ ಅಥವಾ ಅಶ್ವ ಬೆಡಗಿನವರಿಗೆ ಸೇರಿದವನಾಗಿರುತ್ತಾನೆ. ನ್ಯಾಯಗಾರನು ಸಮಾಜದ ಆಡಳಿತ ಸೂತ್ರದ ರೂವಾರಿಯಾಗಿ ಕಾರ್ಯನಿರ್ವಹಿಸುತ್ತಾನೆ. ಸಾಮಾಜಿಕ, ಧಾರ್ಮಿಕ ಕಾರ್ಯಗಳಲ್ಲಿ ಅವನದೇ ಪ್ರಮುಖ ಪಾತ್ರ ನಿರ್ವಹಿಸುತ್ತಾನೆ. ಅವನ ಸಮ್ಮುಖದಲ್ಲಿ ಪ್ರತಿಯೊಂದು ಕಾರ್ಯಗಳು ಜರಗುವವು. ಸಮಾಜದ ಸ್ವಾಸ್ಥ್ಯ ಪಾಲನೆ ಮತ್ತು ಅದರ ವಿನಿಯೋಗ ಅವನ ಜವಬ್ದಾರಿಯಾಗಿರುತ್ತದೆ. ನ್ಯಾಯ ತೀರ್ಮಾನದಲ್ಲಿ ಅಪರಾಧಗಳ ವಿಚಾರಣೆ ಮಾಡಿ ಬುದ್ಧಿ ಹೇಳುವುದು, ದಂಡವಿಧಿಸುವುದು ಇತ್ಯಾದಿ ಪ್ರಮುಖ ನೀತಿ ನಿರ್ಧಾರಗಳ ಅಧಿಕಾರ ಅವನ ಪಾಲಿನದು. ಇವನು ಹೇಳಿದ ಮಾತನ್ನು ನೆರೆದ ದೈವ ಕೇಳುತ್ತದೆ. ಪ್ರತಿಭಟನೆಗೆ ಅವಕಾಶವೇ ಇಲ್ಲ. ದೈವದ ಮಧ್ಯದಲ್ಲಿ ತೀರ್ಮಾನಗೊಂಡ ಪ್ರತಿಯೊಂದು ನ್ಯಾಯ ನಿರ್ಧಾರಗಳು ಇವರ ಮುಖಾಂತರವೇ ಚಾಲ್ತಿಯಲ್ಲಿರುತ್ತವೆ. ಬಳ್ಳಾರಿ ಭಾಗದಲ್ಲಿ ಅಶ್ವ ಪೆದ್ದ ಜಮನ್ನ ಮತ್ತು ಅವರ ಮಗ ಅಶ್ವ ರಾಮುಡು ಇವರು ನ್ಯಾಯಗಾರರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವನಿಗೆ ಸಹಾಯಕರಾಗಿ ಅಧಿಕಾರಸ್ಥಾನಗಳಲ್ಲಿ ಕೆಲಸಮಾಡುವವರು ಮಹಾಂತುಗಾರ ಮತ್ತು ಗಣಾಚಾರಿಯವರು.

**ಮಹಾಂತುಗಾರ:** ಮಹಾಂತುಗಾರ ಈ ಸಮುದಾಯದ ತಳವಾರಿ ಇದ್ದಂತೆ ಕೆಲಸ ಮಾಡುವನು. ಇವನು ಯಡವಲಿ(ಎಡವಲಿ) ಬೆಡಗಿಗೆ ಸೇರಿದವನಾಗಿರುತ್ತಾನೆ. ನ್ಯಾಯಗಾರನು ನಿರ್ದೇಶಿಸಿದ ಪ್ರತಿಯೊಂದು ಆದೇಶಗಳನ್ನು ಚಾಚೂ ತಪ್ಪದೇ ಸಮಾಜದಲ್ಲಿ ಜಾರಿ ಮಾಡುವುದು ಇವನ ಕೆಲಸ. ನ್ಯಾಯಗಾರ ಹೇಳಿದಾಗ ಸಮಾಜದ ಸಭೆ ಸೇರಿಸುವುದು, ಸೇರಿದ ಸಭೆಯ ಶಾಂತಿ ಶಿಸ್ತು ಕಾಪಾಡುವುದು, ಸಭೆಯನ್ನು ನಿಯಂತ್ರಿಸುವುದು ಇವನ ಕೆಲಸವಾಗಿರುತ್ತದೆ. ನ್ಯಾಯ– ಅನ್ಯಾಯಕ್ಕೆ

ಒಳಗಾದವರನ್ನು ಕರೆದತಂದು, ತಪ್ಪಿತಸ್ಥರನ್ನು ಶಿಕ್ಷಿಸುವ ಅಧಿಕಾರವನ್ನೂ ಹೊಂದಿರುತ್ತಾರೆ. ಆಕಸ್ಮಿಕವಾಗಿ ನಡೆದ ಜಗಳಗಳನ್ನು ಬಿಡಿಸುವುದು, ಸಭೆಯಲ್ಲಿ ಸಾಕ್ಷಿನುಡಿಯುವುದು, ಎರಡು ಪಕ್ಷದವರನ್ನು ಬಡಿದು-ಬೈದು ಜಗಳ ಬಿಡಿಸುವುದು, ನ್ಯಾಯಗಾರನ ತೀರ್ಮಾನವನ್ನು ಘೋಷಿಸುವುದು, ದಂಡ ಕೋರುವುದು, ತಪ್ಪಿತಸ್ಥರ ದಂಡವನ್ನು ವಸೂಲಿ ಮಾಡುವುದು ಮುಂತಾದ ಸಾಮಾಜಿಕ ಕೆಲಸಗಳಲ್ಲಿ ಕಾರ್ಯ ನಿರ್ವಹಿಸುವನು. ಇವನ ಕೈಯಲ್ಲಿ ಯಾವಗಲೂ ಒಂದು ಕಟ್ಟಿಗೆ(ಬೆತ್ತಂ) ಇರುವುದರಿಂದ ಇವನನ್ನು ಕಟ್ಟಾ 'ಮಹಾಂತುಗಾಡು' ಎಂದು ಕರೆಯುತ್ತಾರೆ. ಇವನ ಕೈಕೆಳಗೆ ಕೆಲಸ ಮಾಡುವ ಇನ್ನೊಬ್ಬ ಸಮಾನ ಅಧಿಕಾರಿ 'ಗಣಾಚಾರಿ'ಯಾಗಿರುವನು. ಹೊಸಳ್ಳಿ ಚೆನ್ನಪ್ಪ ಯಡವಲಿಯವರು ಈ ಭಾಗದ ಕಟ್ಟಾಮಹಾಂತುಗಾರರಾಗಿ ಸೇವೆ ಸಲ್ಲಿಸಿ ದಿನಾಂಕ ೨೫.೦೪.೨೦೧೯ರಂದು ದೈವದೀನರಾದರು. ಇವರ ನಂತರ ಇವರ ಹಿರಿಮಗ ಕಾರ್ಯನಿರ್ವಹಿಸುತ್ತಾನೆ.

**ಗಣಾಚಾರಿ:** ಮಹಾಂತುಗಾರನಷ್ಟೇ ಸಮಾನ ಅಧಿಕಾರ ಸ್ಥಾನ-ಮಾನಗಳನ್ನು ಹೊಂದಿರುವ ಇವನು ಸಮಾಜದ ದೀಕ್ಷಾಧಿಕಾರಿಯಾಗಿ ಇಲ್ಲವೆ ಮೋಕ್ಷಧಿಕಾರಿಯಾಗಿ ಕಾರ್ಯನಿರ್ವಹಿಸುವನು. ಇವನು 'ಶಿರಿಸ್ಯಾಲ' ಬೆಡಗಿಗೆ ಸೇರಿದವನಾಗಿರುತ್ತಾನೆ. ಮಹಾಂತಗಾರನ ಅನುಪಸ್ಥಿತಿಯಲ್ಲಿ ಅವನ ಎಲ್ಲ ಕೆಲಸ-ಕಾರ್ಯಗಳ ಜವಾಬ್ದಾರಿ ಇವನದು. ಕುಲಬಹಿಷ್ಕಾರಕ್ಕೆ ಒಳಗಾದವರ ದೀಕ್ಷೆ ಮಾಡುವುದು ಮುಂತಾದ ಸಾಮಾಜಿಕ ಶುದ್ಧಿಯ ಕಾರ್ಯಗಳನ್ನು ನಿರ್ವಹಿಸುವನು.

ಈ ಮೇಲಿನ ಅಧಿಕಾರಸ್ಥಾನಗಳು ಚುನಾಯಿತ ಸ್ಥಾನಗಳಲ್ಲ. ಅವು ಅನುವಂಶಿಕವಾಗಿ, ವಂಶಪಾರಂಪರಿಕವಾಗಿ ಮುಂದುವರಿಯುತ್ತ ಬಂದಿವೆ. ಅವುಗಳನ್ನು ಪ್ರಶ್ನಿಸುವ ಹಕ್ಕು ಆ ಸಮಾಜದ ಯಾರಿಗೂ ಇಲ್ಲ. ತಂದೆಯಿಂದ ಮಗನಿಗೆ, ಮಗನಿಂದ ಮೊಮ್ಮಗನಿಗೆ ಹೀಗೆಯೇ ಮುಂದುವರೆಯುವವು. ಅದ್ದರಿಂದ ಇದು ಸ್ಪಷ್ಟವಾಗಿ ಜಾತಿಪದ್ಧತಿಯ ಮೇಲೆ ರೂಪಿತವಾದ ಸಮಾಜವಾಗಿದೆ. ಇಲ್ಲಿ ಆರ್ಥಿಕ ಅನುಕೂಲಕ್ಕೆ ತಕ್ಕಂತೆ ಶ್ರೇಣೀಕೃತ ಆಡಳಿತ ವ್ಯವಸ್ಥೆಗೆ ಅವಕಾಶವಿಲ್ಲ. ಇತರ ಯಾವುದೇ ಬೆಡಗಿನ ವ್ಯಕ್ತಿ ಎಷ್ಟೇ ಆರ್ಥಿಕವಾಗಿ ಅನುಕೂಲವಿದ್ದರೂ ಅವನಿಗೆ ಸಮಾಜದ ಅಧಿಕಾರ ಸ್ಥಾನಗಳು ದೊರೆಯಲಾರವು. ಅಧಿಕಾರಸ್ಥಾನ ಹೊಂದಿದ ಮುಖಂಡ ತೀರಿಕೊಂಡರೆ ಅವನ ಮಕ್ಕಳಲ್ಲಿ ಹಿರಿಯ ಮಗ ಸಮಾಜದ ಹಿರಿತನದ ಜವಾಬ್ದಾರಿಯನ್ನು ಹೊಂದುತ್ತಾನೆ. ಸಮಾಜದ ಓರೆಕೋರೆಗಳನ್ನು ತಿದ್ದುವಲ್ಲಿ, ದೋಷ-ದೌರ್ಬಲ್ಯಗಳನ್ನು ನಿಯಂತ್ರಿಸುವಲ್ಲಿ ಮಹತ್ವದ ಪಾತ್ರವಹಿಸುತ್ತಾರೆ. ಅವರಿಗೆ ದೊರಕುವ ಸಂಭಾವನೆ ಎಂದರೆ ಎಲ್ಲರೂ ಕೊಡುವ ಸಾಮಾಜಿಕ ಗೌರವವೊಂದೇ, ಯಾವುದೇ ರೀತಿಯ ಆರ್ಥಿಕ ಅನುಕೂಲತೆಗಳು ಅವರಿಗೆ ದೊರೆಯುವುದಿಲ್ಲ ಕೇವಲ ಬಸ್ ಚಾರ್ಜ್ ಖರ್ಚನ್ನು ಮಾತ್ರ ಪಡೆಯುತ್ತಾರೆ. ಸಮುದಾಯದ ಒಟ್ಟು ಹಿತ ಕಾಪಾಡುವುದಕ್ಕಾಗಿ ಪ್ರಾದೇಶಿಕ ಅನುಕೂಲತೆಗೆ ತಕ್ಕಂತೆ ಅಲ್ಲಲ್ಲಿ ಕಟ್ಟಾಗಳನ್ನು ಗುರುತಿಸಿಕೊಂಡಿದ್ದಾರೆ. ಅಲೆಮಾರಿ ಬುಡಕಟ್ಟು ಸಮುದಾಯಗಳ ಪಾರಂಪರಿಕ ಕುಲಪಂಚಾಯಿತಿಯ ಜ್ಞಾನಪರಂಪರೆಯನ್ನೇ ಇಂದು ಆಧುನಿಕ ಸಮಾಜವು ಕೋರ್ಟ್ ಕಚೇರಿ, ಕಾನೂನುಗಳಿಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತಿವೆ ಎಂದು ಹೇಳಬಹುದು.

**ಪಾರಂಪರಿಕ ಕುಲಪಂಚಾಯಿತಿ**

ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ದೇಶದ ಪ್ರತಿಯೊಬ್ಬ ಪ್ರಜೆ ಸಂವಿಧಾನಕ್ಕೆ ಅನುಗುಣವಾಗಿ ನಡೆದುಕೊಳ್ಳಬೇಕು. ನಿಯಮ ಉಲ್ಲಂಘಿಸಿದರೆ ದಂಡಸಹಿತ ಶಿಕ್ಷೆ ತಪ್ಪಿದ್ದಲ್ಲ. ಆದರೆ ಇದೇ ಪ್ರಜಾಪ್ರಭುತ್ವ ವ್ಯವಸ್ಥೆಯ ಆಚೆ ಬುಡ್ಗ ಜಂಗಮ ಸಮುದಾಯದ ಕಟ್ಟುಪಾಡುಗಳಲ್ಲಿ ರೂಪಿತವಾದ ಕಠಿಣ ನಿಯಮ ಪರಿಪಾಲಿಸುವ ಮತ್ತು ಅವುಗಳಡಿಯಲ್ಲಿಯೇ ತಮ್ಮ ಸಮಾಜದ ನ್ಯಾಯ ನಿರ್ಣಯಗಳನ್ನು ಪರಿಹರಿಸಿಕೊಳ್ಳುವ ವಿಧಾನ ಮಾತ್ರ ಆಧುನಿಕ ಸಮಾಜವನ್ನು ನಾಚಿಸುವಂತಿದೆ. ಅಲೆಮಾರಿ ಬುಡ್ಗ ಜಂಗಮ್ ಸಮುದಾಯಗಳಲ್ಲಿ ಯಾವುದೇ ತಪ್ಪುಗಳು ನಡೆದರು ಅವುಗಳನ್ನು ಕುಲಪಂಚಾಯಿತಿ ಸಮುದಾಯದ ಸೇರಿ ನ್ಯಾಯ ಬಗೆಹರಿಸಿಕೊಳ್ಳುತ್ತಾರೆ (ಛಾ: ೮.೧) ಕುಟುಂಬದ ಯಾವುದೇ ಜಗಳವಿರಲ್ಲಿ ಪೋಲೀಸ್ ಠಾಣೆ, ಕೋರ್ಟ್ ಕಚೇರಿಯ ಕಟ್ಟೆಗೆ ಹೋಗುವಂತಿಲ್ಲ, ಕುಲದ ನ್ಯಾಯಧೀಶರು ಮತ್ತು ಮಹಾಂತುಗಾರರು ಹೇಳಿದಂತೆ ಎಲ್ಲರೂ ಕೇಳಬೇಕು. ಅಪರಾಧಿಯ ಆರ್ಥಿಕ ಸ್ಥಿತಿಯ ಅನುಗುಣವಾಗಿ ದಂಡ ವಿಧಿಸುವ ನಿಯಮ ಚಾಲ್ತಿಯಲ್ಲಿದೆ. ಕಡಿಮೆ ಎಂದರೆ ೧೦೦೦ ರೂಪಾಯಿ ದಂಡ ವಿಧಿಸಲಾಗುತ್ತದೆ. ಪಾರದರ್ಶಕವಾಗಿ ನೊಂದವರಿಗೆ ನ್ಯಾಯ ಕೊಡಿಸಿ, ಅಗಲಿದವರನ್ನು ಒಂದೂಗೂಡಿಸುವ ಈ ಕುಲಪಂಚಾಯಿತಿಗೆ ಎಲ್ಲಿಲ್ಲದ ಗೌರವ. ಇಲ್ಲಿನ ತೀರ್ಪು ಎಂದರೆ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಂತೆ ಇರುತ್ತದೆ. ಈ ತೀರ್ಪಿಗೆ ತಡೆಯಾಜ್ಞೆಯೂ ಇಲ್ಲ. ಮೇಲ್ಮನವಿಯೂ ಇಲ್ಲ. ಈ ೨೧ನೇ ಶತಮಾನದಲ್ಲಿಯೂ ಸಹ ತಮ್ಮ ಪಾರಂಪರಿಕವಾದ ಕುಲಪಂಚಾಯಿತಿಯನ್ನು ಮುಂದುವರಿಸಿಕೊಂಡು ಬರುತ್ತಿರುವುದು ಬುಡ್ಗ ಜಂಗಮರಲ್ಲಿ ಇಂದಿಗೂ ಕಾಣಬಹುದಾಗಿದೆ. "ನ್ಯಾಯವು ಅನ್ಯಾಯಕ್ಕೆ ಪರಿಹಾರ, ಆಸ್ತಿ ಎಂಬುವುದು ಅಸ್ತಿತ್ವಕ್ಕೆ ಬಂದ ಮೇಲೆ ಅವನ ನ್ಯಾಯ ವ್ಯವಹಾರಗಳು ಹೆಚ್ಚುತ್ತಾ ಹೋಗಿ ನ್ಯಾಯಶಾಸ್ತ್ರದ ವ್ಯಾಪಕ ಪದ್ಧತಿಗಳ ಅವಶ್ಯಕತೆ ಹೆಚ್ಚಿಸಿದವು. ನ್ಯಾಯವನ್ನು ಕೊಡುವ ವಿಧಾನಗಳು ದೇಶದಿಂದ ದೇಶಕ್ಕೆ, ಸ್ಥಳದಿಂದ ಸ್ಥಳಕ್ಕೆ, ಬುಡಕಟ್ಟಿನಿಂದ ಬುಡಕಟ್ಟಿಗೆ ಬೇರೆಯಾಗುತ್ತದೆ. ಇದಕ್ಕೆ ಕಾರಣ, ಭಿನ್ನ ಪರಿಸರಗಳು, ಆಚಾರ-ವಿಚಾರಗಳು, ವಾತಾವರಣ, ಜೀವನ ನಿರ್ವಹಣೆಯ ವಿಧಾನ ಇತ್ಯಾದಿಗಳು.

ಸತ್ಯಾನ್ವೇಷಣೆಯಯನ್ನು ಸತ್ಯ ಪರೀಕ್ಷೆ, ಪ್ರಮಾಣ, ಮತ್ತು ಇತರ ವಿಧಾನಗಳಿಂದ ಮಾಡಲಾಗುತ್ತದೆ. ಇಂದಿಗೂ ಭಾರತ ಮತ್ತು ಇತರ ದೇಶಗಳಲ್ಲಿ ನ್ಯಾಯಾಲಯಗಳಲ್ಲಿ ಪವಿತ್ರ ಪ್ರಮಾಣ ವಚನವನ್ನು ಹೇಳಿಸುತ್ತಾರೆ. ಬುಡಕಟ್ಟು ಜನರು ಪ್ರಾಚೀನ ನ್ಯಾಯ ವಿಧಾನವನ್ನು ಬಲು ಗೌರವದಿಂದ ಕಾಣುವರು. ಈ ಕ್ಷೇತ್ರಗಳಲ್ಲಿರುವ ಹೆಚ್ಚಿನ ಜನರು ಆಧುನಿಕ ನ್ಯಾಯಾಲಗಳಿಗೆ ಹೋಗುವುದಿಲ್ಲ, ಅವರು ತಮ್ಮ ವಂಶಪರಂಪರೆಯಿಂದ ಮುಖ್ಯಸ್ಥರು ನೀಡಿದ ಪರಿಹಾರದಿಂದಲೇ ತೃಪ್ತರಾಗುತ್ತಾರೆ" ಎಂದು ಡಾ ಕೆ ಎಂ ಮೇತ್ರಿಯವರು ಅಭಿಪ್ರಾಯ ಪಡುತ್ತಾರೆ.

ಒಂದು ಸಮುದಾಯದ ಸ್ವಾಸ್ಥ್ಯವನ್ನು ಕಾಪಾಡಲು ಆ ಸಮುದಾಯದ ಅನುಸರಿಸುತ್ತಿರುವ ಕುಲಕಟ್ಟಳೆಗಳು, ನೀತಿ ನಿಯಮಗಳು, ಪದ್ದತಿಗಳು, ಆಚಾರ ವಿಚಾರಗಳು ಪ್ರಮುಖ ಪಾತ್ರವಹಿಸುತ್ತವೆ.

ಜನರ ವರ್ತನೆಯೊಂದಿಗೆ ಸಮಾಜದ ನೀತಿನಿಯಮಗಳನ್ನು ಉಲ್ಲಂಘಿಸದ ಹಾಗೆ ಕಾರ್ಯವನ್ನು ನಿರ್ವಹಿಸುತ್ತದೆ. ಆಧುನಿಕ ಕಾನೂನು, ಕಟ್ಟಳೆಗಳು, ನ್ಯಾಯವಿಧಾನಗಳು ಈ ಜನರಿಗೆ ಅಷ್ಟಾಗಿ ತಿಳಿದಿರುವುದಿಲ್ಲ. ಹೆಣ್ಣು, ಹೊನ್ನು, ಮಣ್ಣಿಗಾಗಿ ಜಗಳವಾಡಿ ನ್ಯಾಯಕ್ಕಾಗಿ ಕೋರ್ಟ್ ಕಚೇರಿಯ ಮೆಟ್ಟಿಲನ್ನು ಹತ್ತಿಲ್ಲ. ಹತ್ತಬಾರದೂ ಎಂಬ ನಿಯಮ ಇವರಲ್ಲಿದೆ. ಒಂದು ವೇಳೆ ಕೋರ್ಟ್ ಕಚೇರಿ ಎಂದು ಮಾತು ಎತ್ತಿದ್ದರು ಸಾಕು ಅದಕ್ಕೆ ದಂಡವನ್ನು ವಿಧಿಸುತ್ತಾರೆ. ಇಂದು ಆಧುನಿಕ ಹಾಗೂ ಜಾಗತೀಕರಣ ಪ್ರಭಾವದಿಂದ ಅಲ್ಲಲ್ಲಿ ಕೋರ್ಟ್ ಕಚೇರಿ ಮೆಟ್ಟಿಲನ್ನು ಹತ್ತುತಿರುವುದನ್ನು ಕಾಣಬಹುದಾಗಿದೆ.

ಇವರಲ್ಲಿ ಬೇರೆ ಅಲೆಮಾರಿ ಸಮುದಾಯಗಳಲ್ಲಿದ್ದಂತೆ ಪಂಚರು ಅಥವಾ ಐದು ಜನ ಸೇರಿ ಪಂಚಾಯಿತಿ ಮಾಡುವುದಿಲ್ಲ. ಬುಡ್ಗ ಜಂಗಮರಲ್ಲಿ ಸಮುದಾಯದ ಆಯಾ ಪ್ರದೇಶದ ಎಲ್ಲಾ ಬೆಡಗಿನ ಕುಲದ ಹಿರಿಯರೆಲ್ಲರೂ ದೊಡ್ಡವರಾಗಿರುತ್ತಾರೆ. ನ್ಯಾಯವನ್ನು ಎಲ್ಲರೂ ಕೂಲಕುಂಷವಾಗಿ ಪರಿಸ್ಕರಿಸಿ ನ್ಯಾಯ ತೀರ್ಮಾನವನ್ನು ನಿರ್ಧರಿಸುತ್ತಾರೆ. ಹೆಸರಿಗೆ ಮಾತ್ರ ಪಂಚರಿರುತ್ತಾರೆ. 'ಕುಲಂ ಸಮುದ್ರಂ' (ಕುಲ ಎನ್ನವುದು ಸಮುದ್ರದಂತೆ ವಿಸ್ತಾರವಾದುದು) 'ಸಮುದಾಯಕ್ಕಿಂತ ಯಾವುದೇ ವ್ಯಕ್ತಿ ದೊಡ್ಡವನ್ನಲ್ಲ', ಸಮುದಾಯದಲ್ಲಿ ಎಷ್ಟೇ ದೊಡ್ಡವನಾದರೂ ಕುಲಕ್ಕೆ ಸಣ್ಣವನು. 'ಕುಲಬಿಟ್ಟು ಮನುಷ್ಯ ನಿಲ್ಲ, ವನ ಬಿಟ್ಟು ಕೋತಿ ಇಲ್ಲ' ಎಂಬ ತತ್ವ ಸಿದ್ಧಾಂತವನ್ನು ಈ ಸಮುದಾಯದಲ್ಲಿ ಅರಿತು ಜೀವನ ಮಾಡುತ್ತಾರೆ. ಸಮುದಾಯದೊಳಗೆ ನಡೆಯುವ ಜಾತಿ ಪಂಚಾಯಿತಿ, ಜಾತಿಯಿಂದ ಹೊರಹಾಕುವುದು, ಜಾತಿಗೆ ಮರು ಸೇರ್ಪಡೆ ಮಾಡಿಕೊಳ್ಳುವುದು, ಸಾವು ಇತ್ಯಾದಿ ಸಂಭವಿಸಿದಾಗ ಅವುಗಳ ಮೇಲ್ವಿಚಾರಣೆ ನಡೆಸುವುದು, ಹುಡುಗ ಹಾಗೂ ಹುಡುಗಿ ಅನ್ಯ ಜಾತಿಯವರೊಡನೆ ಅನೈತಿಕ ಸಂಬಂಧಗಳನ್ನಿರಿಸಿಕೊಂಡರೆ ಅವರನ್ನು ಜಾತಿಯಿಂದ ಹೊರಹಾಕುವುದು, ಚಪ್ಪಲಿನಿಂದ ಹೊಡಿತ್ತಿನಿ ಅಥವಾ ಹೊಡಿಸಿಕೊಂಡವರ ವಿರುದ್ಧ ದಂಡ ಹಾಕಿಸುವುದು, ಸಮುದಾಯದ ಶುಭ ಅಶುಭ ಸಮಾರಂಭಗಳಿಗೆ ಹಾಜರಾಗದೇ ಇರುವುದು, ಸಮುದಾಯದ ವಿರುದ್ಧವಾಗಿ ಕೆಲಸ ಕಾರ್ಯಗಳನ್ನು ಮಾಡುವುದನ್ನು ನೋಡಿಕೊಳ್ಳುವುದು, ಮುಂತಾದ ವಿಧಿ ನಿಷೇಧಗಳನ್ನು ನೋಡಿಕೊಳ್ಳುವ ಜವಾಬ್ದಾರಿ ಆ ಸಮುದಾಯದ ಎಲ್ಲಾ ಹಿರಿಯರದ್ದಾಗಿರುತ್ತದೆ. ಯಾವುದೇ ಒಬ್ಬ ವ್ಯಕ್ತಿಯ ಜವಾಬ್ದಾರಿಯಾಗಿರುವುದಿಲ್ಲ. ಇವರಲ್ಲಿ ಯಾರೇ ತಪ್ಪು ಮಾಡಿದರೂ ಅದನ್ನು ಖಂಡಿಸುತ್ತಾರೆ. ಅದು ಅಪರಾಧ ಎಂದು ಸಾಬೀತವಾದರೆ ಶಿಕ್ಷೆಯನ್ನು ದಂಡದ ಮೂಲಕ ಬಗೆಹರಿಸಿಕೊಳ್ಳುತ್ತಾರೆ. ಅಂತಹ ವ್ಯಕ್ತಿಗಳು ಜಾತಿಗೆ ಅಥವಾ ಕುಲಕ್ಕೆ ಮರಳಿ ಸೇರಬೇಕಾದರೆ ಸಮಸ್ತ ಕುಲದೈವದ ಸಮ್ಮುಖದಲ್ಲಿ ಶುದ್ಧಗೊಳಿಸಿಕೊಂಡು ಕುಲದ ಆಶೀರ್ವಾದವನ್ನು ಪಡೆಯಬೇಕಾಗುತ್ತದೆ.

ಬುಡ್ಗ ಜಂಗಮರ ನ್ಯಾಯಪಂಚಾಯಿತಿಯು ವಿವಿಧ ಕ್ರಮಗಳಲ್ಲಿ ಬಗೆಹರಿಸುಕೊಳ್ಳುವುದನ್ನು ಕಾಣಬಹುದು. ಮೊದಲು ಜಗಳವಾಡಿಕೊಂಡಿದ್ದವರಿಂದ 'ಕತವಾ' ಕಟ್ಟಿಸಿಕೊಂಡು ಪಂಚಾಯಿತಿಯನ್ನು ಪ್ರಾರಂಭಿಸುತ್ತಾರೆ. ನಂತರ ಸಾಲು, ಸಾಕ್ಷಿ, ಸಾಟ್ವ ಕೇಳಿ ಹೇಳಿ ನಂತರ ತೀರ್ಪನ್ನು ನೀಡಿ ದಂಡವನ್ನು ವಿಧಿಸುವುದನ್ನು ಕಾಣಬಹುದು.

**ಕತಪಾ ಅಥವಾ ಮುಲ್ಲಕಟ್ಟುವುದು (ಕಡ್ಡಿಕಟ್ಟುವುದು):** ಈ ಸಮುದಾಯದಲ್ಲಿ ಯಾರಾದರೂ ಒಬ್ಬರಿಗೊಬ್ಬರು ಕಾರಣಂತರಗಳಿಂದ ಜಗಳವಾಡಿದರೆ ಸಮುದಾಯದ ಮಹಾಂತುಗಾರನ ಹತ್ತಿರ ಹೋಗಿ ಜಗಳದ ವಿವರ ಹೇಳಿ ಜಗಳವಾಡಿದ ವ್ಯಕ್ತಿಯ ಮೇಲೆ ನ್ಯಾಯ ಕೇಳಲು ತನ್ನ ಕೈಯಲ್ಲಿರುವ ಉಂಗುರ ಅಥವಾ ಒಂದು ಬೆಲೆಯುಳ್ಳ ವಸ್ತುಗಳನ್ನು ಕೈಯಲ್ಲಿಟ್ಟು "ಇಟ್ಟಾಡು ಕುಲಸ್ತಣಿ ಮೀದ ನಾದಿ ನ್ಯಾಯಂ ಉಂದಿ" ಎಂದು ನ್ಯಾಯ ಕೇಳುತ್ತಾನೆ. ಇದನ್ನು ಬುಡ್ಗ ಜಂಗಮರು **ಕತಪಾ** ಎಂದು ಕರೆಯುತ್ತಾರೆ. ಮಹಾತುಗಾರನಿಗೆ ಕತಪಾ ಕೊಟ್ಟು ಜಗಳವಾಡಿದರೆ 'ಅಕಾಂ' ಘೋರ ಅಪರಾಧ ವೆಂದು ಪರಿಗಣಿಸುತ್ತಾರೆ. ಆ ವ್ಯಕ್ತಿಯ ಮೇಲೆ ನಂತರ ಹೆಚ್ಚಿನ ದಂಡ ವಿಧಿಸುತ್ತಾರೆ. ಕತಪಾ ಕಟ್ಟದೆ ಯಾವ ನ್ಯಾಯ ಪಂಚಾಯತಿಗಳು ಮಾಡುವುದಿಲ್ಲ.

ಕುಲಪಂಚಾಯಿತಿ ಮಾಡುವ ಮೊದಲು ಮಹಾಂತುಗಾರನು ನ್ಯಾಯಧೀಶರಲ್ಲಿ ಹೋಗಿ ಇಂತವರು ಜಗಳವಾಡಿ ಕತಪಾ ಕಟ್ಟಿದ್ದಾರೆ ಇವರ ನ್ಯಾಯ ಯಾವಾಗ ಮಾಡೋಣ ಎಂದು ಕೇಳಿ ಯಾವುದಾದರೂ ಒಂದು ದಿನ ಮತ್ತು ಸ್ಥಳ ನಿಶ್ಚಯ ಮಾಡಿಕೊಂಡು ಬರುತ್ತಾನೆ. ನಂತರ ಬುಡ್ಗ ಜಂಗಮರು ನೆಲೆಸಿರುವ ಸ್ಥಳಗಳಿಗೆ ಹೋಗಿ ಮಾಹಿತಿಯನ್ನು ತಿಳಿಸಿ, ಇಂತಹ ದಿನ ನ್ಯಾಯ ಪಂಚಾಯಿತಿ ಇದೆ ಎಂದು ಹೇಳಿ ಬರುತ್ತಾನೆ. ಈ ಪಂಚಾಯಿತಿಗೆ ಊರಿಗೆ ಒಬ್ಬರಾದರೂ ಬಂದು ಸೇರುತ್ತಾರೆ. ಕುಲಪಂಚಾಯಿತಿಯನ್ನು ಆಲದಮರದ ಕೆಳಗೆ ಅಥವಾ ಬೇವಿನಮರದ ಕೆಳಗೆ ಅಥವಾ ಸೂಕ್ತವಾದ ಸ್ಥಳದಲ್ಲಿ ಪಂಚಾಯಿತಿ ಮಾಡಲು ವ್ಯವಸ್ಥೆಮಾಡುತ್ತಾರೆ. ಈ ಪಂಚಾಯಿತಿಗೆ ಸುತ್ತಮುತ್ತಲಿನ ಎಲ್ಲಾ ಜನರು ಭಾಗವಹಿಸುತ್ತಾರೆ. ಪಂಚಾಯಿತಿ ಕಟ್ಟೆಗೆ ಯಡವಲಿಯವರನ್ನು ಬಿಟ್ಟು ಉಳಿದವರು ಕಟ್ಟಿಗೆ ಅಥವಾ ಬೆತ್ತ, ಯಾವುದೇ ಆಯುಧಗಳನ್ನು ತರುವುದು, ಚಪ್ಪಲಿ ಹಾಕಿಕೊಂಡು ಸಭೆಯಲ್ಲಿ ಕೂಡುವುದು ಅಪರಾಧವಾಗುತ್ತದೆ. ನ್ಯಾಯ ವಿಚಾರಣೆ ನಡೆಯುವಾಗ ಅನ್ಯಾಯ ಮತ್ತು ಅಪರಾಧಗಳನ್ನು ತಡೆಯಲು ಆರ್ಥಿಕವಾದ ಶಿಕ್ಷೆಗಳನ್ನು ಮತ್ತು ಕುಲಬಹಿಷ್ಕಾರ ನೀಡುವ ಶಿಕ್ಷೆಗಳನ್ನು ಮಾತ್ರ ನೀಡುತ್ತಿದ್ದರು. ಯಾವುದೇ ರೀತಿಯ ಮರಣ ದಂಡನೆ, ಜೀವಿತಾವಧಿ ಶಿಕ್ಷೆ ಇವರಲ್ಲಿ ಕಂಡುಬರುವುದಿಲ್ಲ. ತಪ್ಪು ಮಾಡಿ ಶಿಕ್ಷೆಗೆ ಒಳಾಗಾದವರು ದೈವ ಎತ್ತಿ ಹಿಡಿದ ನ್ಯಾಯಕ್ಕೆ ತಲೆಬಾಗುತ್ತಾರೆ. ಒಂದು ವೇಳೆ ದೈವದ ತೀರ್ಪಿಗೆ ತಲೆಬಾಗದೆ ದಂಡ ಕೊಡದವನಿಗೆ 'ಕುಲಬಹಿಷ್ಕಾರ' ಹಾಕುತ್ತಾರೆ. ಬಹಿಷ್ಕಾರಗೊಂಡವರಿಗೆ ಕುಲಸ್ಥರು ಯಾರೇ ಆಗಲಿ ಯಾವುದೇ ರೀತಿಯಲ್ಲಿ ಸಹಕಾರ ಮಾಡುವುದಾಗಲಿ, ಬಳಸಿಕೊಳ್ಳುವುದಾಗಲೀ, ಮೇಳ ಕಟ್ಟುವುದಾಗಲಿ, ಅವನ ಜೊತೆ ಊಟ, ನೀರು, ಟೀ ಕುಡಿಯುವುದಾಗಲಿ  ಮಾಡುವಂತಿಲ್ಲ. ಒಂದು ವೇಳೆ ಮಾಡಿದರೆ ತಪ್ಪು ದಂಡವನ್ನು ವಿಧಿಸುತ್ತಾರೆ. ಈ ಕುಲಬಹಿಷ್ಕಾರವು ತಪ್ಪು ಮಾಡಿದವನು ಸರಿದಾರಿಗೆ ತರುವ ಉದ್ದೇಶದಿಂದ ಈ ರೀತಿಯ ಕುಲಬಹಿಷ್ಕಾರದ ಪದ್ಧತಿಯನ್ನು ಮಾಡಿಕೊಂಡಿದ್ದಾರೆ. ಅವರನ್ನು ಸಂಪೂರ್ಣವಾಗಿ ತಿರಸ್ಕರಿಸುವುದಿಲ್ಲ. ತಪ್ಪಿತಸ್ಥನಿಗೆ ಕುಲದ ಸಹಾಯ ಅನಿವಾರ್ಯವಾದಗ ಕುಲಕ್ಕೆ ದಂಡ ಸಲ್ಲಿಸಿ, ಶುದ್ಧೀಕರಣಗೊಂಡು ಶಿಕ್ಷೆಯಿಂದ ಮುಕ್ತನಾಗುತ್ತಾನೆ. ಈ ರೀತಿಯ ಅನೇಕ ಪ್ರಸಂಗಗಳಿಗೆ ಬಳ್ಳಾರಿ ಜಿಲ್ಲೆಯಲ್ಲಿ ನಡೆದಿರುವುದನ್ನು ಕ್ಷೇತ್ರಕಾರ್ಯ ಮತ್ತು ಸಮುದಾಯದ ಜೊತೆ ನಿರಂತರ ಸಂಪರ್ಕದೊಂದಿಗೆ

ಕಂಡುಕೊಳ್ಳಲಾಯಿತು. ಪಂಚಾಯಿತಿ ಪ್ರಾರಂಭ ಮಾಡಿದಾಗ ಮೊದಲು ಸಾಲು, ಸಾಕ್ಷಿಗಳಿಂದ ಪ್ರಾರಂಭ ಮಾಡುತ್ತಾರೆ.

**ಸಾಲು:** ಕುಲಪಂಚಾಯಿತಿಯ ಮುಂದೆ ದೂರನ್ನು ಸಲ್ಲಿಸಿದ ಪಿರ್ಯಾದಿಯು ನೆರೆದ ಪಂಚಾಯತಿದಾರರ ಸಮ್ಮುಖದಲ್ಲಿ ತಮ್ಮ ಜಗಳಕ್ಕೆ ಕಾರಣಗಳನ್ನು ವಿವರಿಸುತ್ತಾ ಕೊಡಿ–ಮುಡಿಗಳನ್ನು ವಿವರಿಸುತ್ತಾರೆ. ಇದಕ್ಕೆ ತಪ್ಪುಒಪ್ಪುಗಳನ್ನು ತಿಳಿಸುವುದಕ್ಕೆ ಸಾಲು ಎನ್ನುವರು. ಕುಲಪಂಚಾಯಿತಿಯು ಕೇಳಿದ ಪ್ರಶ್ನೆಗಳಿಗೆ ಮಾತ್ರ ಉತ್ತರ ಕೊಡಬೇಕು ಮಧ್ಯದಲ್ಲಿ ಬಾಯಿ ಮಾಡುವುದು, ಪರಸ್ಪರ ನಿಂದಿಸುವುದು, ಜಗಳ ಮಾಡುವಂತಿಲ್ಲ. ದೈವಕ್ಕೆ ಕತಪಾ ಕೊಟ್ಟಿದ ಮೇಲೆ 'ಬಾಯಿಯನ್ನು ಅಥವಾ ಮಾತುಕೊಟ್ಟಿದಂತೆ ಸಮ'ಎಂದು ಭಾವಿಸುವರು. ಮುಂದೆ ಪಿರ್ಯಾದಿ ಮತ್ತು ಆರೋಪಿಗಳ ಪರವಾಗಿ ಚರ್ಚೆ ನಡೆಯುತ್ತದೆ.

**ಸಾಕ್ಷಿ:** ಜಗಳವಾಡಿದ ಸಂದರ್ಭದಲ್ಲಿ ಯಾರಾದರೂ ನೋಡಿರುವವರು ಅಥವಾ ಕೇಳಿದವರು ಪ್ರತ್ಯಕ್ಷ ಸಾಕ್ಷಿ ಇದ್ದರೆ ಆ ಹೇಳಿಕೆಗಳನ್ನು ಪಂಚಾಯಿತಿ ಕಟ್ಟೆಯಲ್ಲಿ ವಿವರಿಸುತ್ತಾರೆ. ಇದಕ್ಕೆ ಸಾಕ್ಷಿ ಎನ್ನುವರು. ಮೊದಲು ಸಾಕ್ಷಿ ಹೇಳಬೇಕಾದರೆ ಹಸಿರುಗಿಡದ ಮೇಲೆ ಪ್ರಮಾಣಮಾಡಿ ಹೇಳಿಸುವುದು, ನೀರು–ನೀರೆ ಹಾಲು–ಹಾಲೆ ಎಂದು ಹೇಳಿ ಅರಿಶಿಣ ಕುಂಕುಮ ಮೇಲೆ ಪ್ರಮಾಣ ಮಾಡಿ ಹೇಳಿಸುತ್ತಿದ್ದರು. ಮಕ್ಕಳ ಮೇಲೆ ಪ್ರಮಾಣಮಾಡಿ ಸಾಕ್ಷಿ ಹೇಳಿಸುವುದು, ಮಕ್ಕಳ ತಲೆಯ ಮೇಲೆ ಕೈಯಿಟ್ಟು ಪ್ರಮಾಣ ಮಾಡಿ ನಿಜವನ್ನು ಹೇಳುತ್ತೇನೆಂದು ಹೇಳಿಸುತ್ತಿದ್ದರು. ದೇವರುಗಳ ಮೇಲೆ ಪ್ರಮಾಣ ಮಾಡಿ ಸಾಕ್ಷಿ ಹೇಳುವುದು, ಸ್ನಾನಮಾಡಿ ದೇವಸ್ಥಾನದ ದೀಪವನ್ನು ಆರಿಸಿ ಪ್ರಮಾಣ ಮಾಡಿಸುವುದು, ಕಾದ ಕಬ್ಬಿಣದ ಹಾರಿಯನ್ನು ಮುಟ್ಟಿ ಪ್ರಮಾಣ ಮಾಡಿಸುವುದು. ಗಡಿಗೆಯಲ್ಲಿ ಎಣ್ಣೆಯನ್ನು ಹಾಕಿ ಚೆನ್ನಾಗಿ ಕುದಿಯುತ್ತಿರುವಾಗ ಅದರಲ್ಲಿ ಉಂಗುರವನ್ನು ಹಾಕಿ ಸಾಕ್ಷಿ ಹೇಳುವವನು ಕೈಯಿಂದ ಉಂಗುರವನ್ನು ತೆಗೆದು ನ್ಯಾಯಸ್ಥರಿಗೆ ಕೊಡಬೇಕು ಹೀಗೆ ಸಾಕ್ಷಿ ಹೇಳಿಸುತ್ತಿದ್ದರು. ಈಗ ಆ ರೀತಿಯ ಕಠಿಣವಾದ ಸಾಕ್ಷಿಗಳನ್ನು ಕೇಳುವುದನ್ನು ಕಡಿಮೆ ಮಾಡಿ ನೇರವಾಗಿ ಸತ್ಯವನ್ನು ನುಡಿಯಬೇಕು ಎಂದು ದೇವರ ಪ್ರಮಾಣ ಮಾಡಿಸಿ ಸಾಕ್ಷಿಯನ್ನು ಕೇಳುತ್ತಾರೆ.

**ಸಾಟ್ವ:** ಸಂದರ್ಭಕ್ಕೆ ತಕ್ಕಂತೆ ಸಾಂದರ್ಭಿಕ ವ್ಯಾಜ್ಯಗಳನ್ನು ಪರಿಶೀಲಿಸಲು ಹಿಂದಿನ ಪಂಚಾಯತಿಗಳಲ್ಲಿ ನಡೆದಿರುವ ಹಾಗೂ ನಿರ್ಣಯಿಸಿದ ಕುಲ ನಿರ್ಣಯಗಳು, ಘಟನೆಗಳನ್ನು ಮತ್ತು ಪೂರ್ವಜರು ಪಾಲಿಸಿಕೊಂಡು ಬಂದಂತ ಕಟ್ಟುನಿಟ್ಟುಗಳನ್ನು ನೆನಪಿಸಿ ಹೇಳುವುದಕ್ಕೆ ಸಾಟ್ವ ಎಂದು ಕರೆಯುತ್ತಾರೆ.

**ತೀರ್ಪು:** ಈ ಸಮುದಾಯದಲ್ಲಿ ನ್ಯಾಯ ಪಂಚಾಯಿತಿಯಲ್ಲಿ ಮಾಡಿದ ಪ್ರತಿಯೊಂದು ತಪ್ಪಿಗೆ ಇಷ್ಟು ದಂಡ (ಶಿಕ್ಷೆ) ಎಂದು ಲಿಖಿತ ಸಂವಿಧಾನ ಇದ್ದಂತೆ ಇವರಲ್ಲಿ ಪರಂಪರೆಯಿಂದ ನಡೆದುಬಂದ ಅಲಿಖಿತ ಸಂವಿಧಾನವನ್ನು ಇವರ ಕುಲಪಂಚಾಯಿತಿಯಲ್ಲಿ ನೋಡಬಹುದು. ಸಾಲು ಸಾಕ್ಷಿ ಆಧಾರದ ಮೇಲೆ ತೀರ್ಪುನ್ನು ನೀಡಲು ಮುಂದಾಗುತ್ತಾರೆ.

**ಮುಗಿಂಪು (ಮುಕ್ತಾಯ):** ತಪ್ಪು ಮಾಡಿದವರಿಗೆ ದಂಡ ವಿಧಿಸಿದ ನಂತರ ಆ ಇಬ್ಬರ ವ್ಯಕ್ತಿಗಳನ್ನು ಕೈಕೈ ಜೋಡಿಸಿ ಕೋಪ ತಾಪದಲ್ಲಿ ಮಾನಸಿಕ ಸ್ಥಿಮಿತ ಕಳೆದುಕೊಂಡು ನಾವು ತಪ್ಪುಗಳನ್ನು

ಮಾಡಿದ್ದೇವೆ ಇನ್ನೂ ಮುಂದೆ ಯಾವುದೇ ರೀತಿಯ ತಪ್ಪುಗಳನ್ನು ಮಾಡಬಾರದು ಎಂದು ಪಂಚಾಯಿತಿ ಕಟ್ಟೆಯಲ್ಲಿ ರಾಜೀ ಮಾಡಿಸುತ್ತಾರೆ. ನಂತರ ಅವರಿಬ್ಬರನ್ನು ಒಂದೂಗೂಡಿಸಿ ಮಾತನಾಡಿಸಿ ಮುಂದೆ ಈ ರೀತಿ ತಪ್ಪು ಮಾಡಬೇಡಿ ನ್ಯಾಯ ಮುಗಿಸುತ್ತಾರೆ. ನಂತರ ಜಗಳವಾಡಿದ ಇಬ್ಬರು ಎಲ್ಲಾ ಹಿರಿಯರಿಗೆ ಕಾಲು ಮುಗಿದು ಶರಣಾರ್ಥಿ ಮಾಡಿಸುತ್ತಾರೆ. ಪಂಚಾಯಿತಿಗೆ ಬಂದಂತ ಎಲ್ಲಾ ಕುಲಸ್ಥರಿಗೆ ಊಟ, ಸರಾಯಿ ಕೊಟ್ಟು ಬಂದುಹೋಗುವ ಬಸ್ ಚಾರ್ಜಿ ಕೊಟ್ಟು ಕಳಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಕುಲ ಪಂಚಾಯಿತಿಯ ಖರ್ಚುವೆಚ್ಚ ಹೆಚ್ಚಾಗಿರುವುದರಿಂದ ಕಾಲಕ್ಕೆ ತಕ್ಕಂತೆ ದಂಡವಿಧಿಸುವುದರಲ್ಲಿ ಸಾವಿರಾರು ರೂಪಾಯಿಗಳನ್ನು ವಿಧಿಸುತ್ತಿದ್ದಾರೆ. ಇಂದಿಗೂ ಈ ಪರಂಪರೆಯನ್ನು ಮುಂದುವರೆಸುತ್ತಿದ್ದಾರೆ.

**ಪಂಚಾಯಿತಿ ವರ್ಗೀಕರಣ**

೧. ಚುಟ್ಟಪಕ್ಕಲ ಪಂಚಾಯಿತಿಲು (ಬಂಧು ಬಳಗದ ಪಂಚಾಯಿಗಳು).

೨. ಕೊಟ್ಟುಕುನ್ನ ಪಂಚಾಯಿತಿಲು (ಹೊಡೆದಾಡಿದ ಜಗಳ).

೩. ರಂಕು ಪಂಚಾಯಿತಿಲು (ವ್ಯಭಿಚಾರ).

೪. ದೈವಗಳ ನ್ಯಾಯಂ (ಮೃತರ ಪಂಚಾಯಿತಿ) ಈ ರೀತಿಯ ಪಂಚಾಯಿತಿಗಳನ್ನು ಕಾಣಬಹುದು.

೫. ಲೇವಾದೇವಿ ಪಂಚಾಯಿತಿಲು (ಸಾಲ ಕೊಡು ತೆಗೆದುಕೊಂಡಿದ್ದ ಜಗಳ).

**ಚುಟ್ಟಪಕ್ಕಲ ಪಂಚಾಯಿತಿ ಅಥವಾ(ಬಂಧುಬಳಗದ ಪಂಚಾಯಿತಿ):** ಬಂಧು ಬಳಗದಲ್ಲಿ ಕೊಟ್ಟು ತೆಗೆದುಕೊಳ್ಳುವ ವ್ಯವಹಾರದಲ್ಲಿ ಸಣ್ಣಪುಟ್ಟ ಜಗಳ ನಡೆದರೆ ಅಥವಾ ಮಾತು ಮಾತಿಗೆ ಏನಾದರೂ ಜಗಳವಾದರೆ ಅಲ್ಲಿನ ತಮ್ಮ ಹಿರಿಯರನ್ನು ಕರೆಯಿಸಿಕೊಂಡು ಪಂಚಾಯಿತಿ ಮಾಡಿಕೊಂಡು ಬಗೆಹರಿಸಿಕೊಳ್ಳುವರು. ಹೀಗೆ ಕಳ್ಳುಬಳ್ಳಿಯಲ್ಲಿ ತೀರ್ಮಾನಗೊಂಡ ವ್ಯವಸ್ಥೆಯನ್ನು ಕಳ್ಳುಪಂಚಾಯಿತಿ ಅಥವಾ ಚುಟ್ಟಪಕ್ಕಲ ಪಂಚಾಯಿತಿ ಎಂದು ಕರೆಯುವರು. ಒಂದುವೇಳೆ ಇಲ್ಲಿ ರಾಜಿಯಾಗದಿದ್ದಲ್ಲಿ ಎರಡು ವರ್ಷಕ್ಕೊಮ್ಮೆ ನಡೆಯುವ ಬಿಡಾರುನಲ್ಲಿ ಬಗೆಹರಿಸಿಕೊಳ್ಳುತ್ತಾರೆ. ಈ ಪಂಚಾಯಿತಿಯಲ್ಲಿ ತೀರ್ಮಾನಗೊಂಡ ನ್ಯಾಯದ ದಂಡದ ಹಣದಲ್ಲಿಯ ಅರ್ಧಭಾಗವನ್ನು 'ಬಿಡಾರು ಕಟ್ಟೆಗೆ' ಮುಟ್ಟಿಸುತ್ತಾರೆ.

**ಕೊಟ್ಟುಕುನ್ನ ಪಂಚಾಯಿತಿ (ಹೊಡೆದಾಡಿದ ಪಂಚಾಯಿತಿ):** ಈ ಸಮುದಾಯದಲ್ಲಿ ಕಾರಣಂತರಗಳಿಂದ ಜಗಳ ಮಾಡಿಕೊಂಡರೆ, ಕೈಕಾಲು ಮುರಿದರೆ ಇದನ್ನು **ಅಕ್ಕಾಂ ತಪ್ಪು** ಎಂದು ಪಂಚಾಯಿತಿ ಮಾಡುತ್ತಾರೆ. ತಪ್ಪು ಮಾಡಿದವನು ಕಾಲು ಕೈ ಮುರಿದು ಹೋದವನು ಸುಧಾರಿಸುವವರೆಗೂ ನೋಡಿಕೊಳ್ಳುವ ಜವಬ್ದಾರಿ ಅವರದ್ದಾಗಿರುತ್ತದೆ.

**ರಂಕು ಪಂಚಾಯಿತಿ:** ಬುಡ್ಗ ಜಂಗಮರಲ್ಲಿ ಈಗಾಗಲೇ ಮದುವೆಯಾಗಿ ಇನ್ನೊಂದು ಹುಡುಗಿಯನ್ನು ವ್ಯಭಿಚಾರ ಮಾಡಿದರೆ, ಅವರಿಬ್ಬರೂ ಒಪ್ಪಿಕೊಂಡರೆ ಮೊದಲ ಹೆಂಡತಿಯ ಅನುಮತಿ ಮೇರೆಗೆ 'ಉಡಿಕಿ' ಮದುವೆ ಮಾಡುತ್ತಾರೆ.

ಗಂಡಸತ್ತ ಹೆಂಗಸು ಅಥವಾ ಗಂಡನಿಂದ ವಿಚ್ಛೇದನ ಪಡೆದ ಹೆಣ್ಣು ಅದೇ ಸಮುದಾಯದ ಬೇರೊಬ್ಬನನ್ನು ಸಂಬಂಧ ಹೊಂದಿದ್ದರೆ ಅವರಿಬ್ಬರಿಗೆ 'ಉಡಿಕಿ' ಮದುವೆ ಮಾಡುತ್ತಾರೆ. ಗಂಡು ವ್ಯಭಿಚಾರ ಮಾಡಿದರೆ ದಂಡ ಹಾಕಿ ಕುಲಕ್ಕೆ ಸೇರಿಸಿಕೊಳ್ಳುತ್ತಾರೆ. ಅದೆ ಹೆಂಗಸು ಬೇರೆ ಸಮುದಾಯದ ಹುಡುಗನೊಂದಿಗೆ ವ್ಯಭಿಚಾರ ಮಾಡಿದರೆ ಕುಲದಿಂದ ಹೊರಕ್ಕೆ ಹಾಕುತ್ತಾರೆ. ಹೆಣ್ಣಿಗೆ ಈ ಸಮಾಜದಲ್ಲಿ ಕ್ಷಮೆ ಇರುವುದಿಲ್ಲ. ಒಂದು ವೇಳೆ ಗಂಡ ಹೆಂಡಿರ ಜಗಳ ಸಂಬಂಧ ಮುರಿದು ಹೋಗುವ ಪರಿಸ್ಥಿತಿ ಬಂದಾಗ ಗಂಡನು ಹೆಂಡತಿಯನ್ನು ಬೇಡ ಎಂದಾಗ ಹೆಂಡತಿಯ ಸೆರಗಿನಲ್ಲಿ ನಾಲ್ಕಾಣೆ (ಇಪತ್ತೈದು ಪೈಸೆ ನಾಣ್ಯ) ಕಟ್ಟಿ ಬಿಡುವುದುಂಟು. ಅದೇ ಹೆಂಡತಿ ಗಂಡನನ್ನು ಬೇಡ ಎಂದಾಗ ಅವರಿಗಾದ ಮದುವೆ ಖರ್ಚನ್ನು ಕಟ್ಟಿಕೊಟ್ಟು ಸಂಬಂಧ ಮುರಿದುಕೊಳ್ಳುತ್ತಾರೆ.

ಉದಾ: ದಿನಾಂಕ ೩೧/೦೪/೨೦೧೬ ರಂದು ಕ್ಷೇತ್ರಕಾರ್ಯ ಕೈಗೊಂಡಾಗ ಬಳ್ಳಾರಿ ಕಂಪ್ಲಿ ಮುಖ್ಯ ರಸ್ತೆಯಲ್ಲಿ ಹಾದುಹೋಗುವ ದೇವಲಾಪುರ ಕಣಿವೆ ಮಾರೆಮ್ಮ ದೇವಸ್ಥಾನದಲ್ಲಿ ಜರುಗಿದ ಬಳ್ಳಾರಿ ಜಿಲ್ಲೆಯ ಗುಡಾರನಗರದ ಹೊಸಳ್ಳಿ ಯಡವಲಿ ಚಿನ್ನಪ್ಪನವರ ಮೊಮ್ಮಗನು, ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಸಿದ್ದಾಪುರ ಗ್ರಾಮದ ವಿಭೂತಿ ಮಹಾದೇವಪ್ಪನ ಮಗಳನ್ನು ಪ್ರೀತಿಸಿ ಎರಡನೆ ಮದುವೆ ಆಗಿರುವುದರ ಕುರಿತು ಕುಲಪಂಚಾಯಿತಿ ಮಾಡಿದರು. ಇದನ್ನು ಬುಡ್ಗ ಜಂಗಮರು (ಲಂಜ ನ್ಯಾಯಂ) ಅಥವಾ (ರಂಕು ನ್ಯಾಯಂ) ಎಂದು ಕರೆಯುತ್ತಾರೆ.

**ದೈವಗಳ ಪಂಚಾಯಿತಿ:** ಈ ಸಮುದಾಯದಲ್ಲಿ ಯಾರಾದರು ಹಿರಿಯರು ಸತ್ತರೆ ಆತ್ಮಗಳು ನಿತ್ಯ ಸಂಚರುಸುತ್ತವೆ ಎಂಬ ನಂಬಿಕೆ ಇವರಲ್ಲಿದೆ. ಇವರನ್ನು ಹಿರಿಯರು, ದೈವಗಳು, ಕೆಲವು ಕಡೆ ದೆವ್ವಗಳು ಮತ್ತೊಂದೆಡೆ ಪ್ರೇತಗಳು ಎಂದು ವಿವಿಧ ಹೆಸರಿನಿಂದ ಕರೆಯುತ್ತಾರೆ. ಮೃತ ಆದಂತ ವ್ಯಕ್ತಿಗಳು ದೈವ(ದೆವ್ವ)ವಾಗಿ ಕುಲಸ್ಥರನ್ನು ಕಾಡಿಸಿದಾಗ ಶೋಧನೆ ಮಾಡಿ ಶಕುನದಲ್ಲಿ ನಿಜವೆಂದು ತಿಳಿದರೆ ಆ ಕುಟುಂಬದವರು ನಿಮ್ಮ ತಾತ ನಿಮ್ಮ ಸಂಬಂಧಿಕ ದೈವ್ವವಾಗಿ ನಮ್ಮನ್ನು ಕಾಡುತ್ತಿದ್ದಾನೆ. ನಿಮ್ಮ ದೈವವನ್ನು ನೀವು ಕರೆದುಕೊಳ್ಳಿ ಎಂದು ಪಂಚಾಯಿತಿ ಕಟ್ಟೆ ಏರುತ್ತಾರೆ. ಅದೇ ರೀತಿಯಾಗಿ ಕುಲಸ್ಥನು ಆಗಮಿಸಿ ಮತ್ತೊಮೆ ಶೋಧಿಸಿಕೊಂಡು ಖಾತ್ರಿಯಾದ ನಂತರ ಅವರ ದೈವದ ಬೇಡಿಕೆಯನ್ನು ನೆರವೇರಿಸಿ ಅವರ ದೈವವನ್ನು ಕರೆದುಕೊಂಡು ಹೋಗುತ್ತಾರೆ.

ಉದಾ: ದಿನಾಂಕ ೧೬.೧೦.೨೦೧೬ ರವಿವಾರದಂದು ಕ್ಷೇತ್ರಕಾರ್ಯದಲ್ಲಿ ಭಾಗವಹಿಸಿದ ನಾನು ಸಂಡೂರು ತಾಲ್ಲೂಕಿನ ಹಳೇ ದರೋಜಿಯಲ್ಲಿ ಅಲೆಮಾರಿ ಅಶ್ವ ದೊಡ್ಡ ಲಾಲಪ್ಪನವರು ಅನಾರೋಗ್ಯದ ಪ್ರಯುಕ್ತ ಶೋಧಿಸಿಕೊಂಡಾಗ ಏಳು ದೈವಗಳು ಬಂದಿರುವುದನ್ನು ಕಂಡುಕೊಂಡು, ಅವರವರ ಬಂಧುಗಳನ್ನು ಕರೆಯಿಸಿ ಗಿಡದ ದೇವರು ಮಾಡಿ ಏಳು ಬೇಟೆ ಬಲಿಗಳನ್ನು ನೀಡುವುದರ ಮೂಲಕ ಪ್ರೇತಾರಾಧನೆ ಮಾಡಿಕೊಂಡು ಅವರವರ ಊರೂಗಳಿಗೆ ತೆರಳಿದರು.

**ಲೇವಾದೇವಿ ಪಂಚಾಯಿತಿಲು(ಸಾಲ ಕೊಡು ತೆಗೆದುಕೊಂಡಿದ್ದ ಜಗಳ):** ಇವರಲ್ಲಿ ಒಬ್ಬರಿಗೊಬ್ಬರು ಕಷ್ಟಬಂದಾಗ ಅಥವಾ ರೋಗರುಜಿನ ಕಾಯಿಲೆ, ಹೊಲಗದ್ದೆ ಅಥವಾ ಮನೆಕಟ್ಟಲು ಅಥವಾ ಮದುವೆ

ಮಾಡಲು ಸಾಲ ಕೇಳಿದಾಗ ಯಾವುದೇ ಪ್ರಾಮಿಸರಿ ನೋಟು ಬರೆದುಕೊಳ್ಳದೇ ಬರೀ ಮಾತಿನಲ್ಲಿಯೇ ಕೊಡುವ ಮತ್ತು ತೆಗೆದುಕೊಳ್ಳುವ ಪದ್ಧತಿಯನ್ನು ಕಾಣಬಹುದು. ಬರೀ ನಂಬಿಕೆಯಿಂದಲೇ ಸಾಲವನ್ನು ಕೊಡುತ್ತಾರೆ. ಬಹುಮುಖ್ಯವಾಗಿ ಇವರಲ್ಲಿ ಮೋಸ ವಂಚನೆ ಮಾಡುವುದಿಲ್ಲ ಎಂಬ ಅಪಾರ ನಂಬಿಕೆ ಇವರಲ್ಲಿದೆ. ಒಂದುವೇಳೆ ಕಾರಣಂತರಗಳಿಂದ ಕೊಡದೇ ಮತ್ತು ಮೋಸ ಮಾಡಿದರೆ ಅಂತವರ ವಿರುದ್ಧ ಪಂಚಾಯಿತಿ ಕಟ್ಟೆ ಏರುತ್ತಾರೆ. ಇದನ್ನು "ಲೇವದೇವಿ ಪಂಚಾಯಿತಿಲು" ಎಂದು ಕರೆಯುತ್ತಾರೆ. ಉದಾ: ದಿನಾಂಕ ೧೮.೦೫.೨೦೧೭ ರಂದು ಕ್ಷೇತ್ರಕಾರ್ಯದಲ್ಲಿ ಭಾಗವಹಿಸಿದ ನಾನು ಕಂಪ್ಲಿ ತಾಲ್ಲೂಕಿನ ಸೋಮಲಾಪುರ ಗ್ರಾಮದ ರುದ್ರಾಕ್ಷಿ ರಂಗಯ್ಯನು ಅವರ ಅಣ್ಣನ ಮಗನಿಗಾಗಿ ಎರಡು ಲಕ್ಷ ಸಾಲವನ್ನು ಬಳ್ಳಾರಿ ತಾಲೂಕಿನ ಕುಡಿತಿನಿ ಪಟ್ಟಣದ ಮೋತಿ ಮಹಾಲಿಂಗಂ ಅವರಿಂದ ಸಾಲ ಕೊಡಿಸಿದನು. ರುದ್ರಾಕ್ಷಿ ರಂಗಯ್ಯನು ಇದಕ್ಕೆ ಜಾಮೀನುದಾರ ನಾಗಿದ್ದನು. ಸಾಲ ಪಡೆದವನು ಕಾರಣಂತರಗಳಿಂದ ೩ವರ್ಷ ಕಳೆದರೂ ಸಾಲ ತೀರಿಸಲಿಲ್ಲ ಕೊನೆಗೆ ಪಂಚಾಯಿತಿ ಕಟ್ಟೆ ಏರಿ, ಪಂಚಾಯಿತಿ ನಿರ್ಣಯದಂತೆ ಸಾಲವನ್ನು ಇಂತಿಷ್ಟ ದಿನಗಳ ಗಡವಿನೊಂದಿಗೆ ಸಾಲ ತೀರಿಸಿದನು. ನ್ಯಾಯ ಮಾಡದಂತೆ ನ್ಯಾಯಯುತವಾಗಿ ಬದಕಿ ಬಾಳುವುದೇ ಶ್ರೇಷ್ಟ ಎಂದು ನಂಬಿಕೆ ಇದೆ. ದಂಡ ಕಟ್ಟಿಸಿಕೊಳ್ಳುವ ಗೋಜಿಗೆ ಹೋಗದೆ ಸಮಾಜದಲ್ಲಿ ಇಂತಹವರು ಚೆನ್ನಾಗಿ ಬದುಕು ಬಾಳಿದರು ಎಂದು ಹೆಸರು ಪಡೆಯಬೇಕು ಎಂಬ ಹಂಬಲ ಈ ಸಮುದಾಯದಲ್ಲಿ ಹೆಚ್ಚಾಗಿ ಕಾಣಬಹುದು. ಒಂದುವೇಳೆ ಕಾರಣಂತರಗಳಿಂದ ಈ ರೀತಿಯ ಅಪರಾಧದಗಳಿಗೆ ಕೈ ಹಾಕಿದರೆ ಅವರನ್ನು ಸಮಾಜ ನೋಡುವ ದೃಷ್ಠಿಕೋನ ಶೋಚನೀಯವಾಗಿ ಕಾಣುತ್ತದೆ. ಹಾಗಾಗಿ ಇಂತಹ ಅಪರಾಧದ ಕೆಲಸಗಳಿಗೆ ಮಾಡಲು ಭಯ ಪಡುತ್ತಾರೆ. ಮಾತಿಗೆ ಚಾಚು ತಪ್ಪದೆ ಪಾಲನೆ ಮಾಡುತ್ತಾರೆ.

**ಶಿಕ್ಷೆಗಳ ವಿವರ**

೧. **ನೋಟುತಪ್ಪು(ಬಾಯಿತಪ್ಪು):** ಒಬ್ಬ ಕುಲಸ್ತನು ಇನ್ನೊಬ್ಬ ಕುಲಸ್ಥನನ್ನು ಅವಾಚ್ಯ ಶಬ್ದಗಳಿಂದ ನಿಂದನೆ ಮಾಡಿದರೆ ಬಾಯಿತಪ್ಪು ಎಂದು ಎರಡು ರೂಪಾಯಿಗಳನ್ನು ದಂಡ ವಿಧಿಸುತ್ತಾರೆ.

೨. **ಸುಳ್ಳು ಹೇಳುವ ತಪ್ಪು:** ಸುಳ್ಳು ಹೇಳಿದರೆ ಆರು ರೂಪಾಯಿ ತಪ್ಪು ದಂಡ ವಿಧಿಸುತ್ತಾರೆ.

೩. **ಚೆಪ್ಪುತಿಸುಕೋನಿ ಕೊಡುತ್ತಾ ಎಂದು ಹೇಳಿದ ತಪ್ಪು(ಚಪ್ಪಲಿಯಿಂದ ಹೊಡಿಯುತ್ತೇನೆ):** ಈ ಸಮುದಾಯದಲ್ಲಿ ಬೇರೆ ಯಾವುದೇ ಕುಲಸ್ಥನನ್ನು ಚಪ್ಪಲಿಯಿಂದ ಒಡೆಯುತ್ತೇನೆ ಎಂದು ಎನ್ನುವುದಾಗಲಿ ಅಥವಾ ಹೊಡೆದರು, ಇಪ್ಪತುನಾಲ್ಕು ರೂಪಾಯಿಗಳು ತಪ್ಪು ದಂಡವನ್ನು ವಿಧಿಸಿ ಇದು ಅನಿಷ್ಟ ಎಂದು ನಾಲ್ಕು ಜನರನ್ನು ಕರೆಯಿಸಿಕೊಂಡು ಚಹಾ ಅಂಗಡಿಗೆ ಹೋಗಿ ಚಹಾ ಅಥವಾ ಸರಾಯಿಯನ್ನು ಕುಡಿದು ಬರುತ್ತಾರೆ.

೪. **ತಾಕಟ್ಲು (ಚಾಡಿ) ಹೇಳಿದ ತಪ್ಪು:** ಚಾಡಿಯಿಂದ ಹೇಳುವುದಾಗಲಿ ಅಥವಾ ಜಗಳಮಾಡಿಸುವುದಾಗಲಿ ತಪ್ಪುಗೆ ಇಪ್ಪತುನಾಲ್ಕು ರೂಪಾಯಿಗಳು ತಪ್ಪು ದಂಡವನ್ನು ವಿಧಿಸುತ್ತಾರೆ.

೫. **ದೊಂಗ (ಕಳ್ಳತನ) ತಪ್ಪು:** ಕಳ್ಳತನ ಮಾಡಿದರೆ ಇಪ್ಪತುನಾಲ್ಕು ರೂಪಾಯಿಗಳು ದಂಡವನ್ನು ವಿಧಿಸುತ್ತಾರೆ.

೬. **ರಂಕು ತಪ್ಪು(ಅತ್ಯಾಚಾರದ ತಪ್ಪು):** ಗಂಡು ಮಕ್ಕಳು ಅತ್ಯಾಚಾರ (ವ್ಯಭಿಚಾರ) ಮಾಡಿದರೆ ಅಥವಾ ಮಾಡಿಸಿದರೆ ರಂಕು ತಪ್ಪು ಎಂದು ಇಪ್ಪತುನಾಲ್ಕು ರೂಪಾಯಿ ದಂಡ ವಿಧಿಸುತ್ತಾರೆ. ಹೆಣ್ಣು ಮಕ್ಕಳಾದರೆ ಅವರನ್ನು ಕುಲದಿಂದ ಹೊರಗೆ ಹಾಕುತ್ತಾರೆ. ಮದುವೆಯಾದ ಹೆಣ್ಣು ಬೇರೆಯೊಬ್ಬರ ಸಂಬಂಧ ಮಾಡಿದರೆ ಹುಡುಗಿಯ ತಂದೆಗೆ ಹನ್ನೆರಡು ರೂಪಾಯಿಗಳು ತಪ್ಪು ದಂಡ ವಿಧಿಸುತ್ತಾರೆ. ಮತ್ತು ಕುಂಡ, ಶಾಟ (ಗಡಿಗಿ,ಮೊರ)ವನ್ನು ತಿಪ್ಪೆಯ ಮೇಲೆ ಎಸೆಯುತ್ತಾರೆ.

೭. **ಪೋಲಿಸ್ ಸ್ಟೇಷನ್‌ಗೆ ಹೋದ ತಪ್ಪು:** ಜಗಳ ಅಥವಾ ಯಾವುದರೂ ಸಮಸ್ಯೆಯನ್ನು ಕುಲಸ್ಥರಿಗೆ ತಿಳಿಸದೆ ನೇರವಾಗಿ ಪೋಲಿಸ್ ಸ್ಟೇಷನ್‌ಗೆ ಮತ್ತು ನ್ಯಾಯಾಲಯಕ್ಕೆ ಹೋದರೆ ಆರು ರೂಪಾಯಿ ದಂಡ ವಿಧಿಸುವರು.

೮. **ಮದುವೆಯಾದ ಹೆಣ್ಣನ್ನು ಬಿಡುವ ತಪ್ಪು(ವಿಚ್ಛೇಧನ):** ಮದುವೆಯಾದ ಹೆಣ್ಣನ್ನು ಕೆಲವು ದಿನಗಳ ಕಾಲ ಸಂಸಾರ ಸಾಗಿಸಿ ಗಂಡ ಹೆಂಡತಿಯರ ಮಧ್ಯ ವೈಮನಸ್ಸು ಉಂಟಾಗಿ ಇಬ್ಬರು ಪೂರ್ಣಪ್ರಮಾಣದಲ್ಲಿ ಸಂಸಾರ ನಡೆಸಲು ಸಾಧ್ಯವಿಲ್ಲದಿದ್ದಾಗ ಪಂಚಾಯಿತಿ ಏರಿ ಕುಲಸ್ಥರ ನಿರ್ಣಯದಂತೆ ನಾಲ್ಕಾಣೆ ನಾಣ್ಯವನ್ನು (ಇಪ್ಪತ್ತೈದು ಪೈಸೆ ನಾಣ್ಯ) ಅವಳ ಸೆರಗಿನಲ್ಲಿ ಕಟ್ಟಿ ಅವಳ ಗಂಡನ ಬೆಡಗಿಗೆ ಸಂಬಂಧ ಕಡಿದು ಹಾಕಿ ತವರು ಮನೆಯ ಬೆಡಗಿಗೆ ಸೇರಿಸಿ ಅವಳನ್ನು ಬಿಡುಗಡೆ ಮಾಡುತ್ತಾರೆ.

೯. **ಅನ್ಯ ಸಮುದಾಯದ ಹೆಣ್ಣನ್ನು ಮದುವೆಯಾದ ತಪ್ಪು:** ಅನ್ಯ ಸಮುದಾಯದ ಹೆಣ್ಣನ್ನು ಮದುವೆಯಾದವನು ಕುಲಕ್ಕೆ ಸೇರಲು ಬಯಸಿದರೆ ಅವನು ಮಾಡಿಕೊಂಡ ಅನ್ಯ ಸಮುದಾಯದ ಹುಡುಗಿಯನ್ನು ಬಿಟ್ಟು ಬರಬೇಕಾಗುತ್ತದೆ. ಪಂಚಾಯಿತಿ ನಿರ್ಣಯದಂತೆ ಅವನಿಗೆ ಇಪ್ಪತ್ತೈದು ರೂಪಾಯಿಗಳು ದಂಡವಿಧಿಸಿ, ಸುಟ್ಟ ಬಂಗಾರದ ಕಡ್ಡಿಯಿಂದ ತುದಿ ನಾಲಿಗೆಯನ್ನು ಸುಟ್ಟು, ತಲೆ ಬೋಳಿಸಿ, ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಸಿ, ಎಲ್ಲರಿಗೆ ಸಿಹಿ ನೀರಿನ ಪಾನಕ ಕೊಟ್ಟು ಕುಲದಲ್ಲಿ ಸೇರಿಸಿಕೊಳ್ಳುವರು. ಒಂದುವೇಳೆ ಹುಡುಗಿ ಬಿಡದೇ ಕುಲದಲ್ಲಿ ಸೇರಿಕೊಳ್ಳುತ್ತೇನೆ ಎಂದರೆ ಮೇಲ್ವರ್ಗದ ಹೆಣ್ಣು ಮಗಳಾದರೆ ಒಳಗೆ ಕರೆದುಕೊಳ್ಳುವರು. ಒಂದುವೇಳೆ ತಮ್ಮ ಸಮುದಾಯಕ್ಕಿಂತ ತಳವರ್ಗದ ಹೆಣ್ಣನ್ನು ಮದುವೆಯಾದರೆ ಕುಲದಿಂದ ಬಹಿಷ್ಕರಿಸುವವರು. ಈ ರೀತಿಯ ಪದ್ಧತಿಯನ್ನು ಇವರು 'ಕನ್ನಕೂಡು' ಎಂದು ಪರಿಭಾವಿಸುತ್ತಾರೆ. ಸಂದರ್ಭೋಚಿತವಾಗಿ ಈ ಪದವನ್ನು ಅಪಹಾಸ್ಯವಾಗಿ ಕನ್ನಕೂಡು ತಿನದಂಡಿ (ಕಂಡ ಹೆಣ್ಣುಮಕ್ಕಳನ್ನು ಬೋಗಿಸಿದವನು) ಎಂದು ಬಳಸುವುದನ್ನು ಕಾಣಬಹುದು.

೧೦. **ಅನ್ಯ ಸಮುದಾಯದ ಗಂಡನ್ನು ಮದುವೆಯಾದ ತಪ್ಪು:** ಅನ್ಯ ಸಮುದಾಯದ ವ್ಯಕ್ತಿಯೊಡನೆ ಓಡಿಹೋದರೆ ಅಥವಾ ಮದುವೆಯಾದರೆ ಮರಳಿ ಕರೆದು ಕೊಳ್ಳುವುದಿಲ್ಲ ಅವಳನ್ನು ಕುಲದಿಂದ ಬಹಿಷ್ಕರಿಸಿ ಅವಳ ತಂದೆ ತಾಯಿಗಳಿಗೆ ಇಪ್ಪತ್ತೈದು ರೂಪಾಯಿಗಳು ದಂಡ ವಿಧಿಸಿ ತಂದೆತಾಯಿಗಳನ್ನು ಕುಲಕ್ಕೆ ಸೇರಿಸಿಕೊಳ್ಳುತ್ತಾರೆ.

ಬುಡ್ಗ ಜಂಗಮರಲ್ಲಿ ಮೊದಲು ಕುಲಕಟ್ಟಳೆಗಳನ್ನು ಈ ಕೆಳಕಂಡ ರೀತಿಯಾಗಿ ಪಾಲನೆ ಮಾಡುತ್ತ ಬಂದಿದ್ದಾರೆ.

• ಹಂಚಿಕೊಂಡ ಒಬ್ಬರ ಹಳ್ಳಿಗಳನ್ನು ಬೇರೊಬ್ಬರು ಅತಿಕ್ರಮಿಸಿ, ವೇಷ ಪ್ರದರ್ಶಿಸಿ ಭಿಕ್ಷೆ ಎತ್ತಬಾರದು.

• ನಾಲ್ಕುಜನ ಹಿರಿಯರ ಸಮಕ್ಷಮದಲ್ಲಿ ಕಟ್ಟಿಕೊಂಡ ಮೇಳವು ಎರಡು ವರ್ಷಗಳವರೆಗೆ ತೊರೆಯಬಾರದು.

• ಎರಡು ವರ್ಷಕ್ಕೊಮ್ಮೆ ಎಲ್ಲಾರು ಸೇರುವ ಬಿಡಾರುಗೆ ಕನಿಷ್ಠಪಕ್ಷ ಮನೆಗೊಬ್ಬರಾದರೂ ಬಂದು ಸೇರಬೇಕು.

• ಗಂಡು ಮಕ್ಕಳು ಕೂದಲು ಬಿಡಬೇಕು.

• ತಮ್ಮ ಕುಲಕಸುಬುಗಳನ್ನು ಬಿಟ್ಟು ಬೇರೆಯವರ (ಅಡ್ಡ) ಕಸುಬುಗಳನ್ನು ಮಾಡಬಾರದು.

• ಮಹಿಳೆಯರು ಬಣ್ಣ ಬಳಿದು ವೇಷಧರಿಸಬಾರದು.

• ಹೆಣ್ಣು ಕೊಡುವೆನೆಂದು ಅಥವಾ ಮಾಡಿಕೊಳ್ಳುವೆನೆಂದು ಹೇಳಿ ಮಾತುಕೊಟ್ಟು ತಪ್ಪಿಸಬಾರದು.

• ಮದುವೆಯಾದ ಹೆಣ್ಣನ್ನು ಅತಿಕ್ರಮಿಸಿ ಓಡಿಸಿಕೊಂಡು ಹೋಗುವುದು ಅಪರಾಧ.

• ಕುಲದ ಹೆಣ್ಣು ಅಥವಾ ಗಂಡು ಯಾವುದೇ ರೀತಿಯ ಲೈಂಗಿಕ ವ್ಯಭಿಚಾರದಲ್ಲಿ ತೊಡಗಬಾರದು.

• ಕುಲದ ಹುಡುಗಿಯನ್ನು ಅತ್ಯಾಚಾರ ಮಾಡಿದವನು ಬೆಡಗಿನ ವರುಸೆ ಪ್ರಕಾರವಾಗಿ ಮದುವೆಯಾಗಲೇಬೆಕು.

• ಕುಲದಲ್ಲಿ ಯಾರದರೂ ಸತ್ತ ವಿಚಾರವನ್ನು ಬೇರೆ ಜನರ ಮೂಲಕ ಹೇಳಿ ಕಳಿಸಬಾರದು.

• ಕುಲದಲ್ಲಿ ಪಡೆದ ಸಾಲ ಮುಳುಗಿಸಬಾರದು.

• ಸಮುದಾಯದ ಕುಂದು ಕೊರತೆಗಳು ಹೊರಗಿನವರಿಗೆ ತಿಳಿಯಬಾರದು. ಏನೇ ಜಗಳವಾಡಿದರೂ ತಮ್ಮಲ್ಲಿಯೇ ಬಗೆಹರಿಸಿಕೊಳ್ಳಬೇಕು.

• ಸಾಮಾನ್ಯವಾಗಿ ಜಗಳದಲ್ಲಿ ಕೋರ್ಟ್ ಕಚೇರಿ ಮಾತು ಎತ್ತಬಾರದು.

• ಜಗಳದ ಸಂದರ್ಭದಲ್ಲಿ ಚಪ್ಪಲಿ, ಕೆರ, ಮೆಟ್ಟು, ಕಟ್ಟಿಗೆದಿಂದ ಹೋಡಿತಿನಿ ಎನ್ನುವುದು ಅಪರಾಧ.

• ಜಗಳದಲ್ಲಿ ಅವಾಚ್ಯ ಶಬ್ದಗಳ ಬಳಕೆ ಮಾಡುವುದು ಅಪರಾಧ.

**ಬುಡ್ಗ ಜಂಗಮ್ ಸಮುದಾಯದ ಬಿಡಾರ(ಕಟ್ಟೆಮನೆ)ಗಳು**

ಬುಡ್ಗ ಜಂಗಮರಲ್ಲಿ ಬಿಡಾರ ಎಂದರೆ ಬುಡ್ಗ ಜಂಗಮರು ನೆಲೆಸುವ ಸ್ಥಳ ಎಂಧರ್ಥ.(ಭಾ:ಔ.೨) ಕನ್ನಡ ಸಂಕ್ಷೀಪ್ತ ನಿಘಂಟು ಕೋಶದ ಪ್ರಕಾರ ಬಿಡಾರು ಎಂದರೆ ತಂಗುವ ಸ್ಥಳ, ನೆಲೆಸುವ ಸ್ಥಳ, ಮನೆಗಳಿಗೆ ಹಾಕುತ್ತಿದ್ದ ತೆರಿಗೆ ಎಂದು ಅರ್ಥೈಸಿದೆ. ಬಿಡಾರು ಕಟ್ಟಾ ಎಂದರೆ ಈ ಸಮುದಾಯದ ಸಮಸ್ಯೆಗಳನ್ನು, ವ್ಯಾಜ್ಯಗಳನ್ನು ಬಗೆಹರಿಸಿಕೊಳ್ಳಲು ಕುಲ ಪಂಚಾಯಿತಿಗಳು, ಕೊಡು ಕೊಳ್ಳುವಿಕೆ, ಸಾಲ ಶೂಲ ಪಡೆಯುವುದು, ಓಲಿ ಮದುವೆ, ಮುಂತಾದ ಪ್ರಕ್ರಿಯೆಗಳನ್ನು ಸಮಾಲೋಚಿಸಲು ಮಾಡಿಕೊಂಡ ಒಂದು ವೇದಿಕೆಗೆ ಬಿಡಾರು ಕಟ್ಟಾ ಎಂದು ಕರೆಯುತ್ತಾರೆ. ಇದನ್ನು ಬಿಡಾರ,

ಬಿಡಾರ ಕಟ್ಟಾ, ಬಿಡಾರು(ಕುಲಂ ಆಚಾರಂ) ಹೀಗೆ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಈ ಬಿಡಾರಗಳೆ ನ್ಯಾಯ ಪಂಚಾಯಿತಿ ಕೇಂದ್ರಗಳು ಅಥವಾ ಕಟ್ಟಾಗಳು, ಕಟ್ಟೆಮನೆಗಳು ಎಂದು ಕರೆಯುತ್ತಾರೆ. ಇವರಲ್ಲಿ ಹಲವು ಕಟ್ಟೆಮನೆಗಳನ್ನು ಕಾಣಬಹುದು. ಈ ಸಮುದಾಯದ ಪೂರ್ವಜರು ಪಾರಂಪರಿಕವಾಗಿ ಮೊದಲು ಗದ್ವಾಲ ಬಿಡಾರು(ಕಟ್ಟಾ) ನಂತರ ಗೋಲ್ಕಂಡ ಬಿಡಾರು(ಕಟ್ಟಾ), ಧನ್ನವಾಡ ಬಿಡಾರು(ಕಟ್ಟಾ). ಕನಕಪುರಂ ಬಿಡಾರು(ಕಟ್ಟಾ), ಕರ್ನೂಲು ಬಿಡಾರು(ಕಟ್ಟಾ), ಅದೋನಿ ಬಿಡಾರು(ಕಟ್ಟಾ), ಗದ್ದರಾಳ ಬಿಡಾರು(ಕಟ್ಟಾ), ಗುಂತಕಲ್ ಬಿಡಾರು(ಕಟ್ಟಾ), ದರೋಜಿ ಬಿಡಾರು(ಕಟ್ಟಾ), ಹುಲಿಗಿ ಬಿಡಾರು(ಕಟ್ಟಾ), ಹಿರೇಬೊಮ್ಮನಾಳ ಬಿಡಾರು(ಕಟ್ಟಾ), ಚಿಕ್ಕಬೊಮ್ಮನಾಳ ಬಿಡಾರು(ಕಟ್ಟಾ), ಚೆಲುಕಮುಖಿ ಬಿಡಾರು(ಕಟ್ಟಾ), ಮುಸ್ಲಾಂಪುರ ಬಿಡಾರು(ಕಟ್ಟಾ), ಸೂಳೆಕ್ಕಲು ಬಿಡಾರು(ಕಟ್ಟಾ), ಕುದುರೆಮೋತಿ ಬಿಡಾರು(ಕಟ್ಟಾ). ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರು ಪ್ರಸ್ತುತವಾಗಿ ಕುದುರೆಮೋತಿ ಬಿಡಾರು(ಕಟ್ಟಾ) ವ್ಯಾಪ್ತಿಗೆ ಸೇರುತ್ತಾರೆ.

## ಪ್ರಸ್ತುತ ರಾಜಕೀಯ ಸ್ಥಿತಿ

ಕರ್ನಾಟಕದಲ್ಲಿ ಅತ್ಯಲ್ಪ ಜನಸಂಖ್ಯೆಯನ್ನು ಹೊಂದಿರುವ ಇವರಿಗೆ ನಿರ್ದಿಷ್ಟ ನೆಲೆ ಮತ್ತು ಒಲೆ ಇಲ್ಲದೆ ಇರುವುದು, ಆರ್ಥಿಕ ಮತ್ತು ಸಾಮಾಜಿಕ ಭದ್ರತೆ ಇಲ್ಲದಿರುವುದು ರಾಜಕೀಯವಾಗಿ ಹಿಂದುಳಿಯಲು ಪ್ರಮುಖ ಕಾರಣವಾಗಿದೆ.

ಈ ಸಮುದಾಯದವರು ಕೆಲವು ಕುಟುಂಬಗಳು ನೆಲೆನಿಂತ ಸ್ಥಳ ಅಥವಾ ಊರಿನಲ್ಲಿ ಚುನಾವಣೆಗೆ ಸ್ಪರ್ಧಿಸಿದರೂ ಜಯಗಳಿಸುವುದು ಬಹಳ ಕಷ್ಟಕರವಾಗಿದೆ. ಏಕೆಂದರೆ ಬುಡ್ಗ ಜಂಗಮ ಸಮುದಾಯದವರು ನೆಲೆನಿಂತ ಕೆಲವು ಊರುಗಳಲ್ಲಿ ಬೇರೆ ಅಸ್ಪೃಶ್ಯ ಸಮುದಾಯದವರು ವಾಸವಿದ್ದು, ಆ ಸಮುದಾಯಗಳ ಜನಸಂಖ್ಯೆ ಪ್ರಮಾಣ ಹೆಚ್ಚಾಗಿರುವುದರಿಂದ ಅಸ್ಪೃಶ್ಯ ಮೀಸಲಾತಿಯ ಸದಸ್ಯರ ಸ್ಥಾನದಲ್ಲಿ ಸ್ಪರ್ಧಿಸುತ್ತಾರೆ ಮತ್ತು ಈ ರೀತಿಯ ಬೇರೆ ಅಸ್ಪೃಶ್ಯ ಸಮುದಾಯದವರು ಪ್ರತಿವರ್ಷ ಗ್ರಾಮಪಂಚಾಯತಿ ಸದಸ್ಯರಾಗಿ ಆಯ್ಕೆಯಾಗುತ್ತಾರೆ. ಈ ಸಮುದಾಯದವರಿಗೆ ರಾಜಕೀಯ ಪ್ರಾಬಲ್ಯ ಇಲ್ಲದಿರುವುದರಿಂದ ಆರ್ಥಿಕ ಅಭಿವೃದ್ಧಿಯಲ್ಲಿ ಹಿಂದುಳಿಯಲು ಕಾರಣವಾಗಿದೆ. ಇತ್ತೀಚಿನ ೧೦-೧೫ ವರ್ಷಗಳಿಂದಿನಿಂದ ಕೆಲವರು ಸಾರ್ವತ್ರಿಕ ಚುನಾವಣೆಗೆ ಸ್ಪರ್ಧಿಸಲು ಮುಂದಾಗಿದ್ದಾರೆ.

**ಕೋಷ್ಟಕ ೮.೬: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಪ್ರಸ್ತುತ ರಾಜಕೀಯ ಸ್ಥಿತಿ**

| ಸಾರ್ವತ್ರಿಕ ಚುನಾವಣೆ | ಹೆಸರು ಮತ್ತು ವಿಳಾಸ | ಪ್ರತಿನಿಧಿಸಿದ ಕ್ಷೇತ್ರ | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ಗ್ರಾಮ ಪಂಚಾಯಿತಿ ಸದಸ್ಯರು | ಅಶ್ವ ಜಮ್ಮನ್ನ ಗುಡಾರ ನಗರ, ಪಾಪಮ್ಮ ಗಂಡ ಅಂಬಣ್ಣ ಹಳೇಕೋಟೆ-೬೪, ಅಶ್ವ ಪೆದ್ದ ಮಾರೆಕ್ಕ ಸೋಮಲಾಪುರ ಮತ್ತು ವಿ ರಾಮುಡು ಹಳೆದರೋಜಿ. | ಗುಡಾರ ನಗರ, ಹಳೇಕೋಟೆ-೬೪ ೫ನೇವಾರ್ಡ್, ಸೋಮಲಾಪುರ, ಹಳೇದರೋಜಿ ೪ನೇವಾರ್ಡ್, | ೨ | ೩ | ೫ |

| | | | | | |
|---|---|---|---|---|---|
| ಗ್ರಾಮ ಪಂಚಾಯಿತಿ ಅಧ್ಯಕ್ಷರು | ಬಿ ವಿ ರಾಮುಲಮ್ಮ ಗಂಡ ಯಲ್ಲಪ್ಪ, ಸಿದ್ದಪ್ಪ ನಗರ. | ಹಳೇಕೋಟೆ-೬೪, | ೦ | ೧ | ೧ |
| ತಾಲೂಕು ಪಂಚಾಯಿತಿ ಸದಸ್ಯರು | ಶಂಕರಪ್ಪ ಯಡವಲಿ ಹಳೇಕೋಟೆ-೬೪, ಮಹಾಲಕ್ಷ್ಮಿ ಗಂಡ ಬಲಗೊಲ್ಲ ಜಂಮನ್ನ, ಗುಡಾರ ನಗರ. | ಹಳೇಕೋಟೆ-೬೪ ಮತ್ತು ಶ್ರೀಧರಗಡ್ಡೆ | ೧ | ೧ | ೨ |
| **ಒಟ್ಟು** | – | – | ೩ | ೫ | ೮ |

ಕೋಷ್ಟಕ ೮.೬: ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಪ್ರಸ್ತುತ ರಾಜಕೀಯ ಸ್ಥಿತಿಯನ್ನು ವಿವರಿಸಲಾಗಿದೆ. ಬುಡ್ಗ ಜಂಗಮ್ ಸಮುದಾಯದಲ್ಲಿ ಸಂವಿಧಾನಬದ್ದ ಮೀಸಲಾತಿಯಿಂದ ಇತ್ತೀಚಿನ ದಿನಗಳಲ್ಲಿ ಚುನಾವಣೆಗೆ ಸ್ಪರ್ಧಿಸುತ್ತಿರುವುದು ಬೆಳವಣಿಗೆಗೆ ಆಶದಾಯಕವಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ಎಂಟುಜನ ಸಾರ್ವತ್ರಿಕ ಚುನಾವಣೆಗೆ ಸ್ಪರ್ಧಿಸಿ ವಿಜೇತರಾಗಿದ್ದಾರೆ. ಅದರಲ್ಲಿ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಅಶ್ವ ಜಮ್ಮನ್ನ ಗುಡಾರ ನಗರ, ಪಾಪಮ್ಮ ಗಂಡ ಅಂಬಣ್ಣ ಹಳೇಕೋಟೆ-೬೪, ಅಶ್ವ ಪೆದ್ದಮಾರೆಕ್ಕ ಸೋಮಲಾಪುರ ಮತ್ತು ವಿ ರಾಮುಡು ಹಳೆದರೋಜಿ. ಬಿ ವಿ ರಾಮುಲಮ್ಮ ಗಂಡ ಯಲ್ಲಪ್ಪ, ಸಿದ್ದಪ್ಪ ನಗರ, ಒಟ್ಟು ೨ ಜನ ಪುರುಷರು, ೪ ಜನ ಮಹಿಳೆಯರಾಗಿದ್ದು, ಒಬ್ಬರು ಹಳೇಕೋಟೆ-೬೪ ಗ್ರಾಮ ಪಂಚಾಯಿತಿ ಅಧ್ಯಕ್ಷರಾಗಿದ್ದಾರೆ. ತಾಲೂಕು ಪಂಚಾಯಿತಿ ಚುನಾವಣೆಯಲ್ಲಿ ಮಹಾಲಕ್ಷ್ಮಿ ಗಂಡ ಬಲಗೊಲ್ಲ ಜಂಮನ್ನ ಗುಡಾರ ನಗರ, ಶಂಕರಪ್ಪ ಯಡವಲಿ ಹಳೇಕೋಟೆ-೬೪, ಒಟ್ಟು ಒಬ್ಬರು ಪುರುಷರು, ಒಬ್ಬರು ಮಹಿಳೆಯರು ತಾಲೂಕು ಪಂಚಾಯಿತಿ ಸದಸ್ಯರಾಗಿದ್ದಾರೆ. ಜಿಲ್ಲಾ ಪಂಚಾಯಿತಿಯಲ್ಲಿ ಇನ್ನೂ ಯಾರು ಚುನಾವಣೆಗೆ ಸ್ಪರ್ಧಿಸಿಲ್ಲ ಮತ್ತು ಅವಕಾಶಗಳು ಇಲ್ಲದಾಗಿದೆ. ಸ್ಪರ್ಧಿಸಲು ಬೇಕಾದ ಹಣದ ಬಲ ಅಥವಾ ಹಿಂದಿನ ರಾಜಕೀಯ ಬಲ, ಜನಬಲ ಇಲ್ಲದಿರುವುದರಿಂದ ಜಿಲ್ಲಾ ಪಂಚಾಯಿತಿ ಹಾಗೂ ಶಾಸಕ ಸ್ಥಾನಕ್ಕೆ ಚುನಾಣೆಗೆ ನಿಲ್ಲಲ್ಲು ಸಾಧ್ಯವಾಗಿಲ್ಲ. ಸ್ವತಂತ್ರ ಬಂದು ೭೦ ವರ್ಷಗಳು ಕಳೆದರೂ ಇನ್ನೂ ರಾಜಕೀಯವಾಗಿ ಸಬಲರಾಗಿರುವುದಿಲ್ಲ.

ಒಟ್ಟಾರೆಯಾಗಿ ಅಲೆಮಾರಿ ಅರೆ-ಅಲೆಮಾರಿ ಸೂಕ್ಷ್ಮ ಅತಿಸೂಕ್ಷ್ಮ ಸಮುದಾಯವಾದ ಬುಡ್ಗ ಜಂಗಮರು ಸಾಮಾಜದ ಮುಖ್ಯವಾಹಿನಿಯಿಂದ ದೂರ ಉಳಿದು ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಿಂದುಳಿದು, ಪಾರಂಪರಿಕವಾಗಿ ತಮ್ಮದೇಯಾದ ವೇಷ, ಕಥೆ, ಬೇಟೆ, ಒಳಾಡಳಿತ ವ್ಯವಸ್ಥೆ, ಬಿಡಾರ(ಕಟ್ಟೆಮನೆ)ಗಳನ್ನು ಹೊಂದಿ ಪಾರಂಪರಿಕ ಕುಲಪಂಚಾಯಿತಿ ಅವಲಂಬಿಸಿಕೊಂಡು ಜೀವಿಸುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಅನ್ಯ ಸಮುದಾಯ ಹಾಗೂ ಆಧುನಿಕತೆ ಪ್ರಭಾವದಿಂದ ತಮ್ಮ ಮಕ್ಕಳಿಗೆ ಶಿಕ್ಷಣ ನೀಡಲು ಮುಂದಾಗಿದ್ದಾರೆ. ಮತ್ತು ಸಂವಿಧಾನ ಮೀಸಲಾತಿಯಿಂದ ರಾಜಕೀಯ ಕ್ಷೇತ್ರದಲ್ಲಿ ಸ್ಪರ್ಧಿಸಲು ಪ್ರಯತ್ನಿಸುತ್ತಿದ್ದಾರೆ.

# ಅಧ್ಯಾಯ ಒಂಭತ್ತು
# ಸಮಸ್ಯೆ, ಸಂಘಟನೆ ಮತ್ತು ಹೋರಾಟ

## ಅಧ್ಯಾಯ ಒಂಭತ್ತು
## ಸಮಸ್ಯೆಗಳು, ಸಂಘಟನೆ ಮತ್ತು ಹೋರಾಟ

**ಪೀಠಿಕೆ**

ಯಾವುದೇ ಸಮಾಜದ ಸಂಸ್ಕೃತಿಯು ಸ್ಥಿರವಾಗಿ ಇರುವುದಿಲ್ಲ. ಬದಲಾವಣೆಯ ಪ್ರಕ್ರಿಯೆಗೆ ಒಳಗಾಗುತ್ತದೆ. ಒಂದು ಸಮಾಜದಿಂದ ಮತ್ತೊಂದು ಸಮಾಜಕ್ಕೆ ಪ್ರಸರಣವಾಗುತ್ತದೆ. ಇತರೆ ಸಮಾಜಗಳ ಸಾಂಸ್ಕೃತಿಕ ಅಂಶಗಳಿಂದ ಪ್ರಭಾವ ಹೊಂದುತ್ತಿರುತ್ತದೆ. ಹೊಸಪೀಳಿಗೆಯು ಹಿಂದಿನ ಪೀಳಿಗೆಯಿಂದ ಗಳಿಸಿದ ಸಾಂಸ್ಕೃತಿಕಾಂಶಗಳ ಜೊತೆಗೆ ಇತರೆ ಅಂಶಗಳನ್ನು ಸೇರಿಸಿಕೊಳ್ಳುತ್ತಾ ಅಥವಾ ಬದಲಾಯಿಸುತ್ತಿರುತ್ತಾರೆ. ಹೀಗೆ ಸಂಸ್ಕೃತಿಯು ಪರಿವರ್ತನಾಶೀಲತೆಯಿಂದ ಮುಂದುವರೆಯುತ್ತಿರುತ್ತದೆ. ಪರಿವರ್ತನೆ ಜಗದ ನಿಯಮ, ಈ ಪರಿವರ್ತನೆಯಲ್ಲಿ ಸಂಸ್ಕೃತಿಯು ಒಂದು ಭಾಗವಾಗಿ ಕಾಲ ಮತ್ತು ಪ್ರದೇಶಗಳಿಗೆ ತಕ್ಕಂತೆ ಸ್ಥಿತ್ಯಂತರಕ್ಕೆ ಒಳಗಾಗುವುದನ್ನು ಕಾಣಬಹುದು. ಆದಿಮಾನವನಿಂದ ರೂಪಿತವಾದ ಇಂದಿನ ಸಮಾಜವು ಆಧುನಿಕ ಪ್ರಪಂಚದ ಸ್ಥಿತ್ಯಂತರಕ್ಕೆ ಕಾರಣವಾಗಿದೆ. ಈ ಸ್ಥಿತ್ಯಂತರವು ಹಲವು ರೂಪಾಂತರಗಳಿಗೆ ಕಾರಣವಾಗಿ ಕುಟುಂಬ, ಸಮುದಾಯ, ಸಮೂಹ, ಸಮಾಜವಾಗಿರುವುದು ಕಾಣಬಹುದು. "ಭಾರತೀಯ ಚರಿತ್ರೆಯನ್ನು ಅವಲೋಕಿಸಿದಾಗ ನಾಗರೀಕತೆಯ ಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ಅಲೆಮಾರಿ ಸಮುದಾಯಗಳು ಕೆಲವೊಂದನ್ನು ಕಳೆದುಕೊಳ್ಳುತ್ತಾ ಕೆಲವೊಂದನ್ನು ಸೇರಿಸಿಕೊಳ್ಳುತ್ತಾ ಒಂದು ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದುನ್ನು ಕಾಣಬಹುದು"[೧]. ಅದೇರೀತಿಯಾಗಿ ತಮ್ಮದೇಯಾದ ವಿಶಿಷ್ಟ ಬದುಕನ್ನು ಸಾಗಿಸುತ್ತಾ ಬಂದಿರುವ ಅಲೆಮಾರಿ ಬುಡ್ಗ ಜಂಗಮರು ಇಂದು ಮುಂದುವರಿಸಿಕೊಳ್ಳಲು ಆಗದೇ ಹೊಸ ಸಂಸ್ಕೃತಿಯನ್ನು ಸ್ವೀಕರಿಸಿಕೊಳ್ಳಲಾಗಿದೆ ಹತ್ತು ಹಲವು ಸಮಸ್ಯೆ–ಸವಾಲುಗಳನ್ನು ಎದುರಿಸುತ್ತಾ ಜೀವನವನ್ನು ಸಾಗಿಸುತ್ತಿರುವುದು ಕಂಡುಬರುತ್ತದೆ.

**ಜಾಗತೀಕರಣ ಮತ್ತು ಬುಡ್ಗ ಜಂಗಮ್ ಸಮುದಾಯ**

ಬುಡ್ಗ ಜಂಗಮರು ಜಾಗತೀಕರಣಕ್ಕೆ ಸಿಲುಕಿ ಬೇರೆ ಬೇರೆ ಧರ್ಮಿಯರು ಅನುಸರಿಸುವ ಹಬ್ಬ–ಹರಿದಿನ, ಜಾತ್ರೆ, ಉತ್ಸವಗಳಲ್ಲಿ ಭಾಗವಹಿಸುವುದರ ಮೂಲಕ ತಮ್ಮತನವನ್ನು ಒಂದಷ್ಟು ಬಿಟ್ಟು ಅನ್ಯ ಸಂಸ್ಕೃತಿಯನ್ನು ಆಚರಿಸಲು ತೊಡಗುತ್ತಿರುವುದು ಕಾಣಬಹುದು. ಯಾವುದಾದರೂ ಅಲೆಮಾರಿ

ಸಮುದಾಯಗಳ ಅಧ್ಯಯನವನ್ನು ಕೈಗೊಳ್ಳುವಾಗ ಅವುಗಳದೇಯಾದ ವಿಶಿಷ್ಟ ಭಾಷೆ ಮತ್ತು ಸಂಸ್ಕೃತಿಗಳಿರುತ್ತವೆ. ಬುಡ್ಗ ಜಂಗಮರು ತಮ್ಮ ಭಾಷಾ ಸಂಹವನದ ಜಾಡಿನಲ್ಲಿ ತಮ್ಮ ತಮ್ಮ ವ್ಯವಹಾರಗಳನ್ನು, ವಿಶಿಷ್ಟ ಸಂಸ್ಕೃತಿಯನ್ನು ಕಾಯ್ದುಕೊಂಡು ಬಂದಿರುತ್ತಾರೆ, ಯಾವುದೇ ಸಂದರ್ಭದಲ್ಲಿ ತಮಗಾಗಲಿ, ತಮ್ಮ ಭಾಷೆ-ಸಂಸ್ಕೃತಿಗಾಗಲಿ, ಅನ್ಯಜಾತಿ ಧರ್ಮದಿಂದ ತೊಂದರೆಯಾದಾಗ ಬೇರೆ ಕಡೆಗೆ ಪಲಾಯನ ಮಾಡಿ ತಮ್ಮ ವಿಶಿಷ್ಟ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುವರು. ಆದರೆ ಪ್ರಕೃತಿ ವಿಕೋಪ, ಅತಿವೃಷ್ಟಿ, ಅನಾವೃಷ್ಟಿ ಭೂಕಂಪ ಇತ್ಯಾದಿಗಳಿಂದ ಅಲೆಮಾರಿಗಳು ಬೇರೆ ಬೇರೆ ಸ್ಥಳಗಳಿಗೆ ಪ್ರಯಾಣ ಬೆಳೆಸುವುದು ಕಾಣಬಹುದಾಗಿದೆ. ಹೀಗೆ ಪ್ರಯಾಣ ಬೆಳೆಸಿದಾಗಲೆಲ್ಲ ಅಲೆಮಾರಿಗಳ ಜೀವನ ವಿಧಾನದ ಮೇಲೆ ಅವರ ಸಂಸ್ಕೃತಿ, ಭಾಷೆಗಳ ಮೇಲೆ ಪ್ರಭಾವ ಬೀರುವುದು ಸಾಮಾನ್ಯವಾಗಿದೆ. ಜಾಗತಿಕ ಮಟ್ಟದಲ್ಲಿ ಸಂವಹನ ಭಾಷಾ ಮಾಧ್ಯಮದ ಬಳಕೆಗೆ ಸಂಬಂಧಿಸಿದಂತೆ ಬುಡ್ಗ ಜಂಗಮರು ಕೂಡ ಅನಿವಾರ್ಯವೆಂಬಂತೆ ವೃತ್ತಿ ಬದುಕಿಗಾಗಿ ತಮ್ಮ ಭಾಷೆಯ ಜೊತೆಗೆ ಅನ್ಯಭಾಷೆಯನ್ನೂ ಕಲಿಯಲು ಮತ್ತು ಮಾತಾನಾಡಲು ಪ್ರಯತ್ನಿಸಿದರು ಎನ್ನಲಾಗಿದೆ. ಮನುಷ್ಯನಿಗೆ ಯಾವುದು ಅಗತ್ಯ ಮತ್ತು ಯಾವುದು ಅನಿವಾರ್ಯವೆಂದು ಕಾಣಿಸುತ್ತದೆಯೇ ಅದನ್ನು ತಮ್ಮದಾಗಿಸಿಕೊಳ್ಳಲು ಪ್ರಯತ್ನಿಸುವುದು ಸಹಜವಾಗಿದೆ. ಅದೇ ರೀತಿಯಲ್ಲಿ ಬುಡ್ಗ ಜಂಗಮರಿಗೆ ಜಾಗತೀಕರಣದ ಹೊಸ ಅಲೆಯ ಪ್ರಭಾವದ ಹಿನ್ನೆಲೆಯಲ್ಲಿ ಸಂವಹನಕ್ಕೆ ಸಂಬಂಧಿಸಿದಂತೆ ಮರುಗು ಭಾಷೆಯ ಮೇಲೆ ಅನ್ಯಭಾಷೆಗಳ ಪ್ರಭಾವ ಬಹಳಷ್ಟಾಯಿತೆಂದು ಹೇಳಬಹುದಾಗದೆ. ಜಾಗತೀಕರಣದ ಪ್ರಭಾವದಿಂದಾಗಿ ಬುಡ್ಗ ಜಂಗಮರ ಗುರುತಿಸುವಿಕೆಯಲ್ಲಿ ಬಹುಮುಖ್ಯ ಪಾತ್ರವಹಿಸುವ ಬುಡ್ಗ ಭಾಷೆಗೆ ಅತ್ಯಂತ ದಕ್ಕೆಯಾಗಿರುವುದು ಕಂಡುಬರುತ್ತಿದೆ.

ಪ್ರಪಂಚದಲ್ಲಿ ಬಹುತೇಕ ಅಲೆಮಾರಿ ಬುಡಕಟ್ಟು ಸಮುದಾಯಗಳು ಕಾಡು, ಗುಡ್ಡ, ಬೆಟ್ಟ, ಹೊಲ ಗದ್ದೆಗಳ ಅಂಚಿನಲ್ಲಿ ಮತ್ತು ಗ್ರಾಮೀಣ ಪ್ರದೇಶದ ಊರವಲಯದಲ್ಲಿ ತಮ್ಮ ಗುಡಾರ ಗುಡಿಸಲುಗಳನ್ನು ಹಾಕಿಕೊಂಡು ಜೀವನ ಸಾಗಿಸುತ್ತಿದ್ದರು. ಪರಂಪರಾನೂಗತವಾಗಿ ಬಂದಂತ ಅಲೆಮಾರಿತನದ ಜೀವನವನ್ನು ಈಗ ಅಲೆಮಾರಿಗಳು ಬೇಕು-ಬೇಡ ಎಂಬಂತೆ ವಲ್ಲದ ಮನಸ್ಸಿನಿಂದ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಹಿಂದೆ ಇದೊಂದು ಕಾಯಕ, ಕಾಯಕವೇ ಕೈಲಾಸ ಎಂಬಂತೆ ಕಟ್ಟು ನಿಟ್ಟಾಗಿ ಪಾಲಿಸಿಕೊಂಡು ಹೋಗುತ್ತಿದ್ದ ಅಲೆಮಾರಿಗಳು ಇಂದು ಬದಲಾದ ಪರಿಸ್ಥಿತಿಗಳಿಗೆ ಒಳಗೊಳ್ಳವುದನ್ನು ಕಾಣಬಹುದಾಗಿದೆ.

ಬುಡ್ಗ ಜಂಗಮರನ್ನು ಊರ ಜನ ನೋಡುವ ದೃಷ್ಟಿಕೋನ ಬದಲಾವಣೆಯಾಗಿದೆ. ಇವರನ್ನು ಸಂಶಯದಿಂದ ನೋಡಲಾಗುತ್ತಿದೆ. ಬುಡ್ಗ ಜಂಗಮರನ್ನು ಬೇರೆಯವರು ಕನಿಕರ, ಅನುಕಂಪ, ಸಹಾಯದ ಕೊರತೆ ಕಾಣುತ್ತಿದೆ. ಪೂರ್ವಕಾಲದಲ್ಲಿ ಬುಡ್ಗ ಜಂಗಮರು ತಮ್ಮ ಊರಿನಲ್ಲಿ ವೇಷಹಾಕಿಕೊಂಡು ಬಂದಿದ್ದಾರೆಂದರೆ ಸಾಕು ಊರ ಜನತೆ ಅವರಿಗೆ ನೀರು ಹಾಕಿ ನಮಸ್ಕರಿಸಿ ಮೊರ ತುಂಬಾ ದವಸಧನ್ಯಗಳನ್ನು ಕೊಟ್ಟು ಕಳಿಸುತ್ತಿದ್ದರು. ಆದರೆ ಇಂದು ಇಂತಹ ದೃಶ್ಯಗಳು

ಕಣ್ಣಿಗೆ ಕಾಣುವುದು ಕಡಿಮೆಯಾಗಿದೆ. ಆದರೆ ಇಂದು ಜಾಗತೀಕರಣದಿಂದ ಮತ್ತು ಶಿಕ್ಷಣದ ಹೊಸ ನೀತಿಗಳಿಂದ ಅವರು ಒಂದು ಕಡೆಗೆ ನೆಲೆನಿಂತು ಜೀವನ ಸಾಗಿಸುವ ಹಂಬಲವನ್ನು ಪ್ರಯತ್ನಿಸುವುದು ಸ್ವಾಗತರ್ಹವಾಗಿದೆ.

ಬುಡ್ಗ ಜಂಗಮರಲ್ಲಿ ಹಿಂದೆ ಒಂದು ಕಾಲದಲ್ಲಿ ಭಿಕ್ಷೆ ಬೇಡುವುದು ಒಂದು ಕಾಯಕ, ವೃತ್ತಿ ಎಂಬ ಶ್ರೇಷ್ಠ ಭಾವನೆ ಇತ್ತು, ಈಗ ಭಿಕ್ಷೆ ಬೇಡುವುದು ಕಾಯಕವಲ್ಲವೆಂಬ ಭಾವನೆ ಈದೀಗ ಮೊಳೆಯುತ್ತಿರುವುದು ಕಂಡುಬರುತ್ತದೆ. ಹಾಗೆಯೇ ನಾವು ಎಷ್ಟು ದಿನ ಅಂತ ಭಿಕ್ಷೆ ಬೇಡಿ ಬದುಕೋದು ಎಂಬ ಕೀಳರಿಮೆ ಮತ್ತು ಎಷ್ಟು ಶತಮಾನಗಳ ಕಾಲ ಹೀಗೆ ಇರಬೇಕು? ಎಂಬ ಪ್ರಶ್ನೆ ಅವರನ್ನು ಕಾಡುತ್ತಿರುವುದು ಕಂಡುಬರುತ್ತದೆ.ಇವೆಲ್ಲದರ ಹಿಂದೆ ಇಂದಿನ ಆಧುನಿಕ ಜಗತ್ತಿಗೆ ಜೀವನ ನಿರ್ವಹಣೆ ತೊಂದರೆಯಾಗಿರುವುದರಿಂದ ಈ ರೀತಿಯ ಬದಲಾವಣೆಗಳು ಕಾರಣವಾಗಿದೆ.

ಪ್ರಾಚೀನ ಕಾಲದಲ್ಲಿ ಗವಿಗಳಲ್ಲಿ ವಾಸವಾಗಿದ್ದ ಅಲೆಮಾರಿಗಳು ಇಂದು ನಗರಪ್ರದೇಶದತ್ತ ಹೆಜ್ಜೆ ಹಾಕಿರುವುದು ಕಂಡುಬರುತ್ತದೆ. ಹಿಂದೆ ನಗರಸಮಾಜಕ್ಕೆ ಗಿಡಮೂಲಿಕೆ, ಔಷಧಗಳನ್ನು ಕೊಡುತ್ತಿದ್ದ ಅಲೆಮಾರಿ ಬುಡಕಟ್ಟುಗಳು ಇಂದು ಕಾಣದಾಗಿದೆ. ಇಂದು ಹೋಮಿಯೋಪತಿ ಔಷಧಗಳು ಬೃಹತ್ ಆಸ್ಪತ್ರೆಗಳು ತಂತ್ರಜ್ಞಾನ ಬೆಳವಣಿಗೆಯಿಂದ ಅಲೆಮಾರಿ ಬುಡಕಟ್ಟುಗಳು ಸಹ ಜಾಗತಿಕರಣಕ್ಕೆ ಒಳಗಾಗಿದ್ದಾರೆ ಎನ್ನಲಾಗಿದೆ. ಒಂದು ಕಾಲದಲ್ಲಿ ಸ್ವಚ್ಛಂದವಾಗಿ ಕಾಡು ಮತ್ತು ತಮ್ಮ ಪಾರಂಪರಿಕ ಕಲಾವೃತ್ತಿಗಳಿಂದ ಜೀವಿಸುತ್ತಿದ್ದ ಈ ಅಲೆಮಾರಿ ಬುಡಕಟ್ಟುಗಳು, ವಸಾಹತುಶಾಹಿಗಳು ನಡೆಸಿದ ಸಾಂಸ್ಕೃತಿಕ ಆಕ್ರಮಣಕಾರಿ ನೀತಿಗಳಿಂದಾಗಿ ತಮ್ಮ ಮೂಲವನ್ನು ತೊರೆಯುಂತಾಗಿದೆ.

ಬುಡ್ಗ ಜಂಗಮರಿಗೆ ನಿಶ್ಚಿತವಾದ ಆರ್ಥಿಕ ಮೂಲ ಮತ್ತು ಅವರ ಜೀವನಕ್ಕೆ ಭದ್ರತೆಯೇ ಇಲ್ಲದಿರುವುದರಿಂದ ಇಂದಿಗೂ ಕೂಡ ಅಲೆಮಾರಿ ಅರೆಅಲೆಮಾರಿ ಸ್ಥಿತಿಯಲ್ಲಿಯೇ ಕಂಡುಬರುತ್ತಾರೆ. ಒಂದು ಕಾಲದಲ್ಲಿ ಅವರ ಜೀವನಕ್ಕೆ ಆಧಾರವಾಗಿದ್ದ ಅವರ ವೃತ್ತಿ, ಕಲೆಗಳು ಇಂದು ಅಲಕ್ಷ್ಯಕ್ಕೆ ಗುರಿಯಾಗಿವೆ. ಕಾರಣ ಜಾಗತೀಕರಣದ ಪ್ರಭಾವದಿಂದ ದೂರದರ್ಶನ, ಕಂಪ್ಯೂಟರ್, ಮೊಬೈಲ್‌ಗಳ ಕ್ರಾಂತಿಯಾಗುತ್ತಿರುವ ಈ ಶತಮಾನದಲ್ಲಿ ಅವರ ಕಲೆಗಳಿಗೆ ಪ್ರೋತ್ಸಾಹ ನೀಡುವವರು ಇಲ್ಲವಾಗಿದ್ದಾರೆ. ಸ್ಪರ್ಧಾತ್ಮಕ ಜಗತ್ತಿನಲ್ಲಿ ಜನತೆ ಹೊಸ ಹೊಸ ಸಂಶೋಧನೆ, ಆವಿಷ್ಕಾರದಲ್ಲಿ ನಾ ಮುಂದು ತಾ ಮುಂದು ಎನ್ನುತ್ತಿರುವಾಗ ಸಾಂಪ್ರದಾಯಿಕ ಕಲೆ, ಔಚಿತ್ಯಗಳಿಗೆ ಬೆಲೆ ಇಲ್ಲದಂತಾಗಿ ಅಲೆಮಾರಿಗಳ ಬದುಕಿನ ಆಧಾರ ಸ್ಥಂಭವೇ ಕುಸಿಯುತ್ತಿದ್ದು ಅವರ ಜೀವನ ಅತಂತ್ರವಾಗಿದೆ. ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ನೆಲೆಸಿರುವ ಬುಡ್ಗ ಜಂಗಮರು, ಅವರು ಅನೇಕ ಸಮಸ್ಯೆ, ಸವಾಲುಗಳು, ಕಷ್ಟ ಕಾರ್ಪಣ್ಯಗಳು ಎದುರಿಸುತ್ತಿದ್ದರೂ ಅವರ ನಂಬಿಕೆಗಳು ಮತ್ತು ಅಸಹಾಯಕತೆಗಳು ಅಭಿವೃದ್ಧಿಯಾಗಲು ಸಾಧ್ಯವಾಗುತ್ತಿಲ್ಲ. ವೃತ್ತಿ ಮತ್ತು ಪ್ರವೃತ್ತಿಗಳೆರಡೂ ಕೂಡ ಅಲೆಮಾರಿತನದಿಂದ ಕೂಡಿರುವುದರಿಂದ ಅವರು ಒಂದು ಕಡೆ ನೆಲೆ ನಿಂತು ಅಭಿವೃದ್ಧಿ ಸಾಧ್ಯವಾಗುತ್ತಿಲ್ಲ. ಇತ್ತೀಚಿಗೆ ಒಂದು ಕಡೆ ನೆಲೆನಿಲ್ಲಲು ಪ್ರಯತ್ನಿಸಿದರೂ ಅವರಿಗೆ ಆರ್ಥಿಕ ಭದ್ರತೆ ಇಲ್ಲದಿರುವುದರಿಂದ ಬದುಕು ಅತಂತ್ರವಾಗಿರುವುದು ಕಾಣಬಹುದು

**ಬುಡ್ಗ ಜಂಗಮ್ ಸಮುದಾಯದ ಸಮಸ್ಯೆಗಳು**

**ಬಡತನ:** ಬಡತನವು ರಾಷ್ಟ್ರ, ಕುಟುಂಬ ಹಾಗೂ ವ್ಯಕ್ತಿಯ ಪ್ರಗತಿಯನ್ನು ಕುಂಟಿತಗೊಳಿಸುವ ಸಮಸ್ಯೆಯಾಗಿದೆ. ಈ ಸಮುದಾಯಕ್ಕೆ ಬದುಕಲು ಸರಿಯಾದ ಭೂಮಿ ಇಲ್ಲದೇ, ನಿಶ್ಚಿವಾದ ಆರ್ಥಿಕ ಮೂಲಗಳಿಲ್ಲದೆ ಒಂದ್ಹೊತ್ತಿನ ಊಟಕ್ಕಾಗಿ ಪರಾದಾಡುತ್ತಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ೭೫೪ ಜನ ಶೇಕಡಾ ೮೮.೨% ಜನ ಬಿಪಿಎಲ್ ಪಡಿತರ ಚೀಟಿ ಹೊಂದಿದವರು ಇದ್ದಾರೆ. ಇವರಿಗೆ ಶೇಕಡಾ ೬೫% ಮನೆಗಳು ಇಲ್ಲದೇ ಅಲೆದಾಡುತ್ತಿದ್ದಾರೆ. ಶೇಕಡಾ ೮೨% ಭೂರಹಿತರಿರುವುದು ಕಂಡುಬರುತ್ತದೆ. ಹೀಗಾಗಿ ಬಡತನ ಬುಡ್ಗ ಜಂಗಮ್ ಸಮುದಾಯವನ್ನು ಭೀಕರವಾಗಿ ಕಾಡುತ್ತಿದೆ. ಹೀಗಾಗಿ ಅಲೆಮಾರಿ ಅರೆ-ಅಲೆಮಾರಿ ಸೂಕ್ಷ್ಮ ಅತಿಸೂಕ್ಷ್ಮ ಪಟ್ಟಿಯಲ್ಲಿ ಇವರನ್ನು ದಾಖಲಿಸಿದರು ಸರ್ಕಾರದ ವಿವಿಧ ಸೌಲಭ್ಯಗಳು ಸಿಕ್ಕಿರುವುದಿಲ್ಲ.

**ಮೂಲಭೂತ ಸೌಲಭ್ಯಗಳ ಕೊರತೆ:** ಬುಡ್ಗ ಜಂಗಮರು ಇಂದಿಗೂ ಅಲೆದಾಡುತ್ತಿರುವುದಕ್ಕೆ ಅವರ ಅಲೆಮಾರಿ ವೃತ್ತಿಯೇ ಕಾರಣವಾಗಿದೆ. ಆದರೆ ಇವರು ಕೆಲವು ಕಡೆ ಇತ್ತೀಚೆಗೆ ನೆಲೆನಿಲ್ಲುತ್ತಿದ್ದಾರೆ. ಆದರೆ ವಾಸಿಸಲು ಮನೆ ಇಲ್ಲ, ಉಡಲು ಬಟ್ಟೆಯಿಲ್ಲ, ತಿನ್ನಲು ಆಹಾರವಿಲ್ಲ, ನೆಲೆನಿಂತರೂ ಇವರು ನೆಲೆಸುತ್ತಿರುವ ಪ್ರದೇಶಗಳಲ್ಲಿ ರಸ್ತೆ, ನೀರು, ಚರಂಡಿ, ವಿದ್ಯುತ್ ಯಾವುದೇ ಮೂಲಭೂತ ಸೌಲಭ್ಯಗಳಿಲ್ಲದೆ ಕೊಳಚೆ ಪ್ರದೇಶಗಳಲ್ಲಿ ವಾಸ ಮಾಡುತ್ತಿದ್ದಾರೆ. ಬುಡ್ಗ ಜಂಗಮರಿಗೆ ಕೆಲವುಕಡೆ ಸರ್ಕಾರದ ಯಾವುದೇ ಯೋಜನೆಗಳು ಸರಿಯಾಗಿ ಲಭ್ಯವಾಗುತ್ತಿಲ್ಲ. ಬುಡ್ಗ ಜಂಗಮರ ಬದುಕು ಇತ್ತ ಗ್ರಾಮೀಣ ಪ್ರದೇಶದಲ್ಲಿ ನೆಲೆಸಲು ಆರ್ಥಿಕ ಮೂಲವಿಲ್ಲದೆ, ನಗರಗಳಲ್ಲಿ ಉದ್ಯೋಗ ಮಾಡುವಷ್ಟು ಬುದ್ಧಿ ಕೌಶಲ್ಯಗಳೆರಡು ಇಲ್ಲದೆ ಅತಂತ್ರರಾಗುತ್ತಿದ್ದಾರೆ.

**ಶಿಕ್ಷಣದ ಕೊರತೆ:** ಬುಡ್ಗ ಜಂಗಮರ ಶಿಕ್ಷಣದ ಮಟ್ಟ ಕೇವಲ ೪೬% ಜನರು ಸಾಕ್ಷರರಾಗಿದ್ದಾರೆ. ಉಳಿದ ಶೇಕಡಾ ೫೪% ಜನರು ಅಂದರೆ ಅರ್ಧಕ್ಕೆ ಅರ್ದ ಜನರು ಅನಕ್ಷರಸ್ಥರಾಗಿರುವುದು ಕಂಡುಬರುತ್ತದೆ. ಇವರು ಒಂದು ಕಡೆಯಿಂದ ಮತ್ತೊಂದು ಕಡೆಗೆ ಬದುಕಿಗಾಗಿ ಅಲೆಯುವದರಿಂದ ಅವರ ಮಕ್ಕಳು ಶಾಲೆಯಿಂದ ವಂಚಿತರಾಗುತ್ತಿದ್ದಾರೆ. ಅಲ್ಲದೇ ಇವರು ಒಂದು ಸ್ಥಳದಲ್ಲಿ ನೆಲೆ ನಿಂತರೂ ಸಹ ಇವರ ಮಕ್ಕಳು ಶಾಲೆಗೆ ಹೋಗಲು ಹಿಂಜರಿಯುತ್ತಾರೆ. ಕಾರಣ ಶಿಕ್ಷಕರು ಮತ್ತು ಅಲೆಮಾರಿ ಮಕ್ಕಳ ನಡುವಿನ ಸಾಂಸ್ಕೃತಿಕ, ಶೈಕ್ಷಣಿಕ ಅಂತರ ವ್ಯತ್ಯಾಸವಾಗಿದೆ. ಶಿಕ್ಷಕರ ಭಾಷೆ ಮಕ್ಕಳಿಗೆ, ಮಕ್ಕಳ ಭಾಷೆ ಶಿಕ್ಷಕರಿಗೆ ಅರ್ಥವಾಗುವುದಿಲ್ಲ. ಬುಡ್ಗ ಜಂಗಮರ ನೆಲೆಸಿರುವ ವಿವಿಧ ಪ್ರದೇಶಗಳಿಂದ ಮಕ್ಕಳು ಕಡ್ಡಾಯ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಅಷ್ಟೇ ಅಲ್ಲದೆ ಬುಡ್ಗ ಜಂಗಮರ ಮಾತೃಭಾಷೆ ಬುಡ್ಗ ಹಾಗೂ ತೆಲುಗು ಭಾಷೆಯಾದರಿಂದ ಕನ್ನಡ ಮತ್ತು ಆಂಗ್ಲ ಮಾಧ್ಯಮದಿಂದ ಬೋಧನೆ ಅರ್ಥವಾಗುವುದಿಲ್ಲ ಹಾಗಾಗಿ ಶಿಕ್ಷಣದಿಂದ ವಂಚಿತರಾಗಲು ಪ್ರಮುಖ ಕಾರಣವಾಗಿದೆ ಎನ್ನಬಹುದು. ಮತ್ತೊಂದು ಕೆಲವರು ಬೆರಳೆಣಿಕೆಯಷ್ಟು ಓದಿದ ವಿದ್ಯಾರ್ಥಿಗಳಿಗೆ ಸರ್ಕಾರಿ ಉದ್ಯೋಗ ಇಲ್ಲದೆ ವೇಷ ಹಾಕಲು ಅಥವಾ ಬೀದಿ ವ್ಯಾಪಾರ ಮಾಡಲು ಹೋಗುತ್ತಿದ್ದಾರೆ

ಹಾಗಾಗಿ ವಿದ್ಯಾರ್ಥಿಗಳು ಇವರನ್ನು ನೋಡಿ ಶಾಲೆಗೆ ಹೋಗುವವರು ಕೂಡ ಎಷ್ಟು ಓದಿದರೂ ಕೆಲಸ ಸಿಗೋದಿಲ್ಲ ಎಂದು ಅರ್ಧದಲ್ಲಿಯೇ ಶಾಲೆ ಬಿಡಿಸಿ ಭಿಕ್ಷಾಟನೆಗೆ ಕಳುಹಿಸಿಸುತ್ತಿದ್ದಾರೆ. ಇವರಲ್ಲಿ ಹೆಣ್ಣುಮಕ್ಕಳನ್ನು ಶಾಲೆಗೆ ಕಳಿಸುವುದು ತುಂಬಾ ಅಪರೂಪ, ಕೆಲವು ಪ್ರಜ್ಞಾವಂತರು ಮಾತ್ರ ಹೆಣ್ಣುಮಕ್ಕಳನ್ನು ಶಾಲೆಗೆ ಸೇರಿಸುತ್ತಿರುವುದು ಆಶಾದಾಯಕವಾಗಿದೆ. ಈ ಸಮುದಾಯವು ಶಿಕ್ಷಣದಿಂದ ಸಂಪೂರ್ಣವಾಗಿ ಹಿಂದುಳಿದಿರುವುದು ಅಂಕಿಅಂಶಗಳಿಂದ ತಿಳಿಯಬಹುದಾಗಿದೆ. ಮುಂದಿನ ಭವಿಷ್ಯದ ಭದ್ರತೆಯನ್ನು ಇಟ್ಟುಕೊಳ್ಳದ ಅಂದಿನ ದಿನಕ್ಕೆ ಏನುಬೇಕು ಅಷ್ಟು ಮಾತ್ರ ಆಲೋಚಿಸುವರು. ಈಗಾಗಿ ಇವರಲ್ಲಿ ಉನ್ನತ ಶಿಕ್ಷಣ, ಸರ್ಕಾರಿ ಕೆಲಸಗಳು ಮರೀಚಿಕೆಯಾಗಿವೆ. ಸ್ವತಂತ್ರ ಬಂದು ೭೦ ವರ್ಷಗಳು ಕಳೆದರೂ ಬಳ್ಳಾರಿ ಜಿಲ್ಲೆಯಲ್ಲಿ ಇದುವರೆಗೂ ಕೇವಲ ನಾಲ್ಕು ಜನ ಮಾತ್ರ ಸರ್ಕಾರಿ ಕೆಲಸ ಮಾಡುವುದು ಬಿಟ್ಟರೆ ಉಳಿದವರರೆಲ್ಲರೂ ನಿರುದ್ಯೋಗಿಗಳಾಗಿದ್ದಾರೆ.

**ಪಟ್ಟಣಗಳಿಗೆ ವಲಸೆ:** ಬುಡ್ಗ ಜಂಗಮರಲ್ಲಿ ಇಂದಿನ ಯುವಕರು ಪಟ್ಟಣ ನಗರಗಳಿಗೆ ಹೆಚ್ಚಾಗಿ ವಲಸೆ ಹೋಗುತ್ತಿದ್ದಾರೆ. ಪಟ್ಟಣಗಳಿಗೆ ಹೋಗಿ ಕಲೆ, ಭಿಕ್ಷಾಟನೆ ಮತ್ತು ಸಣ್ಣಪುಟ್ಟ ಬೀದಿವ್ಯಾಪಾರ ಮಾಡುತ್ತ ಜೀವನ ಸಾಗಿಸುತ್ತಿದ್ದಾರೆ. ಹಬ್ಬ, ಆಚರಣೆ, ಸಂಸ್ಕಾರದಂತಹ ವಿಶೇಷ ದಿನಗಳಲ್ಲಿ ತಮ್ಮೂರಿಗೆ ಹಿಂತಿರುಗುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಮಳೆ ಬೆಳೆ ಇಲ್ಲದೇ ಜನರ ಗುಳೆ ಹೋಗುವ ಸಂಕಷ್ಟವನ್ನು ಮನಗೊಂಡು ಪಟ್ಟಣಗಳಿಗೆ ಹೋಗುತ್ತಿರುವುದು ಇವರ ಮಾನವೀಯ ದೃಷ್ಟಿಯನ್ನು ಕಾಣಬಹುದು. ಗ್ರಾಮೀಣ ಪ್ರದೇಶದ ಜನರು ಖುಷಿಯಾಗಿ ಇದ್ದರೆ ತಾನೆ ನಮಗೆ ಏನಾದರೂ ದಾನಧರ್ಮ ಮಾಡೋರು, ಅವರಿಗೆ ತಿನ್ನೋಕೆ ಇಲ್ಲದಿದ್ದರೆ ನಮಗೆಲ್ಲಿ ಕೊಡುತ್ತಾರೆ ಎಂಬ ಮನೋಭಾವನೆಯಿಂದ ಪಟ್ಟಣಗಳಿಗೆ ವಲಸೆ ಹೋಗುವುದು ಕಾಣಬಹುದು.

**ಬಾಲ್ಯವಿವಾಹ**: ಈ ಸಮುದಾಯವು ಹಿಂದುಳಿಯಲು ಬಹುಮುಖ್ಯ ಕಾರಣ ಬಾಲ್ಯವಿವಾಹ. ಈ ಬಾಲ್ಯವಿವಾಹವನ್ನು ಅತ್ಯಾಚಾರ ಅನಾಚಾರಗಳ ಭಯದಿಂದ ಬುಡ್ಗ ಜಂಗಮರಲ್ಲಿ ಹೆಣ್ಣು ಋತಿಮತಿಯಾಗುವ ಮುಂಚಿತವಾಗಿಯೇ ಮದುವೆಯನ್ನು ಮಾಡಿ, ಋತಿಮತಿಯಾದ ನಂತರ ೧೦-೧೨ವರ್ಷ ವಯಸ್ಸು ಇರುವಾಗಲೇ ಗಂಡನ ಮನೆಗೆ ಕಳಿಸುತ್ತಾರೆ ಹೀಗಾಗಿ ಈ ಸಮುದಾಯದ ಹೆಣ್ಣಮಕ್ಕಳು ಸಂಪೂರ್ಣವಾಗಿ ಶಿಕ್ಷಣದಿಂದ ವಂಚಿತರಾಗಿದ್ದಾರೆ. ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಸಮುದಾಯದಲ್ಲಿ ಒಟ್ಟು ಗಂಡು ಹೆಣ್ಣು ೧೫೮೨ ಜನರು ವಿವಾಹವಾಗಿದ್ದಾರೆ. ವಯೋಪ್ರಮಾಣದಲ್ಲಿ ವರ್ಗೀಕರಿಸಿದಾಗ ೧೦ ರಿಂದ ೧೩ ವಯಸ್ಸಿನಲ್ಲಿ ಶೇ ೩೮.೮, ೧೪ ರಿಂದ ೧೭ ವಯಸ್ಸಿನಲ್ಲಿ ಶೇ ೫೪.೪,ಜನ ಒಟ್ಟಾರೆ ಶೇಕಡಾ ೯೩.೨% ಜನ ಬಾಲ್ಯದಲ್ಲಿ ವಿವಾಹವಾಗಿದ್ದಾರೆ. ಕಾರಣ ಸಣ್ಣ ವಯಸ್ಸಿನಲ್ಲಿಯೇ ಮದುವೆ ಮಾಡುವುರಿಂದ ಮನೆಗೆ ಆರ್ಥಿಕವಾಗಿ ಸಹಾಯವಾಗುತ್ತಾಳೆ, ಭಿಕ್ಷಾಟನೆ ಅಥವಾ ಸಣ್ಣಪುಟ್ಟ ವ್ಯಾಪಾರ ಮಾಡಿ ಕುಟುಂಬಕ್ಕೆ ನೆರವಾಗುತ್ತಾಳೆ ಎಂಬ ಉದ್ದೇಶದಿಂದ ಹಿರಿಯರ ಕಾಲದಿಂದಲೂ ಬಾಲ್ಯವಿವಾಹವನ್ನು ಅನುಸರಿಸುತ್ತಿದ್ದಾರೆ. ಇಂದಿಗೂ ಕೂಡ ಪ್ರಾಥಮಿಕ ಶಾಲಾ ಶಿಕ್ಷಣ ಪಡೆಯುತ್ತಿರುವ ಮಕ್ಕಳಿಗೆ ರಾತ್ರೋರಾತ್ರಿ ಬಾಲ್ಯವಿವಾಹ ಮಾಡಿ ಗಂಡನ ಮನೆಗೆ ಕಳುಸುತ್ತಿರುವುದು

ಕಾಣಬಹುದು. ಇದರಿಂದ ಈ ಒಂದು ಸಮಸ್ಯೆ ಬುಡ್ಗ ಜಂಗಮರ ಮಕ್ಕಳ ಶಿಕ್ಷಣಕ್ಕೆ ಮತ್ತು ಅವರ ಅಭಿವೃದ್ಧಿಗೆ ಮಾರಕವಾಗಿದೆ.

**ಕಲಾಪ್ರದರ್ಶನದ ಪ್ರಸ್ತುತ ಸಮಸ್ಯೆ ಸವಾಲುಗಳು:** ಕರ್ನಾಟಕದ ರಾಜ್ಯಾದ್ಯಾಂತ ಇರುವ ಅಲೆಮಾರಿ ಬುಡ್ಗ ಜಂಗಮ್ ಸಮುದಾಯವು ಕಲೆಯನ್ನು ನಂಬಿ, ಕಲೆಯನ್ನೇ ಉಸಿರಾಗಿಸುಕೊಂಡು ಜೀವನವನ್ನು ಮಾಡುತ್ತ ಬಂದಿದ್ದಾರೆ. ಇವರ ಕಲೆಯು ರಾಮಾಯಣ, ಮಹಾಭಾರತ, ಭಾಗವತ, ಐತಿಹಾಸಿಕ, ಸಾಮಾಜಿಕ ಸನ್ನಿವೇಷಗಳನ್ನು ಒಳಗೊಂಡಿದ್ದು, ವಿವಿಧ ವೇಷಭೂಷಣಗಳನ್ನು ತೊಟ್ಟು, ನೀತಿ ಸಂದೇಶಗಳ ಮೌಲ್ಯಗಳ ಆಶಯಗಳನ್ನು ಇಟ್ಟುಕೊಂಡು ಅನೇಕ ನಾಟಕಗಳನ್ನು ಗ್ರಾಮೀಣ ಹಾಗೂ ನಗರ ಪ್ರದೇಶಗಳ ಪ್ರತಿ ಮನೆಮನೆಗೆ ತೆರಳಿ ಪ್ರದರ್ಶನ ನೀಡುತ್ತಾ ಜನರಿಗೆ ಮನರಂಜನೆ ನೀಡುತ್ತಿದ್ದಾರೆ. ಈ ಕಲೆಗಳು ಅವನತಿಯ ಹಂಚಿನಲ್ಲಿರುವ ಕಾರಣ ಇದರ ಉಳಿವಿಗಾಗಿ ಶ್ರಮಿಸುತ್ತಿದ್ದಾರೆ. ಒಂದು ಕಡೆ ದಟ್ಟದಾರಿದ್ರ್ಯಾದ ಬಡತನದ ನೋವು, ಮತ್ತೊಂದು ಕಡೆ ಈ ಕಲೆಯೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿದ್ದು, ಇದನ್ನು ಮುಂದಿನ ಪೀಳಿಗೆಗೂ ಕಾಪಾಡಿಕೊಳ್ಳಬೇಕೆಂಬ ಹಂಬಲ ಇವರದಾಗಿದೆ. ಕರ್ನಾಟಕದ ಬಹುತೇಕ ಕಲಾವಿದರ ಬದುಕು ಬಡತನದ ಬವಣೆಯಲ್ಲಿ ಕಮರಿ ಹೋಗುತ್ತಿದ್ದಾರೆ. ಕರ್ನಾಟಕದಲ್ಲಿ ಎಷ್ಟೋ ಬಡ ಕಲಾವಿದರು ಎಲೆಮರೆಯ ಕಾಯಿಯಂತೆ ಇದ್ದು ತಮ್ಮ ಕಲೆಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಇಂತಹ ಅಪರೂಪದ ಕಲೆಯ ಉಳಿವಿಗಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟಿದ್ದಾರೆ. ಬಡತನದ ಬೇಗೆಯಲ್ಲಿಯೂ ತಮ್ಮಲ್ಲಿರುವ ಕಲೆಯ ಪಾಂಡಿತ್ಯಕ್ಕೆ ಚ್ಯುತಿಯಾಗದ ರೀತಿಯಲ್ಲಿ ಅದನ್ನು ಪೋಷಿಸಿಕೊಂಡು ಬಂದಿದ್ದಾರೆ.

ಕನ್ನಡ ಭಾಷೆ ಮತ್ತು ಕಲೆ ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ಸರ್ಕಾರವು ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಇನ್ನೀತರ ಇಲಾಖೆಗಳಿಗೆ ಕೋಟಿಗಟ್ಟಲೆ ಹಣವನ್ನು ವ್ಯಯ ಮಾಡುತ್ತಿದೆ. ಆದರೆ ಅಲ್ಲಿನ ಅಧಿಕಾರಿಗಳು ಮೂಲ ಕಲಾವಿದರಿಗೆ ಮತ್ತು ವೃತ್ತಿಮೂಲ ಕಲಾವಿದರಿಗೆ ಯಾವುದೇ ಯೋಜನೆಗಳನ್ನು ರೂಪಿಸದೇ ಹವ್ಯಾಸಿ ಕಲಾವಿದರಿಗೆ ತಮಗೆ ಬೇಕಾದವರಿಗೆ, ರಾಜಕೀಯ ಪ್ರಭಾವವುಳ್ಳವರಿಗೆ ರಾಷ್ಟ್ರೀಯ ಅಂತರಾಷ್ಟ್ರೀಯ ಕಾರ್ಯಕ್ರಮಗಳ ಅವಕಾಶಗಳನ್ನು ನೀಡುತ್ತಿದ್ದಾರೆ. ಸರ್ಕಾರದ ಯೋಜನೆಗಳು, ಕಾರ್ಯಕ್ರಮಗಳು, ಸೌಲಭ್ಯಗಳು ಇವರಿಗೆ ಸರಿಯಾಗಿ ಸಿಗುತ್ತಿಲ್ಲ. ಈ ಕಲಾವಿದರಿಗೆ ಯಾವುದೇ ರೀತಿಯ ಯೋಜನೆಗಳು ಕೈಗೊಂಡಿರುವುದಿಲ್ಲ. ಸರ್ಕಾರಿ ಯೋಜನೆಗಳನ್ನು ಪಡೆಯುವಲ್ಲಿ ಅಲೆಮಾರಿ ಬುಡ್ಗ ಜಂಗಮ್ ಕಲಾವಿದರು ವಂಚಿತರಾಗಿದ್ದಾರೆ.

ಬುರ್ರಕಥಾ, ಹಗಲುವೇಷದ ವಿವಿಧ ರೂಪಕಗಳು, ಜನಪದ ಸಂಗೀತ, ಸುಗಮ ಸಂಗೀತ, ವಚನ ಸಂಗೀತ ಮುಂತಾದ ಕಲೆಗಳನ್ನು ವೇದಿಕೆಯಲ್ಲಿ ಪ್ರದರ್ಶನ ನೀಡುವ ಕಲೆಯಾದರೂ ಬೇಕಾಬಿಟ್ಟಿಯಾಗಿ ಅಲೆಮಾರಿ ಕಲೆಗಳನ್ನು ಮೆರವಣಿಗೆಗೆ ಮತ್ತು ರಾಜಕಾರಣಿಗಳ ಸ್ವಾಗತಕ್ಕೆ ಬಳಸಿಕೊಳ್ಳಲಾಗುತ್ತಿದೆ. ಒಂದು ಕಾಲದಲ್ಲಿ ರಾಜ ಮಹಾರಾಜರ ಆಸ್ಥಾನದಲ್ಲಿ ಮನ್ನಣೆ ಪಡೆದು

ಹಾಗೂ ಪೋಷಣೆಯಲ್ಲಿ ಬೆಳೆದಿದ್ದ ಈ ಕಲೆಗಳು ಇಂದು ಬೀದಿ ಕಲಾವಿದರನ್ನಾಗಿಸಿ ಅತ್ಯಂತ ಹೀನಾಯವಾಗಿ ಕಾಣಲಾಗುತ್ತಿದೆ. ಪ್ರದರ್ಶನ ನೀಡಲು ಸರಿಯಾದ ಕಾರ್ಯಕ್ರಮಗಳು ಇಲ್ಲದೇ ಒಂದ್ಹೊತ್ತಿನ ಊಟಕ್ಕಾಗಿ ಅನ್ಯ ಕಸುಬುಗಳಾದ ಪ್ಲಾಸ್ಟಿಕ್, ಸ್ಟೀಲ್ ಪಾತ್ರೆಗಳನ್ನು, ಬಟ್ಟೆಗಳನ್ನು, ದಿನನಿತ್ಯ ಬಳಸುವ ಸಾಮಾಗ್ರಿಗಳನ್ನು ಬೀದಿಯಲ್ಲಿ ಮಾರಾಟ ಮಾಡುತ್ತಿರುವುದನ್ನು ಕಾಣಬಹುದಾಗಿದೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಲೆ, ಸಂಸ್ಕೃತಿ ಉಳಿಸುವ ವಿಶೇಷ ಯೋಜನೆಯಾದ 'ಜಾನಪದ ಜಾತ್ರೆ' ಎಂಬ ವಿಶಿಷ್ಠ ಕಾರ್ಯಕ್ರಮದಲ್ಲಿ ಈ ಕಲೆಯ ಕಲಾವಿದರಿಗೆ ತರಬೇತಿ ನೀಡಿ ರಾಜ್ಯಾದದ್ಯಾಂತ ಪ್ರದರ್ಶನ ನೀಡುವ ಅವಕಾಶ ನೀಡಿದ್ದರು. ಹಂಪಿ ಉತ್ಸವದಲ್ಲಿ ಅಲೆಮಾರಿ ಕಲಾವಿದರ ಪ್ರದರ್ಶನ ಎಂಬ ಪ್ರತ್ಯೇಕ ವೇದಿಕೆ ನಿರ್ಮಿಸಿ ಅಲೆಮಾರಿ ಕಲಾವಿದರಿಗೆ ಪೂರ್ಣಪ್ರಮಾಣದ ತಮ್ಮ ಕಲೆಯನ್ನು ಪ್ರದರ್ಶನ ನೀಡಲು ಅವಕಾಶ ಮಾಡಲಾಗಿತ್ತು. ಆದರೆ ಇಂದು ಈ ಯೋಜನೆಗಳು ಉಳ್ಳವರ ಪಾಲಾಗಿಬಿಟ್ಟಿದೆ. ಅಲೆಮಾರಿ ಪ್ರದರ್ಶಕ ಕಲೆಗಳನ್ನು ಕೇವಲ ಮೆರವಣಿಗೆಗೆ ಮತ್ತು ರಾಜಕಾರಣಿಗಳನ್ನು ಸ್ವಾಗತ ಮಾಡಲು ಮಾತ್ರ ಸೀಮಿತ ಮಾಡಿ ಬೀದಿ ಕಲಾವಿದರನ್ನಾಗಿ ಅತ್ಯಂತ ಶೋಚನೀಯವಾಗಿ ಕಾಣಲಾಗುತ್ತಿದೆ. ಹೀಗೆ ಅನೇಕ ಕಲಾವಿದರು ತಮಗೆ ಪ್ರದರ್ಶನ ನೀಡಲು ಕಾರ್ಯಕ್ರಮಗಳು ಇಲ್ಲದೇ ಇತ್ತ ಬೇರೆ ಬದುಕು ತಿಳಿಯದೇ ಒಂದ್ಹೊತ್ತಿನ ಊಟಕ್ಕಾಗಿ ಪರದಾಡುತ್ತಾ ನೊಂದುಕೊಳ್ಳುತ್ತಿದ್ದಾರೆ. ಅವರಂತೆ ನಮಗೆ ಹೊಟ್ಟೆ ಇದೆ, ಬದುಕು ಇದೆ, ಒಂದ್ಹೊತ್ತಿನ ಊಟ ಮಾಡೋದು ಹೇಗೆ? ನಮ್ಮ ಮಕ್ಕಳ ಶಿಕ್ಷಣ ಹೇಗೆ ಸ್ವಾಮಿ ಎಂದು ಎಂಬ ಪ್ರಶ್ನೇ ಪ್ರಶ್ನೇಯಾಗಿಯೇ ಉಳಿದಿದೆ. ಶಿಷ್ಟ ಹಾಗೂ ಹವ್ಯಾಸಿ ಕಲಾವಿದರಿಗೆ ಸಿಗುವ ರಾಷ್ಟ್ರೀಯ ಅಂತರಾಷ್ಟ್ರೀಯ ಕಾರ್ಯಕ್ರಮಗಳು ಇವರಿಗೆ ಸಿಗಬೇಕಾಗಿದೆ. ಸಾಮಾಜಿಕ ನ್ಯಾಯದಡಿಯಲ್ಲಿ ಸಿಗಬೇಕಾದ ಎಲ್ಲಾ ಕಲಾವಿದರಿಗೆ ಸರ್ಕಾರಿ ಯೋಜನೆಗಳು, ಕಾರ್ಯಕ್ರಮಗಳು, ಸೌಲಭ್ಯಗಳಲ್ಲಿ ಇವರಿಗಾಗಿ ಪ್ರತ್ಯೇಕ ಮೀಸಲಿಟ್ಟು ಅವರ ಕಲೆ ಮತ್ತು ಕಲಾವಿದರನ್ನು ಉಳಿಸಿ ಬೆಳೆಸಬೇಕಾಗಿದೆ.

ಇತ್ತೀಚಿಗೆ ಸರ್ಕಾರವು ಇಂತಹ ಕಲೆಗಳನ್ನು ಜೀವಂತಗೊಳಿಸಬೇಕೆಂಬ ದೃಷ್ಟಿಯಿಂದ ಅಪರೂಪದ ಕಲೆಗಳು ಹಾಗೂ ಕಲಾವಿದರ್ನು ಗುರುತಿಸಿ ಸಹಾಯಧನ ನೀಡುವ ಮೂಲಕ ಕಲಾವಿದರಿಗೆ ಪ್ರೋತ್ಸಾಹ ನೀಡುವ ಕಾರ್ಯ ಉದ್ದೇಶಗಳನ್ನು ಇಟ್ಟುಕೊಂಡಿದೆ. ಪ್ರಸ್ತುತದಲ್ಲಿ ಸರ್ಕಾರವು ಸಂಗೀತ, ಪ್ರದರ್ಶನ ಕಲೆಗಳನ್ನು ಕಾಪಾಡುವ ಮತ್ತು ಅವುಗಳನ್ನು ಸಂರಕ್ಷಿಸುವ ಉದ್ದೇಶದಿಂದ ಪ್ರತ್ಯೇಕವಾಗಿ ಸಂಗೀತ, ಜಾನಪದ ವಿಶ್ವವಿದ್ಯಾಲಯಗಳನ್ನು ಪ್ರಾರಂಭಿಸಿವೆ. ಆದರೆ ಅವರ ಉದ್ದೇಶಗಳು ಎಷ್ಟರ ಮಟ್ಟಿಗೆ ಈ ಅಲೆಮಾರಿಗಳ ಅಪರೂಪದ ಕಲೆಯನ್ನು ಉಳಿಸಿ ಬೆಳೆಸಿದ್ದಾರೆ ಎನ್ನವುದೇ ಅವರ ಪ್ರಶ್ನೆಯಾಗಿದೆ. ಇಂತಹ ಕ್ಷೇತ್ರದಲ್ಲಿ ಪಿಎಚ್ ಡಿ ಇನ್ನಿತರೆ ಪದವಿಗಳನ್ನು ಪಡೆದುಕೊಂಡವರು ಕಲೆಯ ಪರಿಷ್ಕರಣಕ್ಕೆ ಮತ್ತು ಅಭಿವೃದ್ಧಿಗೆ ಮುಂದಾಗದೆ, ತಮ್ಮ ಸುಖಭೋಗದಲ್ಲಿ ತಲ್ಲೀನರಾಗಿ ವೈಭವದ ಜೀವನವನ್ನು ನಡೆಸುತ್ತಿದ್ದಾರೆ. ಕಲಾವಿದರು ಬಡವರಾಗಿಯೇ ಉಳಿದಿದ್ದಾರೆ. ಯಕ್ಷಗಾನದಲ್ಲಿ ತೊಡಗುವ ಪ್ರತಿಯೊಬ್ಬ ಕಲಾವಿದರು ವಿದ್ವಾಂಸರಾಗಿದ್ದಾರೆ, ಹಾಗಾಗಿ ಯಕ್ಷಾಗಾನ ಕಲೆ, ಕರಾವಳಿ ಪ್ರದೇಶಗಳಲ್ಲಿ ಮುಂಚೂಣಿಯಲ್ಲಿದೆ. ಕಲೆಗೆ ಪ್ರೋತ್ಸಾಹ ಇಲ್ಲವೆಂಬ ಮಾತು ಆಡದೆ ಕಲೆಯಲ್ಲಿ ಡಾಕ್ಟರೇಟ್

ಪಡೆದವರು ಮತ್ತು ವಿದ್ವಾಂಸರು ಕನಿಷ್ಠ ಸಣ್ಣಸಣ್ಣ ಕಲಾ ತಂಡಗಳನ್ನು ರಚಿಸಿ ತರಬೇತಿ ನೀಡಿ ಕಲೆಯ ಪೋಷಣೆಗೆ ಮುಂದಾಗದಿದ್ದರೆ ಕಲೆಯು ಬಯಲಲ್ಲಿಯೇ ಬಯಲಾಗಿಬಿಡುತ್ತದೆ ಎಂದು ಖ್ಯಾತ ತೊಗಲುಗೊಂಬೆಯಾಟದ ಕಲಾವಿದ ಬೆಳಗಲ್ಲು ವೀರಣ್ಣನವರು ತಮ್ಮ ನೋವನ್ನು ವ್ಯಕ್ತಪಡಿಸಿದ್ದಾರೆ. ವಿಶ್ವವಿದ್ಯಾಲಯಗಳಲ್ಲಿ ಕೇವಲ ಅಕಾಡೆಮಿಕ್‌ಯಾದ ಪಠ್ಯಕ್ರಮ ಆಧಾರಿತ ಸಂಗೀತ ಶಿಕ್ಷಣ ನೀಡುತ್ತಿವೆ. ಇಲ್ಲಿ ಈ ಅಕಾಡೆಮಿಕ್ ಪಠ್ಯಕ್ರಮದ ಜೊತೆಜೊತೆಯಲ್ಲಿಯೇ ವ್ಯಕ್ತಿಯ ಬದುಕಿನ ಜೊತೆಯಲ್ಲಿಯೆ ಬೆಳೆದು ಬಂದಿರುವ ಇಂತಹ ಜನಪದ ಸಂಗೀತ ಪ್ರದರ್ಶಕ ಕಲೆಗಳನ್ನು ವಿಶ್ವವಿದ್ಯಾಲಯಗಳಲ್ಲಿ ಪರಿಚಯಿಸುವುದು ಅತ್ಯಂತ ಸೂಕ್ತವಾಗುತ್ತದೆ ಮತ್ತು ಇಂತಹ ಅಪರೂಪದ ಕಲೆಯ ಮೂಲ ಕಲಾವಿದರನ್ನು ಗುರುತಿಸಿ ವಿಶ್ವವಿದ್ಯಾಲಯಗಳಲ್ಲಿ ವಿದ್ವಾಂಸರುಗಳೆಂದು ಪರಿಗಣಿಸಿ ಅವರಿಂದ ವಿದ್ಯಾರ್ಥಿಗಳಿಗೆ ತರಬೇತಿ, ವಿಚಾರ ಸಂಕಿರಣ ಮತ್ತು ಕಾರ್ಯಗಾರದಂತಹ ವಿಶೇಷ ಯೋಜನೆಗಳನ್ನು ರೂಪಿಸಿಕೊಳ್ಳುವುದರಿಂದ ನಮ್ಮ ನಾಡಿನ ಸಂಸ್ಕೃತಿ, ಕಲೆ ಮತ್ತು ಕಲಾವಿದ ಉಳಿಯಲಿಕ್ಕೆ ಸಾಧ್ಯವಾಗುತ್ತದೆ ಮತ್ತು ಇಂತಹ ಅಲೆಮಾರಿ ಕಲಾವಿದರಿಗೂ ಸೂಕ್ತ ನ್ಯಾಯ ಒದಗಿಸಿದಂತಾಗುತ್ತದೆ. ಅಕಾಡೆಮಿಕ್ ಜ್ಞಾನ ಶಿಸ್ತಿಗಿಂತಲೂ ಜೀವನದ ಅನುಭವದ ಮೂಲಕ ಪಡೆದ ಶಿಕ್ಷಣ ಹೆಚ್ಚು ಸಂವೇದನಾಶೀಲವಾಗಿರುತ್ತದೆ. ಇದರಿಂದ ಸಮಾಜದಲ್ಲಿ ಉತ್ತಮ ಪರಿಸರವನ್ನು ರೂಪಿಸಬಹುದಾಗಿದೆ. ಜಾಗತೀಕರಣದ ಭರಾಟೆಯಲ್ಲಿ ತಿರಸ್ಕೃತಗೊಂಡಿರುವ ದೇಶಿ ಕಲೆಗಳೂ ಮತ್ತೆ ಜೀವ ನೀಡಿದಂತಾಗುತ್ತದೆ. ಇದರಿಂದ ಕರ್ನಾಟಕದ ಅದರಲ್ಲೂ ಭಾರತದ ಸಾಂಸ್ಕೃತಿಕ ವೈಭವದ ಹಿರಿಮೆಯನ್ನು ಹೆಚ್ಚಿಸಿದ ಕಿರ್ತಿಯು ಲಭಿಸುತ್ತದೆ.

**ಬುಡ್ಗ ಜಂಗಮರ ಬದುಕಿಗೆ ತೊಡಕ್ಕಾಗಿರುವ ಸರ್ಕಾರದ ಕಾನೂನುಗಳು, ಕಾಯ್ದೆ, ನೀತಿಯೋಜನೆಗಳು:** ನಿಸರ್ಗದಲ್ಲಿ ತಮ್ಮದೇಯಾದ ಆಚಾರ ವಿಚಾರ, ಸಂಪ್ರದಾಯ, ಉಡುಗೆ ತೊಡುಗೆ, ಆಹಾರ ಪದ್ಧತಿಗಳನ್ನು ಅವಲಂಬಿಸಿ ಜೀವನ ಸಾಗುಸುತ್ತಿದ್ದ ಅಲೆಮಾರಿ ಬುಡಕಟ್ಟುಗಳು. ಸರ್ಕಾರವು ಅಭಿವೃದ್ಧಿಯ ಹೆಸರಿನಲ್ಲಿ ಇವರ ಅಭಿವೃದ್ಧಿಯ ಬದಲಾಗಿ ಅವರ ಬದುಕುವ ಹಕ್ಕುಗಳಿಗೆ ವಿರೋಧವಾಗಿ ಕಾನೂನು, ಕಾಯ್ದೆ ಯೋಜನೆಗಳನ್ನು ಜಾರಿ ಮಾಡಿ ಸಮುದ್ರದ ಮೀನನ್ನು ದಡೆಗೆ ಹಾಕಿದಂತೆ ವಿಲವಿಲ ವದ್ದಾಡುವಂತೆ ಮಾಡಿದೆ. ಈ ಕಾನೂನು ಕಾಯ್ದೆಗಳಿಂದ ಅನೇಕ ಸಮುದಾಯಗಳು ಬೀದಿಪಾಲಗಿ ಭಿಕ್ಷಾಟನೆಗೆ ಮಾಡಿ ಜೀವಿಸಬೇಕಾದ ಪರಿಸ್ಥಿತಿಯನ್ನು ನಿರ್ಮಾಣವಾಗಿದೆ. ಉದಾ: ಬೇಟೆಗಾರಿಕೆ ನಿಷೇಧ, ಭಿಕ್ಷಾಟನೆ ನಿಷೇಧ ಕಾಯ್ದೆ ಇತ್ಯಾದಿ.

**ಬೇಟೆಗಾರಿಕೆ ನಿಷೇಧ ಕಾನೂನು:** ಬೇಟೆಯ ಕಾನೂನುಗಳು ಬೇಟೆ ಮೂಲದ ಬುಡಕಟ್ಟು ಸಮುದಾಯಗಳ ಬದುಕಿಗೆ ಅವರ ಪಾರಂಪರಿಕವಾದ ತಿನ್ನುವ ಹಕ್ಕುನ್ನು ಕಸಿದುಕೊಂಡಂತಾಗಿದೆ. ೧೯೫೪ ಕರ್ನಾಟಕ ಪ್ರಾಣಿಬಲಿಗಳ ಪ್ರತಿಬಂಧಕ ಅಧಿನಿಯಮ, ೧೯೬೩ ಮತ್ತು ೧೯೭೮ರ ಕರ್ನಾಟಕ ಅರಣ್ಯ(ತಿದ್ದುಪಡಿ) ಅಧಿನಿಯಮ ೧೯೭೨ ವನ್ಯಜೀವಿ ಸಂರಕ್ಷಣಾ ಅಧಿನಿಯಮ, ೧೯೭೬ರ ಕರ್ನಾಟಕ ಮರಗಳು ಸಂರಕ್ಷಣಾ ಅಧಿನಿಯಮ, ಭಾರತ ಮೀನುಗಾರಿಕೆ ಅಧಿನಿಯಮ ೧೯೮೨ ಮೊದಲಾದ ಅಧಿನಿಯಮಗಳು ಬೇಟೆಯನ್ನು ತಡೆಗಟ್ಟಿ ಅರಣ್ಯ ವನ್ಯಜೀವಿಗಳ ರಕ್ಷಣೆಗೆ ಉತ್ತಮ ವಾತಾವರಣ ಕಲ್ಪಿಸಿದೆ, ಆದರೆ ಬೇಟೆಯನ್ನೇ ನಂಬಿದ ಅನೇಕ ಅಲೆಮಾರಿ ಬುಡಕಟ್ಟುಗಳ ಬದುಕು ಅತಂತ್ರವಾಗಿದೆ

ಎನ್ನಬಹುದು. ಮಾಂಸಹಾರ ಇಲ್ಲದೇ ಒಂದು ತುತ್ತು ಊಟಮಾಡುವುದು ಕಷ್ಟ, ಏನಿಲ್ಲದಿದ್ದರೂ ನಂಜಿಕೊಳ್ಳಲು ಮೀನನ್ನದರೂ ಹಿಡಿದುಕೊಂಡು ತಿನ್ನುವ ಇವರ ಪಾರಂಪರಿಕ ಆಹಾರವು ಇಲ್ಲದಾಗಿದೆ. ಕುರಿಕೋಳಿ ಮಾಂಸಗಳನ್ನು ಕೊಂಡು ತಿನ್ನುವ ಆರ್ಥಿಕ ಶಕ್ತಿಯು ಇವರಲ್ಲಿ ಇಲ್ಲದಾಗಿದೆ. ಬೀಸಾಡಿದ ಕುರಿ ಆಡುಗಳ ಪ್ರಾಣಿಗಳ ಕರಳು, ಕೋಳಿ ಕಾಲುಗಳನ್ನು ಭಿಕ್ಷೆಬೇಡಿ ತಿನ್ನುವಂತಾಗಿದೆ. ಸರ್ಕಾರವು ಇಂತಹ ಸಮುದಾಯಗಳಿಗೆ ಪರ್ಯಾಯ ಯೋಜನೆಗಳು ರೂಪಿಸದೇ ಬುಡ್ಗ ಜಂಗಮರ ಬದುಕಿಗೆ ಹಾಗೂ ತಿನ್ನುವ ಹಕ್ಕುಗಳಿಗೆ ಮಣ್ಣುರೆಚಿರುವುದು ದುರಂತ ಎನ್ನಬಹುದು.

**ಭಿಕ್ಷಾಟನೆ ಕಾಯ್ದೆ:** ಒಂದು ಕಾಲದಲ್ಲಿ ಅಲೆಮಾರಿ ಬುಡಕಟ್ಟುಗಳ ಪಾರಪರಿಕ ಜ್ಞಾನ ಮತ್ತು ಕಲೆಗಳು, ರಾಜಾಶ್ರಯ ಪಡೆದುಕೊಂಡು ಸಾಮ್ರಾಜ್ಯಸ್ಥಾಪನೆಗಾಗಿ, ಅವರ ಧರ್ಮ ಮತ್ತು ತತ್ವಸಿದ್ಧಾಂತಗಳನ್ನು ಪ್ರಚಾರಮಾಡಲು ಬಳಸಿಕೊಂಡಿದ್ದವು. ರಾಜಮನೆತನಗಳು ಅವನತಿಹೊಂದಿದ ನಂತರ ಈ ಸಮುದಾಯಗಳು ಒಂದ್ಹೊತ್ತಿನ ಊಟಕ್ಕಾಗಿ ದಿಕ್ಕೆಟ್ಟು ಸಂಚರಿಸಿದವು.

ಪೂರ್ವಕಾಲದಲ್ಲಿ ರಾಜಮಹಾರಾಜರು, ಅಲೆಮಾರಿ ಕಲಾ ಸಮುದಾಯಗಳನ್ನು ಭಿಕ್ಷುಕರು ಎಂದು ಕರೆಯುತ್ತಿದ್ದರು. ಇಂತಹ ಅಲೆಮಾರಿ ಬುಡ್ಗ ಜಂಗಮ ಸಮುದಾಯದ ಕಲಾವಿದರನ್ನು ಕರೆಯಿಸಿ ಅವರ ಸಂಗೀತ ಸಾಹಿತ್ಯ ಕಲೆ ಮತ್ತು ಪ್ರದರ್ಶನ ಗುರುತಿಸಿ ಮನರಂಜನೆ ಪಡೆದು ದವಸ ಧಾನ್ಯ, ಬಟ್ಟೆ, ಹಣ, ಬೆಳ್ಳಿಬಂಗಾರ ಕಡಗಗಳನ್ನು ದಾನಧರ್ಮವಾಗಿ ಕೊಟ್ಟು ಪೋಷಿಸುತ್ತಿದ್ದರು. ಆದರೆ ಅಲೆಮಾರಿಗಳು ಕೇವಲ ಅವರು ಭಿಕ್ಷೆಮಾತ್ರ ಬೇಡುತ್ತಿದ್ದಿಲ್ಲ, ಅವರು ತಮ್ಮ ಕಲೆಯನ್ನು ಪ್ರದರ್ಶಿಸಿ ಸಮಾಜದ ಮಾನವೀಯ ಮೌಲ್ಯಗಳನ್ನು ತಿಳಿಸಿ ದಾನಧರ್ಮವನ್ನು ಪಡೆಯುತ್ತಿದ್ದರು. ಆದರೆ ಇಂದು ರಾಜಮಹಾರಾಜರು ಮತ್ತು ಸಂಸ್ಥಾನಗಳು ಮರೆಯಾದ ಮೇಲೆ ಈ ಅಲೆಮಾರಿ ಬುಡ್ಗ ಜಂಗಮರು ಬೀದಿಗೆ ಬರಬೇಕಾಯಿತು. ಈ ನಿಟ್ಟಿನಲ್ಲಿ ಬುಡ್ಗ ಜಂಗಮರು ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ಪ್ರದೇಶದಲ್ಲಿ ಮಳೆಬೆಳೆ ಇಲ್ಲದೇ ಜನರು ಕಂಗಾಲಾಗಿರುವುದನ್ನು ಮನಗಂಡು ಬುಡ್ಗ ಜಂಗಮರು ನಗರ ಪಟ್ಟಣಗಳಿಗೆ ವಲಸೆ ಹೋಗಿ ವೇಷ ಹಾಕಿಕೊಂಡು ಕಲಾಭಿಕ್ಷಾಟನೆಯನ್ನು ಮಾಡುತ್ತಿರುವುದು ಕಂಡುಬರುತ್ತದೆ. ಇವರನ್ನು ಭಿಕ್ಷುಕರು ಎಂದು ಹಿಡಿದು ಭಿಕ್ಷಾಟನೆ ನಿಷೇಧ ಕಾಯ್ದೆಯಡಿಯಲ್ಲಿ ಬಂಧಿಸಿಸುತ್ತಿರುವುದು ಕಾಣಬಹುದು. ಮಾನಸಿಕ ಅಸ್ವಸ್ತರನ್ನು, ಸೋಮಾರಿಗಳನ್ನು ಕೌಟಂಬಿಕ ಕಲಹಗಳಿಂದ ಹೊರಬಂದವರಿಗೆ ಈ ಬೆಂಗಳೂರಿನ ಭಿಕ್ಷುಕರ ಕಾಲೋನಿ ನೆರವಾಗುತ್ತಿದೆ. ಈ ಸಮಾಜಕ್ಕೆ ಮಾನವೀಯ ಮೌಲ್ಯಗಳನ್ನು, ನೀತಿ ಸಂದೇಶಗಳನ್ನು, ಭಾಷೆ ಸಂಸ್ಕೃತಿಯನ್ನು ಕಾಪಾಡುತ್ತಿರುವ ಅಲೆಮಾರಿ ಕಲಾವಿದರಿಗೆ ನೀಡಬೇಕಾದ ಮೂಲಭೂತ ಸೌಲಭ್ಯಗಳನ್ನು, ರಕ್ಷಣೆಯನ್ನು ಅನ್ಯರಿಗೆ ಸಿಗುತ್ತಿರುವುದು ಇದು ದುರಂತವಾಗಿದೆ. ಈ ಸಮುದಾಯವು ದೇಶದ ಸಂಸ್ಕೃತಿ ಪರಂಪರೆಗಳನ್ನು ಉಳಿಸಿಬೆಳೆಸುತ್ತಿರುವ ಇಂತಹ ಅಲೆಮಾರಿ ಸಮುದಾಯಗಳಿಗೆ ಪ್ರತ್ಯೇಕವಾದ ಪುನರ್‌ವಸತಿ ಯೋಜನೆಗಳನ್ನು ರೂಪಿಸಿ ಸೌಲಭ್ಯಕಲ್ಪಿಸಿದರೆ ಇಂತಹ ಸಮುದಾಯಗಳ ಕಲೆ ಸಂಸ್ಕೃತಿ, ಪರಂಪರೆ ಮತ್ತು ಕಲಾವಿದರು ಉಳಿಯುವುದನ್ನು ಪ್ರಯತ್ನಿಸಬಹುದು.

### ಬುಡ್ಗ ಜಂಗಮ್ ಸಮುದಾಯದ ಸಂಘಟನೆ ಮತ್ತು ಹೋರಾಟ

ಬುಡ್ಗ ಜಂಗಮ್ ಸಮುದಾಯದಲ್ಲಿ ಶಿಕ್ಷಣ, ಸಂಘಟನೆಯ ಅರಿವು ಇಲ್ಲದಿರುವುದರಿಂದ ಇಷ್ಟುವರ್ಷಗಳ ಕಾಲ ಮೀಸಲಾತಿ ಸೌಲಭ್ಯ ಇದ್ದರೂ ತಮ್ಮ ಜಾತಿ ಯಾವುದೇಂದೂ ಗೊತ್ತಿರದ ಮಟ್ಟಿಗೆ ಜೀವನ ಮಾಡಿರುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಒಂದು ಕಡೆ ನೆಲೆನಿಂತು ಆಧುನಿಕ ಕುಲಕಸುಬಗಳನ್ನು ಮಾಡುತ್ತಾ ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸಿ ಸಮುದಾಯದ ಮೂಲಭೂತ ಸೌಲಭ್ಯಗಳನ್ನು ಪಡೆದು ಸಮಾಜದ ಮುಖ್ಯವಾಹಿನಿಗೆ ಬರಲು ಪ್ರಯತ್ನಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಈ ಸಮುದಾಯವು ಅನೇಕ ಸಂಘಟನೆಗಳನ್ನು ಕಟ್ಟಿಕೊಂಡು ಸಂವಿದಾನಬದ್ಧ ಮೀಸಲಾತಿ ಸೌಲಭ್ಯಗಳನ್ನು ಮತ್ತು ಹಕ್ಕುಗಳನ್ನು ಪಡೆಯಲು ಸಂಘಟಿಸುತ್ತಿದ್ದಾರೆ.

ಸಮಾಜಶಾಸ್ತ್ರದ ಸಾಹಿತ್ಯದಲ್ಲಿ ಸಂಘಟನೆಗಳ ಅಧ್ಯಯನವೂ ತನ್ನದೇಯಾದ ಪ್ರಮುಖ್ಯತೆಯನ್ನು ಪಡೆದುಕೊಂಡಿದೆ. ಈ 'ಸಂಘ' ಎಂಬ ಪರಿಕಲ್ಪನೆಯು ಬುದ್ದನ ಕಾಲದಿಂದಲೂ ಕಾಣಬಹುದು. ಸಮಾಜಕ್ಕೆ ಸಂಘಟನೆಗಳು ಸಾರ್ವತ್ರಿಕ ಹಾಗೂ ಅನಿವಾರ್ಯಗಳಾಗುತ್ತವೆ. ಇವು ಮಾನವ ಸಮಾಜದ ಅವಿಭಾಜ್ಯ ಅಂಗಗಳಾಗಿದ್ದು ವ್ಯಕ್ತಿಯ ಅಥವಾ ಸಮುದಾಯದ ಬೇಕು ಬೇಡಿಕೆಗಳು ಮತ್ತು ಆಸಕ್ತಿಗಳನ್ನು ಪೂರೈಸುವ ಸಾಧನಗಳಾಗಿವೆ. ಅಲ್ಲದೆ ಸಂಘಟನೆಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಮಾನವ ನಿರ್ಮಿತ ಘಟಕಗಳಾಗಿವೆ.

ಭಾರತವೂ ಸಂಪ್ರದಾಯಬದ್ದ ವಿವಿಧ ಸಂಸ್ಕೃತಿ, ಜಾತಿ ಸಮುದಾಯಗಳನ್ನು ಹೊಂದಿರುವ ರಾಷ್ಟ್ರವಾಗಿದ್ದು, ಆರ್ಥಿಕ, ಸಾಮಾಜಿಕ, ರಾಜಕೀಯ, ಸಂವಿಧಾನಾತ್ಮಕ ಸೌಲಭ್ಯಗಳನ್ನು ಪಡೆದುಕೊಳ್ಳಲು ತನ್ನದೇಯಾದ ಸಂಘಟನೆಗಳನ್ನು ಹೊಂದಿದೆ. ಅದೇರೀತಿಯಾಗಿ ಬುಡ್ಗ ಜಂಗಮ್ ಸಮುದಾಯವು ಸಂಘಟನೆಯನ್ನು ಹೊಂದಿದೆ. ಈ ದೇಶದ ಸಕಲ ಸಂಪತ್ತುಗಳು ಪ್ರತಿಯೊಬ್ಬರ ಪಾಲು ಇದೆ. ಅದೇರಿತಿಯಾಗಿ ಪ್ರತಿಯೊಬ್ಬ ಶೋಷಿತ, ಹಿಂದುಳಿದ ದಮನಿತರಿಗೆ, ಅವಕಾಶ ವಂಚಿತರಿಗೆ ಸಂವಿಧಾನಬದ್ದ ಮೂಲಭೂತ ಹಕ್ಕುಗಳನ್ನು ಪಡೆಯಲು ಮೀಸಲಾತಿಯನ್ನು ಡಾ ಬಿ ಆರ್ ಅಂಬೇಡ್ಕರ್ ರವರು ಕಲ್ಪಿಸಿದರು. ಅವುಗಳನ್ನು ಪಡೆಯಲು ಶಿಕ್ಷಣ ಮತ್ತು ಸಂಘಟನೆ ಮತ್ತು ಹೋರಾಟದಿಂದ ಮಾತ್ರ ಸಾಧ್ಯ ಎಂದು ಹೇಳಿದ್ದರು ಅದೇರೀತಿಯಾಗಿ ಬುಡ್ಗ ಜಂಗಮ್ ಸಮುದಾಯವನ್ನು ೧೯೮೭ರಲ್ಲಿ ಬಳ್ಳಾರಿ ಜಿಲ್ಲೆಯ ವೆಂಕಟಾಪುರ ಕ್ಯಾಂಪ್‌ನ ಶ್ರೀನಿವಾಸ ರುದ್ರಾಕ್ಷಿಯವರು ಸಮಾಜವನ್ನು ಸಂಘಟಿಸುವಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸಿದ ಮೊದಲಿಗರಾಗಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಸಂಘವನ್ನು ದಿನಾಂಕ ೨೨.೦೮.೧೯೯೨ ರಲ್ಲಿ ನೊಂದಣಿ ಸಂಖ್ಯೆ ೮೫/೯೨-೯೩, ಕರ್ನಾಟಕ ಬುಡ್ಗ ಜಂಗಮ ಸಂಘ(ರಿ), ರಾಜೇಶ್ವರಿ ನಗರ, ಡೋರ್ ನಂ ೧೭೩, ೨೫ನೇ ವಾರ್ಡ್, ಬಳ್ಳಾರಿ ಹೆಸರಿನಲ್ಲಿ ನೊಂದಾವಣೆಯಾಗಿ ಸಮುದಾಯದ ಅಭಿವೃದ್ಧಿಪರವಾದ ಕೆಲಸ ಕಾರ್ಯಗಳನ್ನು ಮಾಡುತ್ತಾ ಬಂದಿದೆ. ವಿ. ಶ್ರೀನಿವಾಸ ಅವರ ನಿಶ್ವಾರ್ಥ ಸೇವೆ ಹೋರಾಟಕ್ಕೆ ಡಾ ಕೆ ಎಂ ಮೇತ್ರಿ ಮತ್ತು ಅನೇಕ ವಿದ್ವಾಂಸರು ಸಮಾಜದ ಮುಖಂಡರು ಮತ್ತು ಜನಪ್ರತಿನಿಧಿಗಳು ಕೈಜೋಡಿಸಿದ್ದಾರೆ. ಬೆಂಗಳೂರಿನಲ್ಲಿ ೨೦೦೫ರಲ್ಲಿ ಬುಡ್ಗ

ಜಂಗಮ್ ಸಮುದಾಯದ ದಶಮಾನೋತ್ಸವ ಕಾರ್ಯಕ್ರಮವನ್ನು ಆಚರಿಸಿದ್ದಾರೆ. ಅಂದು ಸಮುದಾಯದ ಎರಡು ಪುಸ್ತಕಗಳಾದ ಡಾ ಕೆ ಎಂ ಮೇತ್ರಿ ಸಂಪಾದನೆಯ ಬುಡ್ಗ ಜಂಗಮ್ ದರ್ಶಿನಿ ಮತ್ತು ನಾಡೋಜ ದರೋಜಿ ಈರಮ್ಮನವರು ಹಾಡಿದ ಎಲ್ಲಮ್ಮ ಕಾವ್ಯ ಮತ್ತು ಡಾ ಮುದೆನೂರು ನಿಂಗಪ್ಪ ಅವರು ಸಂಪಾದನೆಯ ಬುರ್ರಕಥಾ ಈರಮ್ಮನ ಆತ್ಮಕಥನ ಎಂಬ ಪುಸ್ತಕಗಳು ಬಿಡುಗಡೆಗೊಂಡಿವೆ. ಅಲ್ಲದೆ ಕನ್ನಡ ಪುಸ್ತಕ ಪ್ರಾಧಿಕಾರವು ಡಾ ಬಿ ಆರ್ ಅಂಬೇಡ್ಕರ್ ಸಂಶೋಧನಾ ಸಂಸ್ಥೆಯಿಂದ ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆಯಲ್ಲಿ ಬುಡ್ಗ ಜಂಗಮ ಎಂಬ ಪುಸ್ತಕಗಳನ್ನು ಹೊರಬರಲು ಕಾರಣವಾಗಿವೆ.

೧೯೯೩ರಲ್ಲಿ ಕರ್ನಾಟಕ ರಾಜ್ಯ ಬುಡ್ಗ ಜಂಗಮ್ ಜಂಗಾಲರ ಸಂಘವನ್ನು ಶ್ರೀಮತಿ ಬಿ ಟಿ ಲಲಿತಾ ನಾಯಕ್ ಅವರ ಗೌರವಾಧ್ಯಕ್ಷತೆಯಲ್ಲಿ ಮತ್ತು ವೈ ಕೃಷ್ಣಪ್ಪ ಅವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಿಕೊಂಡಿದ್ದರು. ನಂತರ ೨೦೦೨ರಲ್ಲಿ ಕರ್ನಾಟಕ ರಾಜ್ಯ ಬುಡ್ಗ ಜಂಗಮ್ ಕ್ಷೇಮಾಭಿವೃದ್ಧಿ ಸಂಘವನ್ನು ಮಾಜಿ ವಿಧಾನ ಪರಿಷತ್ ಸದಸ್ಯರಾದ ಡಾ ಎಲ್ ಹನುಮಂತಯ್ಯ ಅವರ ಗೌರವಾಧ್ಯಕ್ಷತೆಯಲ್ಲಿ, ವಿ ಶ್ರನಿವಾಸ ಅವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಿದರು. ಇದರ ಅಡಿಯಲ್ಲಿ ರಾಜ್ಯದ ಹಲವು ಜಿಲ್ಲೆಗಳಲ್ಲಿ ತಾಲ್ಲೂಕು ಮತ್ತು ಜಿಲ್ಲಾ ಸಂಘಟನೆಗಳನ್ನು ಆರಂಭಿಸಿ ಬುಡ್ಗ ಜಂಗಮರ ಹಕ್ಕುಗಳಿಗಾಗಿ ಹೋರಾಟ ಮಾಡುತ್ತಿದ್ದಾರೆ. ೨೦೦೬ರಲ್ಲಿ ಹೈದರಾಬಾದಿನಲ್ಲಿ ಆಂಧ್ರ ಪ್ರದೇಶ ಕರ್ನಾಟಕ ಮತ್ತು ಮಹಾರಾಷ್ಟ್ರ ಈ ಮೂರು ರಾಜ್ಯಗಳು ಒಗ್ಗೂಡಿಸಿ All India Budga Jangam Fedaration ವನ್ನು ಸ್ಥಾಪಿಸಿಕೊಂಡಿದ್ದಾರೆ. ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ಜಿಲ್ಲಾ ಸಂಘಟನೆಯನ್ನು ವಿ ಶ್ರೀನಿವಾಸ ರುದ್ರಾಕ್ಷಿ, ಕಲ್ಯಾಣಂ ಬಲರಾಮುಡು, ದಿವಂಗತ ದರೋಜಿ ಅಶ್ವ ಲಾಲಪ್ಪ, ದಿವಂಗತ ಯಡವಲಿ ಶಂಕ್ರಪ್ಪ ಸೋಮಲಾಪುರ, ದೊಡ್ಡ ಅಶ್ವ ಮಾರೆಕ್ಕ, ದಿವಂಗತ ಹಳೇಕೋಟೆ ಯಡವಲಿ ಶಂಕ್ರಪ್ಪ, ದಿವಂಗತ ಮಾಳಾಪುರ ಯಡವಲಿ ಶಿವಪ್ಪ, ದಿವಂಗತ ಎಚ್ ಹೊಸಳ್ಳಿ ಯಡವಲಿ ಶಿವಲಿಂಗಪ್ಪ, ಕುರುಗೋಡು ರುದ್ರಾಕ್ಷಿ ಗಣಾದಪ್ಪ, ಹಗರಿಬೊಮ್ಮನಹಳ್ಳಿ ಧೂಪಂ ಅಂಜಿನಪ್ಪ, ಕೂಡ್ಲಿಗಿ ಧೂಪಂ ಈರಣ್ಣ, ಬಳ್ಳಾರಿ ಬಲಗೊಲ್ಲ ಪೋತಪ್ಪ, ಬಳ್ಳಾರಿ ಡೊಕ್ಕ ಮಾರೆಪ್ಪ, ಎಲೆರಾಂಪುರ ಕೊಂಡಪಲ್ಲಿ ಭೀಕ್ಷಾವತಿ, ದಿವಂಗತ ಗಂಗಾವತಿ ಬಂತುಲ ಗಿಡ್ಡಪ್ಪ, ದಿವಂಗತ ನಾಡೋಜ ದರೋಜಿ ಈರಮ್ಮ, ವಿ ಶರಣಪ್ಪ, ಅಶ್ವ ಬಸಪ್ಪ ಇತ್ಯಾದಿ ಮುಖಂಡರು ಸಂಘಟನೆಗಾಗಿ ಹಗಲಿರುಳು ದುಡಿದಿದ್ದಾರೆ. ನಂತರ ಜಿಲ್ಲಾಧ್ಯಕ್ಷರಾಗಿ ಸಣ್ಣ ಮಾರೆಪ್ಪ, ವಿ ರಾಮುಡು ಈ ಸಂಘಟನೆಯನ್ನು ಮುನ್ನಡೆಸುತ್ತಿರುವುದು ಕಾಣಬಹುದು. ಇದೇ ರೀತಿ ಬುಡ್ಗ ಜಂಗಮ್ ಕ್ಷೇಮಾಭಿವೃದ್ಧಿ ಸಂಘ(ರಿ) ಬಳ್ಳಾರಿ, ಬುಡ್ಗ ಜಂಗಮ್ ಸರಕಾರಿ ನೌಕರರ ಸಂಘ(ರಿ) ಹೊಸಪೇಟೆ, ಬುಡ್ಗ ಜಂಗಮ್ ಸಮುದಾಯದ ವಿದ್ಯಾರ್ಥಿಗಳ ಒಕ್ಕೂಟ(ರಿ) ಬಳ್ಳಾರಿ, ಬುಡ್ಗ ಜಂಗಮ್ ಯುವ ಶಕ್ತಿ ಬಳಗ, ಆಯಾ ಜಿಲ್ಲಾ ಬುಡ್ಗಜಂಗಮ್ ಕ್ಷೇಮಾಭೀವೃದ್ಧಿ ಸಂಘಗಳು, ಗುಡಾರ ಗುಡಿಸಲು ನಿವಾಸಿಗಳ ಕಲ್ಯಾಣ ಸಂಘ(ರಿ) ಬಳ್ಳಾರಿ, ಕರ್ನಾಟಕ ಅಲೆಮಾರಿ ಅರೆ-ಅಲೆಮಾರಿ ವಿಮುಕ್ತ ಬುಡಕಟ್ಟುಗಳ ಒಕ್ಕೂಟ(ರಿ) ಬೆಂಗಳೂರು, ನಾಡೋಜ ಬುರ್ರಕಥಾ ದರೋಜಿ ಈರಮ್ಮ ಫೌಂಡೇಷನ್(ರಿ) ಹಳೇದರೋಜಿ, ಹೈದರಾಬಾದ್

ಕರ್ನಾಟಕ ಭಾಗದಲ್ಲಿ ಹೆಚ್ಚಾಗಿ ಬುಡ್ಗ ಜಂಗಮರು ಕಂಡು ಬರುವುದರಿಂದ ೩೭೧ ಜೆ ಮೀಸಲಾತಿ ಇರುವುದರಿಂದ ೨೦೧೬ರಲ್ಲಿ ಈ ಭಾಗದ ಸದಸ್ಯರು ಕಲ್ಯಾಣ ಕರ್ನಾಟಕ ಅಲೆಮಾರಿ (ಪ.ಜಾ) ಬುಡ್ಗ ಜಂಗಮ್ ಜಾಗೃತಿ ಸೇವಾ ಸಂಘ(ರಿ) ಹೊಸಪೇಟೆ ಎಂದು ಸಂಘಟನೆ ಮಾಡಿ ಸರ್ಕಾರ ಮತ್ತು ಸಂಘಸಂಸ್ಥೆಗಳಿಗೆ ತಮ್ಮ ಹಕ್ಕುಗಳನ್ನು ಪಡೆಯಲು ಹೋರಾಟ ಮಾಡುತ್ತಿದ್ದಾರೆ. ಹಾಗೂ ಈ ಸಮುದಾಯದ ಅನೇಕ ಕಲಾ ಸಂಘಗಳು, ದಲಿತ ಸಂಘಟನೆಗಳು ಈ ಸಮುದಾಯದ ಕಲೆ ಮತ್ತು ಸಮುದಾಯದ ಅಭಿವೃದ್ಧಿಗೆ ಪೂರಕವಾದ ಕೆಲಸಕಾರ್ಯಗಳನ್ನು, ವಿಚಾರ ಸಂಕೀರ್ಣಗಳು, ಕಮ್ಮಟಗಳು, ಸಾಂಸ್ಕೃತಿಕ ಕಾರ್ಯಕ್ರಮಗಳ್ನು ಹಮ್ಮಿಕೊಳ್ಳುತ್ತಾ ಸಂಘಟಿಸುತ್ತಿವೆ.

ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಪಕರಾದ ಡಾ ಕೆ ಎಂ ಮೇತ್ರಿಯವರಿಗೆ ಸಮುದಾಯದ ಮೀಸಲಾತಿ ಬಗ್ಗೆ ನಾಡೋಜ ಬುರ್ರಕಥಾ ದರೋಜಿ ಈರಮ್ಮನವರು ಸ್ವಾಮಿ ನನ್ನ ಜಾತಿ ಕಳೆದುಹೋಗಿದೆ ಎಂದು ತಿಳಿಸಿದಾಗ ಬುಡ್ಗ ಜಂಗಮರ ಬಗ್ಗೆ ಮಾಹಿತಿ ಸಂಗ್ರಹಿಸಿ ಜನರ ಸಮೀಕ್ಷೆ ಮಾಡಿ ಸಂವಿಧಾನಬದ್ಧ ಮೀಸಲಾತಿಯಿಂದ ಈ ಜನರಿಗೆ ಅನ್ಯಾಯವಾಗಿದೆ ಎಂದು ಸರಕಾರಕ್ಕೆ ಪತ್ರ ಬರೆದು ಮಂತ್ರಿಗಳಿಗೂ ಮತ್ತು ಅಧಿಕಾರಿಗಳಿಗೂ ಮನವರಿಕೆ ಮಾಡಿಕೊಡುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಹೀಗಾಗಿ ಬುಡ್ಗ ಜಂಗಮರು ಮತ್ತು ಅಲೆಮಾರಿಗಳು ಪ್ರೊ ಕೆ ಎಂ ಮೇತ್ರಿಯವರನ್ನು ನಮ್ಮ ಪಾಲಿನ ದೇವರು ಎಂದೇ ಹೇಳಿಕೊಳ್ಳುತ್ತಾರೆ.

ದಿನಾಂಕ ೧೩.೦೨.೨೦೦೨ ರಂದು ಮೂಲ ಅಲೆಮಾರಿ, ಅರೆ ಅಲೆಮಾರಿ ಮತ್ತು ವಿಮುಕ್ತ ಬುಡಕಟ್ಟುಗಳ ಕೇಂದ್ರಿತ ಆಶಯಗಳನ್ನು ಸಂರಕ್ಷಿಸಲು ಬಳ್ಳಾರಿ ಜಿಲ್ಲಾ ಗುಡಾರ ಗುಡಿಸಲು ನಿವಾಸಿಗಳ ಕಲ್ಯಾಣ ಸಂಘ ಸ್ಥಾಪಿಸಲಾಗಿದೆ. ಮೂಲಭೂತ ಸೌಲಭ್ಯಗಳಿಗಾಗಿ ಸರಕಾರಕ್ಕೆ ಮನವಿ ಪತ್ರವನ್ನು ಸಲ್ಲಿಸಿದ್ದಾರೆ. ಅದರ ಫಲಸ್ವರೂಪ ಬಳ್ಳಾರಿ ಹೊರವಲಯದಲ್ಲಿ 'ಗುಡಾರ ನಗರ' ಜನ್ಮತಾಳಿದೆ. ಬುಡ್ಗ ಜಂಗಮ್, ಸಿಂಧೊಳ್ಳು, ಶಿಳ್ಳೇಕ್ಯಾತ, ಗೋಸಂಗಿ, ಕೊರಮ, ಚೆನ್ನದಾಸರ್, ಹಕ್ಕಿಪಿಕ್ಕಿ, ಗಂಟೆ ಹೆಳವ ಇತ್ಯಾದಿ ಅಲೆಮಾರಿ ಸಮುದಾಯಗಳು ಒಂದು ಕಡೆ ನೆಲೆಸಿರುವುದು ವಿಶೇಷವಾಗಿದೆ.

೨೦೦೩-೦೪ನೇ ಸಾಲಿನಲ್ಲಿ ಅಂದಿನ ಬಳ್ಳಾರಿ ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಎಂ. ವೆಂಕಟರಾವ್ ಘೋರ್ಪಡೆಯವರು ನವಗ್ರಾಮ ಯೋಜನೆಯಡಿಯಲ್ಲಿ ಸಂಡೂರು ತಾಲೂಕಿನ ಹಳೇ ದರೋಜಿ ಗ್ರಾಮದಲ್ಲಿ ಕಂಪ್ಲಿ ಬಳ್ಳಾರಿ ರಸ್ತೆಯ ಬಯಲು ಪ್ರದೇಶದ ಗುಡ್ಡದಲ್ಲಿ ಅಲೆಮಾರಿ ಬುಡ್ಗ ಜಂಗಮ್ ಸಮುದಾಯದವರಿಗೆಂದೇ ಪ್ರತ್ಯೇಕವಾದ ೪೦ ಕುಟುಂಬಗಳಿಗೆ ಮನೆಗಳನ್ನು ನಿರ್ಮಾಣ ಮಾಡಿದ್ದಾರೆ. ಇಲ್ಲಿ ಎಲ್ಲರೂ ಕಲಾವಿದರಾಗಿರುವುದರಿಂದ ಈ ನವಗ್ರಾಮಕ್ಕೆ ಬುಡ್ಗ ಜಂಗಮ್ ಕಲಾಗ್ರಾಮ ಎಂದು ಕರೆಯುತ್ತಾರೆ. ಹೀಗೆ ಬಳ್ಳಾರಿ ಜಿಲ್ಲೆಯಲ್ಲಿ ಸಂಘಟನಾತ್ಮಕವಾಗಿ ಒಗ್ಗೂಡಿ ಸಂವಿಧಾನದ ಮೂಲಭೂತ ಸೌಲಭ್ಯಗಳನ್ನು ಪಡೆಯಲು ಪ್ರಯತ್ನಿಸುತ್ತಿದ್ದಾರೆ.

**ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದಲ್ಲಿ ಅಲೆಮಾರಿ ಹಾಗೂ ಅರೆಅಲೆಮಾರಿ ಮತ್ತು ಸೂಕ್ಷ್ಮ ಮತ್ತು ಅತಿಸೂಕ್ಷ್ಮ ಸಮುದಾಯಗಳ ಕೋಶ:** ಅಲೆಮಾರಿ ಸಮುದಾಯಗಳಿಗೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳ ಮೀಸಲಾತಿ ಪಟ್ಟಿಯಲ್ಲಿ ದಾಖಲಾಗಿದ್ದರೂ ಈ ಸಮುದಾಯಗಳಿಗೆ

ಸಮಾಜಿಕ ನ್ಯಾಯ ಸಿಗಲಿಲ್ಲ. ಮೀಸಲಾತಿಯು ಕೆಲವು ಬಲಿಷ್ಠ ಸಮುದಾಯಗಳ ಪಾಲಾಗಿಬಿಟ್ಟಿದೆ. ಹಾಗಾಗಿ ಸರ್ಕಾರವು ಇವರ ಅಭಿವೃದ್ಧಿಗಾಗಿ ೨೦೧೧ರ ಜನಗಣತಿ ಮಾಹಿತಿಯಂತೆ ಲಭ್ಯವಿರುವ ಜನಸಂಖ್ಯಾ ಅನಕ್ಷರತೆ ಇತ್ಯಾದಿ ವಿಷಯಗಳನ್ನು ಪರಿಶೀಲಿಸಿ ಮತ್ತು ಈ ಜಾತಿಗಳ ವೃತ್ತಿ ಮತ್ತು ಇತರೆ ಲಕ್ಷಣಗಳನ್ನು ಶ್ರೀ ಕೆ ಎಸ್ ಸಿಂಗ್ ಮತ್ತು ಶ್ರೀ ಎಡ್ಗರ್ ಥರ್‍ಸ್ಟನ್ ಇತ್ಯಾದಿ ಪುಸ್ತಕ ದಾಖಲೆಗಳ ಆಧಾರದ ಮೇಲೆ ಕರ್ನಾಟಕದಲ್ಲಿ ಸಿದ್ದರಾಮಯ್ಯನವರ ಸರ್ಕಾರವು ಗಂಭೀರವಾಗಿ ಪರಿಗಣಿಸಿ ೨೦೧೬ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಪಟ್ಟಿಯಲ್ಲಿ ಕೆಲವು ಸೂಕ್ಷ್ಮ ಅತಿಸೂಕ್ಷ್ಮ ಅಲೆಮಾರಿ ಅರೆಅಲೆಮಾರಿ ಸಮುದಾಯಗಳ ಪಟ್ಟಿಯನ್ನು ಸರ್ಕಾರದ ಆದೇಶ ಸಂಖ್ಯೆ: ಸಕಇ ೧೦ ಎಸ್ ಎಲ್ ಪಿ ೨೦೧೫ ಬೆಂಗಳೂರು, ದಿನಾಂಕ ೧೨.೦೧.೨೦೧೬ರಂದು ಬಿಡುಗಡೆ ಮಾಡಿದೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದಲ್ಲಿ ಅಲೆಮಾರಿ ಹಾಗೂ ಅರೆಅಲೆಮಾರಿ ಮತ್ತು ಸೂಕ್ಷ್ಮ ಮತ್ತು ಅತಿಸೂಕ್ಷ್ಮ ಸಮುದಾಯಗಳ ಪಟ್ಟಿ: ಪರಿಶಿಷ್ಟ ಜಾತಿಯ ದಕ್ಕಲಿಗ/ದಕ್ಕಲ್/ದಕ್ಕಲ, ಬುಡ್ಗಜಂಗಮ್, ಹಂಡಿಜೋಗಿಸ್, ಶಿಳ್ಳೇಕ್ಯಾತ/ ಕಿಳ್ಳೇಕ್ಯಾತ, ಸುಡುಗಾಡು ಸಿದ್ದ, ಚೆನ್ನದಾಸರ್/ ಹೊಲೆಯ ದಾಸರ್, ಗೋಸಂಗಿ, ಗಂಟಿಚೋರ್ಸ್, ಡೊಂಬ/ಡೊಂಬರ, ಮಾಲಾದಾಸರಿ, ಮಾಲಸನ್ಯಾಸಿ, ಜಗ್ಗಾಲಿ, ಹೊಲೆಯದಾಸರಿ, ಸಿಂಧೋಳ್/ಚಿಂದೋಳು, ಅಸದರು ಇನ್ನೂ ಮುಂತಾದ ೪೯ ಜಾತಿಗಳು. ಪರಿಶಿಷ್ಠ ಪಂಗಡದ ಚೆಂಚು ಚೆಂಚುವರ್, ಗೌಡಾಲು, ಹಕ್ಕಿಪಿಕ್ಕಿ, ಪಾರ್ಧಿ, ಅಡಿವಿಚೆಂಚರ್, ಪಾನ್ಸೆಪಾರ್ಧೀ, ಹರಣಶಿಕಾರಿ, ಇರುಳಿಗ, ರಾಜಗೊಂಡ ಇತ್ಯಾದಿ ೨೩ ಸಮುದಾಯಗಳನ್ನು ಸೂಕ್ಷ್ಮ ಅತಿಸೂಕ್ಷ್ಮ ಅಲೆಮಾರಿ ಅರೆಅಲೆಮಾರಿ ಸಮುದಾಯಗಳೆಂದು ಗುರುತಿಸಲಾಗಿದೆ.(ಅನುಬಂಧ: ೪ ನೋಡಿ)

ಈ ಕೋಶದಿಂದ ಸೂಕ್ಷ್ಮ ಅಲೆಮಾರಿ ಅರೆ ಅಲೆಮಾರಿ ಸಮುದಾಯಗಳಿಗೆ ನ್ಯಾಯ ಒದಗಿಸುವುದು ಎಂಬ ಭರವಸೆಯಲ್ಲಿ ಬಳ್ಳಾರಿ ಜಿಲ್ಲೆಯ ಕೆಲವು ಅಲೆಮಾರಿ ಸಮುದಾಯಗಳು ಎದರುನೋಡುತ್ತಿದ್ದವು. ಆದರೆ ಕೋಶಕ್ಕೆ ಅರ್ಜಿ ಸಲ್ಲಿಸಿದರೂ ತಿಂಗಳಾನುಗಟ್ಟಲೇ ಅಲೆದಾಡಿದರೂ ಇವರಿಗೆ ಸರಿಯಾಗಿ ಸೌಲಭ್ಯಗಳು ಸಿಕ್ಕಿಲ್ಲ, ಬೇರೆ ಪಕ್ಕದ ಜಿಲ್ಲೆಗಳಲ್ಲಿ ಅಲೆಮಾರಿ ಬುಡ್ಗ ಜಂಗಮರಿಗೆ ಸಾಲಸೌಲಭ್ಯ ಮತ್ತು ಜಮೀನು ನೀಡುತ್ತಿದ್ದಾರೆ. ಬಳ್ಳಾರಿ ಜಿಲ್ಲೆಗೆ ಅಲೆಮಾರಿ ಕೊಶ ಮೂಲಭೂತ ಸೌಲಭ್ಯ ನೀಡುವಲ್ಲಿ ಸಂಪೂರ್ಣ ವಿಫಲವಾಗಿದೆ ಎಂದು ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ್ ಕ್ಷೇಮಾಭೀವೃದ್ಧಿ ಸಂಘದ ಮಾಜಿ ಜಿಲ್ಲಾಧ್ಯಕ್ಷರಾದ ಸಣ್ಣಮಾರೆಪ್ಪ ಅವರು ಹೇಳುತ್ತಾರೆ. ಹಾಗಾಗಿ ಈ ಕೋಶದಿಂದ ವೈಜ್ಞಾನಿಕವಾಗಿ ಸಮೀಕ್ಷೆ ಮಾಡಿ ಯಾರಿಗೆ ಸೂರು ಇಲ್ಲವೇ ಮೂಲಭೂತ ಸೌಲಭ್ಯಗಳು ಇಲ್ಲವೋ ಅಂತವರಿಗೆ ಮೊದಲ ಆದ್ಯತೆ ನೀಡಿ ಸಹಕರಿಸಬೇಕಿದೆ.

**ಆಧಾರಗಳು**


೧. ಮಂಜಪ್ಪ ಹೆಚ್ ಬಿ, ೨೦೧೭, ಕರ್ ಕರ್‌ಮೊಂಡರ ಸಾಮಾಜಿಕ ಅಧ್ಯಯನ, ಪುಟ–೧೩೧

೨. ಪ್ರಭಾಕರ ಎ ಎಸ್, ೨೦೦೦, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪುಟ–೧

# ಅಧ್ಯಾಯ ಹತ್ತು

## ಸಮಾರೋಪ

ಪೀಠಿಕೆ

ಅಧ್ಯಯನದ ಫಲಿತಗಳು

ಸಲಹೆಗಳು

ಮುಂದಿನ ಅಧ್ಯಯನದ ಸಾಧ್ಯತೆಗಳು

ಪರಾಮರ್ಶನ ಗ್ರಂಥಗಳು

ತಿಳುವಳಿಕೆದಾರರ ವಿವರಗಳು

ಪ್ರಶ್ನಾವಳಿ

# ಅಧ್ಯಾಯ ಹತ್ತು
# ಸಮಾರೋಪ

**ಪೀಠಿಕೆ**

ಭಾರತದಲ್ಲಿ ಅನೇಕ ಸಮುದಾಯಗಳು ವೃತ್ತಿ, ಕಲೆ, ಸಾಹಿತ್ಯ, ಧಾರ್ಮಿಕತೆ ಹೀಗೆ ವಿಭಿನ್ನ ಸಂಸ್ಕೃತಿಗಳ ಮೂಲಕ ತನ್ನನ್ನು ತಾನು ಪ್ರತ್ಯೇಕತೆಯಿಂದ ಗುರುತಿಸಿಕೊಂಡಿವೆ. ಶ್ರಮ ವಿಭಜನೆಯಿಂದ ಪ್ರತ್ಯೇಕಗೊಂಡು ಸಾಮಾಜಿಕ ಗುಂಪುಗಳು ಜಾತಿಗಳಾಗಿ ರೂಪಾಂತರಗೊಂಡಿವೆ. ಈ ಪ್ರತ್ಯೇಕತೆಯನ್ನು ಸಾಮಾಜಿಕ ನಿಯಮಗಳ ಮೂಲಕ ನಿಯಂತ್ರಣಕ್ಕೊಳಪಟ್ಟು ವಿವಿಧ ವೃತ್ತಿಗಳನ್ನು ಶ್ರೇಷ್ಠ, ಮಧ್ಯಮ, ಕನಿಷ್ಠಗಳ ಸ್ಥಾನಮಾನಗಳು ನಿರ್ಧರಿತವಾದವು. ಈ ಸ್ಥಾನಮಾನಗಳನ್ನು ಭಾರತದಲ್ಲಿ ಆಳುವ ವರ್ಗಗಳು ಸಾಮಾಜಿಕ ಕಾನೂನುಗಳು ಎಂದೇ ಬಿಂಬಿಸುತ್ತಿದ್ದರು. ಜೊತೆಗೆ ದುಡಿವ ವರ್ಗದ ಸಮುದಾಯಗಳಿಂದ ಆರ್ಥಿಕ ಒಡೆತನವನ್ನು ಸಾಧಿಸಿದ್ದರು. ಈ ದುಡಿಯುವ ವರ್ಗಗಳು ಎಂದರೆ ಕೆಳಜಾತಿಗಳು, ಅಲೆಮಾರಿಗಳು ಅಲಕ್ಷಿತರು. ಈ ಕೆಳಜಾತಿಗಳಲ್ಲಿ ಕೆಲವು ಸಮುದಾಯಗಳು ಉತ್ಪಾದನೆಯಲ್ಲಿ ತೊಡಗಿದ್ದರೆ ಕೆಲವು ಸಮುದಾಯಗಳು ಸೇವಕ ವರ್ಗವಾಗಿ ಕಾರ್ಯನಿರ್ವಹಿಸಿದವು. ಈ ಸೇವಕ ವರ್ಗದಲ್ಲಿ ದಲಿತರು, ಊಳಿಗದವರು, ಕುಶಲಕರ್ಮಿಗಳು, ಮನರಂಜಕರು ಪ್ರಮುಖವಾದವರು. ಈ ಸೇವಕ ವರ್ಗವು ಆಳುವ ವರ್ಗವನ್ನು ಆಶ್ರಯಿಸಿಯೇ ಬದುಕಬೇಕಿತ್ತು. ಈ ಸೇವಕ ವರ್ಗದ ಅಲೆಮಾರಿ ಸಮುದಾಯಗಳಲ್ಲಿ ಬುಡ್ಗ ಜಂಗಮ್ ಸಮುದಾಯವು ಬುರ್ರಕಥಾ,ಹಗಲುವೇಷ ಮತ್ತು ಗಂಗಿಗೌರಿ ಗಾಯನ ಇತ್ಯಾದಿ ಸಂಗೀತ ಸಾಹಿತ್ಯಗಳ ಮೂಲಕ ಮನರಂಜನೆ ಮತ್ತು ಮಾನವೀಯ ಮೌಲ್ಯಗಳ ಜ್ಞಾನವನ್ನು ನೀಡುತ್ತಿದ್ದರು.

ಭಾರತದ ಮಧ್ಯಕಾಲೀನ ರಾಜಕೀಯ ಸಂದರ್ಭದಲ್ಲಿ ಸಂಭವಿಸಿದ ವಿಪ್ಲವಗಳ ಕಾರಣಕ್ಕಾಗಿ ಇಲ್ಲಿನ ಪಾರಂಪರಿಕ ಉತ್ಪಾದನಾ ವಲಯಗಳು ಬದಲಾವಣೆಗೊಂಡವು. ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಬ್ರಿಟಿಷರು ಆರ್ಥಿಕ ಕ್ಷೇತ್ರವನ್ನು ನಿಯಂತ್ರಣ ಮಾಡಿದರು. ನಂತರ ದುಡಿಯುವ ವರ್ಗದ ಸಮುದಾಯಗಳು ಮತ್ತು ಬುಡ್ಗ ಜಂಗಮ್ ಸಮುದಾಯವು ಸ್ವತಂತ್ರಕ್ಕಾಗಿ ಮತ್ತು ತಮ್ಮ ಹಕ್ಕುಗಳಿಗಾಗಿ ತಮ್ಮ ಕಲೆಗಳ ಮೂಲಕ ಹೋರಾಟ ಮಾಡಿದರು. ಇದಕ್ಕೆ ಸಾಕ್ಷಿಯಂತೆ  ಬರಗೂರು

ರಾಮಚಂದ್ರಪ್ಪನವರ ನಿರ್ದೇಶನದ ಹಗಲುವೇಷ ಚಲನಚಿತ್ರದಲ್ಲಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಬುಡ್ಗ ಜಂಗಮರನ್ನು ನೋಡಬಹುದು. ನಂತರ ಬುಡ್ಗ ಜಂಗಮರು ವಿವಿಧ ಜಾತಿಗೊಂದು ವೇಷಗಳನ್ನು ಹಾಕಿಕೊಂಡು ವಿಡಂಬನೆ ಮತ್ತು ಹಾಸ್ಯ ಮಾಡುತ್ತಾ ಜನಸಾಮಾನ್ಯರಿಗೆ ಮನರಂಜನೆ ನೀಡುತ್ತಾ, ಪ್ರಾದೇಶಿಕ ಮೀತಿಗಳನ್ನು ಹಾಕಿಕೊಂಡು ಪ್ರದರ್ಶನ ನೀಡುತ್ತಾ ಬಂದರು. ಈ ವೃತ್ತಿಗಳೇ ಬೇರೆ ಬೇರೆ ಪಂಗಡಗಳಾಗಿ, ಜಾತಿಗಳಾಗಿ ರೂಪಗೊಂಡವು. ಆದರೆ ಮೂಲ ಒಂದೇ ಎನ್ನುವ ಒಂದೇ ಗುಂಪಿಗೆ ಸೇರಿದವರು ಎನ್ನುವ ಕುಲಶಾಸ್ತ್ರೀಯ ಅಧ್ಯಯಗಳ ಮೂಲಕ ಸಾಮ್ಯತೆಗಳು ಕಾಣಬಹುದಾಗಿದೆ.

ಬುಡ್ಗ ಜಂಗಮ್ ಸಮುದಾಯದ ಸಾಮಾಜಿಕ ಅಧ್ಯಯನ ಎಂಬ ಶಿರ್ಷಿಕೆಯನ್ವಯ ಈ ಸಮುದಾಯದ ಸಾಮಾಜಿಕ ಸ್ಥಿತಿಯನ್ನು ಕಂಡುಕೊಳ್ಳಲು ಸಂಶೋಧನೆಯ ಕಾಲದ ಮೀತಿಯಲ್ಲಿ ವ್ಯಾಪ್ತಿಯನ್ನು ಮಿತಿಗೊಳಿಸಿಕೊಂಡು ಅತ್ಯಂತ ಸೂಕ್ಷ್ಮ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕರ್ನಾಟಕದ ಪರಿಶಿಷ್ಟ ಜಾತಿ ಪಟ್ಟಿಯ ೧೦೧ ಸಮುದಾಯಗಳಲ್ಲಿ ಕ್ರಮ ಸಂಖ್ಯೆ ೧೯ರ ಸೂಕ್ಷ್ಮ ಅತಿಸೂಕ್ಷ ಸಮುದಾಯವಾದ ಅಲೆಮಾರಿ ಬುಡ್ಗ ಜಂಗಮ್ ಸಮುದಾಯವು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಾಗೂ ರಾಜಕೀಯವಾಗಿ ಅತ್ಯಂತ ಹಿಂದುಳಿದಿದ್ದು ಸಂವಿಧಾನಬದ್ಧ ಮೀಸಲಾತಿಯ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಸ್ವತಂತ್ರ ಭಾರತದಲ್ಲಿ ಸಾಮಾಜಿಕ ನ್ಯಾಯ ಸಿಗದೆ ಅತಂತ್ರಸ್ಥಿತಿಯಲ್ಲಿದ್ದಾರೆ.

ಇವರು ಮಾಂಸಹಾರಿಗಳಾಗಿದ್ದು, ಗುಡ್ಡಗಾಡಿನಲ್ಲಿ, ಊರಹೊರ ವಲಯದಲ್ಲಿ, ಗುಡಾರ ಗುಡಿಸಿಲಿನಲ್ಲಿ ವಾಸಿಸುತ್ತಾ, ಒಂದು ಕಡೆ ನೆಲೆನಿಲ್ಲದೆ ನರಂತರವಾಗಿ ಅಲೆಮಾರಿಗಳಾಗಿ ಸಂಚರಿಸುತ್ತಾ, ಶ್ರೀಸಾಮಾನ್ಯರಿಗೆ ನಾಡಿನ ದಾರ್ಶನಿಕರ ಪುಣ್ಯಪುರುಷರ, ಪುರಾಣಗಳ, ಸಮುದಾಯಗಳ ಚರಿತ್ರೆಗಳನ್ನು, ಬುಡಕಟ್ಟು ಮಹಾಕಾವ್ಯಗಳನ್ನು ಮೌಖಿಕ ಸಾಹಿತ್ಯ ಮತ್ತು ವೇಷಭೂಷಣಗಳ ಮೂಲಕ ನಾಡಿನ ಉದ್ದಗಲಕ್ಕೂ ಕೇರಿ ಕೇರಿಗಳಲ್ಲಿ ಮನೆಮನೆಗೆ ತೆರಳಿ ಕಲಾಪ್ರದರ್ಶನ ನೀಡುತ್ತಾ, ಸಮಾಜದ ಕಾಲಕ್ಕೆ ತಕ್ಕಂತೆ ಚಕ್ಕೆಗೊಂಬೆಯಾಟ, ತೊಗಲುಗೊಂಬೆಯಾಟ, ಬೀದಿ ಭಾಗವತಂ, ಗಂಗಿಗೌರಿ ಮೇಳ, ಬುರ್ರಕಥಾ ಮೇಳ, ಹಗಲುವೇಷ ನಾಟಕಗಳು, ತತ್ವಪದ, ಜಾನಪದ ಸಂಗೀತ, ಸುಗಮ ಸಂಗೀತ ಇತ್ಯಾದಿ ಕಲೆಗಳನ್ನು ಪ್ರದರ್ಶನ ಮಾಡುತ್ತಾ ದಾನಧರ್ಮ ಪಡೆದು ಜೀವಿಸುತ್ತಾ ಬಂದಿದ್ದಾರೆ.

ಇವರನ್ನು ಬೇಡ(ಬುಡ್ಗ) ಜಂಗಂ, ಬೇಡ ಜಂಗಮ್, ಬುಡ್ಗ ಜಂಗಮ್ ಎಂದು ಪ್ರಾದೇಶಿಕವಾಗಿ ವಿವಿಧ ಹೆಸರುಗಳಿಂದ ಕರೆದಿದ್ದಾರೆ. 'ಬುಡ್ಗ' ಎಂದರೆ ಬುರ್ರಕಥಾ ಕಲಾಪ್ರಕಾರದಲ್ಲಿ ಬಹುಮುಖ್ಯವಾಗಿ ಬಳಸುವ ಒಂದು ಸಂಗೀತದ ವಾದ್ಯ. ಬುಡ್ಗ ಜಂಗಮ್ ಸಮುದಾಯದ ಅಸ್ಮಿತೆಯನ್ನು ಕಟ್ಟಿಕೊಡುವುದೇ ಈ 'ಬುಡ್ಗ' ವಾದ್ಯವಾಗಿದೆ. ಈ ಬುಡ್ಗ ವಾದ್ಯದ ಮೂಲಕ ಶೈವ(ಜಂಗಂ), ಶೈವೇತರ ಕಥೆಗಳು ವೀರಪುರುಷರ ಮಹಾಕಾವ್ಯಗಳನ್ನು, ನೀತಿ ಸಂದೇಶಗಳನ್ನು ಹೇಳುತ್ತಾ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸದಾ ಅಲೆಯುವುತ್ತಿದ್ದರಿಂದ ಇವರನ್ನು 'ಬುಡ್ಗ ಜಂಗಮರು ಎಂದು ಕರೆದಿದ್ದಾರೆ. ಶೈವ ಕಥೆಗಳಿಗೆ ತೆಲುಗು ಪ್ರದೇಶದಲ್ಲಿ ಜಂಗಂ ಕಥೆಗಳು ಎಂದು ಕರೆಯುವುದರಿಂದ ಈ ಜಂಗಂ ಪದ ಬಂದಿದೆ.

ಬುಡ್ಗ ಜಂಗಮರು ಬೇಟೆಯಾಡುವ ವೃತ್ತಿ ಹೊಂದಿರುವುದರಿಂದ ಇವರನ್ನು ಕೆ ಎಸ್ ಸಿಂಗ್ ಅವರು Anthropological Survey of India. ***The Scheduled Castes*** ಎಂಬ ಕೃತಿಯಲ್ಲಿ 'The Beda/Budga Jangam were a community of hunters' ಎಂದು ಖಚಿತಪಡಿಸಿದ್ದಾರೆ. ಹಾಗಾಗಿ ಬೇಟೆಯಿಂದ ಜೀವನಾರಂಭಿಸಿದ ಹಾಗೂ ಧಾರ್ಮಿಕ ಕ್ರಿಯಾವಿಧಾನಗಳಲ್ಲಿ ಎರಡಾಣೆ(ಬೇಡ) ಹಣವನ್ನು ಪಡೆಯುವುದರಿಂದ ಮತ್ತು ಜೀವನಾರ್ತಕ ಆಚರಣೆಗಳಲ್ಲಿ ಎರಡಾಣೆ(ಬೇಡ) ನಾಣ್ಯವನ್ನು ಬಳಸುವುದರಿಂದ ಇವರನ್ನು **ಬೇಡ ಬುಡ್ಗ ಜಂಗಮರು** ಎಂದು ಕರೆದಿದ್ದಾರೆ.

ಬುಡ್ಗ ಜಂಗಮರ ಜೀವನ್ರಾತಕ ಆಚರಣೆಯಲ್ಲಿ **'ಬೇಡ (ಎರಡಾಣೆ)'** ನಾಣ್ಯವು ಪ್ರಮುಖ ಪಾತ್ರವಹಿಸುತ್ತದೆ. ದೇವರಿಗೆ ಮುಡಿಪು ಕಟ್ಟುವಾಗ, ಮಕ್ಕಳಿಗೆ ಸಂದುಗಳು ಬಂದಾಗ, ಮದುವೆಯ ಸಂದರ್ಭದಲ್ಲಿ ಓಲಿ ಕೊಡುವಾಗ, ಗಂಡನ ಮನೆಗೆ ಕಳಿಸುವ ಸಂದರ್ಭದಲ್ಲಿ, ವಿಚ್ಛೇಧನ ನೀಡುವ ಸಂದರ್ಭದಲ್ಲಿ, ಕುಲ ಪಂಚಾಯಿತಿಯ ತಪ್ಪು ದಂಡ ಇಡುವ ಸಂದರ್ಭದಲ್ಲಿ, ಮರುಮದುವೆ ಮಾಡಿಕೊಳ್ಳುವ ಸಂದರ್ಭದಲ್ಲಿ, ಶವಸಂಸ್ಕಾರದ ನೆರವೇರಸುವ ಸಂದರ್ಭದಲ್ಲಿ, **'ಬೇಡ (ಎರಡಾಣೆ)'** ನಾಣ್ಯವನ್ನು ಬಳಸುತ್ತಿದ್ದರಿಂದ ಇವರಿಗೆ **ಬೇಡ ಜಂಗಮರು** ಎಂದು ಕರೆದಿದ್ದಾರೆ.

ಇವರು ದಕ್ಷಿಣ ಭಾರತದ ದ್ರಾವಿಡ ಭಾಷಾವಾರು ಪ್ರದೇಶಗಳಾದ ಆಂಧ್ರಪ್ರದೇಶ, ತೆಲಂಗಾಣ, ಮಹಾರಾಷ್ಟ್ರ ಹಾಗೂ ಕರ್ನಾಟಕದಲ್ಲಿ ನೆಲೆಸಿದ್ದಾರೆ. ಕರ್ನಾಟಕದಲ್ಲಿ ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ.

ಇವರು ಬೆಟ್ಟ, ಗುಡ್ಡ, ಬಯಲು ಪ್ರದೇಶದಲ್ಲಿ ಪ್ರತ್ಯೇಕವಾದ ವಾಸ, ಇಂಟಿಪೇರ್ಲು(ಕುಲ, ಬೆಡಗುಗಳು), ಯಾಟ (ಬೇಟೆ), ಮ್ಯಾಳಂ(ಮೇಳ), ಷಂಡ್ರಾ, ಚಿಲ್ಲರ ಭಿಕ್ಷಂ, **'ಡ್ಯಾರಬಂತ'**, **'ಕಂಟ್ಲಂ'**, ಗುಣಸಿಪ್ಪ, ಪುರುಡು(ನಾಮಕರಣ), ಪುಟ್ಟೆಂಟಿಕಲು ತಿಸೆದಿ, ಸಾಪಲೆಸೆದಿ, ಬೋದುಗುಡುಪು(ಓಲಿ ಅಥವಾ ತೆರ ಕೊಡುವುದು), ಮಂಗಳಸೂತ್ರಂ, ನಲ್ಲಪೂಸಲು, ನಾಗೋಲಿ, ಬೊಟ್ಟು ಪೆಟ್ಟುಕುನೇದಿ, ಮುಂತಕಲ್ಲು, ಮ್ಯಾರ, ಪೂಟ, ಕಲ್ಲುಕುನೇದಿ, ಆಚಾರಂ, ಬಿಡಾರು ಆಚರಣೆ, ಕುಲದ ಕಟ್ಟಾಚಾರ, **'ಬುಡ್ಗ(ಮರುಗು)'** ಭಾಷೆ, ಕುಲಂ ನ್ಯಾಯಂ, ಕಪತಾ, ಚುಸುಕುನೇದಿ (ಪ್ರೇತರಾಧನೆ) ಬುಡ್ಗ ಜಂಗಮರ ಮೂಲಭೂತ ಲಕ್ಷಣಗಳಾಗಿವೆ.

ಜಮ್ಮುಲಮ್ಮ, ಸುಂಕ್ಲಮ್ಮ, ಮಾರೆಮ್ಮ, ಎಲ್ಲಮ್ಮ ದೇವತೆಯ ಮಾತೃ ದೇವತಾರಾಧಕರಾಗಿದ್ದಾರೆ. ಜಮ್ಮುಲಮ್ಮ ಸುಂಕ್ಲಮ್ಮ ಮತ್ತು ಮಾರೆಮ್ಮ ದೇವಸ್ಥಾನದ ಕುಂಕುಮ ಭಂಡಾರವನ್ನು ಪೆಟ್ಟಿಗೆಯಲ್ಲಿಟ್ಟುಕೊಂಡು ಪೂಜಿಸುತ್ತಾರೆ. ವರ್ಷಕ್ಕೊಮ್ಮೆ ಕಡುಬು ಗುಗ್ಗರಿ, ಬೆಲ್ಲದಪಾಲಕ, **ವಿಶೇಷವಾಗಿ ಹೆಂಡ ಸರಾಯಿಯನ್ನು ನೈವೇದ್ಯವಾಗಿ** ಅರ್ಪಿಸುವುದರ ಮೂಲಕ ಕುರಿ ಕೋಳಿ ಪ್ರಾಣಿಗಳಿಂದ ಜಲ್ತ(ವರ) ಕೇಳಿದ ನಂತರ ಬಲಿ ನೀಡುವ ಸಂಪ್ರದಾಯವನ್ನು ಹೊಂದಿದ್ದಾರೆ.

ಮಾಂಸಹಾರಿಗಳಾದ ಇವರು ಅಳಿಲು, ಉಡ, ಮುಂಗುಸಿ, ಮೊಲ, ನರಿ, ಕಾಡು ಬೆಕ್ಕು, ಮುಳ್ಳುಹಂದಿ, ಆಮೆ, ಮೀನು, ಏಡಿ, ಕೌಜುಗ, ನೀರುಕೋಳಿ ಇತ್ಯಾದಿ ಸಣ್ಣಮಟ್ಟ ಪ್ರಾಣಿಗಳನ್ನು ಬೇಟೆಯಾಡಿ

ತಿನ್ನುತ್ತಾರೆ. ಏನಿಲ್ಲದಿದ್ದರೂ ನಂಜಿಕೊಳ್ಳಲು ಮೀನು ಆದರೂ ಬೇಕೆ ಬೇಕು. ಇದೀಗ ಬೇಟೆಗಾರಿಕೆ ನಿಷೇಧ ಕಾಯ್ದೆಯಿಂದ ಅವರು ಪೌಷ್ಟಿಕ ಆಹಾರದಿಂದ ವಂಚಿತರಾಗಿದ್ದಾರೆ.

ಬುಡ್ಗ ಜಂಗಮರಲ್ಲಿ ಬುಡಕಟ್ಟು ಗುಣಲಕ್ಷಣಗಳನ್ನು ಹೊಂದಿರುವುದನ್ನು ಈಕೆಳಗಿನ ಮಾನವಶಾಸ್ತ್ರಜ್ಞರ ಬುಡಕಟ್ಟು ಲಕ್ಷಣಾಗಳಗಳ ಮೂಲಕ ಕುರುಹುಗಳನ್ನು ಕಂಡುಕೊಳ್ಳಲಾಗಿದೆ. ಮಾನವಶಾಸ್ತ್ರಜ್ಞರು ಒಂದು ಸಮುದಾಯ ಬುಡಕಟ್ಟು ಎಂಬುದಕ್ಕೆ ಈ ಕೆಳಗಿನಂತೆ ಲಕ್ಷಣಗಳನ್ನು ಹೊಂದಿರುತ್ತವೆ ಎಂದು ಹೇಳಿದ್ದಾರೆ.

ಅ. ಆದಿಕಾಲದ ಗುಣಲಕ್ಷಣಗಳು

ಆ. ಪ್ರತ್ಯೇಕವಾದ ಭೌಗೋಳಿಕತೆ

ಇ. ಭಿನ್ನವಾದ ಸಂಸ್ಕೃತಿ

ಈ. ಅನ್ಯರನ್ನು ಅನುಮಾನದಿಂದ ನೋಡುವ ದೃಷ್ಟಿ

ಊ. ಹಿಂದುಳಿಯುವಿಕೆ

**ಕೋಷ್ಟಕ ೧೦.೧: ಬುಡಕಟ್ಟು ಲಕ್ಷಣಗಳನ್ನು ಹೊಂದಿರುವ ಬುಡ್ಗ ಜಂಗಮರು**

| ಕ.ಸಂ ಬುಡಕಟ್ಟು ಲಕ್ಷಣಗಳು | ಬುಡ್ಗ ಜಂಗಮ್ ಸಮುದಾಯ |
|---|---|
| ೧. ಪ್ರತ್ಯೇಕವಾದ ಸಂಸ್ಕೃತಿ. | ಗುಡ್ಡ, ಬೆಟ್ಟ, ಬಯಲು ಪ್ರದೇಶದಲ್ಲಿ ಪ್ರತ್ಯೇಕವಾದ ವಾಸ, ಬಾಣಂತಿಯ ಮಾಸವನ್ನು ನೆಲದಲ್ಲಿ ಹೂಣಿ ಕಲ್ಲು ಇಟ್ಟು ಪೂಜಿಸುತ್ತಾರೆ. ಭಿನ್ನವಾದ ಆಚಾರವಿಚಾರ, ಭಾಷೆ, ಕಲೆ, ಆಹಾರ, ಉಡಿಗೆ ತೊಡಿಗೆ, ಗುಗ್ಗರಿ ಹಬ್ಬ, ಮ್ಯಾಳಂ, ಷಂಡ್ರಾ, ಕಲ್ಲುಕುನೇದಿ, ಕಮ್ರಂ ಪೆಟ್ಟೇದಿ, ಶುಭ ಅಶುಭ ಕಾರ್ಯಗಳಲ್ಲಿ ವಿಶೇಷವಾಗಿ ಹೆಂಡ ಸರಾಯಿ, ಬೇಡ ನಾಣ್ಯವನ್ನು ಬಳಸುತ್ತಾರೆ. |
| ೨. ಪಾರಂಪರಿಕ ಬೇಟೆಗಾರಿಕೆ. | ಬೇಟೆಗಾರಿಕೆ ಅವಲಂಬಿಸಿಕೊಂಡು ಜೀವಿಸುತ್ತಿದ್ದಾರೆ. |
| ೩. ತನ್ನದೇಯಾದ ಪ್ರತ್ಯೇಕವಾದ ಕಲೆ | ಬುರ್ರಕಥಾ, ಗಂಗಿಗೌರಿ ಗಾಯನಮೇಳ, ಹಗಲುವೇಷ ಕಲೆಯನ್ನು ಹೊಂದಿದ್ದಾರೆ. |
| ೪. ಪಾರಂಪರಿಕ ವೈದ್ಯ ಪದ್ಧತಿ | ಹುಟ್ಟಿನಿಂದ ಸಾವಿನವರೆಗೂ ಸಂಭವಿಸುವ ಕೆಲವು ರೋಗಗಳಿಗೆ ತಮ್ಮಲ್ಲಿಯೇ ವಿಶಿಷ್ಟವಾದ ಗಿಡಮೂಲಿಕೆಗಳಿಂದ ಜನಪದ ವೈದ್ಯಪದ್ಧತಿಯನ್ನು ಹೊಂದಿದ್ದಾರೆ. |

| | |
|---|---|
| ೫. ಅತಿಯಾದ ರಕ್ತ ಸಂಬಂಧ ಅವಲಂಬನೆ. | ಹೆಚ್ಚಾಗಿ ರಕ್ತ ಸಂಬಂಧದಲ್ಲಿಯೇ ವಿವಾಹಗಳು ಹೆಚ್ಚು ಮಾಡಿಕೊಳ್ಳುತ್ತಾರೆ. |
| ೬. ಪ್ರಕೃತಿಯ ಕುಲ ಬೆಡಗುಗಳು. | ಅಶ್ವಿ, ಗಂಧಂ, ಡೊಕ್ಕಳೊ, ಯಡವಲಿ, ಸಿರಿವಾಟಿ, ಕೊಂಡಪಲ್ಲಿ, ಮೋತಿ, ರುದ್ರಾಕ್ಷಿ, ಗಡ್ಡಂ ಇತ್ಯಾದಿ ಪ್ರಕೃತಿಯ ಆದಿವಾಸಿ ಬುಡಕಟ್ಟು ಕುಲ ಬೆಡಗುಗಳಿವೆ. |
| ೭. ಓಲಿ(ತೆರ) ಕೊಡುವ ಸಂಪ್ರದಾಯ | ಈ ಸಮುದಾಯದಲ್ಲಿ ಹೆಣ್ಣಿಗೆ ಓಲಿ(ವಧು ದಕ್ಷಿಣೆ) ನೀಡಿ ಮದುವೆಯಾಗುವ ಪದ್ಧತಿ ಇದೆ. ಹೆಣ್ಣಿನ ಮನೆಯಲ್ಲಿಯೇ ಮದುವೆಮಾಡಿಕೊಂಡು ಖರ್ಚುವೆಚ್ಚವೆಲ್ಲಾ ಗಂಡಿನ ಕಡೆಯವರು ಭರಿಸುವ ಪದ್ಧತಿ ಇದೆ. |
| ೮. ಮಾತೃ ದೇವತಾರಾಧಕರು. | ಜಮ್ಮುಲಮ್ಮ, ಸುಂಕ್ಲಮ್ಮ, ಮಾರೆಮ್ಮ, ಎಲ್ಲಮ್ಮ ಇತ್ಯಾದಿ ಮಾತೃ ದೇವತೆಗಳನ್ನು ಹೊಂದಿದ್ದಾರೆ. |
| ೯. ಪ್ರತ್ಯೇಕ ಭಾಷೆ. | ಬುಡ್ಗ (ಮರುಗು) ಭಾಷೆಯನ್ನು ಮಾತನಾಡುತ್ತಾರೆ. |
| ೧೦. ದೈವದ ವಿಶಿಷ್ಟ ಕಲ್ಪನೆ ಹಾಗೂ ಅಪಾರ ಭಕ್ತಿ. | ಹಿರಿಯರೇ ದೈವಗಳೆಂದು ನಂಬುತ್ತಾರೆ. ಪ್ರೇತಾರಾಧನೆಯನ್ನು ಕುರಿ, ಕೋಳಿಗಳನ್ನು ಬಲಿ ಕೋಡುವ ಸಂಪ್ರದಾಯ ಹೊಂದಿದೆ. |
| ೧೧. ಆಹಾರ ಪದ್ಧತಿ | ಮಾಂಸಹಾರ ಸೇವನೆ, ಏನಿಲ್ಲದಿದ್ದರೂ ನಂಜಿಕೊಳ್ಳಲು ಮೀನು ಆದರೂ ಬಳಸುತ್ತಾರೆ. |
| ೧೨. ಕಾಡಿಗೆ/ಪ್ರಕೃತಿಗೆ ಹತ್ತಿರವಾದ ಹಾಗೂ ಅವಲಂಬನೆಯ ಬದುಕು. | ಹೆಚ್ಚಾಗಿ ಕಾಡು ಬೆಟ್ಟಗುಡ್ಡ ಮತ್ತು ನೀರಿನ ಪ್ರದೇಶದ ಹಂಚಿನಲ್ಲಿ ಪ್ರತ್ಯೇಕವಾಗಿ ವಾಸ ಮಾಡುತ್ತಾರೆ. |
| ೧೩. ಬಹಿಷ್ಕಾರ ಹಾಕುವ ಪದ್ಧತಿ. | ಇವರಲ್ಲಿ ಅನ್ಯ ಸಮುದಾಯದ ಹೆಣ್ಣುಮಕ್ಕಳನ್ನು ಅಥವಾ ಹೆಣ್ಣುಮಕ್ಕಳು ಅನ್ಯ ಪುರುಷರನ್ನು ಮದುವೆಯಾದರೆ ಬಹಿಷ್ಕಾರ ಹಾಕುವ ಪದ್ಧತಿ ಇದೆ. |

| | |
|---|---|
| ೧೪. ಅನ್ಯರನ್ನು ಅನುಮಾನದಿಂದ ನೋಡುವ ದೃಷ್ಟಿ | ಇವರಲ್ಲಿ ಬೇರೆ ಶಿಷ್ಟ ಸಮುದಾಯದ ಜನಗಳನ್ನು ಅನ್ಯರೆಂದೆ ಭಾವಿಸುತ್ತಾರೆ. |
| ೧೫. ಕುಲಪಂಚಾಯಿತಿ ವ್ಯವಸ್ಥೆ | ಜಾತಿಪಂಚಾಯಿತಿ ವ್ಯವಸ್ಥೆ ಇದೆ. |
| ೧೬. ಹಿಂದುಳಿಯುವಿಕೆ | ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಸಾಮಾನ್ಯ ನಾಗರಿಕ ಸಮಾಜಕ್ಕಿಂತ ತುಂಬಾ ಹಿಂದುಳಿದಿದೆ. ಕಡು ಬಡತನ, ಅನಕ್ಷರತೆ, ಸರಿಯಾದ ಸೂರು ಇಲ್ಲದೇ, ನಿಶ್ಚಿತ ಆರ್ಥಿಕ ಮೂಲಗಳು ಇಲ್ಲದೇ ಭಿಕ್ಷಾಟನೆ ಮಾಡಿಕೊಂಡು ಜೀವಿಸುತ್ತಿದ್ದಾರೆ. |

ಹೀಗೆ ಈ ಎಲ್ಲಾ ಬುಡಕಟ್ಟು ಗುಣಲಕ್ಷಣಗಳನ್ನು ಹೊಂದಿರುವ ಬುಡ್ಗ ಜಂಗಮರು ಪ್ರತ್ಯೇಕವಾದ ಸಂಸ್ಕೃತಿಯನ್ನು ಹೊಂದಿದ್ದಾರೆ.

ಭಾರತದಲ್ಲಿ ಕೆಲವು ಸಮುದಾಯಗಳು ಸಾಮಾಜಿಕ, ಆರ್ಥಿಕ, ಮತ್ತು ಸಾಂಸ್ಕೃತಿಕ ಬದಲಾವಣೆ ಹಾಗೂ ಅವಕಾಶಗಳನ್ನು ಪಡೆದುಕೊಂಡು ಸಮಾಜದ ಮುಖ್ಯವಾಹಿನಿಯ ಎಲ್ಲೆಯಲ್ಲಿವೆ. ಆದರೆ ಗ್ರಾಮೀಣ ಪ್ರದೇಶದ ಅಲೆಮಾರಿ ಬುಡ್ಗ ಜಂಗಮ್ ಸಮುದಾಯವು ಸ್ವತಂತ್ರ ಬಂದು ೭೩ ವರ್ಷಗಳು ಕಳೆದರೂ ನೆಲ ಮತ್ತು ನೆಲೆ ಎರಡರಿಂದಲೂ ವಂಚಿತರಾಗಿ ನಿಶ್ಚಿತ ಆರ್ಥಿಕ ಮೂಲಗಳು ಇಲ್ಲದೆ ಅಲೆಯುತ್ತಿದ್ದಾರೆ. ಬಲಿಷ್ಠ ಸಮುದಾಯಗಳಿಗೆ ಅಲೆಮಾರಿ ಸಮುದಾಯಗಳು ನಿಕೃಷ್ಟವಾಗಿ ಕಾಣಬಹುದಾದರೂ ಈ ಎರಡೂ ಸಮುದಾಯಗಳ ಸಾಂಸ್ಕೃತಿಕ ಜಗತ್ತು ಅಳವಡಿಸಿಕೊಂಡಿರುವ ಮೌಲ್ಯಗಳು, ಜೀವನಶೈಲಿ ಇತ್ಯಾದಿ ಕ್ಷೇತ್ರಗಳಲ್ಲಿ ವಿಭಿನ್ನರಾಗಿದ್ದಾರೆ. ಬದುಕಿನ ಬಹುಭಾಗ ಅಲೆಮಾರಿಗಳಾಗಿಯೇ ಬದುಕಿದ್ದ ಈ ಸಮುದಾಯಕ್ಕೆ ಶಿಕ್ಷಣವೆಂಬುದು ಮರೀಚಿಕೆಯಾಗಿದೆ. ಸಂವಿಧಾನದ ಮೀಸಲಾತಿಯ ಪಟ್ಟಿಯಲ್ಲಿ ಇದ್ದರೂ ಈ ಸಮುದಾಯವು ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಪ್ರಸ್ತುತ ಅಧ್ಯಯನವನ್ನು ಕ್ಷೇತ್ರಕಾರ್ಯದ ಮೂಲಕ ಬುಡ್ಗ ಜಂಗಮ್ ಸಮುದಾಯವು ಎದುರಿಸುತ್ತಿರುವ ಅನೇಕ ಸಮಸ್ಯೆಗಳನ್ನು ಅಂದರೆ ಇನ್ನೂ ಕೆಲವು ಕಡೆ ಜಾತಿ ಪ್ರಮಾಣ ಪತ್ರಗಳ ನೀಡುವಿಕೆಯ ಗೊಂದಲಗಳನ್ನು ಹೊಂದಿದೆ. ಇಂತಹ ಸಮಸ್ಯೆಗಳಿಗೆ ಗುರುತಿಸಿ ಪರಿಹಾರೋಪಾಯಗಳನ್ನು ಹುಡುಕಲಾಗಿದೆ. ಒಟ್ಟಾರೆಯಾಗಿ ಆಧುನಿಕ ಸ್ಪರ್ಧಾತ್ಮಕ ಯುಗದಲ್ಲಿ ಈ ಸಮುದಾಯವೂ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದ ಸಮುದಾಯವಾಗಿದೆ. ಇಂತಹ ಶೋಷಿತ ದಲಿತ ಸಮುದಾಯಕ್ಕೆ ವಿವಿಧ ಯೋಜನೆಗಳನ್ನು ರೂಪಿಸಿ ಸಾಮಾಜಿಕ ನ್ಯಾಯ ಒದಗಿಸಬೇಕಾಗಿದೆ.

## ಅಧ್ಯಯನದ ಫಲಿತಗಳು

ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಸಮಗ್ರ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಿ ಮತ್ತು ಆಂಧ್ರ ಪ್ರದೇಶ ಮತ್ತು ಹೈದರಾಬಾದ್-ಕರ್ನಾಟಕದ ಕೆಲವು ತಿಳುವಳಿಕೆದಾರರ ಮಾಹಿತಿಯನ್ನಾಧರಸಿ ಅಧ್ಯಯನದ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

- ಈ ಸಮುದಾಯವು ಪ್ರಾದೇಶಿಕವಾಗಿ ವೃತ್ತಿಯಾಧಾರಿತವಾಗಿ ವಿವಿಧ ಹೆಸರುಗಳಿಂದ ಕರೆಯುತ್ತಿದ್ದರಿಂದ ಈ ಸಮುದಾಯವು ಅಸ್ತಿತ್ವದ ಸಮಸ್ಯೆ(Identity Crisis) ಹಾಗೂ ಸಮುದಾಯದ ಗುರತಿಸುವಿಕೆ (Community Identification)ಯ ಸಮಸ್ಯೆಯನ್ನು ಎದುರಿಸುತ್ತಿದೆ.

- ಬುಡ್ಗ ಜಂಗಮ್ ಸಮುದಾಯವು ಪ್ರಾದೇಶಿಕವಾಗಿ ಬೇಡ ಜಂಗಮ್ ಬುಡ್ಗ ಜಂಗಮ್ ಎಂದು ಗುರುತಿಸಿದಂತೆ ಇವರು ಮೂಲತಃ ಬೇಡ ಬುಡಕಟ್ಟಿನ ಒಂದು ಉಪ ಪಂಗಡವಾಗಿ ಬೇಟೆಯನ್ನು ಅವಲಂಬಿಸಿ ಜೀವನ ಮಾಡಿ ಕಾಲಾಂತರದಲ್ಲಿ ವೃತ್ತಿಯನ್ನಾಧರಿಸಿ ಪ್ರತ್ಯೇಕವಾದ ಸಮುದಾಯವಾಗಿದೆ.

- ಬಳ್ಳಾರಿ ಜಿಲ್ಲೆಯಲ್ಲಿ ಬುಡ್ಗ ಜಂಗಮರ ವಸತಿ ವ್ಯವಸ್ಥೆಯಲ್ಲಿ ಶೇಕಡಾ ೧೦೦ರಲ್ಲಿ ೧೬.೮% ಸ್ವಂತ ಮನೆ, ೧೮% ಸರ್ಕಾರದ ಜನತಾ ಮನೆ ಉಳಿದ ೬೫.೨% ಕಟ್ಟಡ ಮನೆಗಳು ಇಲ್ಲದೆ ಇನ್ನೂ ಟೆಂಟ್, ಗುಡಾರ ಗುಡಿಸಲುಗಳಲ್ಲಿ ವಾಸ ಮಾಡುತ್ತಿದ್ದಾರೆ.

- ಈ ಸಮುದಾಯದ ಕುಟುಂಬಗಳ ಭೂಹಿಡುವಳಿದಾರರ ಪ್ರಮಾಣ ಮತ್ತು ಭೂರಹಿತರ ಪ್ರಮಾಣವು ಶೇ ೧೦೦ರಲ್ಲಿ ೮೨% ಭೂರಹಿತರಿರುವುದು ಕಂಡುಬರುತ್ತದೆ. ಉಳಿದ ೧೬% ನೀರಾವರಿ ಭೂಮಿ ಹೊಂದಿದ್ದು, ೨% ಮಾತ್ರ ಒಣಭೂಮಿಯನ್ನು ಹೊಂದಿದ್ದಾರೆ.

- ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ್ ಸಮುದಾಯದ ಪಾರಂಪರಿಕ ವೃತ್ತಿಗಳಾದ ಹಗಲುವೇಷಗಾರಿಕೆ ವೃತ್ತಿಯಲ್ಲಿ ಶೇ ೧೧.೫ ಜನ, ಬುರ್ರಕಥಾ ಕಾವ್ಯ ಪ್ರದರ್ಶನದಲ್ಲಿ ಶೇ ೧.೫ ಜನ, ಗಂಗಿಗೌರಿ ವೃತ್ತಿ ಗಾಯನ ಮೇಳದಲ್ಲಿ ಶೇ ೦.೫ ಜನರಿದ್ದು ಇವರ ಪಾರಂಪರಿಕ ವೃತ್ತಿ ಸರಿಯಾದ ಪ್ರೋತ್ಸಾಹ ಇಲ್ಲದೆ ಅಳವಿನಂಚಿನಲ್ಲಿದೆ.

- ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರು ಸಾಕ್ಷರಕ್ಕೆ ಅರ್ಹರಾದವರು ಪುರುಷರು ೧೪೫೩, ಮಹಿಳೆಯರು ೧೩೦೯, ಒಟ್ಟು ೨೭೬೨ ಜನ ಅರ್ಹರಿದ್ದಾರೆ. ಇದರಲ್ಲಿ ಶೇಕಡಾ ೪೬ ಜನರು ಸಾಕ್ಷರರು, ಶೇಕಡಾ ೫೪ ಅನಕ್ಷರಸ್ಥರು ಹೊಂದಿದ್ದು ಅಧಿಕವಾಗಿ ಅನಕ್ಷರಸ್ಥರು ಇದ್ದಾರೆ.

- ಬುಡ್ಗ ಜಂಗಮರು ತಮ್ಮ ಅಶ್ವ, ಅಲ್ಲಂ, ಮೋತಿ, ಪಸ್ತಂ, ಭೂತಂ, ತಾಟಿಕೊಂಡ, ಕೊಂಡಪಲ್ಲಿ, ಬಲಗೊಲ್ಲ, ತೂರ್ಪಾಟಿ, ಮೋತಿ, ಯಡವಲಿ ಇತ್ಯಾದಿ ಕುಲ ಬೆಡಗುಗಳ ಮೂಲಕ ಬುಡ್ಗ ಜಂಗಮರ ಐಡೆಂಟಿಟಿಯನ್ನು ಗುರುತಿಸಬಹುದಾಗಿದೆ.

- ಬಳ್ಳಾರಿ ಜಿಲ್ಲೆಯಲ್ಲಿ ಅಶ್ವ, ಇಪ್ಪೋಳು, ಈರ್ನಾಲು, ಎಲಮರ್ತಿ, ಒಂಟೆದ್ದು, ಕಲ್ಯಾಣಂ, ಕೊಂಡಪಲ್ಲಿ, ಕುಮಾರೋಳು, ಕೊಂಡ್ರು, ಡೊಕ್ಕೋಳು, ತಾಟಿಕೊಂಡ, ತಿರುಪಾತಮೋಳು, ಧೂಪಂ, ಪೆಲ್ಲೂರೊಳು,

ಪೋನೊಪೋಳು, ಬಲಗೊಲ್ಲ, ಬಾದಿಗಿ, ಭಾರತ್ಕಿ, ಮಾದನಂ, ಮೀರಾಲಿ, ಮುಗ್ಗು, ಮೋತಿ, ಯಡವಲಿ, ರುದ್ರಾಕ್ಷಿ, ರೇವಲ್ಲಿ, ವಿಭೂತಿ, ಶಿರಿಸ್ಯಾಲ, ಸಂಕುಲೋಳು, ಸಿರಿಗಿರಿ, ಸಿರಿವಾಟ ಇಂಟಿಪೇರ್ಲು (ಕುಲ, ಬೆಡುಗು)ಗಳು ಒಟ್ಟು ೩೦ ಇಂಟಪೇರ್ಲು(ಕುಲ, ಬೆಡಗು)ಗಳು ಹೊಂದಿರುವ ಬುಡ್ಗ ಜಂಗಮರು ಇದ್ದಾರೆ.

• ಬುಡ್ಗ ಜಂಗಮರ ಮೂಲ ಕರ್ನಾಟಕಾಂಧ್ರದ ಗಡಿಭಾಗದ ತೆಲುಗು ಭಾಷಿಕ ಪ್ರದೇಶದ ತೆಲಂಗಾಣ ಮತ್ತು ಆಂಧ್ರಪ್ರದೇಶದ ಗದ್ವಾಲ್, ಗೊಲ್ಕಂಡ, ಶ್ರೀಶೈಲ ಪರ್ವತದ ಪ್ರದೇಶದ ಮೂಲದವರಾಗಿದ್ದಾರೆ.

• ಬುಡ್ಗ ಜಂಗಮರ ಮೂಲವನ್ನು ಬಿಡಾರು ಆಚರಿಸಿದ ಕಟ್ಟೆಮನೆಗಳಿಂದ ತಿಳಿಯಬಹುದಾಗಿದೆ.

•ಬುಡ್ಗ ಜಂಗಮರ ಕಟ್ಟೆಮನೆಗಳಾದ ಗದ್ವಾಲ ಬಿಡಾರು(ಕಟ್ಟಾ) ನಂತರ ಗೋಲ್ಕಂಡ ಬಿಡಾರು(ಕಟ್ಟಾ), ಧನ್ನವಾಡ ಬಿಡಾರು(ಕಟ್ಟಾ). ಕನಕಪುರಂ ಬಿಡಾರು(ಕಟ್ಟಾ), ಕರ್ನೂಲು ಬಿಡಾರು(ಕಟ್ಟಾ), ಆದೋನಿ ಬಿಡಾರು(ಕಟ್ಟಾ), ಗದ್ದರಾಳ ಬಿಡಾರು(ಕಟ್ಟಾ), ಗುಂತಕಲ್ ಬಿಡಾರು(ಕಟ್ಟಾ), ದರೋಜಿ ಬಿಡಾರು(ಕಟ್ಟಾ), ಹುಲಿಗಿ ಬಿಡಾರು(ಕಟ್ಟಾ), ಹಿರೇಬೊಮ್ಮನಾಳ ಬಿಡಾರು(ಕಟ್ಟಾ), ಚಿಕ್ಕಬೊಮ್ಮನಾಳ ಬಿಡಾರು(ಕಟ್ಟಾ), ಚಿಲುಕಮುಖಿ ಬಿಡಾರು(ಕಟ್ಟಾ), ಮುಸ್ಲಾಂಪುರ ಬಿಡಾರು(ಕಟ್ಟಾ), ಸೂಳೆಕ್ಕಲು ಬಿಡಾರು(ಕಟ್ಟಾ) ಕಟ್ಟೆಮನೆಗಾಗಿ ಮಾಡಿಕೊಂಡಿದ್ದರು. ಈಗ ಪ್ರಸ್ತುತವಾಗಿ ಕೊಪ್ಪಳ ಜಿಲ್ಲೆಯ ಕುದುರೆಮೋತಿ ಬಿಡಾರು(ಕಟ್ಟಾ) ಕಟ್ಟೆಮನೆಯನ್ನು ಮಾಡಿಕೊಂಡಿದ್ದಾರೆ.

•ಬುಡ್ಗ ಜಂಗಮರು ಮಾಂಸಹಾರಿಗಳಾಗಿದ್ದಾರೆ. ಬೇಟೆಗಾರಿಕೆ ನಿಷೇಧ ಕಾಯ್ದೆಯಿಂದ ತಮ್ಮ ಮೂಲ ಪಾರಂಪರಿಕ ಪೌಷ್ಟಿಕ ಆಹಾರ ತಿನ್ನುವ ಹಕ್ಕಿನಿಂದ ವಂಚಿತರಾಗಿದ್ದಾರೆ.

•ಬುಡ್ಗ ಜಂಗಮರು ಅನ್ಯರಿಗೆ ತಿಳಿಯದಂತೆ ಅವರದೇಯಾದ ಬುಡ್ಗ(ಮರುಗು) ಭಾಷೆಯನ್ನು ಮಾತನಾಡುತ್ತಾರೆ.

•ಬುಡ್ಗ ಜಂಗಮರು ಮಾತೃದೇವತಾರಾಧಕರಾಗಿದ್ದು ಪ್ರಕೃತಿಯ ಜಂಭೆ ಗಿಡ, ಬೇವಿನ ಮರ, ಕುಂಕುಮ ಮತ್ತು ಭಂಡಾರವನ್ನು ಜಮ್ಮುಲಮ್ಮ, ಸುಂಕ್ಲಮ್ಮ, ಮಾರೆಮ್ಮ, ದುರ್ಗಮ್ಮ ದೇವರುಗಳೆಂದು ಪೆಟ್ಟಿಗೆಯಲ್ಲಿಟ್ಟುಕೊಂಡು ಪೂಜಿಸುತ್ತಾರೆ. ವರ್ಷಕ್ಕೊಮ್ಮೆ ಅಥವಾ ಎರಡುವರ್ಷಕ್ಕೊಮ್ಮೆ ಈ ದೇವರುಗಳಿಗೆ ಒಕಪೊದ್ದು ಚೆಲ್ಲಿಚೇದಿ(ಒಂದೊಪ್ಪತ್ತು) ನೆರವೇರಿಸುವ ಹಾಗೂ ಕುಡುಂ,ಗುಗ್ಗುಳು ಪಂಡಗ(ಗುಗ್ಗುರಿಹಬ್ಬ), ಪಲ್ಲುಪುಲ್ಲು ಅನ್ನಂ ಮತ್ತು ಕುರಿ ಕೋಳಿ ಬಲಿ ಕೊಡುವ ಆಚರಣೆ ರೂಢಿಯಲ್ಲಿದೆ.

•ದೈವಾರಾಧನೆಯಲ್ಲಿ ಮತ್ತು ಪ್ರೇತಾರಾಧನೆಯಲ್ಲಿ ನಂಬಿಕೆ ಹೊಂದಿದ್ದು ಕುರಿ, ಕೋಳಿಗಳನ್ನು ಬಲಿಕೊಡುವ ಮೂಲಕ ತಮ್ಮ ದೈಹಿಕ ಮತ್ತು ಮಾನಸಿಕ ಸಮಸ್ಯೆಗಳು ಪರಿಹಾರವಾಗುತ್ತವೆ ಎಂಬ ನಂಬಿಕೆಯನ್ನು ಹೊಂದಿ ಆಚರಿಸುತ್ತಾರೆ.

•ಬುಡ್ಗ ಜಂಗಮರಲ್ಲಿ ಮದುವೆ ಸಂದರ್ಭದಲ್ಲಿ ಸಂಗ್ರಹಿಸಿದ ಓಲಿ(ತೆರ)ಯನ್ನು ಮತ್ತು ಕುಲ ಪಂಚಾಯಿತಿಯಲ್ಲಿ ವಿಧಿಸಿದ ದಂಡವನ್ನು ಬಿಡಾರು ಆಚರಣೆಯ ಸಂದರ್ಭದಲ್ಲಿ ಭಾಗವಹಿಸಿದ

ಎಲ್ಲಾ ಊರಿನ ಮುಖಂಡರಿಗೆ ಒಂದು ರೂಪಾಯಿಯಾಗಲಿ ಹಂಚಿಕೊಳ್ಳುವ 'ಕುಲದ ಆಚಾರ' ಪದ್ಧತಿ ಇದೆ.

•ಬುಡ್ಗ ಜಂಗಮರ ಜೀವರ್ನಾತಕ ಆಚರಣೆಯಲ್ಲಿ ದೇವರಿಗೆ ಮುಡಿಪು ಕಟ್ಟುವಾಗ, ಮಕ್ಕಳಿಗೆ ಸಂದುಗಳು ಬಂದಾಗ, ಮದುವೆಯ ಸಂದರ್ಭದಲ್ಲಿ ಓಲಿ ಕೊಡುವಾಗ, ಗಂಡನ ಮನೆಗೆ ಕಳಿಸುವ ಸಂದರ್ಭದಲ್ಲಿ, ವಿಚ್ಛೇಧನ ನೀಡುವ ಸಂದರ್ಭದಲ್ಲಿ, ಕುಲ ಪಂಚಾಯಿತಿಯ ತಪ್ಪು ದಂಡ ಇಡುವ ಸಂದರ್ಭದಲ್ಲಿ, ಮರುಮದುವೆ ಮಾಡಿಕೊಳ್ಳುವ ಸಂದರ್ಭದಲ್ಲಿ, ಶವಸಂಸ್ಕಾರದ ನೆರವೇರಸುವ ಸಂದರ್ಭದಲ್ಲಿ, 'ಬೇಡ (ಎರಡಾಣೆ)' ನಾಣ್ಯವು ಪ್ರಮುಖ ಪಾತ್ರವಹಿಸುತ್ತದೆ. (ಇತ್ತೀಚಿಗೆ ಒಂದು, ಎರಡು ರೂಪಾಯಿ ನಾಣ್ಯಗಳನ್ನು ಬಳಸುತ್ತಾರೆ)

•ಬೇಡ ಜಂಗಮರು ಎಂದರೆ ಬುಡ್ಗ ಜಂಗಮರು ಎಂದರ್ಥ ಎಂದು 'ಬೇಡ(ಬುಡ್ಗ) ಜಂಗಮ್' ಎಂದು ತೆಲಂಗಾಣದ ರಾಜ್ಯದ ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ದಾಖಲಾಗಿರುವುದು ಸಾಕ್ಷಿಯಾಗುತ್ತದೆ.

•ಬುಡ್ಗ ಜಂಗಮರ ಮಾತೃ ಭಾಷೆ ಬುಡ್ಗ(ಮರುಗು) ಮತ್ತು ತೆಲುಗು ಭಾಷೆಯಾದರೂ ತನ್ನ ಎಲ್ಲಾ ನಾಟಕ, ಸಂಗೀತ, ಸಾಹಿತ್ಯವನ್ನು ತೆಲುಗಿನಿಂದ ಸ್ವತಃ ಕನ್ನಡ ಭಾಷೆಯಲ್ಲಿ ತರ್ಜಿಮೆ ಮಾಡಿಕೊಂಡು ಕನ್ನಡ ಭಾಷೆ ಸಂಸ್ಕೃತಿಯನ್ನು ಉಳಿಸಿ ಬೆಳೆಸುತ್ತಿದ್ದಾರೆ.

•ಬುಡ್ಗ ಜಂಗಮರು ಆಯಾ ಪ್ರದೇಶದ ಪ್ರಾದೇಶಿಕ ಭಾಷೆಗಳಲ್ಲಿಯೇ ತಮ್ಮ ಕಲಾ ಪ್ರದರ್ಶನ ನೀಡುವ ಸಾಮರ್ಥ್ಯವುಳ್ಳವರು. ಉದಾ: ತೆಲುಗು, ಕನ್ನಡ, ಹಿಂದಿ, ಮರಾಠಿ, ತಮಿಳು ಹೀಗೆ ಹಲವು ಭಾಷೆಗಳ ಸಂಪನ್ನರಾಗಿದ್ದಾರೆ.

•ಬುಡ್ಗ ಜಂಗಮರು ಕೇವಲ ಹಗಲುವೇಷ, ಬುರ್ರಕಥಾ ಕಲಾಪ್ರದರ್ಶನ ಮಾತ್ರವಲ್ಲದೇ, ಸುಗಮ ಸಂಗೀತ, ಭಕ್ತಿ ಗೀತೆಗಳು, ಭಾವ ಗೀತೆಗಳು, ಜನಪದ ಗೀತೆಗಳು, ಕನಕದಾಸ, ಪರಂದರದಾಸ ಸೂಫಿಸಂತರ ಗೀತೆಗಳನ್ನು, ಬಸವಣ್ಣನವರ ವಚನಗಳನ್ನು ಹಾಡುವ ಅದ್ಭುತವಾದ ಕಲಾವಿದರಿದ್ದಾರೆ.

•ಬುಡ್ಗ ಜಂಗಮರಲ್ಲಿ ಬುರ್ರಕಥಾ ಮತ್ತು ಹಗಲುವೇಷ ಕಲೆಯಲ್ಲಿ ಸಾಹಿತ್ಯದ ಹರವು ಒಂದೊಂದು ಮಹಾಕಾವ್ಯವು ಸಾವಿರ ಪುಟಗಳಷ್ಟು ಆಗುವ ಸಾಹಿತ್ಯ ಹೊಂದಿರುತ್ತದೆ. ಉದಾಹರಣೆಗೆ ದರೋಜಿ ಈರಮ್ಮನ ಮಹಾಕಾವ್ಯಗಳೇ ಸಾಕ್ಷಿ. ಇವರ ಮಹಾಕಾವ್ಯಗಳನ್ನು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗವು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಿದೆ.

• ಬುಡ್ಗ ಜಂಗಮರು ಪ್ರದರ್ಶಿಸುವ ಕಲೆಗಳಾದ ಬುರ್ರಕಥೆ, ಹಗಲುವೇಷ, ಗಂಗಿಗೌರಿ ಗಾಯನ ಇವುಗಳು ಕೇವಲ ವೃತ್ತಿಕಲೆಗಳಾಗಿವೆ. ಬಹುರೂಪಿಗಳಿಗೂ, ಬೈರಾಗಿಗಳಿಗೂ, ಸನ್ಯಾಸಿಗಳಿಗೂ ಬುಡ್ಗ ಜಂಗಮರಿಗೂ ಯಾವುದೇ ರೀತಿಯಲ್ಲಿ ಸಂಬಂಧಗಳು ಕಂಡುಬರುದಿಲ್ಲ. ಅವುಗಳು ಕೇವಲ ಪ್ರದರ್ಶನಾತ್ಮಕ ಕಲೆಗಳಾಗಿವೆ.

•ಬುಡ್ಗ ಜಂಗಮ ಸಮುದಾಯದಲ್ಲಿ ಅಪಾರವಾದ ಪಾರಂಪರಿಕ ಜನಪದ ವೈದ್ಯ ಪದ್ಧತಿಯ ಜ್ಞಾನಪರಂಪರೆಯನ್ನು ಹೊಂದಿದ್ದಾರೆ.

•ಬುಡ್ಗ ಜಂಗಮರು ಬಳ್ಳಾರಿ ಜಿಲ್ಲೆಯಲ್ಲಿ ೮೫೪ ಕುಟುಂಬಗಳು, ಪುರುಷರು ೧೭೯೭, ಮಹಿಳೆಯರು ೧೬೭೩ ಒಟ್ಟು ೩೪೭೦ ಜನಸಂಖ್ಯೆ ಹೊಂದಿದ್ದಾರೆ.

•ಬುಡ್ಗ ಜಂಗಮರು ಬಳ್ಳಾರಿ ಜಿಲ್ಲೆಯಲ್ಲಿ ೦-೫ ವಯಸ್ಸಿನವರು ಶೇಕಡಾ ೨೦.೩ ಜನರು, ೬-೧೭ ವಯಸ್ಸಿನಲ್ಲಿ ಶೇಕಡಾ ೨೬.೫ ಜನರು, ೧೮-೪೦ ವಯಸ್ಸಿನಲ್ಲಿ ೩೬.೯ ಜನರು, ೪೧-೬೦ ವಯಸ್ಸಿನಲ್ಲಿ ಶೆಕಡಾ ೯.೩ ಜನರು, ೬೦ಕ್ಕಿಂತ ಹೆಚ್ಚಿನ ವಯಸ್ಸಿನವರು ಶೇಕಡಾ ೬.೯ ಜನರಿದ್ದಾರೆ.

•ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ವೈವಾಹಿಕ ಸ್ಥಾನಮಾನದಲ್ಲಿ ವಿವಾಹಿತರು ಶೇಕಡಾ ೪೪.೫, ಶೇಕಡಾ ೫೧.೮ ರಷ್ಟು ಅವಿವಾಹಿತರು, ಶೇಕಡಾ ೨.೬ ವಿಧುರ ವಿಧವೆಯರು ಕಂಡುಬರುತ್ತಾರೆ.

•ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ್ ಸಮುದಾಯದಲ್ಲಿ ಒಂದಕ್ಕಿಂತ ಹೆಚ್ಚು ವಿವಾಹವಾಗಿರುವ ಬಹುಪತ್ನಿತ್ವ ವಿವಾಹವು ೩೬ ಜನ ಅಂದರೆ ಶೇಕಡಾ ೧.೧ ರಷ್ಟು ಜನ ಮದುವೆಯಾಗಿದ್ದಾರೆ.

•ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ್ ಸಮುದಾಯದಲ್ಲಿ ವಯೋಪ್ರಮಾಣದ ವೈವಾಹಿಕ ಸ್ಥಾನಮಾನದಲ್ಲಿ ಒಟ್ಟು ಗಂಡು ಹೆಣ್ಣು ವಿವಾಹವಾದವರು ೧೫೮೨ ಜನರು ವಿವಾಹವಾಗಿದ್ದಾರೆ. ಅದರಲ್ಲಿ ೧೦ ರಿಂದ ೧೩ ವಯಸ್ಸಿನಲ್ಲಿ ಶೇ ೩೮.೮, ೧೪ ರಿಂದ ೧೭ ವಯಸ್ಸಿನಲ್ಲಿ ಶೇ ೫೪.೪, ೧೮ ರಿಂದ ೨೧ರ ವಯಸ್ಸಿನಲ್ಲಿ ಶೇ ೪.೪, ೨೨ ರಿಂದ ೨೫ರ ವಯಸ್ಸಿನಲ್ಲಿ ಶೇ ೨.೧, ೨೬-೩೦ ವಯಸ್ಸಿನಲ್ಲಿ ಶೇ ೦.೩ ಜನ ವಯೋಪ್ರಮಾಣದಲ್ಲಿ ವಿವಾಹವಾಗಿದ್ದಾರೆ. ಇವರಲ್ಲಿ ಹೆಚ್ಚಾಗಿ ೧೦ರಿಂದ ೧೭ ವಯಸ್ಸಿನೊಳಗೆ ಶೇಕಡಾ ೯೩.೨ ಜನ ಬಾಲ್ಯದಲ್ಲಿಯೇ ವಿವಾಹವಾಗಿದ್ದಾರೆ.

•ಬುಡ್ಗ ಜಂಗಮರಲ್ಲಿ ಸ್ವಂತ ಹಾಗೂ ಸರ್ಕಾರದ ಜನತಾ ಮನೆಗಳು ಹೊಂದಿದವರು ಶೇ ೩೪.೮, ಬಾಡಿಗೆ ಮನೆಯಲ್ಲಿ ಇದ್ದವರು ಶೇ ೫.೨, ನಿವೇಶನ ಇದೆ ಮನೆ ಇಲ್ಲದವರು ಶೇ೨೫.೫, ನಿವೇಶನ ಇಲ್ಲ ಮನೆ ಇಲ್ಲದೆ ಗುಡಾರ ಗುಡಿಸಲುಗಳಲ್ಲಿ ವಾಸಮಾಡುವ ಶೇ ೩೪.೫ ಕುಟುಂಬಗಳು ಇವೆ.

•ಬುಡ್ಗ ಜಂಗಮ ಸಮುದಾಯದಲ್ಲಿ ಪ್ರಾರಂಭದಲ್ಲಿ ಸಾಕುತ್ತಿದ್ದ ದನಕರಗಳು, ಜಾನುವಾರುಗಳನ್ನು ಸಾಕುವುದು ತುಂಬಾ ಕಡಿಮೆಯಾಗಿದೆ. ಅದರ ಬದಲಾಗಿ ಹೆಚ್ಚಾಗಿ ಕುರಿ-ಕೋಳಿಗಳನ್ನು ಸಾಕುತ್ತಿದ್ದಾರೆ.

• ಬುಡ್ಗ ಜಂಗಮರು ಆಧುನಿಕ ಕಸುಬುಗಳಾದ ಬಟ್ಟೆವ್ಯಾಪಾರವನ್ನು ಶೇಕಡಾ ೩೮ ಜನ ಸೀರೆ, ನೈಟಿ, ಡ್ರಸ್ ಸೇರಿ ಬಟ್ಟೆವ್ಯಾಪಾರವನ್ನು ಅವಲಂಬಿಸಿ ಜೀವನ ಮಾಡುತ್ತಿದ್ದಾರೆ. ಕೊಡ ವ್ಯಾಪಾರ ಶೇ ೮ ಜನ, ಸ್ಟೇಷನರಿ ಸಾಮಾನು ವ್ಯಾಪಾರ ಶೇ ೧೦.೪ ಜನ, ಸ್ಟೀಲ್ ಸಿಲ್ವರ್ ಪ್ಲಾಸ್ಟಿಕ್ ಪಾತ್ರೆಗಳ ವ್ಯಾಪಾರ ಶೇ ೨ ಜನ, ಸಾಬೂನು ವ್ಯಾಪಾರ ಶೇ ೫.೧ ಜನ, ರೋಡ್ ಗೋಲ್ಡ್ ಮುತ್ತಿನ ಸರ ವ್ಯಾಪಾರ ಶೇ೦.೮ ಜನ, ಗ್ಯಾಸ್ ಮಿಕ್ಸರಿ ರಿಪೇರಿ ಶೇ ೧ ಜನ, ಪೆನಾಯಿಲ್ ವ್ಯಾಪಾರ ೦.೮ ಜನ, ಎಲ್‌ಈಡಿ ಬಲ್ಬು ವ್ಯಾಪಾರ ೦.೮ ಜನ, ಸಣ್ಣ ಕೈಗಾರಿಕೆಯಲ್ಲಿ ೦.೯ ಜನ ಮಾಡುತ್ತಿದ್ದಾರೆ. ಈ ವೃತ್ತಿಯು ಪುರುಷರು ಮತ್ತು ಮಹಿಳೆಯರು ಬಟ್ಟೆ ಹಾಗೂ ಪ್ಲಾಸ್ಟಿಕ್ ಸಿಲ್ವರ್ ಸಾಮಾನುಗಳ ಗಂಟನ್ನು ಭುಜದ ಮೇಲೆ ತಲೆಮೇಲೆ ಎತ್ತಿಕೊಂಡು ಮತ್ತು ವಾಹನದ ಮೇಲೆ ಗ್ರಾಮೀಣ ಮತ್ತು ನಗರ ಪ್ರದೇಶಗಳಿಗೆ ಹೋಗಿ ಬೀದಿಯಲ್ಲಿ ಸುತ್ತಿ ವ್ಯಾಪಾರ ಮಾಡುತ್ತಿದ್ದಾರೆ.

•ಬುಡ್ಗ ಜಂಗಮರು ಶೇಕಡಾ ೧.೮ ಜನ ಪುರುಷರು ಮೀನುಗಾರಿಕೆಯಲ್ಲಿ ತೊಡಗಿದ್ದಾರೆ.

• ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಪಾರಂಪರಿಕ ವೃತ್ತಿಗಳಲ್ಲಿ ಒಂದಾದ ಚಾಪೆ ಹೆಣೆಯುವುದು, ಕೌದಿ ಹೊಲಿಯುವುದು ವೃತ್ತಿ ಕಡಿಮೆಯಾಗಿದೆ.

• ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರ ಶೈಕ್ಷಣಿಕ ಸ್ಥಿತಿಯು ಪ್ರಾಥಮಿಕ ಶಿಕ್ಷಣಕ್ಕೆ ಪುರುಷರು ಶೇ ೧೯.೮ ಮಹಿಳೆಯರು ೧೩.೦, ಪ್ರೌಢ ಶಿಕ್ಷಣಕ್ಕೆ ಪುರುಷರು ಶೇ ೬.೦, ಮಹಿಳೆಯರು ಕೇವಲ ಶೇ ೩.೧, ಪದವಿಪೂರ್ವ ಶಿಕ್ಷಣಕ್ಕೆ ಪುರುಷರು ಶೇ ೧.೯, ಮಹಿಳೆಯರು ಶೇ ೦.೫, ಪದವಿ ಶಿಕ್ಷಣಕ್ಕೆ ಪುರುಷರು ಕೇವಲ ಶೇ ೧.೪, ಮಹಿಳೆಯರು ಶೇ ೦.೧, ಸ್ನಾತಕೋತ್ತರ ಪದವಿ ಶಿಕ್ಷಣಕ್ಕೆ ಪುರುಷರು ಶೇ ೦.೧ ಮಹಿಳೆಯರು ಶೇ ೦, ವೃತ್ತಿ ಶಿಕ್ಷಣಕ್ಕೆ ಪುರುಷರು ಒಬ್ಬರೇ ಮಾತ್ರ ಶಿಕ್ಷಣ ಪಡೆಯುತ್ತಿರುವುದು ಕಂಡುಬರುತ್ತದೆ. ಉಳಿದಂತೆ ಶೇ ೫೪ ಜನರು ಅನಕ್ಷರಸ್ಥರಾಗಿದ್ದಾರೆ. ಇವರಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಮಾಧ್ಯಮಿಕ ಶಿಕ್ಷಣಕ್ಕೆ ಮಾತ್ರ ಪ್ರವೇಶ ಪಡೆದು ಅಲ್ಲಿಗೆ ಶಾಲೆಯನ್ನು ಅರ್ಧದಲ್ಲಿಯೇ ಬಿಟ್ಟಿದ್ದಾರೆ. ಕಾರಣ ಮನೆಯಲ್ಲಿ ಬಡತನ ಮತ್ತು ಹಸಿವು ಮತ್ತು ಮಾತೃ ಭಾಷೆ ಇವರನ್ನು ಕಾಡುತ್ತಿದೆ ಹಾಗಾಗಿ ಶಾಲೆಗೆ ಬಿಟ್ಟು ಹಗಲುವೇಷ ಮತ್ತು ಇತರೆ ಅನ್ಯ ವೃತ್ತಿಯಲ್ಲಿ ತೊಡಗಿಕೊಂಡಿದ್ದಾರೆ.

•ಬುಡ್ಗ ಜಂಗಮರಲ್ಲಿ ಮಹಿಳೆಯರ ಶಿಕ್ಷಣವಂತು ತೀರ ಕಡಿಮೆ ಇರುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಹೊಸತಲೆಮಾರಿನವರು ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡುತ್ತಿರುವ ಫಲವಾಗಿ ಶೇಕಡಾ ೪೭.೫ ಜನ ಹೆಣ್ಣು ಮಕ್ಕಳು ಶಿಕ್ಷಣ ಪಡೆಯುತ್ತಿದ್ದಾರೆ. ಹೆಣ್ಣು ಮಕ್ಕಳು ಎಷ್ಟು ಓದಿದರೂ ಗಂಡನ ಮನೆಯಲ್ಲಿ ಮುಸುರಿ ತಿಕ್ಕುವುದು ತಪ್ಪುವುದಿಲ್ಲ ಎಂಬ ತಪ್ಪು ತಿಳುವಳಿಕೆಯಾಗಿದೆ ಮತ್ತು ಹೆಣ್ಣು ಮಕ್ಕಳು ಋತುಮತಿಯಾದ ತಕ್ಷಣ ಬಾಲ್ಯದಲ್ಲಿಯೇ ಮದುವೆ ಮಾಡಿಕೊಡುವುದರಿಂದ ಇವರ ಶಿಕ್ಷಣ ಪ್ರಮಾಣ ತೀರ ಕಡಿಮೆಯಾಗಿದೆ.

•ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ್ ಸಮುದಾಯದಲ್ಲಿ ಪಾರಂಪರಿಕ ಕಲಾವೃತ್ತಿ ಬುರ್ರಕಥಾ, ಹಗಲುವೇಷ, ಗಂಗಿಗೌರಿ ಗಾಯನ ಕಲಾಪ್ರದರ್ಶನದಲ್ಲಿ ೩೨೫ಜನ ಕಲಾವಿದರಿದ್ದು, ಕೇವಲ ಶೇ ೮.೩(೨೭) ಜನ ಮಾತ್ರ ಕಲಾವಿದರ ಮಾಸಾಶನ ಪಡೆಯುತ್ತಿದ್ದು, ಉಳಿದಂತೆ ಶೇ ೯೧.೭ ಜನ ಕಲಾವಿದರಿಗೆ ಯಾವುದೇ ಕಲಾವಿದರ ಆರ್ಥಿಕ ಜೀವನದ ಪ್ರೋತ್ಸಾಹ ಯೋಜನೆಗಳು ಇಲ್ಲದಾಗಿದೆ.

•ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮ್ ಸಮುದಾಯದಲ್ಲಿ ೧೧ಜನ ವಿಧವ, ೮೧ ಜನ ವಿಧವೆಯರು, ೨೪೧ಜನ ವೃದ್ಧರು, ೩೩ಜನ ಅಂಗವಿಕಲರಿದ್ದಾರೆ. ಕ್ರಮವಾಗಿ ಶೇ ೬೯.೧, ೩೩.೧, ೧೨.೧ ಸರ್ಕಾರದ ಸೌಲಭ್ಯಗಳನ್ನು ಪಡೆಯುತ್ತಿದ್ದು, ಉಳಿದಂತೆ ಕ್ರಮವಾಗಿ ಶೇ ೩೦.೯, ೬೬.೯, ೮೭.೯ ಸರ್ಕಾರಿ ಸೌಲಭ್ಯಗಳನ್ನು ಪಡೆಯದೇ ವಂಚಿತರಾಗಿದ್ದಾರೆ.

•ಬುಡ್ಗ ಜಂಗಮರು ಪರಿಶಿಷ್ಟ ಜಾತಿಯ ಮೀಸಲಾತಿ ಪಟ್ಟಿಯಲ್ಲಿ ದಾಖಲಾದರೂ ಸಂವಿಧಾನಬದ್ಧ ಮೀಸಲಾತಿ ಸೌಲಭ್ಯಗಳು ಪಡೆಯುವಲ್ಲಿ ವಿಫಲರಾಗಿದ್ದಾರೆ.

•ಬಳ್ಳಾರಿ ಜಿಲ್ಲೆಯ ಬುಡ್ಗ ಜಂಗಮರಲ್ಲಿ ಕೇವಲ ನಾಲ್ಕೆ ನಾಲ್ಕು ಜನ ಸರ್ಕಾರಿ ಕೆಲಸದಲ್ಲಿ ಇದ್ದಾರೆ.

•ಬುಡ್ಗ ಜಂಗಮರಲ್ಲಿ ಕುಲಪೆದ್ದಲು, ಕುಲಪಂಚಾಯಿತಿಗಳಲ್ಲಿ ವಿಶೇಷಸ್ಥಾನಮಾನ ಹೊಂದಿದ್ದು, ಇತ್ತೀಚಿನ ದಿನಗಳಲ್ಲಿ ಆಧುನೀಕರಣ ಪ್ರಭಾವದಿಂದ ಕೋರ್ಟ್ ಕಚೇರಿ ಮೆಟ್ಟಿಲುಗಳನ್ನು ಏರುತ್ತಿದ್ದಾರೆ.

•ಸಮುದಾಯದ ಶುದ್ಧತೆ ಮತ್ತು ನಿಷೇಧದಿಂದ ಸಮಾಜದ ಸ್ವಾಸ್ಥ್ಯವನ್ನು ಕಾಪಾಡುತ್ತಿದ್ದ ಬುಡ್ಗ ಜಂಗಮರು ಆಧುನೀಕರಣ ಪ್ರಭಾವದಿಂದ ಇತ್ತೀಚಿನ ದಿನಗಳಲ್ಲಿ ೪ ಜನ ಅಂತರ್‌ಜಾತಿ ವಿವಾಹಗಳಾಗುವುದನ್ನು ಕಾಣಬಹುದು.

•ಬುಡ್ಗ ಜಂಗಮರ ಕೌಟಂಬಿಕ ವ್ಯವಸ್ಥೆಯಲ್ಲಿ ಆರ್ಥಿಕತೆ ಮತ್ತು ಶ್ರಮದಲ್ಲಿ ಸ್ತ್ರೀ ಪುರುಷರು ಇಬ್ಬರು ಸರಿಸಮನಾದ ಪಾತ್ರವಹಿಸುತ್ತಾರೆ.

•ಬುಡ್ಗ ಜಂಗಮರು ತಮ್ಮ ಮೂಲ ಸಂಸ್ಕೃತಿಯೊಂದಿಗೆ ಆಧುನೀಕರಣದ ಪ್ರಪಂಚಕ್ಕೆ ಹೊಂದಿಕೊಳ್ಳುತ್ತಿದ್ದಾರೆ.

•ಬುಡ್ಗ ಜಂಗಮ್ ಸಮುದಾಯದವರು ರಾಜಕೀಯ ಕ್ಷೇತ್ರದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಕೇವಲ ೫ ಜನ ಗ್ರಾಮಪಂಚಾಯಿತಿ ಸದಸ್ಯರು, ಒಬ್ಬರು ಗ್ರಾಮಪಂಚಾಯಿತಿ ಅಧ್ಯಕ್ಷರು, ಇಬ್ಬರು ತಾಲೂಕು ಪಂಚಾಯಿತಿ ಸದಸ್ಯರಾಗಿದ್ದಾರೆ. ಜಿಲ್ಲಾ ಪಂಚಾಯಿತಿ ಮತ್ತು ವಿಧಾನಸಭಾ ಸದಸ್ಯ ಸ್ಥಾನದಿಂದ ರಾಜಕೀಯವಾಗಿ ಅತ್ಯಂತ ಹಿಂದುಳಿದಿದ್ದಾರೆ.

**ಸಲಹೆಗಳು**

ಬುಡ್ಗ ಜಂಗಮರು ತಮ್ಮ ಜಾತಿ ಯಾವುದೆಂದು ತಿಳಿಯದೇ ನೂರಾರು ವರ್ಷಗಳ ಕಾಲ, ಕೇವಲ ತುತ್ತಿನ ಚೀಲವನ್ನು ತುಂಬಿಸಿಕೊಳ್ಳಲು ಬದುಕಿದ ಮುಗ್ಧ ಸಮುದಾಯವಾದ ಬುಡ್ಗ ಜಂಗಮರು, ನಿರಂತರವಾಗಿ ಅಶಿಕ್ಷಿತ, ಅಸಂಘಟಿತ ಅಲೆಮಾರಿಗಳಾಗಿ ಅಲೆಯುತ್ತಿದ್ದಾರೆ. ಬುಡ್ಗ ಜಂಗಮರು ಇಷ್ಟು ಸುದೀರ್ಘ ವರ್ಷಗಳಲ್ಲಿ ತಮ್ಮ ಸಂವಿಧಾನಬದ್ಧ ಹಕ್ಕುಗಳ ಬಗ್ಗೆ ಎಂದೂ ಯೋಚಿಸದೆ ಇದ್ದುದು ಒಂದು ದೊಡ್ಡ ವಿಪರ್ಯಾಸ. ಅಲೆಮಾರಿ ಬುಡ್ಗ ಜಂಗಮರ ಸಮಸ್ಯೆಗಳು ಅನೇಕ ಇದ್ದರೂ ಕೆಲವು ಸಮಸ್ಯೆಗಳನ್ನು ಪರಿಹರಿಸುವ ಕೆಲವು ಸಲಹೆ ಸೂಚನೆಗಳನ್ನು ನೀಡಲಾಗಿದೆ.

ಸಮಾಜದ ಕೆಳವರ್ಗಗಳು ದಾಸ್ಯದಿಂದ ಮುಕ್ತಿಹೊಂದಲು ಡಾ.ಅಂಬೇಡ್ಕರ್‌ರವರು ಪಾರದರ್ಶಕತೆಯಿಂದ ಕೂಡಿದ ಶಿಕ್ಷಣ, ಸಂಘಟನೆ, ಹೋರಾಟ ತತ್ವಗಳನ್ನು ಜಾರಿಗೆ ತರುವಲ್ಲಿ ಶ್ರಮಿಸಿದರು. ಅಲ್ಲದೆ ಅಂತಹ ತತ್ವಗಳ ಮಹತ್ವವನ್ನು ಕುರಿತು ಯೋಚಿಸಿದರು. ಪ್ರತಿ ಕೊನೆಯ ವ್ಯಕ್ತಿಯು ಬದಲಾಗಬೇಕಾದರೆ ತಮ್ಮ ಬದುಕನ್ನು ಸುಧಾರಿಸಿಕೊಳ್ಳಬೇಕೆಂದರೆ ಅವುಗಳನ್ನು ಪಡೆದುಕೊಳ್ಳಬೇಕು. ಆಗ ಮಾತ್ರ ಸಮಾಜದಲ್ಲಿ ಇತರರಂತೆ ಬದುಕಲು ಸಾಧ್ಯವಾಗಬಹುದೆಂಬುದನ್ನು ತಿಳಿಸಿದರು. ಬದುಕನ್ನು ಹಸನುಮಾಡುವಂತ ಶಿಕ್ಷಣ, ಸಂಘಟನೆ, ಹೋರಾಟ ಇವುಗಳು ಅಂಚಿನ ಸಮುದಾಯದವರಿಗೆ ಅನಿವಾರ್ಯವೆಂದರು. ಇಂತಹ ತತ್ವಗಳನ್ನು ಬುಡ್ಗ ಜಂಗಮರು ಅಳವಡಿಸಿಕೊಳ್ಳಬೇಕಾಗಿದೆ.

